|| ಶ್ರೀಃ ||

ಪೂಜ್ಯಪಾದ

ಬ್ರಹ್ಮಶ್ರೀ ಬಾಳಶಾಸ್ತ್ರೀ ರಾವ್‌ಜೀ ಶಾಸ್ತ್ರೀ ಕ್ಷೀರಸಾಗರ ಪ್ರಣೀತ

# ಸಾರ್ಥ ಷೋಡಶ ಸಂಸ್ಕಾರ ರತ್ನಮಾಲಾ

[ಔರ್ಧ್ವದೇಹಿಕವಿಧಿ ಸಹಿತ]

ಸಂಸ್ಕೃತ ಮರಾಠೀ ಗ್ರಂಥದ ಸಂಪಾದಕರು ಮತ್ತು ಪ್ರಕಾಶಕರು :

ವಿದ್ಯಾಭೂಷಣ ಪದ್ಮಾಕರಶಾಸ್ತ್ರೀ ಬಾಳಶಾಸ್ತ್ರೀ ಕ್ಷೀರಸಾಗರ

ಕನ್ನಡ ಅನುವಾದ :

ವಿದ್ವಾನ್ ಗುರು ಕೃಷ್ಣ ಭಟ್ಟ, ಪೆರ್ಲ

ಚತುರ್ಥ ಆವೃತ್ತಿ

ಪ್ರಕಾಶಕರು :

ಶ್ರೀ ಕಾಳಿಕಾಂಬಾ ವಿನಾಯಕ ದೇವಸ್ಥಾನ

ರಥಬೀದಿ, ಮಂಗಳೂರು - 575 001

೨೦೦೬

॥ [illegible]ಃ ॥

॥ ಶ್ರೀ ಕಾಳಿಕಾಂಬಾ ವಿನಾಯಕೌ ಪ್ರಸೀದತಾಮ್ ॥

# ಸಾರ್ಥ ಷೋಡಶ ಸಂಸ್ಕಾರ ರತ್ನಮಾಲಾ

ಪೂಜ್ಯಪಾದ

## ಬ್ರಹ್ಮಶ್ರೀ ಬಾಳಶಾಸ್ತ್ರೀ ರಾವ್‌ಜೀಶಾಸ್ತ್ರೀ ಕ್ಷೀರಸಾಗರ ಪ್ರಣೀತ


ಸಂಸ್ಕೃತ ಮರಾಠೀ ಗ್ರಂಥದ ಸಂಪಾದಕರು ಮತ್ತು ಪ್ರಕಾಶಕರು:

ವಿದ್ಯಾಭೂಷಣ ಪದ್ಮಾಕರಶಾಸ್ತ್ರೀ ಬಾಳಶಾಸ್ತ್ರೀ ಕ್ಷೀರಸಾಗರ

**ಕಾವ್ಯತೀರ್ಥ, ಸಾಂಖ್ಯತೀರ್ಥ, ವ್ಯಾಕರಣತೀರ್ಥ, ಸಾಹಿತ್ಯರತ್ನ.**

ಶ್ರೀ ನಾರಾಯಣ ಆಶ್ರಮ, ೩೦, ಗಣೇಶಪೇಟೆ, ಪುಣೆ ೨.

ಕನ್ನಡ ಅನುವಾದ:

**ವಿದ್ವಾನ್ ಗುರು ಕೃಷ್ಣ ಭಟ್ಟ, ಪೆರ್ಲ**



**ಚತುರ್ಥ ಆವೃತ್ತಿ**

ಪ್ರಕಾಶಕರು:

**ಶ್ರೀ ಕಾಳಿಕಾಂಬಾ ವಿನಾಯಕ ದೇವಸ್ಥಾನ**

ರಥಬೀದಿ, ಮಂಗಳೂರು - 575 001.

೨೦೦೬

॥ ಓಂ ನಮೋ ವಿಶ್ವಕರ್ಮಣೇ ॥

॥ ಶ್ರೀ ಕಾಳಿಕಾಂಬಾಯೈ ನಮಃ ॥

# ಪ್ರಕಾಶಕರ ಬಿನ್ನಹ

(ಚತುರ್ಥ ಆವೃತ್ತಿ)

೧೯೭೯ರಲ್ಲಿ ಈ ಗ್ರಂಥದ ಪ್ರಥಮ ಆವೃತ್ತಿಯ ಬಿಡುಗಡೆಯನ್ನು ಮದರಾಸಿನ ಖ್ಯಾತ ಶಿಲ್ಪಿ ಹಾಗೂ ಪ್ರಸಿದ್ಧ ಸಾಹಿತಿಗಳಾದ ಶ್ರೀ ಗೌರೀಶಂಕರ ಸ್ಥಪತಿಯವರ ದಿವ್ಯಹಸ್ತದಿಂದ ನೆರವೇರಿಸಲಾಗಿತ್ತು. ದಿ। ಪಾಲ್ಕೆ ಬಾಬುರಾಯ ಆಚಾರ್ಯರು ಮೂಡಬಿದ್ರೆಯ ಶ್ರೀ ನಾಗಲಿಂಗ ಸ್ವಾಮೀ ಸಂಸ್ಕೃತ ವೇದಪಾಠಶಾಲೆಯ ವತಿಯಿಂದ ಇದರ ಪ್ರಕಾಶನದ ಹೊಣೆ ಹೊತ್ತಿದ್ದರು. ಗ್ರಂಥವು ಪ್ರಕಟವಾದ ಅತ್ಯಲ್ಪ ಅವಧಿಯಲ್ಲೇ ಇದರ ಪ್ರತಿಗಳೆಲ್ಲ ಮಾರಾಟವಾಗಿದ್ದು ಕಳೆದ ಆರೇಳು ವರ್ಷಗಳಿಂದ ಈ ಗ್ರಂಥದ ಬಗ್ಗೆ ಆಸಕ್ತ ಮಹನೀಯರಿಂದ ಅಸಂಖ್ಯಾತ ಬೇಡಿಕೆಗಳು ಬರುತ್ತಲೇ ಇದ್ದವು. ದಿನದಿಂದ ದಿನಕ್ಕೆ ಬೆಳೆಯುತ್ತಿರುವ ಬೇಡಿಕೆಗಳ ಸಂಖ್ಯೆಯನ್ನು ಗಮನಿಸಿದಾಗ, ವೈದಿಕವರ್ಗಕ್ಕೆ ಈ ಗ್ರಂಥದ ಆವಶ್ಯಕತೆಯ ಮಹತ್ತ್ವದ ಅರಿವು ನಮಗಾಯಿತು.

ಅಮೂಲ್ಯವಾದ ಈ ಗ್ರಂಥದ ಪುನರ್ಮುದ್ರಣದ ಅನಿವಾರ್ಯತೆಯನ್ನು ಮನಗಂಡ ಮಂಗಳೂರು ಶ್ರೀ ಕಾಳಿಕಾಂಬಾ ವಿನಾಯಕ ದೇವಸ್ಥಾನದ ಆಡಳಿತ ಮಂಡಳಿಯು ಇದರ ಚತುರ್ಥ ಆವೃತ್ತಿಯನ್ನು ಪ್ರಕಟಿಸುವ ಹೊಣೆಯನ್ನು ವಹಿಸಿಕೊಂಡಿರುತ್ತದೆ.

ಮೂಲ ಸಂಸ್ಕೃತ ಹಾಗೂ ಮರಾಠೀ ಭಾಷೆಯಿಂದ ಈ ಮೊದಲು ಅನುವಾದಿಸುವುದರೊಂದಿಗೆ ಇತರ ಉಪಯುಕ್ತ ವಿಷಯಗಳನ್ನೂ ಅಳವಡಿಸಿ ಪರಿಷ್ಕರಿಸಿದ ವಿದ್ವಾನ್ ಶ್ರೀ ಪೆರ್ಲ ಕೃಷ್ಣಭಟ್ಟರು ಈ ಆವೃತ್ತಿಯನ್ನೂ ಸಂಶೋಧಿಸಿ ಸಿದ್ಧಪಡಿಸಿದ್ದಾರೆ. ಅವರಿಗೆ ನಮ್ಮ ಕೃತಜ್ಞತೆಗಳು.

ವೈದಿಕ ಧರ್ಮಾಭಿಮಾನಿಗಳು ಈ ಗ್ರಂಥದಿಂದ ಪೂರ್ಣ ಪ್ರಯೋಜನವನ್ನು ಪಡೆದುಕೊಂಡಾಗ ನಮ್ಮ ಈ ಪ್ರಕಟಣೆಯು ಸಾರ್ಥಕವಾದೀತು.

**ಬಿ. ರಾಘವೇಂದ್ರ ಆಚಾರ್ಯ**

ಆಡಳಿತ ಮೊಕ್ತೇಸರ

ಶ್ರೀ ಕಾಳಿಕಾಂಬಾ ವಿನಾಯಕ ದೇವಸ್ಥಾನ, ಮಂಗಳೂರು.

ಮಂಗಳೂರು

೧೪-೧-೨೦೦೬

ಮಂತ್ರಗಳನ್ನು ಪರಿಸುತ್ತ ಕೈಯಿಂದ ಯಾವುದಾವುದೋ ಕೆಲಸಗಳು ನಡೆಯುತ್ತವೆ. ಏನು, ಯಾಕೆ, ಹೇಗೆ ಎಂಬ ಪರಿವೆ ಯಾರೊಬ್ಬನಿಗೂ ಇದ್ದಂತಿಲ್ಲ, ಊಟ-ಉಪಚಾರ, ವಸ್ತ್ರ-ಆಭರಣ, ವಾದ್ಯ-ಗದ್ದಲ, ಆಡಂಬರ-ಪ್ರದರ್ಶನಗಳಿಂದಲೇ ನಮ್ಮ ಸಂಸ್ಕಾರಗಳು ಪರ್ಯವಸಾನ ಹೊಂದುತ್ತವೆ. ಅವುಗಳಲ್ಲಿ ಬರುವ ಪ್ರತಿಯೊಂದು ಕ್ರಿಯಾಭಾಗದ ಉದ್ದೇಶವೇನು, ಅರ್ಥವೇನು, ಕ್ರಮವೇನು, ಉಚ್ಚರಿಸುವ ಮಂತ್ರದ ಅರ್ಥವೇನು ಇತ್ಯಾದಿ ಪ್ರಮುಖ ವಿಚಾರಗಳ ಕಡೆಗೆ ನಮ್ಮ ದೃಷ್ಟಿ ಹರಿಯುವುದೇ ಇಲ್ಲ. ಪುರೋಹಿತರು ಏನೇನನ್ನೋ ನಿರ್ದೇಶಿಸುತ್ತಾರೆ. ಅಷ್ಟನ್ನು ಹಾಗೋ ಹೀಗೋ ಮಾಡಿ ಮುಗಿಸಿದರೆ ಸಾಕು ಎಂಬುದರಿಂದಲೇ ನಾವು ಸಮಾಧಾನಪಡುತ್ತೇವೆ.

ಇದು ಸರಿಯಲ್ಲ. ಮಂತ್ರಗಳನ್ನು ಬಾಯಿಪಾಠ ಮಾಡಿ ಮೊದಲಿನವರ ಅನುಕರಣೆಯಿಂದ ಕೇವಲ ಯಾಂತ್ರಿಕವಾಗಿ ಕ್ರಿಯಾಭಾಗಗಳನ್ನು ಮಾಡಿಸಬಲ್ಲವನಷ್ಟೇ ಪುರೋಹಿತನಾಗಲಾರ. ಆತನು ಸಮಗ್ರವಾಗಿ ವೇದಾಭ್ಯಾಸ ಮಾಡಿದವನೂ, ಸಂಸ್ಕೃತ ಭಾಷಾಪರಿಣತನೂ, ಘನ ವಿದ್ವಾಂಸನೂ, ಸ್ವತಃ ಸದಾಚಾರಸಂಪನ್ನನೂ ಆಗಿರಬೇಕು. ಮಂತ್ರಾರ್ಥವನ್ನು ತಿಳಿದವನಾಗಿರ ಬೇಕು. ಪ್ರತಿಯೊಂದು ಕ್ರಿಯಾಭಾಗದ ಉದ್ದೇಶ ಹಾಗೂ ಪರಿಣಾಮಗಳನ್ನು ಅರಿತವನಾಗಿರಬೇಕು. ಕೇವಲ ದಕ್ಷಿಣೆಯ ಕಡೆಗೇ ದೃಷ್ಟಿ ಇಡದೆ ತಾನು ಮಾಡುವ, ಮಾಡಿಸುವ ಕರ್ಮಗಳಲ್ಲಿ ಪ್ರಾಮಾಣಿಕವಾದ ಶ್ರದ್ಧೆಯುಳ್ಳವನಾಗಿರಬೇಕು. ಇಂತಹ ಪುರೋಹಿತನು ಶ್ರದ್ಧಾಳುವಾದ ಯಜಮಾನನ ಕೈಯಿಂದ ಕರ್ಮಗಳನ್ನು ಮಾಡಿಸಿದಾಗ ಮಾತ್ರ ಆಯಾ ಕರ್ಮದ ಪೂರ್ಣ ಫಲ ಪ್ರಾಪ್ತಿಯಾದೀತು.

ಹಲವು ವರ್ಷಗಳ ಹಿಂದೆ ಅಂದರೆ, ಕ್ರಿ.ಶ. ೧೯೧೦ನೇ ಇಸವಿಯಲ್ಲಿ ಪೂನಾದ ವೇದಮೂರ್ತಿ ಬ್ರಹ್ಮಶ್ರೀ ಬಾಳಶಾಸ್ತ್ರೀ ರಾವ್‌ಜೀಶಾಸ್ತ್ರೀ ಕ್ಷೀರಸಾಗರ ಎಂಬ ಮಹನೀಯರು **"ಸಾರ್ಥಷೋಡಶಸಂಸ್ಕಾರರತ್ನಮಾಲಾ"** ಎಂಬ ಗ್ರಂಥವನ್ನು ಮರಾಠೀ ಭಾಷೆಯಲ್ಲಿ ಅರ್ಥ ಮತ್ತು ಇತರ ಎಲ್ಲ ವಿವರಗಳೊಂದಿಗೆ ಪ್ರಕಟಿಸಿದರು. ಸಂಸ್ಕಾರವೆಂದರೇನು? ಅದರ ಸ್ವರೂಪವೇನು? ಫಲವೇನು? ಎಂಬಲ್ಲಿಂದ ಆರಂಭಿಸಿ ಗರ್ಭಾಧಾನದಿಂದ ಮೊದಲ್ಗೊಂಡು ವಿವಾಹಪರ್ಯಂತ ಪ್ರತಿಯೊಂದು ಸಂಸ್ಕಾರದ ಪ್ರಯೋಗವನ್ನೂ ಆಮೂಲಾಗ್ರವಾಗಿ ಈ ಗ್ರಂಥದಲ್ಲಿ ವಿವರಿಸಲಾಗಿದೆ. ಪ್ರತಿಯೊಂದು ಕ್ರಿಯಾಭಾಗದ ಅರ್ಥವನ್ನೂ ಮರಾಠೀ ಭಾಷೆಯಲ್ಲಿ ಹೇಳಲಾಗಿದೆ. ಪೂಜೆ, ಹೋಮ ಇತ್ಯಾದಿಗಳಲ್ಲಿ ಉಪಯೋಗಿಸಬೇಕಾದ ವಸ್ತುಉಪಕರಣಗಳ ಸಂಪೂರ್ಣ ವಿವರವನ್ನು ಚಿತ್ರಸಹಿತವಾಗಿ ಅದರಲ್ಲಿ ವಿವರಿಸಲಾಗಿದೆ. ಮುಖ್ಯವಾಗಿ ಪುರೋಹಿತವರ್ಗದವರಿಗೂ, ಸಾಮಾನ್ಯವಾಗಿ ಇತರರಿಗೂ ಅತ್ಯಂತ ಉಪಯುಕ್ತವಾದ ಈ ಗ್ರಂಥವು ಮರಾಠೀ ಭಾಷೆಯಲ್ಲಿ ದೇವನಾಗರೀ ಲಿಪಿಯಲ್ಲಿ ಮುದ್ರಿತವಾಗಿರುವುದರಿಂದ ಆ ಭಾಷಾ-ಭಾಷಿಗಳಿಗೇನೋ ಮಹೋಪಕಾರವಾಯಿತು. ಮರಾಠೀ ಭಾಷೆಯನ್ನೂ ನಾಗರೀಲಿಪಿಯನ್ನೂ ಅರಿಯದ ಕನ್ನಡಿಗರಿಗೂ ಅಂತಹದೇ ಸೌಲಭ್ಯವು ಲಭ್ಯವಾಗಬೇಕೆಂಬ ಘನೋದ್ದೇಶದಿಂದ ಈ ಗ್ರಂಥವನ್ನು ಕನ್ನಡದಲ್ಲಿ ಪ್ರಕಟಿಸಬೇಕೆಂದು ಶ್ರೀ ಪಾಲ್ಕೆ ಬಾಬುರಾಯ ಆಚಾರ್ಯರು ಆ ಮಹತ್ಕಾರ್ಯವನ್ನು ನನಗೆ ಒಪ್ಪಿಸಿದರು. ಕಷ್ಟಸಾಧ್ಯವಾದ ಈ ಘನಕಾರ್ಯಕ್ಕೆ ಕೈಹಾಕುವುದು ನನ್ನ ಪಾಲಿಗೆ ಒಂದು ದುಃಸಾಹಸವೇ ಆದೀತೆಂಬ ಪರಿಜ್ಞಾನವಿದ್ದರೂ ಬಹುಜನೋಪಯೋಗಿಯಾದ ಒಂದು ಸತ್ಕಾರ್ಯವಿದು ಎಂಬ ವಿನೀತ ಭಾವದಿಂದ ನಾನು ಯಥಾಸಾಧ್ಯ ಪ್ರಯತ್ನಿಸಿದ್ದೇನೆ.

**"ಸಾರ್ಥಷೋಡಶಸಂಸ್ಕಾರರತ್ನಮಾಲಾ"** ಗ್ರಂಥವನ್ನು ಕನ್ನಡೀಕರಿಸುವಾಗ ಕೇವಲ ಶಬ್ದಾನುವಾದ ವಾಕ್ಯಾನುವಾದ ಮಾತ್ರ ಇದ್ದರೆ ಸಾಲದೆಂದು ನನಗೆ ತೋರಿತು. ಕನ್ನಡದಲ್ಲಿ ಪ್ರಕಟಿಸಲ್ಪಡುವ ಈ ಗ್ರಂಥವು ಒಂದು ಕೈಪಿಡಿಯಂತಿರಬೇಕೆಂದು ಭಾವಿಸಿ ಇದರಲ್ಲಿ ಪ್ರಾತಃ ಸ್ಮರಣೆ, ಪ್ರಾತಃಸಂಧ್ಯಾ ಇತ್ಯಾದಿಗಳಿಂದ ತೊಡಗಿ, ಸಾಮಾನ್ಯವಾಗಿ ಪ್ರತಿಯೊಬ್ಬನೂ ಆಚರಿಸಬೇಕಾದ ಎಲ್ಲ ನಿತ್ಯಕರ್ಮಗಳನ್ನೂ ಸೇರಿಸಲಾಗಿದೆ. ಇದರಿಂದ ಈ ಶ್ರೇಷ್ಠಗ್ರಂಥವು ಇನ್ನಷ್ಟು ಉಪಯುಕ್ತವಾದೀತೆಂಬ ವಿಶ್ವಾಸವು ನನಗಿದೆ. ಅವಶ್ಯವೆಂದು ತೋರಿಬಂದಲ್ಲೆಲ್ಲ ಕನ್ನಡದಲ್ಲಿ ಸರಿಯಾದ ಅರ್ಥವಿವರಣೆಯನ್ನು ಕೊಟ್ಟಿರುವುದರಿಂದ ನಮ್ಮ ಕನ್ನಡಬಾಂಧವರು ಇದರಿಂದ ಪೂರ್ಣ ಪ್ರಯೋಜನವನ್ನು ಪಡೆಯುವರೆಂದು ಆಶಿಸುತ್ತೇನೆ.

ಮುಂಬಯಿಯ ನಿರ್ಣಯಸಾಗರ ಮುದ್ರಣಾಲಯದವರು ಮುದ್ರಿಸಿ ಪ್ರಕಟಿಸಿದ "ಋಗ್ವೇದೀಯ ಬ್ರಹ್ಮಕರ್ಮ ಸಮುಚ್ಚಯ"ದಲ್ಲಿ ನಿರೂಪಿಸಲ್ಪಟ್ಟ ವಿಷಯಗಳನ್ನೇ ಆಧಾರವಾಗಿಟ್ಟು ಈ "ಔರ್ಧ್ವದೇಹಿಕವಿಧಿಃ" ಎಂಬ ಗ್ರಂಥವನ್ನು ಸಂಗ್ರಹಿಸಲಾಗಿದೆ. ಮೂಲ ವೇದಮಂತ್ರಗಳೂ, ಬೇರೆ ಬೇರೆ ಕ್ರಿಯಾಭಾಗಗಳೂ ಸಾಮಾನ್ಯವಾಗಿ ಎಲ್ಲ ವಿಭಾಗದ ಬ್ರಾಹ್ಮಣವರ್ಗಗಳಿಗೂ ಸಮಾನವಾಗಿದ್ದರೂ ದೇಶ-ಕಾಲ-ಆಚಾರಾದಿ ಭಿನ್ನತೆಯಿಂದ ಕೆಲವು ಪದ್ಧತಿಗಳಲ್ಲಿ ವ್ಯತ್ಯಾಸಗಳಿರ ಬಹುದು. ತಮ್ಮ ತಮ್ಮ ಕುಲಾಚಾರ ದೇಶಾಚಾರಗಳಿಗೆ ಸರಿಯಾಗಿ ಈ ಕರ್ಮಭಾಗಗಳನ್ನು ಎಲ್ಲರೂ ಅನುಸರಿಸಬಹುದು.

"ಆತುರಸನ್ನಿಧೌ ಜಾಪ್ಯಂ" ಎಂಬಲ್ಲಿಂದಲೇ ಔರ್ಧ್ವದೇಹಿಕಕ್ರಿಯೆಗಳು ಪ್ರಾರಂಭ ವಾಗುತ್ತವೆ. ಕರ್ಮಾಧಿಕಾರಿನಿರ್ಣಯ, ಪಂಚಕಾದಿದಾಹವಿಧಿ, ಚಿತಿ ಪೂರಣ, ದಶಾಹಕ್ರಿಯೆ, ಏಕೋದ್ದಿಷ್ಟ ಸಪಿಂಡೀಕರಣ ಮುಂತಾದ ಎಲ್ಲ ಕ್ರಿಯಾ ಭಾಗಗಳನ್ನೂ ಇಲ್ಲಿ ಅಳವಡಿಸಲಾಗಿದೆ. ಮೇಲೆ ದಪ್ಪ ಅಕ್ಷರಗಳಲ್ಲಿ ಸಂಸ್ಕೃತ ಮೂಲವನ್ನೂ ಕೆಳಗೆ ಕನ್ನಡದಲ್ಲಿ ಮಾಡಬೇಕಾದ ಕ್ರಿಯೆಗಳ ವಿವರವನ್ನೂ ಕೊಡಲಾಗಿದೆ. ಒಂದು ಕಡೆಯಲ್ಲಿ ಒಂದು ಸಲ ಪೂರ್ಣವಾಗಿ ಮುದ್ರಿಸಿದ ಮಂತ್ರ ಹಾಗೂ ವಾಕ್ಯಾಂಶಗಳನ್ನು ಇನ್ನೊಂದು ಕಡೆಯಲ್ಲಿ ಅದೇ ಮಂತ್ರ, ವಾಕ್ಯಾಂಶ ಬಂದಾಗ, ಅದರ ಆದಿಯನ್ನು ಮಾತ್ರ ಕೊಡಲಾಗಿದೆ. ಅಂತಹುದನ್ನು ಪೂರ್ಣವಾಗಿಯೇ ಉಚ್ಚರಿಸಬೇಕು. ನಗ್ನಪ್ರಚ್ಛಾದನಶ್ರಾದ್ಧ, ಅಸ್ಥಿ ಸಂಚಯನ ಶ್ರಾದ್ಧ ಇತ್ಯಾದಿಗಳಿಂದ ತೊಡಗಿ ಮುಂದೆ ಸಪಿಂಡೀಕರಣಶ್ರಾದ್ಧದವರೆಗೆ ಪ್ರತಿಯೊಂದು ಶ್ರಾದ್ಧ ಕಾರ್ಯದಲ್ಲೂ, ಸಾಂವತ್ಸರಿಕ ಶ್ರಾದ್ಧದಲ್ಲಿ ವಿವರವಾಗಿ ಹೇಳಿದ ಕ್ರಿಯಾಭಾಗಗಳನ್ನು ಮಾಡಬೇಕಾಗಿದೆ. ಹಾಗಾಗಿ ಸಾಂವತ್ಸರಿಕ ಶ್ರಾದ್ಧದ ಪೂರ್ಣಪ್ರಯೋಗವನ್ನು ಈ ಗ್ರಂಥದಲ್ಲಿ ಸೇರಿಸಲಾಗಿದೆ. ಅಲ್ಲದೆ ಬ್ರಹ್ಮಶ್ರೀ ವೇದಮೂರ್ತಿ ಪಡುಬಿದ್ರಿ ಅನಂತಾಚಾರ್ಯರು ಒದಗಿಸಿ ಕೊಟ್ಟ "ಯತಿಸಂಸ್ಕಾರ ವಿಧಿ"ಯನ್ನೂ, ಆಶೌಚನಿರ್ಣಯಕ್ಕೆ ಅನುಕೂಲವಾಗುವಂತೆ "ತ್ರಿಂಶಚ್ಛ್ಲೋಕೀಆಶೌಚನಿರ್ಣಯ" ಶ್ಲೋಕಗಳನ್ನೂ ಮುದ್ರಿಸಲಾಗಿದೆ.

•

**ಕೃ. ಭ. ಪೆರ್ಲ**

# ಬ್ರಹ್ಮಶ್ರೀ ಬಾಳಶಾಸ್ತ್ರೀ ರಾವ್‌ಜೀಶಾಸ್ತ್ರೀ ಕ್ಷೀರಸಾಗರ

## ಇವರ ಸಂಕ್ಷಿಪ್ತ ಪರಿಚಯ

೧೭೯೮ನೇ ಶಕವರ್ಷದ ಪೌಷ ಶುಕ್ಲ ನವಮಿ ಸೋಮವಾರ ಸತಾರಾದಲ್ಲಿ ಕ್ರಿ. ಶ. 1876 ದಶಂಬರ 25 ಕ್ಕೆ|| ಬ್ರಹ್ಮಶ್ರೀ ಬಾಳಶಾಸ್ತ್ರಿಯವರ ಜನನವಾಯಿತು. ಇವರ ತಂದೆ ರಾವಜೀ ಶಾಸ್ತ್ರಿಯವರಿಗೆ ಪಂ. ನಾರಾಯಣಶಾಸ್ತ್ರೀ ಮತ್ತು ಬಾಳಶಾಸ್ತ್ರೀ ಎಂಬ ಇಬ್ಬರೇ ಮಕ್ಕಳಿದ್ದರು. ಬ್ರ. ಬಾಳಶಾಸ್ತ್ರಿಯವರು ಹುಟ್ಟಿ ಒಂದು ತಿಂಗಳಾಗುವಷ್ಟರಲ್ಲೇ ಅವರ ತೀರ್ಥರೂಪರು ದಿವಂಗತರಾದರು. (ಮಾಘ ಬ|| ೪, ಫೆಬ್ರವರಿ 1.) ಬ್ರ. ಬಾಳಶಾಸ್ತ್ರಿಯವರು ಹೀಗೆ ಬಾಲ್ಯದಲ್ಲೇ ಪಿತೃನಿಧನದ ಘೋರ ಸಂಕಟಕ್ಕೆ ಈಡಾದರು. ಅವರ ಮಾತೃಶ್ರೀಯವರಾದ ಬಕುಳಾಬಾಯಿಯವರು ತಮ್ಮ ಮಕ್ಕಳ ವಿದ್ಯಾಭ್ಯಾಸದ ಅನುಕೂಲ್ಯಕ್ಕಾಗಿ ೧೭೯೯ನೇ ಶಕವರ್ಷದಲ್ಲಿ ಪುಣೆಯಲ್ಲಿದ್ದ ತಮ್ಮ ಸಮೀಪದ ಬಂಧುವೊಬ್ಬರಲ್ಲಿಗೆ ಬಂದು ನೆಲೆಸಿದರು. ಆ ಕಾಲಕ್ಕೆ ಬಾಳಶಾಸ್ತ್ರಿಯವರ ಅಣ್ಣ ನಾರಾಯಣ ಶಾಸ್ತ್ರಿಗಳಿಗೆ ೧೬-೧೭ ವರ್ಷ ಪ್ರಾಯವಾಗಿತ್ತು. ಅವರು ಪುಣೆಯ ಸ್ಥಳೀಯ ಪಾಠಶಾಲೆಯಲ್ಲಿ ಖ್ಯಾತ ವೈಯಾಕರಣಿಗಳಾಗಿದ್ದ ಪಂ. ನಾರಾಯಣ ಶಾಸ್ತ್ರೀ ಗೋಡಬೋಲೇ ಎಂಬವರಿಂದ ಸಿದ್ಧಾಂತಕೌಮುದೀ, ತರ್ಕಸಂಗ್ರಹ, ಮುಕ್ತಾವಳೀ ಮೊದಲಾದ ಗ್ರಂಥಗಳ ಅಧ್ಯಯನ ಮಾಡಿದರು. ಅಂತೆಯೇ ವಿದ್ವದ್ಭೂಷಣ ವಾಮನಶಾಸ್ತ್ರೀ ಕೇಮ್‌ಕರ್ ಎಂಬವರ ಶಿಷ್ಯತ್ವದಲ್ಲಿದ್ದು ಸಾಹಿತ್ಯಾಭ್ಯಾಸವನ್ನೂ ಮಾಡಿದರು. ಅವರು ಆ ವಯಸ್ಸಿನಲ್ಲಿ ಆಶುಕವಿ ಎಂದು ಖ್ಯಾತರಾಗಿದ್ದರು. ಅವರೇ ಸ್ವತಃ ತನ್ನ ತಮ್ಮ ಬ್ರಹ್ಮಶ್ರೀ ಬಾಳಶಾಸ್ತ್ರಿಯವರಿಗೆ ಸಂಸ್ಕೃತಭಾಷಾಧ್ಯಯನ ಹಾಗೂ ಘನಾಂತ ವೇದಾಧ್ಯಯನ ಮಾಡಿಸಿದರು. ಶ್ರೀ ಬಾಳಶಾಸ್ತ್ರಿಯವರ ಮನೆತನವೇ ಪರಂಪರೆಯಿಂದ ಸಂಸ್ಕೃತೋಪಜೀವಿಯಾಗಿತ್ತು. ಇವರ ಮುತ್ತಜ್ಜನವರು ಯಾವುದೇ ರೀತಿಯ ಪ್ರತಿಫಲ ಅಥವಾ ಸಂಭಾವನೆಯನ್ನು ಸ್ವೀಕರಿಸದೆ ತಮ್ಮ ಸಮಗ್ರ ಜೀವಮಾನವನ್ನೇ ಕೀರ್ತನಕ್ಕಾಗಿ ವ್ಯಯಿಸಿದ್ದರಿಂದ ಅವರಿಗೆ ಜಹಗೀರ್‌ದಾರ್ ಭೋಂಸಲೆಯವರಿಂದ ೧೨ ರೂಪಾಯಿ ವರ್ಷಾಶನ ಬರುತ್ತಿತ್ತು. ಮುಂದಕ್ಕೆ ಈ ವರ್ಷಾಶನವು ಇವರ ಪೀಳಿಗೆಯವರಿಗೆ ಬರುತ್ತಿತ್ತು. ಆ ಮುತ್ತಜ್ಜನವರಿಗೆ ಬಾಬಾಜೀ ಎಂಬ ಒಬ್ಬನೇ ಮಗನಿದ್ದನು. ಆ ಬಾಬಾಜೀಯವರ ಮೊಮ್ಮಗನೇ ಶ್ರೀ| ಬಾಳಶಾಸ್ತ್ರಿಯವರು. ಶ್ರೀ| ಬಾಬಾಜೀಯವರು ಗ್ರಹಲಾಘವೀ ಪಂಚಾಂಗಕರ್ತರಾಗಿದ್ದುದರಿಂದ ಅವರು ಬಾಬಾಜೀ ಜೋಶೀ ಎಂದೇ ಪ್ರಖ್ಯಾತರಾಗಿದ್ದರು. ಜ್ಯೋತಿಃಶಾಸ್ತ್ರದಲ್ಲಿ ಅವರ ಪಾಂಡಿತ್ಯವು ಅಗಾಧವಾಗಿದ್ದುದಲ್ಲದೆ ಅವರು ವೇದವಿಜ್ಞಾನ ಪಾರಂಗತರೂ ಆಗಿದ್ದರು. ಅಂತಹ ಘನ ವಿದ್ವಾಂಸರಿಗೆ ಶ್ರೀ ನರಸಿಂಹ ಸ್ವಾಮಿಯ ಅನುಗ್ರಹದಿಂದ ಮಗನಾಗಿ ಹುಟ್ಟಿದ ಮಹಾನುಭಾವರೇ ಶ್ರೀ| ಬಾಳಶಾಸ್ತ್ರಿಯವರ ತಂದೆಯಾಗಿದ್ದರು.

ತಾಯಿ ಬಕುಳಾಬಾಯಿಯವರ ವ್ರತನಿಯಮಾದಿಗಳ ಸಂಸ್ಕಾರವು ಮಗನ ಮೇಲೆ ಅಚ್ಚಳಿಯದ ಪರಿಣಾಮವನ್ನು ಬೀರಿತ್ತು. ಹಾಗಾಗಿ ಬ್ರ. ಬಾಳಶಾಸ್ತ್ರಿಯವರು ಗಾಯತ್ರೀಜಪ, ರುದ್ರೈಕಾದಶಿನೀ, ಸಪ್ತಶತೀಪಾಠ, ಪಂಚಮಹಾಯಜ್ಞ ಮುಂತಾದ ನಿತ್ಯಕರ್ಮಗಳ ಅನುಷ್ಠಾನದಲ್ಲಿ ಎಂದಿಗೂ ತಪ್ಪಿರಲಿಲ್ಲ. ಇವರ ಅಣ್ಣ ಶ್ರೀ| ನಾರಾಯಣ ಶಾಸ್ತ್ರಿಯವರ ಕೈಬರಹವು ಬಹಳ ಸುಂದರವಾಗಿತ್ತು. ತಂದೆಯವರ ದೇಹಾಂತವಾದ ಮೇಲೆ ಅವರು ಜಗದ್ಹಿತೇಚ್ಛು ಎಂಬ ಕಲ್ಲಚ್ಚಿನ

ಮುದ್ರಣಾಲಯದಲ್ಲಿ ನೌಕರಿಯನ್ನು ಮಾಡುತ್ತ ಅಲ್ಲಿ ದೊರೆಯುತ್ತಿದ್ದ ವೇತನದಿಂದ ತಮ್ಮನ ಸಂಸ್ಕೃತಾಧ್ಯಯನ ಹಾಗೂ ವೇದಾಧ್ಯಯನದ ಶಿಕ್ಷಣವನ್ನು ಪೂರಯಿಸಿದರು. ಬ್ರ. ಬಾಳಶಾಸ್ತ್ರಿಯವರು ರಚಿಸಿದ ಗ್ರಂಥಸಂಪತ್ತು ಇಂದಿಗೂ ಆಶ್ಚರ್ಯವನ್ನುಂಟುಮಾಡುವಷ್ಟು ವಿಸ್ತೃತವಾಗಿದೆ.

ಬ್ರ. ಬಾಳಶಾಸ್ತ್ರಿಯವರು ಧರ್ಮಶಾಸ್ತ್ರಗಳ ಅಧ್ಯಯನವನ್ನೂ ಪೂರ್ಣಗೊಳಿಸಿ ತಮ್ಮ ೨೮ನೆಯ ವಯಸ್ಸಿನಲ್ಲೇ ಸಂಧ್ಯಾ, ವೈಶ್ವದೇವ, ದೇವಪೂಜಾ, ಅಥರ್ವಶೀರ್ಷ, ಲಘುನ್ಯಾಸರುದ್ರ, ಸಾಂವತ್ಸರಿಕಶ್ರಾದ್ಧ ಮುಂತಾದ ಸುಮಾರು ೨೦-೨೫ ಪುಸ್ತಕಗಳನ್ನು ಪ್ರಕಟಿಸಿದರು. ಮಾತ್ರವಲ್ಲ ಕೇವಲ ಧರ್ಮಪ್ರಚಾರವಾಗಬೇಕೆಂಬ ಸದುದ್ದೇಶದಿಂದ 'ಕಾಲಿಕಾಪ್ರಸಾದ' ಎಂಬ ಒಂದು ಮುದ್ರಣಾಲಯವನ್ನು ಸ್ವತಃ ಪ್ರಾರಂಭಿಸಿದರು. ಶ್ರೀಯುತ ಶಾಸ್ತ್ರಿಯವರು ವೈದಿಕವಾಙ್ಮಯದ ಪ್ರಚುರ ಪ್ರಚಾರಾರ್ಥವಾಗಿ ಒಂದು ಗ್ರಂಥಮಾಲೆಯನ್ನೇ ಪ್ರಾರಂಭಿಸಿದರು. ಈ ಗ್ರಂಥಮಾಲೆಯ ಮೂಲಕ ಧರ್ಮಶಾಸ್ತ್ರ, ಶಿಲ್ಪಶಾಸ್ತ್ರ ಮುಂತಾದ ಉಪಯುಕ್ತ ವಿಷಯಗಳಿಗೆ ಸಂಬಂಧಪಟ್ಟ ಹಲವು ಪುಸ್ತಕಗಳನ್ನು ಪ್ರಕಟಿಸಿದರು. ಧರ್ಮಶಾಸ್ತ್ರದಲ್ಲಿ ಹಾಗೂ ಶಿಲ್ಪಶಾಸ್ತ್ರದಲ್ಲಿ ವಿಶೇಷವಾದ ಸಂಶೋಧನೆಯನ್ನು ನಡೆಸಬೇಕೆಂಬ ಸಂಕಲ್ಪದಿಂದ **"ಶ್ರೀನಾರಾಯಣಾಶ್ರಮ ಗ್ರಂಥಪ್ರಕಾಶನ ಸಂಸ್ಥಾ"** ಎಂಬ ಒಂದು ಸಂಸ್ಥೆಯನ್ನೇ ಸ್ಥಾಪಿಸಿದರು. ಅದರ ಮೂಲಕ ಯಜ್ಞಕುಂಡ ಇಷ್ಟಿಕಾಚಯನ ಮುಂತಾದ ಗ್ರಂಥಗಳನ್ನೂ ಪ್ರಕಟಿಸಿದರು. **"ಸಾರ್ಥ ಷೋಡಶಸಂಸ್ಕಾರರತ್ನಮಾಲಾ"** ಎಂಬ ಮಹತ್ತ್ವಪೂರ್ಣವಾದ ಈ ಉದ್ಗ್ರಂಥವು ೧೯೧೦ರಲ್ಲಿ ಪ್ರಕಟವಾಯಿತು. ಇದರ ಮೊದಲ ಮುದ್ರಣದ ಪ್ರತಿಗಳೆಲ್ಲ ಮುಗಿದು ಪುಸ್ತಕವು ದೊರೆಯುವುದೇ ದುರ್ಲಭವೆಂಬ ಪರಿಸ್ಥಿತಿ ಉಂಟಾದಾಗ ೧೯೩೫ರಲ್ಲಿ ಇದರ ಎರಡನೆಯ ಆವೃತ್ತಿಯು ಪ್ರಕಟಿಸಲ್ಪಟ್ಟಿತು.

ಬ್ರ. ಬಾಳಶಾಸ್ತ್ರಿಯವರು ಅಗ್ನಿಹೋತ್ರದೀಕ್ಷೆಯನ್ನು ಸ್ವೀಕರಿಸಿದ್ದರು. ಸ್ವತಃ ತಮ್ಮ ಮನೆಗೇ ಬರಮಾಡಿ ಅವರು ಅನೇಕ ವಿದ್ಯಾರ್ಥಿಗಳಿಗೆ ಸಂಸ್ಕೃತಭಾಷೆ ಮತ್ತು ವೇದಾಧ್ಯಯನದ ಶಿಕ್ಷಣವನ್ನು ಕೊಡುತ್ತಿದ್ದರು. ಹೀಗೆ ೧೯೦೩ರಿಂದ ೧೯೪೩ರ ತನಕ ಸುಮಾರು ೪೦ ವರ್ಷಗಳ ಕಾಲ ಅವರು ಸಪ್ತಶತಿ-ಅನುಷ್ಠಾನ, ಗ್ರಂಥಲೇಖನ, ಪ್ರಕಾಶನ ಮುಂತಾದ ಮಹತ್ಕಾರ್ಯಗಳನ್ನು ಮಾಡಿದರು. ಅವರಿಗೆ ಪ್ರಾಚೀನ ಗ್ರಂಥಗಳ ಸಂಶೋಧನೆಯಲ್ಲಿ ಅಪಾರವಾದ ಅಭಿರುಚಿ ಇದ್ದುದರಿಂದ ಅದಕ್ಕಾಗಿ ಮೈಸೂರು, ತಂಜಾವೂರು, ಮದ್ರಾಸು, ಕಲ್ಕತ್ತಾ ಮುಂತಾದ ದೂರ ದೂರದ ಊರುಗಳಿಗೆ ಹೋಗಿ ಅಲ್ಲಿ ಒಂದೊಂದು ತಿಂಗಳ ಕಾಲ ಇದ್ದು ಬಹಳಷ್ಟು ಗ್ರಂಥಗಳನ್ನು ಪರಿಶೀಲಿಸಿದರು. ಈ ಸಂಶೋಧನಕಾರ್ಯದಲ್ಲಿ ಶ್ರೀ। ಶಾಸ್ತ್ರಿಯವರಿಗೆ ಆ ಕಾಲದ ಅನೇಕ ಮಂದಿ ಇತರ ಘನವಿದ್ವಾಂಸರೂ ಸಾಕಷ್ಟು ನೆರವನ್ನಿತ್ತಿದ್ದರು. ಆರ್ಥಿಕವಾಗಿ ಅವರ ಕೌಟುಂಬಿಕ ಪರಿಸ್ಥಿತಿಯು ಸ್ವಲ್ಪವೂ ತೃಪ್ತಿಕರವಾಗಿರಲಿಲ್ಲ. ಆದರೂ ಅಂತಹ ಅಡಚಣೆಗಳನ್ನು ಲೆಕ್ಕಿಸದೆ ಉಪಯುಕ್ತವಾದ ಪ್ರಾಚೀನ ಉದ್ಗ್ರಂಥಗಳ ವ್ಯಾಸಂಗ, ಲೇಖನ, ಪ್ರಕಾಶನ ಇತ್ಯಾದಿ ಲೋಕೋಪಯೋಗಿ ಕಾರ್ಯಗಳಲ್ಲೇ ಅವರು ಯಾವಾಗಲೂ ಮಗ್ನರಾಗಿರುತ್ತಿದ್ದರು. ತಮ್ಮ ಸಮಗ್ರಜೀವಿತದಲ್ಲಿ ಅವರು ನಿಯಮಿತರೂಪದಿಂದ ಧರ್ಮಪರಿಪಾಲನೆ ಮಾಡಿದರು. ತಾವು ಕೈಗೊಂಡ ಮಹತ್ಕಾರ್ಯವು ತಮ್ಮ ಕಾಲಾನಂತರ ಕುಂಠಿತವಾಗಬಾರದು, ಅದು ಮುಂದುವರಿಯುತ್ತಲೇ ಇರಬೇಕೆಂಬುದು ಅವರ ಪ್ರಬಲ ಆಕಾಂಕ್ಷೆಯಾಗಿತ್ತು.

ಶ್ರೀ। ಶಾಸ್ತ್ರಿಯವರ ಈ ಅಂತಿಮ ಇಚ್ಛೆಯನ್ನು ಮನಗಂಡ ನಾವು **"ಯಾವದ್ಧ್ರಿಯತೇ ಸಾ ದೀಕ್ಷಾ"** ಎಂಬ ಪ್ರಮಾಣವಚನದಂತೆ, ಈ ಕಾರ್ಯವನ್ನು ಮುಂದುವರಿಸುವ ದೀಕ್ಷೆ

ವಹಿಸಿದ್ದೇನೆ ಎಂದು ತಿಳಿದು ಬಂದಾಗ ಅವರು ತಮ್ಮ ಕೊನೆಯ ಪತ್ರದಲ್ಲಿ ಈ ಕೆಳಗಿನ ಮಾತುಗಳಲ್ಲಿ ನನ್ನನ್ನು ಆಶೀರ್ವದಿಸಿದರು.

**ಮಹ್ಯಂ ಪದ್ಮಾಕರೋ ದತ್ತೋ ಹರಿಣಾಽಮೋಘಕರ್ಮಣಾ ।**
**ವಿಶ್ವಧರ್ಮಪ್ರಚಾರಸ್ಯ ಸ ಧುರಂ ಧಾರಯಿಷ್ಯತಿ ॥**
**ಸ್ವಸ್ತಿಶ್ರೀಮಚ್ಚಿರಂಜೀವಿ ಪ್ರಾಣಾಧಿಕತರೇಪ್ಸಿತಃ ।**
**ಸ್ಫುರಂತು ಕೋಟಿಶಃ ಸ್ನೇಹಾದಾಶಿಷಾಂ ರಾಶಯೋ ಮಮ ॥**

**ಅರ್ಥ:-** ಅವ್ಯಾಹತವಾಗಿ ಶ್ರೀ ಜಗದಂಬೆಯ ಉಪಾಸನೆ ಮಾಡುತ್ತಿರುವ ನೀನು ನಮ್ಮ ಮನೆತನದ ಪರಂಪರೆಯನ್ನು ಮುಂದುವರಿಸುವುದಕ್ಕೆ ದೀಕ್ಷಾಬದ್ಧನಾಗಿದ್ದಿ ಎಂಬ ವಿಚಾರವನ್ನು ತಿಳಿದಾಗ ನನಗುಂಟಾದ ಆನಂದವನ್ನು ಪತ್ರಮೂಲಕ ಶಬ್ದಗಳಿಂದ ತಿಳಿಸಲು ಈ ಲೇಖನಿಯು ಅಸಮರ್ಥವಾಗಿದೆ. ಪ್ರಕೃತ ನೀನು ಕೈಗೊಂಡಿರುವ ಶಾಲಾಕೆಲಸ ಹಾಗೂ ಶಿಕ್ಷಣಕಾರ್ಯವನ್ನು ತೃಪ್ತಿಕರವಾಗಿ ನಿರ್ವಹಿಸುತ್ತ ಅದರ ಜತೆಗೆ ಗ್ರಂಥ ಪ್ರಕಾಶನದ ಹೊಣೆಯನ್ನೂ ಹೊರುವೆ ಎಂದಾದರೆ ನನ್ನ ಮನಸ್ಸಿನಲ್ಲಿದ್ದ ಭಾವೀಚಿಂತೆಯು ಸಂಪೂರ್ಣ ದೂರವಾದಂತಾಯಿತು.

ಆಮೇಲೆ ಕೆಲವೇ ದಿನಗಳಲ್ಲಿ ಆಶ್ವೀಜಮಾಸದ ಶುಕ್ಲಪಕ್ಷ ಷಷ್ಠಿಯ ದಿನ, ತಾ. 5-10-1943 ರಂದು ನಾಸಿಕದಲ್ಲಿದ್ದ ನಿವಾಸದಲ್ಲಿ ಅವರು ಸ್ವೇಚ್ಛೆಯಿಂದ ತಮ್ಮ ಇಹಲೋಕಯಾತ್ರೆಯನ್ನು ಮುಗಿಸಿದರು.

ವಿದ್ವದ್ ವಿಧೇಯ:
**ವಿದ್ಯಾಭೂಷಣ ಪದ್ಮಾಕರಶಾಸ್ತ್ರೀ ಬಾಳಶಾಸ್ತ್ರೀ ಕ್ಷೀರಸಾಗರ**
**'ನೈಕತೀರ್ಥಃ'**

ಚೈತ್ರ ಶು. ನವಮಿ, ರವಿವಾರ, ೧೮೯೩ ಶಕ,
4 ಏಪ್ರಿಲ್, 1971.

# ನಾಲ್ಕನೆಯ ಆವೃತ್ತಿಯ ಪ್ರಸ್ತಾವನೆ

## "ಯಾವದ್ಧ್ರಿಯತೇ ಸಾ ದೀಕ್ಷಾ"

ಇಪ್ಪತ್ತೊಂದನೆಯ ಶತಮಾನದ ಇಂದಿನ ಈ ಆಧುನಿಕ ವಾತಾವರಣದಲ್ಲಿ, ಭಾರತದ ಪ್ರಾಚೀನ ಗುರುಕುಲ ಶಿಕ್ಷಣಪ್ರಣಾಲಿಯು ನಾಮಾವಶೇಷವಾಗಿದೆ. ಮಾತ್ರವಲ್ಲ ನೇರವಾಗಿ ಗುರುವಾದವನು ಶಿಷ್ಯನಿಗೆ ಕಲಿಸುವ ಅಧ್ಯಯನ ಅಧ್ಯಾಪನ ಪದ್ಧತಿಯೂ ನಶಿಸಿ ಹೋಗಿದೆ. ಸಂಸ್ಕೃತ ಭಾಷೆಯ ಆಳವಾದ ಪರಿಜ್ಞಾನವಿರುವ ವಿದ್ವಾಂಸರ ಸಂಖ್ಯೆಯೂ ವಿರಳವಾಗಿದೆ. ವೇದಾಧ್ಯಯನ, ಕರ್ಮಕಾಂಡ, ಪೌರೋಹಿತ್ಯ ಮುಂತಾದುವುಗಳನ್ನು ವಿಧಿವತ್ತಾಗಿ ಅಭ್ಯಾಸ ಮಾಡುವವರೂ ಬಹಳ ಅಲ್ಪಸಂಖ್ಯೆಯಲ್ಲಿದ್ದಾರೆ. ಆದರೆ ಇಂದಿನ ಈ ನವ್ಯಯುಗದಲ್ಲೂ ತಮ್ಮ ಹಾಗೂ ತಮ್ಮ ಮಕ್ಕಳ ಸಂಸ್ಕಾರಾದಿಗಳು ಶಾಸ್ತ್ರಸಮ್ಮತವಾಗಿ ವಿಧಿವತ್ತಾದ ಕ್ರಮದಿಂದ ಆಗಬೇಕೆಂದು ಬಯಸುವ ಧರ್ಮಾಭಿಮಾನಿಗಳೂ, ಶ್ರದ್ಧಾಳುಗಳೂ, ಪ್ರಾಚೀನ ಆರ್ಷಸಂಸ್ಕೃತಿಯ ಮೇಲೆ ಆದರವುಳ್ಳ ಮಹನೀಯರೂ ಅನೇಕ ಮಂದಿ ಇದ್ದಾರೆ. ಇಂತಹ ಶ್ರದ್ಧಾವಂತರಿಗೂ ವಿಶೇಷವಾಗಿ ಪುರೋಹಿತ ವರ್ಗದವರಿಗೂ ಉಪಯುಕ್ತವಾಗುವಂತೆ ಈ ಗ್ರಂಥವನ್ನು ನಿರ್ಮಿಸಲಾಗಿದೆ. ನಿರ್ಮಾಣಗೊಂಡು ಪ್ರಕಟವಾದ ಮೇಲೆ ಇದೇ ಗ್ರಂಥದ ಸಹಾಯದಿಂದ ಅನೇಕ ಕಡೆಗಳಲ್ಲಿ ಅಧ್ಯಯನ ಅಧ್ಯಾಪನಗಳು ನಡೆಯುತ್ತಿರುವುದರಿಂದ ವಿದ್ವಾಂಸರಿಗೆ, ಪಂಡಿತರಿಗೆ, ಪುರೋಹಿತರಿಗೆ, ಆಚಾರ್ಯರಿಗೆ ಇದು ಸಂಗ್ರಾಹ್ಯವಾಗಿದೆ. ಇದರ ಪ್ರಥಮ ಆವೃತ್ತಿಯು 1910ರಲ್ಲೂ, ದ್ವಿತೀಯ ಆವೃತ್ತಿಯು 1945ರಲ್ಲೂ, ತೃತೀಯ ಆವೃತ್ತಿಯು 1998ರಲ್ಲೂ ಮುದ್ರಿಸಲ್ಪಟ್ಟು, ಮೂರು ಆವೃತ್ತಿಗಳ ಪ್ರತಿಗಳೆಲ್ಲವೂ ಮುಗಿದುಹೋದವು. ಹಾಗಾಗಿ 9 ವರ್ಷಗಳ ತರುವಾಯ ಇದರ ನಾಲ್ಕನೆಯ ಆವೃತ್ತಿಯನ್ನು ಈಗ ಪುನಃ ಮುದ್ರಿಸಿ ಪ್ರಕಟಿಸುವ ಸಾಹಸವನ್ನು ಕೈಕೊಳ್ಳಲಾಗಿದೆ. ಹಿಂದಿನ ಪರಂಪರಾಗತ ಪದ್ಧತಿಯನ್ನು ಅನುಸರಿಸಿಯೇ ಈ ಗ್ರಂಥದ ನಿರ್ಮಾಣವಾಗಿರುವುದರಿಂದ ಮೊದಲಿನ ಆವೃತ್ತಿಗಳಲ್ಲಿದ್ದ ಯಾವುದೇ ವಿಷಯವನ್ನು ಸಂಕ್ಷೇಪಿಸುವುದಾಗಲಿ, ಪರಿಷ್ಕರಿಸುವುದಾಗಲಿ, ಅನಾವಶ್ಯಕವೆಂದು ತೆಗೆದುಹಾಕುವುದಾಗಲಿ ಅಗತ್ಯವೆಂದು ನಮಗೆ ತೋರಲಿಲ್ಲ. ಇದರಲ್ಲಿ ಅಳವಡಿಸಿದ ಪ್ರತಿಯೊಂದು ವಿಷಯವು ಅನಿವಾರ್ಯವೂ, ಉಪಯುಕ್ತವೂ, ಗ್ರಾಹ್ಯವೂ ಆಗಿರುತ್ತದೆ.

ಇಂದಿನ ಈ ಕಾಲದಲ್ಲಿ ಹದಿನಾರು ಪೂರ್ವ ಸಂಸ್ಕಾರಗಳಲ್ಲಿ ಮುಖ್ಯವಾಗಿ ಕೇವಲ ಉಪನಯನ ಮತ್ತು ವಿವಾಹಗಳು ಮಾತ್ರ ಜರಗುತ್ತಿರುವುದನ್ನು ನಾವು ಕಾಣುತ್ತಿದ್ದೇವೆ. ಪ್ರಾಯಶಃ ಇತರ ಎಲ್ಲ ಸಂಸ್ಕಾರಗಳನ್ನೂ ಕೈಬಿಡಲಾಗಿದೆ. ಇವುಗಳಲ್ಲೂ ಚಪ್ಪರ, ವಾದ್ಯ, ಮೆರವಣಿಗೆ, ಆಭರಣ, ವಸ್ತ್ರಾಲಂಕಾರ, ಊಟ, ಉಪಚಾರ ಇತ್ಯಾದಿ ಆಡಂಬರಗಳ ಕಡೆಗೇ ಜನರ ದೃಷ್ಟಿ ಇದೆಯೇ ಹೊರತು ಈ ಸಂಸ್ಕಾರಗಳ ಮೂಲ ಉದ್ದೇಶವೇನು, ವಿವಿಧ ಕರ್ಮಭಾಗಗಳ ಅರ್ಥವೇನು, ಅವುಗಳನ್ನು ಮಾಡುವ ಸರಿಯಾದ ಕ್ರಮವೇನು, ಅವುಗಳ ದೃಷ್ಟ ಹಾಗೂ ಅದೃಷ್ಟ ಫಲಗಳೇನು ಇತ್ಯಾದಿ ಮುಖ್ಯ ವಿಚಾರಗಳ ಕುರಿತು ಯಾರೊಬ್ಬನೂ ಆಲೋಚಿಸುವುದಿಲ್ಲ. ಆದರೆ ಕೆಲವೇ ಜನರಿಗಾದರೂ ಇವುಗಳ ಕುರಿತು ಆಸಕ್ತಿ ಇರಬಹುದು. ದೇಶ, ಕಾಲ, ಪರಿಸ್ಥಿತಿ, ವಾತಾವರಣ ಮುಂತಾದವುಗಳನ್ನು ಹೊಂದಿಕೊಂಡು, ಇಂದಿನ ಈ ಪರಿಸರದಲ್ಲಿ ಹಿಂದಿನ ಆ

ಕಾಲದ ಅದೇ ಕ್ರಮಗಳನ್ನು ಸ್ವಲ್ಪವೂ ನ್ಯೂನತೆ ಇಲ್ಲದ ಅದೇ ರೀತಿಯಲ್ಲಿ ಹಾಗೇ ಅನುಸರಿಸುವುದು ದುಃಸಾಧ್ಯವೆನಿಸಿದರೂ ಈ ಸಂಸ್ಕಾರಗಳ ಮೂಲ ಉದ್ದೇಶ, ವಿಧಿ ವಿಧಾನ, ಪರಿಣಾಮ, ಫಲ ಮುಂತಾದವುಗಳ ಸ್ಥೂಲ ಪರಿಚಯವಿದ್ದು ಅವುಗಳನ್ನು ಆಚರಿಸಿದರೆ ಮಾಡಿದ ಕರ್ಮವು ಸಾರ್ಥಕವಾದೀತು. ಆದ್ದರಿಂದ ಈ ನಾಲ್ಕನೆಯ ಆವೃತ್ತಿಯಲ್ಲಿ ಭಾಷೆಯನ್ನು ಎಲ್ಲರಿಗೂ ಅರ್ಥವಾಗುವಂತೆ ಸಾಧ್ಯವಿದ್ದಷ್ಟು ಸರಳಗೊಳಿಸಿ, ಸಂಕ್ಷೇಪದಲ್ಲಿ ಮಂತ್ರಾರ್ಥವನ್ನು ವಿವರಿಸಲಾಗಿದೆ.

ಜಾತಕರ್ಮ, ನಾಮಕರಣ, ಉಪನಯನ, ವಿವಾಹ ಮುಂತಾದ ಸಂಸ್ಕಾರಗಳನ್ನು ಕೇವಲ ರೂಢಿ ಎಂದು ಮಾಡುವುದಕ್ಕಿಂತ ಅವುಗಳ ಉದ್ದೇಶ, ಪರಿಣಾಮ, ಫಲ ಮುಂತಾದವುಗಳನ್ನು ಸರಿಯಾಗಿ ತಿಳಿದು ಮಾಡುವುದು ಉಚಿತವಾಗಿದೆ. ಆದ್ದರಿಂದ ಪ್ರತಿಯೊಂದು ಸಂಸ್ಕಾರದಲ್ಲೂ ಏನು ವೈಶಿಷ್ಟ್ಯವಿದೆ ಎಂಬುದರ ಪೂರ್ವಕಲ್ಪನೆ ಇರುವುದು ಒಳ್ಳೆಯದು. ಅದೇನೆಂಬುದನ್ನು ಸಂಕ್ಷೇಪವಾಗಿ ಪರಿಶೀಲಿಸೋಣ.

'ಸಂಸ್ಕಾರ' ಎಂದರೆ ಶಾಸ್ತ್ರೋಕ್ತವಿಧಿಯಿಂದ ಸಂಸ್ಕರಿಸುವುದು, ಪರಿಷ್ಕರಿಸುವುದು, ಶುದ್ಧೀಕರಿಸುವುದು, ಅರ್ಹತೆಯನ್ನು ತರುವುದು ಇತ್ಯಾದಿ ಅರ್ಥವಾಗುತ್ತದೆ. ಉಪನಯನ ವಿವಾಹ ಮೊದಲಾದ ಯಾವುದೇ ಸಂಸ್ಕಾರವಾದರೂ ಆರಂಭದಲ್ಲಿ ದೇವತಾ ಪ್ರತಿಷ್ಠೆ ಮಾಡಲಾಗುತ್ತದೆ. ಇದರಲ್ಲಿ ಗಣಪತಿಪೂಜನ, ಪುಣ್ಯಾಹವಾಚನ, ಮಾತೃಕಾಪೂಜನ, ನಾಂದೀಶ್ರಾದ್ಧ , ಮಂಡಪ ದೇವತಾಪ್ರತಿಷ್ಠಾ ಮುಂತಾದ ಕರ್ಮಭಾಗಗಳು ಅಂತರ್ಗತವಾಗಿವೆ.

೧. **ಗಣಪತಿ ಪೂಜೆ:-** ದೇವಗಣದಲ್ಲಿ ಪ್ರಮುಖನಾದವನು ಗಣಪತಿ. ಇವನು ಸರ್ವವಿಘ್ನನಾಶಕ. ಆರಂಭಿಸಿದ ಸಂಸ್ಕಾರಕರ್ಮದಲ್ಲಿ ಯಾವುದೇ ವಿಘ್ನವೂ ಉಂಟಾಗದಂತೆ ಅದು ಸಾಂಗವಾಗಿ ನೆರವೇರುವುದಕ್ಕೋಸ್ಕರ ಪ್ರಾರಂಭದಲ್ಲಿ ಗಣಪತಿಯ ಪೂಜೆ ಮಾಡಲಾಗುತ್ತದೆ.

೨. **ಪುಣ್ಯಾಹವಾಚನ:- ಪುಣ್ಯಂ ಅಹಃ** = ದಿವಸವು ಪುಣ್ಯಪ್ರದವಾಗಲಿ ಎಂದು ಬ್ರಾಹ್ಮಣರು ಮಾಡುವ ವಾಚನ. ಸಂಸ್ಕಾರಕರ್ತೃವಿಗೂ ಸಂಸ್ಕಾರ್ಯನಿಗೂ ಈ ದಿನವು ಹಬ್ಬದಂತೆ ಸುಖ ಸಂತೋಷಗಳನ್ನು ಉಂಟುಮಾಡಲಿ ಎಂದು ಆಶೀರ್ವಾದಗಳನ್ನು ಪಡೆಯುವುದೇ ಈ ಪುಣ್ಯಾಹವಾಚನ ಕರ್ಮದ ಪ್ರಧಾನ ಉದ್ದೇಶವಾಗಿದೆ. ಇದರಲ್ಲಿ ಸ್ವಸ್ತಿವಾಚನ ಮುಂತಾದವುಗಳೂ ಸೇರಿಕೊಂಡಿವೆ.

೩. **ಮಾತೃಕಾಪೂಜನ:-** ಪ್ರತಿಯೊಬ್ಬನಿಗೂ ತನ್ನ ಕುಲದೇವತೆ ಪ್ರತ್ಯೇಕವಾಗಿರುತ್ತದೆ. ಮಾತೃಕಾಪೂಜನದಲ್ಲಿ ಕುಲದೇವತಾಪೂಜೆಯು ಅಡಕವಾಗಿದೆ. ಯಾವುದೇ ಶುಭಕರ್ಮವನ್ನು ಪ್ರಾರಂಭಿಸುವಾಗ ಪುಣ್ಯಾಹವಾಚನವಾದ ಮೇಲೆ ಪರಿವಾರ ಸಮೇತ ಕುಲದೇವತೆಗಳ ಪೂಜೆ ಮಾಡಲಾಗುತ್ತದೆ. ಈ ಪೂಜೆಯಿಂದ ತನ್ನ ಮತ್ತು ತನ್ನ ಕುಲದ ಕಲ್ಯಾಣವಾಗಬೇಕೆಂಬುದೇ ಇದರ ಪ್ರಧಾನ ಉದ್ದೇಶ.

೪. **ನಾಂದೀಶ್ರಾದ್ಧ:-** ಮನೆಯಲ್ಲಿ ಮಂಗಲಕಾರ್ಯವೊಂದು ನೆರವೇರುವಾಗ, ಪಿತೃಗಳೆಲ್ಲರೂ ಸೂಕ್ಷ್ಮರೂಪದಿಂದ ಬಂದು ಉಪಸ್ಥಿತರಾಗಿದ್ದು ಈ ಕಾರ್ಯವನ್ನು

ಸಂತೋಷದಿಂದ ಅವಲೋಕಿಸುತ್ತಾರೆ. ಹಾಗೂ ಕುಲಕ್ಕೆ ಶುಭವನ್ನು ಕೋರುತ್ತಾರೆ ಎಂಬುದು ನಮ್ಮ ವಿಶ್ವಾಸ. ಅಂತಹ ಪಿತೃಗಳನ್ನು ಪೂಜಿಸಿ ಸತ್ಕರಿಸುವುದೇ ಈ ವಿಧಿಯ ಪ್ರಧಾನ ಉದ್ದೇಶ. ನಾಂದೀ ಎಂದರೆ ಶುಭಕರ್ಮ. ಆ ಕಾಲಕ್ಕೆ ಪಿತೃಗಳನ್ನು ಉದ್ದೇಶಿಸಿ ಮಾಡುವ ಶ್ರಾದ್ಧ-ನಾಂದೀಶ್ರಾದ್ಧ.

೫. **ಮಂಡಪದೇವತಾಪ್ರತಿಷ್ಠೆ:-** ಯಾವ ಮಂಟಪದಲ್ಲಿ ಶುಭಕಾರ್ಯವನ್ನು ಮಾಡಲಾಗುತ್ತದೋ ಆ ಮಂಟಪದ ಪೂಜೆ ಮಾಡುವುದೇ ಮಂಡಪದೇವತಾಪ್ರತಿಷ್ಠೆ. ದಾರವನ್ನು ಸುತ್ತಿದ ಮಾವಿನ ಎಲೆಯ ಮೇಲೆ ಮಂಟಪದೇವತೆಯನ್ನು ಆವಾಹಿಸಿ ಪ್ರತಿಷ್ಠಿಸಲಾಗುತ್ತದೆ. ಅಂತೆಯೇ ಕರ್ಮಸಮಾಪ್ತಿಯಾದಾಗ ದೇವಕೋತ್ಥಾಪನೆ, ಮಂಡಪೋದ್ವಾಸನ ಮುಂತಾದವುಗಳನ್ನೂ ನೆರವೇರಿಸಬೇಕು. ಪ್ರತಿಷ್ಠಾಪಿಸಿದ ದೇವತೆಗಳನ್ನು ವಿಸರ್ಜಿಸುವುದೂ ಅತ್ಯಂತ ಅವಶ್ಯಕವಾಗಿದೆ. ಆವಾಹನದಷ್ಟೇ ವಿಸರ್ಜನೆಯೂ ಮಹತ್ತ್ವಪೂರ್ಣಕಾರ್ಯವಾಗಿದೆ.

ಇನ್ನು ಷೋಡಶಸಂಸ್ಕಾರಗಳು ಯಾವುವು? ಅವುಗಳ ಉದ್ದೇಶವೇನು? ಅವುಗಳಲ್ಲಿ ಬರುವ ಪ್ರಧಾನ ವಿಧಿಗಳು ಯಾವುವು ಮುಂತಾದ ವಿಚಾರಗಳನ್ನು ಕ್ರಮವಾಗಿ ನೋಡೋಣ.

೧. **ಗರ್ಭಾಧಾನ:-** ಬೀಜಸಂಬಂಧಿ ಅಥವಾ ಗರ್ಭಸಂಬಂಧಿಯಾದ, ಅದೃಷ್ಟವಾದ ವಿಘ್ನಕಾರಕ ಪಾಪವನ್ನು ದೂರೀಕರಿಸಲು ಈ ಸಂಸ್ಕಾರವನ್ನು ಮಾಡಲಾಗುತ್ತದೆ.

೨. **ಪುಂಸವನ:-** (ಪುಂಸಃ ಸವನಂ) ಪುತ್ರಜನ್ಮವಾಗಬೇಕೆಂದು ಆಚರಿಸುವುದೇ ಈ ಸಂಸ್ಕಾರದ ಉದ್ದೇಶವಾಗಿದೆ. ಉದ್ದು, ಮೊಸರು, ಅಕ್ಕಿ ಮುಂತಾದವುಗಳ ಪ್ರಾಶನವನ್ನು ಇದರಲ್ಲಿ ಹೇಳಲಾಗಿದೆ.

೩. **ಸೀಮಂತೋನ್ನಯನ:-** ಸೀಮಂತಃ ಎಂದರೆ ಕೂದಲು, ಉನ್ನಯನಂ ಎಂದರೆ ಬಾಚುವುದು. ಗರ್ಭದ ಶಕ್ತಿಯು ಹೆಚ್ಚಾಗಿ ಅದು ಸ್ಥಿರವಾಗಿರಬೇಕೆಂದು ಪತಿಯು ಎರಡು ಕಾಯಿಗಳಿರುವ ಔದುಂಬರದ ಟೊಂಗೆ, ಮೂರು ಬಿಳಿ ಚುಕ್ಕೆಗಳಿರುವ ಮುಳ್ಳು ಮತ್ತು ಮೂರು ದರ್ಭೆಗಳಿಂದ ಪತ್ನಿಯ ತಲೆಯನ್ನು ಬಾಚಬೇಕು. ಆದ್ದರಿಂದಲೇ ಇದಕ್ಕೆ ಸೀಮಂತೋನ್ನಯನ ಎಂಬ ಹೆಸರು.

೪. **ಜಾತಕರ್ಮ:-** (ಜಾತಸ್ಯ ಕರ್ಮ) ಮಗು ಹುಟ್ಟಿದ ಒಡನೆಯೇ ಮಾಡಬೇಕಾದ ವಿಧಿ ಇದಾಗಿದೆ. ಈ ವಿಧಿಯಲ್ಲಿ ಬಂಗಾರದ ಕಡ್ಡಿಯಿಂದ ತುಪ್ಪ ಮತ್ತು ಜೇನನ್ನು ಮಗುವಿಗೆ ಕುಡಿಸಲಾಗುತ್ತದೆ. ನಂತರ ಅದೇ ಬಂಗಾರದ ಕಡ್ಡಿಯಿಂದ ಮಗುವಿನ ಕಿವಿ ಚುಚ್ಚಿ ಅದರ ಸ್ಮರಣಶಕ್ತಿಯನ್ನು ವರ್ಧಿಸಲಾಗುತ್ತದೆ.

೫. **ನಾಮಕರಣ:-** ಮಗುವಿಗೆ ಹೆಸರನ್ನಿಡುವುದು. ನಾಲ್ಕು ವಿಧದ ಹೆಸರುಗಳನ್ನಿಡುವ ಪರಿಪಾಠವಿದೆ.

i) ಕುಲದೇವತಾ ಭಕ್ತನಾಮ - ಕುಲದೇವತೆಯ ಭಕ್ತನೆಂದು ಮೊದಲನೆಯ ಹೆಸರು

ii) ಮಾಸನಾಮ - ಹುಟ್ಟಿದ ತಿಂಗಳ ಸಂಕೇತವಾದ ಎರಡನೆಯ ಹೆಸರು

iii) ನಕ್ಷತ್ರನಾಮ - ಜನ್ಮನಕ್ಷತ್ರದ ಆದ್ಯಾಕ್ಷರವಿರುವ ಮೂರನೆಯ ಹೆಸರು

iv) ಲೌಕಿಕನಾಮ - ವ್ಯವಹಾರಕ್ಕಾಗಿ ಇಟ್ಟ ನಾಲ್ಕನೆಯ ಪ್ರಸಿದ್ಧ ಹೆಸರು. ವ್ಯವಹಾರದಲ್ಲಿ ಈ ಹೆಸರೇ ಪ್ರಸಿದ್ಧ ಹೆಸರು. ವ್ಯವಹಾರದಲ್ಲಿ ಈ ಹೆಸರೇ ಪ್ರಸಿದ್ಧವಾಗಿದ್ದು ಉಳಿದವುಗಳೆಲ್ಲ ಗುಪ್ತವಾಗಿರುತ್ತವೆ. ನಾಮಕರಣ ಸಂಸ್ಕಾರದಿಂದ ಆಯುಷ್ಯಾಭಿವೃದ್ಧಿ, ಲೌಕಿಕ ಪ್ರತಿಷ್ಠೆ ಮುಂತಾದವುಗಳ ವೃದ್ಧಿಯಾಗುತ್ತದೆ.

೬. **ನಿಷ್ಕ್ರಮಣ:-** ಮೊಟ್ಟಮೊದಲ ಬಾರಿ ಮಗುವನ್ನು ಮನೆಯಿಂದ ಹೊರಗೆ ಕೊಂಡೊಯ್ಯುವ ಸಂಸ್ಕಾರ ಇದು. ಮಗುವಿನ ಆಯುಸ್ಸು ಮತ್ತು ಮಾನಸಿಕ-ಶಾರೀರಿಕ ಶಕ್ತಿಗಳು ಹೆಚ್ಚಾಗಬೇಕೆಂಬ ಉದ್ದೇಶದಿಂದ ಮಗುವನ್ನು ಮನೆಯಿಂದ ಹೊರತಂದು ಸೂರ್ಯ, ಚಂದ್ರ, ಅಗ್ನಿ, ವನ, ದಿಕ್ಪಾಲ, ಸಮೀಪದ ಬಂಧುಗಳು ಮುಂತಾದವರ ದರ್ಶನ ಮಾಡಿಸುವುದು ಈ ಸಂಸ್ಕಾರದ ಮುಖ್ಯ ಉದ್ದೇಶ.

೭. **ಅನ್ನಪ್ರಾಶನ:-** ಮಗುವಿಗೆ ಆಯುಸ್ಸು, ವರ್ಚಸ್ಸು, ಶಾರೀರಿಕಶಕ್ತಿ, ದಾರ್ಢ್ಯ ಇತ್ಯಾದಿಗಳ ವೃದ್ಧಿಯಾಗಬೇಕೆಂಬ ಉದ್ದೇಶದಿಂದ ಕೈಯಲ್ಲಿ ಸುವರ್ಣವನ್ನು ಹಿಡಿದು ಅದರಿಂದ ಅನ್ನವನ್ನು ಉಣಿಸುವುದು.

೮. **ಚೂಡಾಕರ್ಮ:-** ಈ ಸಂಸ್ಕಾರವನ್ನು ಸಾಮಾನ್ಯವಾಗಿ ಉಪನಯನದೊಂದಿಗೇ ಮಾಡುತ್ತಾರೆ. ಚೂಡಾ ಎಂದರೆ ಶಿಖೆಯನ್ನು ಕಲ್ಪಿಸುವ ಸಂಸ್ಕಾರ ಎಂದರ್ಥ. ಚೌಲ ಎಂದರೆ ವಪನ ಮಾಡುವುದು. ಆಯುಸ್ಸು, ಬ್ರಹ್ಮತೇಜಸ್ಸು ಮುಂತಾದವುಗಳು ವೃದ್ಧಿಸಬೇಕೆಂಬ ಉದ್ದೇಶದಿಂದ ಇದನ್ನು ಮಾಡಲಾಗುತ್ತದೆ.

೯. **ಉಪನಯನ:-** ಈ ಸಂಸ್ಕಾರವು ಅತ್ಯಂತ ಮಹತ್ತ್ವಪೂರ್ಣವಾದುದು. ಇದರಲ್ಲಿ-ಚೌಲಹೋಮ, ಮಾತೃಭೋಜನ, ಸ್ನಾನ, ದೇವತಾದರ್ಶನ ಮುಂತಾದವುಗಳಾದ ಮೇಲೆ 'ಉಪ' ಎಂದರೆ ಆಚಾರ್ಯನ, ಗುರುವಿನ ಸಮೀಪ 'ನಯನ' ಎಂದರೆ ಕೊಂಡೊಯ್ಯುವುದು, ಗಾಯತ್ರಿಯ ಉಪದೇಶವನ್ನು ಪಡೆಯುವುದಕ್ಕಾಗಿ ಗುರುವಿನ ಬಳಿ ಸೇರಿಸುವುದು, ಕಟಿಸೂತ್ರ, ಕೌಪೀನ, ವಸ್ತ್ರ, ಅಜಿನ, ಯಜ್ಞೋಪವೀತ, ದಂಡ ಇತ್ಯಾದಿಗಳ ಧಾರಣ ಮುಂತಾದ ಪ್ರಧಾನ ವಿಧಿಗಳು ಒಳಗೊಂಡಿವೆ. ತಾಯಿಯ ಮಡಿಲಲ್ಲಿ ಕುಳಿತು ಊಟ ಮಾಡುವುದೇ ಮಾತೃಭೋಜನ. ಐದನೆಯ ವರ್ಷದಲ್ಲಿ ಚೌಲಸಂಸ್ಕಾರ ಆಗಬೇಕೆಂದೂ ಆಗ ಕ್ಷೌರವಾದ ಮೇಲೆ ಸ್ನಾನ ಮಾಡಿ ತಾಯಿಯ ಮಡಿಲಲ್ಲಿ ಕುಳಿತು ಊಟ ಮಾಡಬೇಕೆಂದೂ ವಿಧಿ ಇತ್ತು. ಈಗ ಉಪನಯನದೊಂದಿಗೇ ಈ ಸಂಸ್ಕಾರವು ನಡೆಯುವುದರಿಂದ ಪ್ರಾಯಪ್ರಬುದ್ಧನಾದ ಹುಡುಗನು ಹೀಗೆ ಮಾಡುವುದು ಆಭಾಸವೆಂದು ತೋರಬಹುದು. ಅದಕ್ಕಾಗಿ ಪ್ರಾಯಶ್ಚಿತ್ತ ಮಾಡಿಕೊಳ್ಳುವುದು ಒಳ್ಳೆಯದು. ಉಪನಯನ ಪ್ರಧಾನ ಹೋಮವಾದ ಮೇಲೆ ಶಿಷ್ಯತ್ವಸಿದ್ಧಿಗಾಗಿ ಅಂಜಲಿಕ್ಷಾರಣ, ಹಸ್ತಗ್ರಹಣ, ಸೂರ್ಯಾವೇಕ್ಷಣ, ಹೃದಯಾಲಂಭನ, ಅಗ್ನ್ಯುಪಸ್ಥಾನ ಮುಂತಾದ ಕರ್ಮಗಳನ್ನೂ ಮಾಡಲಾಗುತ್ತದೆ. ಬಳಿಕ ಗಾಯತ್ರ್ಯುಪದೇಶ

ಕೊಡಲಾಗುತ್ತದೆ. ಮುಂಜಾ ಎಂಬ ಹುಲ್ಲಿನಿಂದ ತಯಾರಿಸಿದ ಮೌಂಜಿಯನ್ನು ಕಟ್ಟುತ್ತಾರೆ. **'ಮೇಧಾ' "ದೀರ್ಘಾರಣಾವತೀ ಮೇಧಾ"** ತಿಳಿದ ವಿಷಯಗಳನ್ನು ಧಾರಣೆಮಾಡಿ ಸ್ಮರಣೆಯಲ್ಲಿ ಇಟ್ಟುಕೊಳ್ಳುವ ಶಕ್ತಿಯೇ ಮೇಧಾ ಎನಿಸುತ್ತದೆ. ಅದನ್ನು ಉಂಟುಮಾಡಲು ಮೇಧಾಜನನ. ಉಪನಯನವಾದ ಮೇಲೆ ವೇದಾಧ್ಯಯನಾಧಿಕಾರ ಬರುವುದರಿಂದ ಇದನ್ನು **"ವೇದವ್ರತಗ್ರಹಣ-ಸೂಚಕವ್ರತಬಂಧ"** ಎಂದು ಕರೆಯುತ್ತಾರೆ. ಉಪನಯನ ಸಂಸ್ಕಾರದಿಂದ ಮನುಷ್ಯನಿಗೆ ಪುನರ್ಜನ್ಮವೇ ದೊರೆತಂತಾಗಿ ಅವನಿಗೆ ದ್ವಿಜತ್ವ ಪ್ರಾಪ್ತವಾಗುತ್ತದೆ.

**೧೦. ಮಹಾನಾಮ್ನೀ, ೧೧. ಮಹಾವ್ರತ, ೧೨. ಉಪನಿಷದ್ ವ್ರತ, ೧೩. ಕೇಶಾಂತ, ೧೪. ಗೋದಾನ:-** ಇವುಗಳನ್ನು ಒಟ್ಟಾಗಿ ವೇದವ್ರತಗಳೆಂದು ಕರೆಯುತ್ತಾರೆ. ಗುರುಕುಲದಲ್ಲಿ ಗುರುವಿನ ಬಳಿಯಲ್ಲಿ ಷಡಂಗಸಹಿತವಾಗಿ ಸಕಲ ವೇದಗಳನ್ನು ಈ ಕಾಲದಲ್ಲಿ ಅಧ್ಯಯನ ಮಾಡುವುದು. ವೇದಾಧ್ಯಯನವಾದ ಮೇಲೆ ಕ್ಷೌರ ಮಾಡಿಸಿ ಸ್ನಾನ ಮಾಡುವುದಕ್ಕೆ ಕೇಶಾಂತ, ದಕ್ಷಿಣಾರೂಪದಲ್ಲಿ ಗುರುವಿಗೆ ಗೋವನ್ನು ಅರ್ಪಿಸುವುದು ಗೋದಾನ.

**೧೫. ಸಮಾವರ್ತನ:-** ಗೃಹಸ್ಥಾಶ್ರಮ ಸ್ವೀಕಾರಕ್ಕೆ ಗುರುವಿನಿಂದ ಅನುಜ್ಞೆ ಪಡೆಯುವುದು. ಇತರ ವಿಧಿಗಳು ಉಪನಯನದಂತೆಯೇ ಇದರಲ್ಲಿಯೂ ಇವೆ. ಗೃಹಸ್ಥನಿಗೆ ಉಪಯುಕ್ತವಾದ ವಿಶಿಷ್ಟ ಉಪದೇಶಗಳನ್ನು ಇಲ್ಲಿ ಕೊಡಲಾಗುತ್ತದೆ.

**೧೬. ವಿವಾಹ:- "ಧರ್ಮಪ್ರಜಾಸಂಪತ್ತಿಃ ಪ್ರಯೋಜನಂ ವಿವಾಹಸ್ಯ"** ಧರ್ಮ ಶ್ರದ್ಧೆಯುಳ್ಳ ಉತ್ತಮ ಸಂತಾನಪ್ರಾಪ್ತಿಯೇ ಬ್ರಾಹ್ಮವಿವಾಹದ ಮುಖ್ಯ ಉದ್ದೇಶ. ವಿವಾಹ ಸಂಸ್ಕಾರವು ಸ್ತ್ರೀಪುರುಷರ ಪರಸ್ಪರ ಸಂಬಂಧ ನಿರ್ಣಾಯಕವಾದುದರಿಂದ ಇದಕ್ಕೆ ಧಾರ್ಮಿಕ ಮಹತ್ತ್ವವಿದ್ದಷ್ಟೇ ಸಾಮಾಜಿಕ ಮಹತ್ತ್ವವೂ ಇದೆ. ಈ ಸಂಸ್ಕಾರದಲ್ಲಿ ಈ ಕೆಳಗಿನ ಪ್ರಧಾನವಿಧಿಗಳು ಅಂತರ್ಗತವಾಗಿವೆ.

**i) ವಾಗ್ದಾನ:-** ಸರ್ವಸಮ್ಮತಿಯಿಂದ, ಹುಡುಗನ ತಂದೆಯು ಹುಡುಗಿಯ ತಂದೆ ಯೊಡನೆ ತನ್ನ ಮಗನಿಗಾಗಿ ವಧುವನ್ನು ಕೊಡಬೇಕು ಎಂದು ಕೇಳಿಕೊಳ್ಳುವುದು ಹಾಗೂ ವರನ ಪಿತನು 'ಮಾತಿನಿಂದ ಕೊಟ್ಟಿದ್ದೇನೆ' ಎಂದು ಪ್ರತಿವಚನವನ್ನು ಹೇಳುವುದು 'ವಾಗ್ದಾನ'ವೆನಿಸುತ್ತದೆ. ಇದರ ಪ್ರತೀಕವಾಗಿ ವರಪಕ್ಷದವರು ವಧುವನ್ನು ವಸ್ತ್ರಾಲಂಕಾರಾದಿಗಳಿಂದ ಸಂತುಷ್ಟಿ ಪಡಿಸುತ್ತಾರೆ.

**ii) ಸೀಮಾಂತಪೂಜನ:-** ವಧೂಪಕ್ಷದವರು ದಿಬ್ಬಣಸಮೇತ ಬಂದ ವರನನ್ನು ಮತ್ತು ಅವನ ಪಕ್ಷದವರನ್ನು ಸ್ವಾಗತ, ವಸ್ತ್ರಾಲಂಕಾರಾದಿಗಳಿಂದ ಅರ್ಚಿಸುವುದು. ಮೊದಲಿಗೆ ಈ ಪೂಜೆಯು ಗ್ರಾಮದ ಗಡಿಯಲ್ಲಿ ನೆರವೇರುತ್ತಿತ್ತು.

**iii) ಮಧುಪರ್ಕ:-** ವಿವಾಹಕ್ಕಾಗಿ ಬಂದ ವರನ ಪೂಜೆ. ಕಾಲು ತೊಳೆಯುವುದು, ಜೇನು ಕಲಸಿದ ಮೊಸರನ್ನು ದೇವತೆಗಳಿಗೆ ಅರ್ಪಿಸುವುದು.

**iv) ಗೌರೀಹರಪೂಜೆ:-** ಸೌಭಾಗ್ಯಸಿದ್ಧಿಗಾಗಿ ವಧುವು ಗೌರೀಹರರನ್ನು ಪೂಜಿಸುವುದು.

**v) ಮಂಗಲಾಷ್ಟಕ:-** ನಿಶ್ಚಿತವಾದ ಮಂಗಲಮುಹೂರ್ತದಲ್ಲಿ ಮಂಗಲಾಷ್ಟಕ ಪಠನದೊಂದಿಗೆ ವಧೂವರರು ಪರಸ್ಪರ ಮುಖದರ್ಶನ ಮಾಡಿ ಪುಷ್ಪಮಾಲೆಗಳನ್ನು ಹಾಕಿಕೊಳ್ಳುವುದು.

**vi) ಕನ್ಯಾದಾನ:-** ವಧುವಿನ ಮಾತಾಪಿತರು ಪ್ರತಿಜ್ಞಾಪೂರ್ವಕ ವರನ ಕೈ ಮೇಲೆ ನೀರಿನ ಧಾರೆ ಎರೆದು ಕನ್ಯೆಯನ್ನು ದಾನಮಾಡುವುದು. ಕನ್ಯಾದಾನದಿಂದ ಪೃಥ್ವಿಯನ್ನೇ ದಾನಮಾಡಿದ ಪುಣ್ಯ ಲಭಿಸುತ್ತದೆ. ಕುಲದ ಉದ್ಧಾರವಾಗುತ್ತದೆ. ಮೋಕ್ಷಪ್ರಾಪ್ತಿಯಾಗುತ್ತದೆ.

**vii) ಅಕ್ಷತಾರೋಪಣ-ಸೂತ್ರವೇಷ್ಟನ:-** ವಧೂವರರು ಪರಸ್ಪರ ತಲೆಯ ಮೇಲೆ ಅಕ್ಷತೆಯನ್ನು ಹಾಕುತ್ತ ತಮ್ಮ ತಮ್ಮ ಮನೋಭೀಷ್ಟಗಳನ್ನು ವ್ಯಕ್ತಪಡಿಸುವುದು. ಮುತ್ತೈದೆತನದ ಚಿಹ್ನವೆಂದು ಮಂಗಲಸೂತ್ರವನ್ನು ಕಟ್ಟುವುದು. ಬ್ರಾಹ್ಮಣರು ಮಂತ್ರಘೋಷದೊಡನೆ ವಧೂವರರಿಗೆ ಸೂತ್ರವೇಷ್ಟನ ಮಾಡಿ ಆ ದಾರವನ್ನು ಪರಸ್ಪರರು ಕಂಕಣ ಬಂಧವಾಗಿ ಧರಿಸುವಂತೆ ಕಟ್ಟಿಸುವುದು.

**viii) ವಿವಾಹಹೋಮ:-** ವಧುವಿಗೆ ಭಾರ್ಯಾತ್ವಸಿದ್ಧಿಗಾಗಿ ಈ ಹೋಮವನ್ನು ಮಾಡಲಾಗುತ್ತದೆ. ಇದರಲ್ಲಿ ಲಾಜಹೋಮ, ಪಾಣಿಗ್ರಹಣ, ಪರಿಣಯನ (ಅಗ್ನಿಗೆ ಪ್ರದಕ್ಷಿಣೆ ಬರುವುದು) ಅಶ್ಮಾರೋಹಣ (ಸ್ಥಿರತೆಗಾಗಿ) ಸಪ್ತಪದೀ (ಸಖ್ಯಪ್ರಾಪ್ತಿಗಾಗಿ) ಮುಂತಾದ ಕರ್ಮ ಭಾಗಗಳಿವೆ.

**ix) ಗೃಹಪ್ರವೇಶನೀಯಹೋಮ:-** ಗೃಹಸ್ಥಾಶ್ರಮಸಿದ್ಧಿಗಾಗಿ ಗೃಹ್ಯಾಗ್ನಿಯ ಸ್ಥಾಪನೆ. ಈ ಅಗ್ನಿಯನ್ನು ಅಂತ್ಯೇಷ್ಟಿಯ ವರೆಗೆ ಊರ್ಜಿತವಾಗಿ ಇಡಬೇಕು. ಈಗೀಗ ಅದು ಅಸಾಧ್ಯವೆಂದು ಅನುಸಂಧಾನವಿಧಿ ಮಾಡುತ್ತಾರೆ.

**x) ಚತುರ್ಥೀದಿನಕೃತ್ಯ:-** ಐರಿಣೀಪೂಜೆ, ವಿವಾಹಕಾರ್ಯಗಳ ಸಮಾರೋಪ ಮತ್ತು ವಧುವನ್ನು ವರನ ಮಾತಾಪಿತೃಗಳ ವಶಕ್ಕೆ ಒಪ್ಪಿಸಿ ಕಳುಹಿಸಿಕೊಡುವುದು.

**xi) ಗೃಹಪ್ರವೇಶ-ಲಕ್ಷ್ಮೀಪೂಜನ:-** ನೂತನವಧುವಿನೊಂದಿಗೆ ವರನು ಗೃಹಪ್ರವೇಶ ಮಾಡುವುದು. ಪತ್ನೀಸ್ವರೂಪಳಾದ ಲಕ್ಷ್ಮಿಯನ್ನು ಪೂಜಿಸುವುದು.

## ॥ ಮಣಿಮಂತ್ರೌಷಧಿಜಾಃ ಸಿದ್ಧಯಃ ॥

**i) ಮಣಿಜಸಿದ್ಧಿ:-** ಸ್ಯಮಂತಕಮಣಿ, ಚಿಂತಾಮಣಿ ಇತ್ಯಾದಿಗಳನ್ನು ಮಣಿ ಎಂದು ಹೇಳುತ್ತಾರೆ. ಅನೇಕ ವರ್ಷಗಳ ಪರ್ಯಂತ ಹೋಮ ಹವನ ಮುಂತಾದವುಗಳನ್ನು ನಿಷ್ಠೆಯಿಂದ ಮಾಡಿ ಸಿದ್ಧಗೊಳಿಸಿದ ಮಣಿಯನ್ನು ಸಮೀಪದಲ್ಲಿ ಇಟ್ಟುಕೊಂಡರೆ ಸಾಕು, ಅದು ಕಲ್ಪವೃಕ್ಷದಂತೆ ಬಯಸಿದ ಫಲವನ್ನು ಈಡೇರಿಸಿಕೊಡುತ್ತದೆ. ಇದಕ್ಕೆ ವಿಶಿಷ್ಟವಾದ ದೈವೀಶಕ್ತಿ ಇರುತ್ತದೆ. ಇದು ಮೊದಲನೆಯ ಸಿದ್ಧಿ. ಆದರೆ ಈ ಕಾಲದಲ್ಲಿ ಇಂತಹ ಮಣಿಗಳು ಪುರಾಣಕಥೆಗಳಲ್ಲಿ ಮಾತ್ರ ಕಂಡುಬರುತ್ತವಷ್ಟೆ.

**ii) ಮಂತ್ರಸಿದ್ಧಿ:-** ದೇವತೆಗಳು ಮಂತ್ರಸ್ವರೂಪಿಗಳಾದುದರಿಂದ ವಿಹಿತ ಕರ್ಮಗಳನ್ನು ಮಾಡುವ ಸದಾಚಾರಸಂಪನ್ನನಿಗೆ ಮಂತ್ರಸಿದ್ಧಿ ಆಗುತ್ತದೆ. ಮಂತ್ರೋಚ್ಚಾರಣ ಮಾಡುವುದರಿಂದ ಮಂಗಲವಾತಾವರಣವು ನಿರ್ಮಾಣವಾಗುತ್ತದೆ. ಸರಿಯಾಗಿ ಉಚ್ಚರಿಸಿದ ಒಂದೇ ಒಂದು ಮಂತ್ರವಾದರೂ ಕಾಮಧೇನುವಿನಂತೆ ಇಷ್ಟಫಲವನ್ನು ಕೊಡುತ್ತದೆಂದು ಹೇಳುತ್ತಾರೆ. **"ಏಕಃ ಶಬ್ದಃ ಸುಷ್ಠು ಪ್ರಯುಕ್ತಃ ಸ್ವರ್ಗೇ ಲೋಕೇ ಕಾಮಧುಗ್ಭವತಿ"** ನಿತ್ಯಾಭ್ಯಾಸವುಳ್ಳವರು ಅಸ್ಖಲಿತವಾದ ಮಂತ್ರೋಚ್ಚಾರ ಮಾಡಿದರೆ, ಆ ಮಂತ್ರಜಸಿದ್ಧಿಯಿಂದ ಬೇಕಾದ್ದನ್ನು ಪಡೆಯಬಹುದು. ಆವಾಹಿತ ದೇವತೆಯ ಮಂತ್ರೋಚ್ಚಾರದಿಂದ ಆ ದೇವತೆಯ ಸಾನ್ನಿಧ್ಯವುಂಟಾಗುತ್ತದೆ. ಮಂತ್ರಶಕ್ತಿಯಿಂದ ಯಾವುದೇ ಕಾರ್ಯವನ್ನಾದರೂ ಕೈಗೂಡಿಸಬಹುದು. ಇಂತಹ ಮಂತ್ರಸಿದ್ಧಿಯಾಗಲಿ, ಮಂತ್ರಶಕ್ತಿಯಾಗಲಿ, ವೇದೋಕ್ತಸಂಸ್ಕಾರಗಳ ಅಭಾವದಿಂದ ಈ ಕಾಲದಲ್ಲಿ ಸಾಮಾನ್ಯವಾಗಿ ಲುಪ್ತವಾಗಿಹೋಗಿದೆ. **"ನಾಸ್ತಿ ಕವ್ಯಸ್ಯ ವ್ಯಾಘಾತಃ"** ದೇವತೆಗಳನ್ನು ಉದ್ದೇಶಿಸಿ **"ಸ್ವಾಹಾ"** ಎಂದು ಅಗ್ನಿಯಲ್ಲಿ ಅರ್ಪಿಸುವ ದ್ರವ್ಯವನ್ನು **"ಕವ್ಯ"** ಎಂದು ಕರೆಯುತ್ತಾರೆ. ಈ ಹವ್ಯಕವ್ಯಗಳ ಫಲವು ಎಂದಿಗೂ ನಾಶವಾಗುವುದಿಲ್ಲ. ಇವುಗಳು ಕಲ್ಯಾಣ ವಿರೋಧಿಯಾದ ಪಾಪಗಳನ್ನು ದೂರಮಾಡುತ್ತವೆ. ಸೂಕ್ಷ್ಮ ರೂಪದಲ್ಲಿದ್ದು ಮನುಷ್ಯನಿಗೆ ಇಹ ಪರಗಳಲ್ಲಿ ಫಲವನ್ನು ಕೊಡುತ್ತವೆ. ಹವ್ಯಕವ್ಯಗಳನ್ನು ನಿಯಮಬದ್ಧವಾಗಿ ಮಾಡುವವನಿಗೆ ಮಂತ್ರಸಿದ್ಧಿಯಾಗುತ್ತದೆ.

**iii) ಔಷಧಿಜಸಿದ್ಧಿ:-** ನಮಗೆ ಶಾರೀರಿಕ ಅನಾರೋಗ್ಯ ಉಂಟಾದಾಗ ನಾವು ವೈದ್ಯರ, ಡಾಕ್ಟರರ ಬಳಿಗೆ ಹೋಗುತ್ತೇವೆ. ಅವರು ಕೊಡುವ ಔಷಧಿಗಳಿಂದ ರೋಗ ನಿವಾರಣೆಯಾಗಿ ನಮ್ಮ ಶಾರೀರಿಕಬಲಸಂವರ್ಧನೆಯಾಗುತ್ತದೆ. ಇದಕ್ಕೆ **"ಔಷಧಿಜಸಿದ್ಧಿ"** ಎಂದು ಹೆಸರು. ವರ್ತಮಾನ ಕಾಲದಲ್ಲಿ ಪಾಶ್ಚಾತ್ಯರ ಸತತ ಸಂಶೋಧನೆ, ಪ್ರಯೋಗ, ಸಾಧನೆಗಳಿಂದ ಈ ಸಿದ್ಧಿಯು ಬಹಳ ಮಟ್ಟಿಗೆ ಮಾನವಕುಲಕ್ಕೆ ಹಸ್ತಗತವಾಗಿದೆ. ಸಾಧಾರಣವಾಗಿ ಎಲ್ಲರೂ ಈ ಔಷಧಿಗಳ ಪ್ರಭಾವದಿಂದಲೇ ರೋಗಗಳನ್ನು ನಿವಾರಿಸಿ ಆರೋಗ್ಯವನ್ನು ಪಡೆಯುತ್ತಾರೆ. ಶರೀರದ ಮೇಲೆ ಔಷಧಿಗಳ ಪ್ರಭಾವವೇನೆಂಬುದನ್ನು ಎಲ್ಲರೂ ಪ್ರತ್ಯಕ್ಷವಾಗಿಯೇ ನೋಡಿ ತಿಳಿದಿದ್ದಾರೆ. ಆದರೆ ಮಂತ್ರೋಚ್ಚಾರದ ಮೂಲಕ ಬೇರೆ ಬೇರೆಯಾಗಿ ಔಷಧಸಾಮರ್ಥ್ಯವಿರುವ ವನಸ್ಪತಿಗಳನ್ನು ಉಪಯೋಗಿಸಿದಾಗ ಅವುಗಳಿಂದಾಗುವ ಮಾನಸಿಕ ಹಾಗೂ ಶಾರೀರಿಕ ಪರಿಣಾಮಗಳೇನೆಂದು ಹೆಚ್ಚಿನವರಿಗೆ ತಿಳಿದಿಲ್ಲ. ನಮ್ಮ ಷೋಡಶಸಂಸ್ಕಾರಗಳಲ್ಲಿ ಔಷಧಿಗಳ, ವನಸ್ಪತಿಗಳ ಸ್ಥಾನವು,

ಮಹತ್ತ್ವದ್ದಾಗಿದೆ. ಉದಾಹರಣೆಗಾಗಿ ಗರ್ಭಾಧಾನ ಸಂಸ್ಕಾರವನ್ನೇ ನೋಡೋಣ. ದೂರ್ವೆ ಅಥವಾ ಗರಿಕೆಯು ವನಸ್ಪತಿಗಳಲ್ಲಿ ಚಿರಂಜೀವಿ ಎಂಬ ಖ್ಯಾತಿಯನ್ನು ಪಡೆದಿದೆ. ಅದಕ್ಕೆಂದೇ ಗರ್ಭಾಧಾನ ಸಂಸ್ಕಾರದಲ್ಲಿ ದೂರ್ವೆಯ ರಸವನ್ನು ವಧುವಿನ ಬಲಮೂಗಿನಲ್ಲಿ ಸುರಿದು ಗರ್ಭಕ್ಕೆ ಸ್ಥಿರತೆಯನ್ನು ಕೊಡಲಾಗುತ್ತದೆ. ಅದೇ ರೀತಿ ಬಿದಿರು ವಂಶವರ್ಧಕವಾಗಿದೆ. ಸಂಸ್ಕೃತದಲ್ಲಿ **"ವಂಶ"**ವೆಂದೇ ಅದರ ಹೆಸರು. ವಂಶದಿಂದ ವಂಶನಿರ್ಮಾಣವಾಗಬೇಕೆಂದು ನಮ್ಮ ಅನೇಕ ಸಂಸ್ಕಾರಗಳಲ್ಲಿ ಬಿದಿರಿನ ಪಾತ್ರೆ, ಮೊರ ಮುಂತಾದವುಗಳನ್ನೇ ಉಪಯೋಗಿಸಬೇಕೆಂದು ಹೇಳಲಾಗಿದೆ. ದೇವತಾ ವಿಸರ್ಜನೆಯ ಕಾಲದಲ್ಲಿ ಬಿದಿರಿನ ಮೊರದಿಂದ ಚೆಲ್ಲಿದ ಅಭಿಷೇಕದ ನೀರು ವಂಶವೃದ್ಧಿಗೆ ಕಾರಣವಾಗುತ್ತದೆ. ಅದೇ ರೀತಿ ವಿವಾಹಾನಂತರ ವಧುವನ್ನು ಪತಿಗೃಹಕ್ಕೆ ಕಳುಹಿಸುವಾಗ ಬಿದಿರಿನ ಬುಟ್ಟಿಯಲ್ಲಿ ಖಾದ್ಯಗಳನ್ನು ಇಟ್ಟುಕೊಡುವ ಪದ್ಧತಿ ಇದೆ. ಬಾಳೆಯ ಗಿಡ, ಮಾವಿನ ಎಲೆ, ಮುಂತಾದವು ಮಂಗಲಶೋಭೆಯನ್ನುಂಟುಮಾಡುತ್ತವೆ. ತುಲಸೀ, ಬಿಲ್ವ ಮೊದಲಾದವು ಪೂಜೆಗೆ ಯೋಗ್ಯವಾದ ಪತ್ರಗಳೆಂದು ಪರಿಗಣಿಸಲ್ಪಟ್ಟಿವೆ. ಉಪನಯನದಲ್ಲಿ ವಟುವಿನ ಸೊಂಟಕ್ಕೆ ಮುಂಜಾ ಎಂಬ ಹುಲ್ಲಿನಿಂದ ತಯಾರಿಸಿದ ಮೌಂಜಿ(ಹಗ್ಗ)ಯನ್ನು ಕಟ್ಟುತ್ತಾರೆ. ಕಷ್ಟಸಾಧ್ಯವಾದ ವೇದಾಧ್ಯಯನಕ್ಕೆ ಹಾಗೂ ವಿದ್ಯಾಭ್ಯಾಸಕ್ಕೆ ಸಾಕಷ್ಟು ಶಕ್ತಿಯು ಬರುವಂತೆ ಅವನ ಸೊಂಟ ಮತ್ತು ಬೆನ್ನಿನ ಭಾಗವು ಸ್ಥಿರವಾಗಿರಲೆಂದು ಇದನ್ನು ಕಟ್ಟುವರು. ಮುಂಜಾ ಹುಲ್ಲಿನಲ್ಲಿ ಇಂತಹ ವಿಶಿಷ್ಟವಾದ ಶಕ್ತಿ ಇದೆ.

ಒಟ್ಟಿನಲ್ಲಿ ಹೇಳುವುದಾದರೆ, ಶಾಸ್ತ್ರೋಕ್ತ ಸಂಸ್ಕಾರದಿಂದ ಶರೀರ ಮತ್ತು ಮನಸ್ಸಿನ ಮೇಲೆ ಉತ್ಕೃಷ್ಟ ಪರಿಣಾಮವಾಗುತ್ತದೆ ಎಂಬ ವಿಚಾರದಲ್ಲಿ ಸಂದೇಹವಿಲ್ಲ. ಮಹಾಕವಿ ಕಾಳಿದಾಸನು ಈ ವಿಷಯವನ್ನು ಸೊಗಸಾಗಿ ವರ್ಣಿಸಿ ಹೇಳಿದ್ದಾನೆ.

**"ಸ ಜಾತಕರ್ಮಣ್ಯಖಿಲೇ ತಪಸ್ವಿನಾ ತಪೋವನಾದೇತ್ಯ ಪುರೋಧಸಾ ಕೃತೇ ।**
**ದಿಲೀಪಸೂನುರ್ಮಣಿರಾಕರೋದ್ಭವಃ ಪ್ರಯುಕ್ತಸಂಸ್ಕಾರ ಇವಾಧಿಕಂ ಬಭೌ ॥"**

ತಪೋವನದಿಂದ ಬಂದ ವಸಿಷ್ಠ ಮಹರ್ಷಿಗಳು ಜಾತಕರ್ಮಾದಿ ಸಂಸ್ಕಾರಗಳನ್ನು ಮಾಡಿದ ಮೇಲೆ ದಿಲೀಪನ ಮಗನು ಗಣಿಯಿಂದ ಹೊರತೆಗೆದ ಮಣಿಯು ಶುದ್ಧೀಕರಿಸಲ್ಪಟ್ಟು ಸಂಸ್ಕರಿಸಲ್ಪಟ್ಟ ಮೇಲೆ ಉಜ್ವಲವಾಗಿ ಹೊಳೆಯುವಂತೆ ಪರಮತೇಜಸ್ವಿಯಾದನು.

**"ಚಿತ್ರಕರ್ಮ ಯಥಾನೇಕೈರಂಗೈರುನ್ಮೀಲ್ಯತೇ ಶನೈಃ ।**
**ಬ್ರಾಹ್ಮಣ್ಯಮಪಿ ತದ್ವತ್ ಸ್ಯಾತ್ ಸಂಸ್ಕಾರೈರ್ವಿಧಿಪೂರ್ವಕೈಃ ॥" (ಅಂಗಿರಾಃ)**

ಚಿತ್ರಕ್ಕೆ ಬಣ್ಣ ಬಳಿಯುತ್ತ ಹೋದಂತೆ ಅದು ಹೇಗೆ ಸ್ಫುಟವಾಗಿ ಸುಂದರವಾಗಿ ಎದ್ದು ಕಾಣುತ್ತದೋ ಹಾಗೆ ವಿಧಿಪೂರ್ವಕವಾಗಿ ಆಯಾ ಕಾಲಕ್ಕೆ ಮಾಡಿದ ಸಂಸ್ಕಾರಗಳಿಂದ ಮನುಷ್ಯನೂ ಶಾರೀರಿಕವಾಗಿ ಹಾಗೂ ಮಾನಸಿಕವಾಗಿ ಪೂರ್ಣವ್ಯಕ್ತಿತ್ವವನ್ನು ಗಳಿಸುತ್ತಾನೆ. ಸಂಸ್ಕಾರಗಳ ಪರಿಣಾಮವು ಮನಸ್ಸಿನ ಮೇಲೂ ಶರೀರದ ಮೇಲೂ ನಿಃಸಂದಿಗ್ಧವಾಗಿ ಉಂಟಾಗುತ್ತದೆ.

**"ಉತ್ಸರ್ಗಶ್ಚಾಪ್ಯುಪಾಕರ್ಮ ಮಹಾಯಜ್ಞಾಶ್ಚ ನಿತ್ಯಕಾಃ ॥**
**ಸಂಸ್ಕಾರಾ ನಿಯತಾ ಹ್ಯೇತೇ ಬ್ರಾಹ್ಮಣಸ್ಯ ವಿಶೇಷತಃ" ॥**

ವೈಶ್ವದೇವಾದಿ ಪಂಚ ಮಹಾಯಜ್ಞಗಳು, ನಿತ್ಯಕರ್ಮಗಳು, ಉಪಾಕರ್ಮಾದಿಗಳು, ಸಂಸ್ಕಾರಗಳು ಇಂತಹ ವಿಹಿತ ಕರ್ಮಗಳನ್ನು ಬ್ರಾಹ್ಮಣನಾದವನು ತಪ್ಪದೆ ಮಾಡಲೇಬೇಕು. ಇವುಗಳಿಂದ ಆಯಸ್ಸು, ತೇಜಸ್ಸು, ಬಲ, ವೀರ್ಯ, ಸ್ಥೈರ್ಯ, ಬುದ್ಧಿ ಇತ್ಯಾದಿಗಳ ವೃದ್ಧಿಯಾಗುತ್ತದೆ.

**"ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ ತದೇವ ವೀರ್ಯವತ್ತರಂ ಭವತಿ"**

ಅರ್ಥ ತಿಳಿದು ಶ್ರದ್ಧೆಯಿಂದ ಮಾಡಿದ ಕರ್ಮವು ಮಾತ್ರ ಉತ್ತಮಫಲವನ್ನು ಕೊಡುತ್ತದೆ.

ಇಂದು ಬಹುಮಂದಿ ಕೇವಲ ರೂಢಿಯಿಂದ ಬಂದಿದೆ ಎಂಬಷ್ಟಕ್ಕೆ ಗರ್ಭಾಧಾನಾದಿಗಳನ್ನು ಮಾಡಿಸಿಕೊಳ್ಳುತ್ತಾರೆ. ಅದರ ನಿಜವಾದ ಉದ್ದೇಶ ಅಥವಾ ಅರ್ಥ ಅವರಿಗೆ ಗೊತ್ತಿರುವುದಿಲ್ಲ. ಆದಕಾರಣ ಇಷ್ಟಫಲವೂ ಸಿದ್ಧಿಸುವುದಿಲ್ಲ. ಅದಕ್ಕಾಗಿಯೇ ನಮ್ಮ ಎಲ್ಲ ಸಂಸ್ಕಾರಗಳೂ ಶಾಸ್ತ್ರೋಕ್ತ ವಿಧಿವಿಧಾನಗಳಿಂದ ಶ್ರದ್ಧಾಪೂರ್ವಕವಾಗಿ ಆಚರಿಸಲ್ಪಡಬೇಕೆಂಬ ಸದುದ್ದೇಶದಿಂದ **"ಸಾರ್ಥಷೋಡಶಸಂಸ್ಕಾರರತ್ನಮಾಲಾ"** ಎಂಬ ಅಭಿಧಾನದಿಂದ ಈ ಗ್ರಂಥವನ್ನು ರಚಿಸಲಾಗಿದೆ.

# ಪೂಜೆ, ಹೋಮ ಮತ್ತು ಇತರ ವೈದಿಕಕರ್ಮಗಳಲ್ಲಿ ಉಪಯೋಗಿಸಲು ಬೇಕಾದ ವಸ್ತುಸಾಹಿತ್ಯಗಳ ಸಾಮಾನ್ಯ ವಿವರ

---

## ಪಾರಿಭಾಷಿಕ ಶಬ್ದಗಳ ವಿವರಣೆ

**ಪಂಚಾಮೃತ:** ಹಾಲು, ಮೊಸರು, ತುಪ್ಪ, ಜೇನು, ಸಕ್ಕರೆ.
**ಪಂಚಗವ್ಯ:** ಗೋಮೂತ್ರ, ಗೋಮಯ, ಹಾಲು, ಮೊಸರು, ತುಪ್ಪ.
**ಪಂಚತ್ವಕ್:** ಆಲ, ಅಶ್ವತ್ಥ, ನೇರಳೆ, ಮಾವು, ಅಡಿಕೆಗೋಳಿ.
**ಪಂಚಪಲ್ಲವ:** ಅಶ್ವತ್ಥ, ಔದುಂಬರ, ಆಲ, ಮಾವು, ನೇರಳೆ.
**ಪಂಚರತ್ನ:** ಬಂಗಾರ, ಬೆಳ್ಳಿ, ಮುತ್ತು, ಹವಳ, ವಜ್ರ.
**ಪಂಚವರ್ಣ:** ಬಿಳಿ, ಕೆಂಪು, ಹಳದಿ, ಹಸಿರು, ಕಪ್ಪು.
**ಸಪ್ತಮೃತ್ತಿಕಾ:** ಗಜಶಾಲೆ, ಅಶ್ವಶಾಲೆ, ಚೌಕ, ಸಂಗಮ, ಹುತ್ತ, ಗೋಷ್ಠ (ಹಟ್ಟಿ), ಮಡು.
**ಸಪ್ತಧಾನ್ಯ:** ಅಕ್ಕಿ, ಗೋಧಿ, ಕಡಲೆ, ಹೆಸರು, ಉದ್ದು, ತೊಗರಿ, ಹುರುಳಿ
**ನವಗ್ರಹ:** ರವಿ, ಚಂದ್ರ, ಮಂಗಳ, ಬುಧ, ಗುರು, ಶುಕ್ರ, ಶನಿ, ರಾಹು, ಕೇತು.
**ಸರ್ವೌಷಧಿ:** ದಶಮೂಲಗಳು.
**ಸೌಭಾಗ್ಯವಾಯನ:** ಅಕ್ಕಿ, ತೆಂಗಿನಕಾಯಿ, ಹಾರ, ಮಂಗಲಸೂತ್ರ, ಕುಂಕುಮದ ಕರಡಿಗೆ, ಬಾಚಣಿಗೆ, ರವಕೆಖಣ.
**ಸಮಿತ್ತುಗಳು:** ಅರ್ಕ, ಪಲಾಶ, ಖದಿರ, ಅಪಾಮಾರ್ಗ, ಪಿಪ್ಪಲ, ಔದುಂಬರ, ಶಮೀ, ಕುಶ, ದೂರ್ವಾ.

## ಪೂಜಾ ಸಾಹಿತ್ಯ

### ಸಾಮಾನ್ಯವಾಗಿ ಎಲ್ಲ ಪೂಜೆಗಳಿಗೂ ಬೇಕಾದ ವಸ್ತುಗಳು:

ನೀರನ್ನು ತುಂಬಿಸಿ ಇಟ್ಟುಕೊಳ್ಳಲು ಒಂದು ದೊಡ್ಡ ಪಾತ್ರೆ, ಪಂಚಪಾತ್ರೆ, ಉದ್ಧರಣೆ, ತಾಮ್ರ ಅಥವಾ ಹಿತ್ತಾಳೆಯ ತಟ್ಟೆಗಳು, ಕಲಶಪಾತ್ರೆ, ಶಂಖ, ಘಂಟೆ, ಕಾಲುದೀಪ, ಧೂಪ, ದೀಪ, ಕರ್ಪೂರಾರತಿ, ನೀಲಾಂಜನ ಮುಂತಾದ ಆರತಿಗಳು, ಪಂಚಾಮೃತ, ದ್ರಾಕ್ಷೆ, ಕಲ್ಲುಸಕ್ಕರೆ, ಹಣ್ಣುಗಳು, ತುಲಸೀ ಬಿಲ್ವಪತ್ರ ಮುಂತಾಗಿ ನಾನಾ ಜಾತಿಯ ಸುಗಂಧಪುಷ್ಪಗಳು, ಅಡಿಕೆ, ವೀಳ್ಯದೆಲೆ, ಎಳನೀರು, ತೆಂಗಿನಕಾಯಿ, ಗಂಧ, ಅಕ್ಷತೆ, ಪರಿಮಳದ್ರವ್ಯಗಳು, ಕರ್ಪೂರ, ಊದುಬತ್ತಿ, ಲೋಭಾನ (ಗುಗ್ಗುಲು), ಪಂಚವರ್ಣದ ರಂಗೋಲೆಗಳು, ದೂರ್ವೆ, ದರ್ಭೆ, ಮಾವಿನ ಎಲೆ, ವಸ್ತ್ರ, ಯಜ್ಞೋಪವೀತ-ಇತ್ಯಾದಿ ಆಯಾ ಪೂಜೆಗೆ ಸಂಬಂಧಿಸಿದ ವಿಶಿಷ್ಟ ದ್ರವ್ಯಗಳು, ನೈವೇದ್ಯಕ್ಕೆ ಬೆಲ್ಲ, ತೆಂಗಿನಕಾಯಿ ಮತ್ತು ಇತರ ನಾನಾ ವಿಧದ ಹಣ್ಣುಗಳು.

## ಪುಣ್ಯಾಹವಾಚನ, ಗಣಪತಿಪೂಜನ

ಅಕ್ಕಿ ಸುಮಾರು 3 ಕೆ.ಜಿ.; ತೆಂಗಿನ ಕಾಯಿ 4; ಕಲಶ ಪಾತ್ರೆ 2; ಬಾಳೆ ಎಲೆ 10; ಅಡಿಕೆ; ದೂರ್ವೆ; ದರ್ಭೆ; ಪಂಚಪಾತ್ರೆ; ಉದ್ಧರಣೆ ಇತ್ಯಾದಿಯಾಗಿ ಮೊದಲು ಹೇಳಿದ ಎಲ್ಲಾ ಪೂಜಾ ಸಾಮಗ್ರಿಗಳು. ಸ್ವರ್ಣ, ರತ್ನ ಮತ್ತು ಮಾವು ಮೊದಲಾದ ಪಲ್ಲವಗಳು. ರಂಗೋಲಿ, ಕುಂಕುಮ, ಕುಂಕುಮಾಕ್ಷತೆ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯಾದಿಗಳು. ದಕ್ಷಿಣೆಗೆ ಚಿಲ್ಲರೆ ಹಣ.

## ಮಂಡಪದೇವತಾ ಪ್ರತಿಷ್ಠೆ

ಪುಣ್ಯಾಹವಾಚನದ ಎಲ್ಲ ಸಾಮಗ್ರಿಗಳು, ಶಮೀಪತ್ರ, ದೂರ್ವೆ, ಮಾವಿನ ಎಲೆ, ಸಣ್ಣ ಕಟ್ಟಿಗೆತುಂಡು (ಒನಕೆಯ ಸೂಚಕ), ಶಸ್ತ್ರ (ಚೂರಿ), ಮುಚ್ಚಳ ಸಹಿತ ಮಣ್ಣಿನ ಕಲಶ, ದಾರದ ಉಂಡೆ, ಅರಸಿನ ಬೇರು, ಮೊಸರು, ಬಿದಿರಿನ ಹೊಸ ಮೊರ, ಸುವಾಸನೆಯುಳ್ಳ ಎಣ್ಣೆ, ಅಕ್ಕಿ, ತೆಂಗಿನಕಾಯಿ, ಎಲೆ, ಅಡಿಕೆ, ದಕ್ಷಿಣೆ ಇತ್ಯಾದಿ.

**ನಾಂದೀಶ್ರಾದ್ಧ:** ಇಬ್ಬರು ಬ್ರಾಹ್ಮಣರಿಗೆ ಭೋಜನಕ್ಕೆ ಸಾಕಾಗುವಷ್ಟು ಆಮಾನ್ನ (ಅಕ್ಕಿ, ತೆಂಗಿನಕಾಯಿ, ತರಕಾರಿ ಇತ್ಯಾದಿ) ಅಥವಾ ಅದಕ್ಕೆ ಪ್ರತ್ಯಾಮ್ನಾಯವಾಗುವಷ್ಟು ಹಿರಣ್ಯ, ಒಟ್ಟು 5 ಪಾಲು.

## ಸ್ಥಾಲೀಪಾಕ (ಹೋಮಸಾಹಿತ್ಯ)

ಸ್ಥಂಡಿಲನಿರ್ಮಾಣಕ್ಕೆ ಮಣ್ಣು, ಗೋಮಯ, ಹಲಸಿನ ಕಟ್ಟಿಗೆ, ತುಪ್ಪ, ದರ್ಭೆ, ಸಮಿಧೆ, ಅಗ್ನಿಯನ್ನು ತರಲು ಚಿನ್ನ ಅಥವಾ ಮಣ್ಣಿನ ಪಾತ್ರೆ, ಆಜ್ಯಪಾತ್ರೆ, ಪ್ರೋಕ್ಷಣೀ ಮತ್ತು ಪ್ರಣೀತಾ ಪಾತ್ರೆ, ಸ್ರುಕ್, ಸ್ರುವ, ಉಲೂಖಲ, ಮುಸಲ, ಶೂರ್ಪ, ಕೃಷ್ಣಾಜಿನ ಅರೆಯುವ ಕಲ್ಲು ಮತ್ತು ಅಡಿಕಲ್ಲು, ಚರುಪಾತ್ರೆ, ಸೌಟು ಮೊದಲು ಹೇಳಿದ ಎಲ್ಲ ಪೂಜಾ ಸಾಮಗ್ರಿಗಳು, ಎಲೆ, ಅಡಿಕೆ, ದಕ್ಷಿಣೆ ಇತ್ಯಾದಿ.

## ಗ್ರಹಯಜ್ಞ

ಸ್ಥಾಲೀಪಾಕದಲ್ಲಿ ಹೇಳಿದ ಯಜ್ಞಸಾಮಗ್ರಿಗಳು; ಪೂಜಾಸಾಮಗ್ರಿಗಳು, ಪುಣ್ಯಾಹವಾಚನ ಮತ್ತು ನಾಂದೀಶ್ರಾದ್ಧಗಳಿಗೆ ಬೇಕಾದ ಸಾಮಗ್ರಿಗಳು, ಪಂಚಗವ್ಯ, ಪಂಚಾಮೃತ, ಪಂಚಪಲ್ಲವ, ಸಪ್ತಮೃತ್ತಿಕಾ, ಪಂಚತ್ವಕ್, ಪಂಚವರ್ಣ (ರಂಗೋಲಿ), ಪಂಚರತ್ನ, ನವಗ್ರಹಸಮಿತ್ತುಗಳು, ನವಧಾನ್ಯಗಳು (ಸಪ್ತಧಾನ್ಯಗಳಿಗೆ ಎಳ್ಳು ಮತ್ತು ಅವರೆಗಳನ್ನು ಸೇರಿಸಬೇಕು) ಅಕ್ಕಿ, ತೆಂಗಿನ ಕಾಯಿ, ಕಲಶಪಾತ್ರೆ, ವಸ್ತ್ರ 4, ಯಜ್ಞೋಪವೀತ 4 ಜೊತೆ, ಸುಮಾರು 7 ಸೇರಿನಷ್ಟು ಅಕ್ಕಿಯ ಚರು, ಚರುಪಾತ್ರೆ, ಬಲಿದಾನಕ್ಕೆ ದೀಪಗಳು (ಬತ್ತಿ) ಅರಸಿನ ಕುಂಕುಮ ಕಲಸಿದ ನೀರು, ನವಗ್ರಹ ಪ್ರತಿಮೆಗಳು, ನವಗ್ರಹಗಳಿಗೆ ಆಯಾ ವರ್ಣದ ವಸ್ತುಗಳು ಮತ್ತು ನೈವೇದ್ಯ, ಹೋಮಸಂಖ್ಯೆಯನ್ನು ಅನುಸರಿಸಿ ತುಪ್ಪ, ಸಮಿತ್ತು, ಎಳ್ಳು, ಚರು, ಭತ್ತ ಮುಂತಾದವುಗಳು.

**ಆಚಾರ್ಯಾದಿ ವರಣಸಾಮಗ್ರಿ:-** ಪ್ರತಿಯೊಬ್ಬರಿಗೂ ಧೋತಿ ಮತ್ತು ಉತ್ತರೀಯ, ಪಂಚಪಾತ್ರೆ, ಉದ್ಧರಣೆ, ಯಜ್ಞೋಪವೀತ, ಪವಿತ್ರಗಳು, ತಾಂಬೂಲ, ದಕ್ಷಿಣೆ, ನಿರೀಕ್ಷಣಾಜ್ಯ ದಾನಕ್ಕೆ ತುಪ್ಪ, ಬಿಳಿ ಸಾಸಿವೆ.

## ಪುನಃಸಂಧಾನ, ಗರ್ಭಾಧಾನ, ಪುಂಸವನ, ಸೀಮಂತೋನ್ನಯನಾದಿಗಳು

ಪೂಜಾಸಾಮಗ್ರಿ, ಪುಣ್ಯಾಹವಾಚನನಾಂದೀಶ್ರಾದ್ಧಸಾಮಗ್ರಿ, ಹೋಮಸಾಮಗ್ರಿ, ಹೋಮಕ್ಕೆ ತುಪ್ಪ, ಚರು, ಹೊದಲು ಇತ್ಯಾದಿ. ಉದ್ದು ಮತ್ತು ಮೊಸರು ಮುಳ್ಳುಹಂದಿಯ ಮುಳ್ಳು.

## ಜಾತಕರ್ಮ, ನಾಮಕರಣ, ಅನ್ನಪ್ರಾಶನ

ಪುಣ್ಯಾಹವಾಚನ ನಾಂದೀಶ್ರಾದ್ಧಾದಿ ಸಾಮಗ್ರಿಗಳು, ಪೂಜಾ ಸಾಮಗ್ರಿಗಳು, ಹೋಮ ಸಾಮಗ್ರಿಗಳು, ಸಾಣೆಕಲ್ಲು, ಸುವರ್ಣ, ತುಪ್ಪ, ಜೇನು, ಬೆಳ್ಳಿ ಅಥವಾ ಕಂಚಿನ ಪಾತ್ರೆ, ಕಂಚಿನ ತಟ್ಟೆ, ಅಕ್ಕಿ, ಸುವರ್ಣಶಲಾಕೆ, ಮೊಸರು, ಜೇನು ಸೇರಿಸಿದ ಅನ್ನ, ಅಕ್ಕಿ, ವಸ್ತ್ರ, ಶಸ್ತ್ರ, ಲೇಖನಿ ಪುಸ್ತಕ, ಸ್ವರ್ಣ.

## ಚೂಡಾಕರ್ಮ

ಪೂಜಾ, ಪುಣ್ಯಾಹವಾಚನ, ನಾಂದೀಶ್ರಾದ್ಧ, ಹೋಮ ಸಾಮಗ್ರಿಗಳು. ಕರಂಜ ಬೀಜ, ಎತ್ತಿನ ಸೆಗಣಿ, ಸ್ನಾನಕ್ಕೆ ಬಿಸಿನೀರು, ಬೆಣ್ಣೆ, ಶಮೀಪತ್ರ, ನಾಪಿತನಿಗೆ ಕೊಡಲು ಭತ್ತ, ಅಕ್ಕಿ, ಉದ್ದು ಮತ್ತು ಎಳ್ಳು ತುಂಬಿದ 4 ದೊನ್ನೆಗಳು, ಬಾಳ್‌ಕತ್ತಿ.

## ಉಪನಯನ

ಪೂಜಾದಿ ಹೋಮಾಂತ ಸಕಲ ಸಾಮಗ್ರಿಗಳು, ವಟುವಿಗೆ ಎರಡು ಬಟ್ಟೆಗಳು, ಕೌಪೀನ, ಕಟಿಸೂತ್ರ, ಕೃಷ್ಣಾಜಿನ, ಯಜ್ಞೋಪವೀತ, ಪಲಾಶದಂಡ, ಮೌಂಜೀ, ಭಿಕ್ಷಾಪಾತ್ರೆ.

**ಮೇಧಾಜನನ:-** ವೇದಿಕೆ ನಿರ್ಮಾಣಕ್ಕೆ ಮಣ್ಣು, ಪಲಾಶಪರ್ಣ, ದರ್ಭೆ, ಕಲಶ ಶಂಖ ಘಂಟಾದಿ ಪೂಜಾಸಾಮಗ್ರಿಗಳು, ನೈವೇದ್ಯಕ್ಕೆ ಪಾಯಸ ಅಪೂಪಾದಿಗಳು. ವಟುವಿಗೆ ವಸ್ತ್ರಾದಿ ಎಲ್ಲ ನೂತನ ವಸ್ತುಗಳು.

## ಸಮಾವರ್ತನ

ಪೂಜಾದಿ ಹೋಮಾಂತ ಸಕಲ ಸಾಮಗ್ರಿಗಳು ಮತ್ತು ಚೂಡಾಕರ್ಮದಲ್ಲಿರುವ ಎಲ್ಲ ವಸ್ತುಗಳು, ಸ್ನಾತಕನಿಗೆ ಉಡುಗೆ ತೊಡುಗೆ, ಧೋತಿ, ಉತ್ತರೀಯ, ಶಿರೋವೇಷ್ಟನ, ಕಂಠಮಾಲಾ, ಕುಂಡಲ ನೇತ್ರಾಂಜನ, ಪಾದುಕಾ, ಛತ್ರ ಇತ್ಯಾದಿ.

# ವಿವಾಹ

ಪುಣ್ಯಾಹವಾಚನಾದಿಗಳ ಎಲ್ಲ ಸಾಮಗ್ರಿಗಳು, ಹೋಮಸಾಮಗ್ರಿಗಳು, 4+3 ಧೋತಿಗಳು, 4+2 ಶಾಲುಗಳು, 4+3 ಸೀರೆಗಳು, (ವಧೂವರ-ಎರಡೂ ಪಕ್ಷಗಳಿಂದ ಕೂಡಿ) ಮಾಂಗಲ್ಯಸೂತ್ರ, ಮೂಗುತಿ, ಕಾಲುಂಗುರ-ಇತ್ಯಾದಿ ಆಭರಣಗಳು. ಕಲಶ, ಕನ್ನಡಿ, ಪೂರ್ಣಪಾತ್ರ, ದೀಪಮಾಲೆ, ಆರತಿ ಇತ್ಯಾದಿಗಳು, ಮಧುಪರ್ಕಕ್ಕೆ ಜೇನು, ಮೊಸರು, ದರ್ಭಾಸನ, ಯಜ್ಞೋಪವೀತ, ದಾರದ ಉಂಡೆ, ಅರಸಿನ ಬೇರು, ಹೊದಲು, ಎರಡು ಕಲ್ಲು, ಅಕ್ಕಿರಾಶಿ.

**ಐರಿಣೀ ಪೂಜೆ:-** ಎಲೆ, ಅಡಿಕೆ, ತೆಂಗಿನಕಾಯಿ, ಬಿದಿರಿನ ಗೆರಸೆ, ದೀಪಗಳು, ಗೌರೀಹರ ಪೂಜೆಗೆ ಎರಡು ಕಲಶಗಳು.

# ವಿಷಯಾನುಕ್ರಮಣಿಕಾ

# ಔರ್ಧ್ವದೇಹಿಕವಿಧಿಃ

# ಮಂತ್ರಾನುಕ್ರಮಣಿಕಾ

## ಯ



## ರ



## ವ



## ಶ



## ಸ

# ಔರ್ಧ್ವದೇಹಿಕವಿಧಿಃ

॥ ಶ್ರೀಮನ್ಮಹಾಗಣಾಧಿಪತಯೇ ನಮಃ ॥
॥ ಅವಿಘ್ನಮಸ್ತು ॥

೧

# ಪ್ರಾತಃ ಸ್ಮರಣಂ

## ॥ ಭಾರತ ಸಂಹಿತಾ ॥

ಮಹರ್ಷಿರ್ಭಗವಾನ್ ವ್ಯಾಸಃ ಕೃತ್ವೇಮಾಂ ಸಂಹಿತಾಂ ಪುರಾ ।
ಶ್ಲೋಕೈಶ್ಚತುರ್ಭಿರ್ಧರ್ಮಾತ್ಮಾ ಪುತ್ರಮಧ್ಯಾಪಯಚ್ಛುಕಂ ॥ ೧ ॥

ಮಾತಾಪಿತೃಸಹಸ್ರಾಣಿ ಪುತ್ರದಾರಶತಾನಿ ಚ ।
ಸಂಸಾರೇಷ್ವನುಭೂತಾನಿ ಯಾಂತಿ ಯಾಸ್ಯಂತಿ ಚಾಪರೇ ॥ ೨ ॥

ಹರ್ಷಸ್ಥಾನಸಹಸ್ರಾಣಿ ಭಯಸ್ಥಾನಶತಾನಿ ಚ ।
ದಿವಸೇ ದಿವಸೇ ಮೂಢಮಾವಿಶಂತಿ ನ ಪಂಡಿತಂ ॥ ೩ ॥

ಊರ್ಧ್ವಬಾಹುರ್ವಿರೌಮ್ಯೇಷ ನ ಚ ಕಶ್ಚಿಚ್ಛೃಣೋತಿ ಮೇ ।
ಧರ್ಮಾದರ್ಥಶ್ಚ ಕಾಮಶ್ಚ ಸ ಕಿಮರ್ಥಂ ನ ಸೇವ್ಯತೇ ॥ ೪ ॥

ನ ಜಾತು ಕಾಮಾನ್ನ ಭಯಾನ್ನ ಲೋಭಾದ್ಧರ್ಮಂ ತ್ಯಜೇಜ್ಜೀವಿತಸ್ಯಾಪಿ ಹೇತೋಃ ।
ಧರ್ಮೋ ನಿತ್ಯಸ್ಸುಖದುಃಖೇತ್ವನಿತ್ಯೇ ಜೀವೋ ನಿತ್ಯೋ ಹೇತುರಸ್ಯತ್ವನಿತ್ಯಃ ॥ ೫ ॥

ಇಮಾಂ ಭಾರತಸಾವಿತ್ರೀಂ ಪ್ರಾತರುತ್ಥಾಯ ಯಃ ಪಠೇತ್ ।
ಸ ಭಾರತಫಲಂ ಪ್ರಾಪ್ಯ ಪರಂ ಬ್ರಹ್ಮಾಧಿಗಚ್ಛತಿ ॥ ೬ ॥

ಪ್ರಾತಃಕಾಲ ಎಚ್ಚರವಾದೊಡನೆ ಎದ್ದು ಕುಳಿತು ಪ್ರಾತಃಸ್ಮರಣೆಯನ್ನು ಮಾಡಬೇಕು. ಭಗವದನುಗ್ರಹದಿಂದ ಆಯಾ ದಿನವು ಶುಭಪ್ರದವಾಗಲೆಂದು ಭಕ್ತಿಯಿಂದ ಭಗವಂತನನ್ನು ಧ್ಯಾನಿಸಬೇಕು. ನಾನಾ ರೂಪಿಯಾದ ಪರಮಾತ್ಮನನ್ನು ಈ ಎಲ್ಲ ಸ್ತೋತ್ರಗಳನ್ನು ಪಠಿಸಿ ಧ್ಯಾನಿಸಬಹುದು. ಅಥವಾ ಸೂರ್ಯ, ದೇವೀ, ವಿಘ್ನೇಶ, ಶಿವ, ವಿಷ್ಣು ಮುಂತಾದ ವಿಶಿಷ್ಟ ರೂಪಗಳಲ್ಲಿ ತನ್ನ ಇಷ್ಟದೇವತೆಯನ್ನು ಆಯಾ ದೇವತೆಯ ಒಂದು ಸ್ತೋತ್ರದಿಂದಲಾದರೂ ಭಜಿಸಬಹುದು. 'ಭಾರತ ಸಂಹಿತಾ' ಮತ್ತು ಇತರ ಸ್ತೋತ್ರಗಳನ್ನು ಅವಶ್ಯವಾಗಿ ಹೇಳಬೇಕು.

ಯೋ ಗೋಶತಂ ಕನಕಶೃಂಗಮಯಂ ದದಾತಿ
ವಿಪ್ರಾಯ ವೇದವಿದುಷೇ ಚ ಬಹುಶ್ರುತಾಯ ।
ಪುಣ್ಯಾಂ ಚ ಭಾರತಕಥಾಂ ಶೃಣುಯಾಚ್ಚ ನಿತ್ಯಂ
ತುಲ್ಯಂ ಫಲಂ ಭವತಿ ತಸ್ಯ ಚ ತಸ್ಯ ಚೈವ ॥ ೭ ॥

## ॥ ಭಾನುಸ್ತೋತ್ರಮ್ ॥

ಪ್ರಾತಃ ಸ್ಮರಾಮಿ ಖಲು ತತ್ಸವಿತುರ್ವರೇಣ್ಯಂ
ರೂಪಂ ಹಿ ಮಂಡಲಮೃಚೋಽಥ ತನುರ್ಯಜೂಂಷಿ ।
ಸಾಮಾನಿ ಯಸ್ಯ ಕಿರಣಾಃ ಪ್ರಭವಾದಿಹೇತುಂ
ಬ್ರಹ್ಮಾಹರಾತ್ಮಕಮಲಕ್ಷ್ಯಮಚಿಂತ್ಯರೂಪಮ್ ॥ ೧ ॥
ಪ್ರಾತರ್ನಮಾಮಿ ತರಣಿಂ ತನುವಾಙ್ಮನೋಭಿಃ
ಬ್ರಹ್ಮೇಂದ್ರಪೂರ್ವಕಸುರೈರ್ನುತಮರ್ಚಿತಂ ಚ ।
ವೃಷ್ಟಿಪ್ರಮೋಚನವಿನಿಗ್ರಹಹೇತುಭೂತಂ
ತ್ರೈಲೋಕ್ಯಪಾಲನಪರಂ ತ್ರಿಗುಣಾತ್ಮಕಂ ಚ ॥ ೨ ॥
ಪ್ರಾತರ್ಭಜಾಮಿ ಸವಿತಾರಮನಂತಶಕ್ತಿಂ
ಪಾಪೌಘಶತ್ರುಭಯರೋಗಹರಂ ಪರಂ ಚ ।
ತಂ ಸರ್ವಲೋಕಕಲನಾತ್ಮಕಕಾಲಮೂರ್ತಿಂ
ಗೋಕಂಠಬಂಧನವಿಮೋಚನಮಾದಿದೇವಮ್ ॥ ೩ ॥
ಶ್ಲೋಕತ್ರಯಮಿದಂ ಭಾನೋಃ ಪ್ರಾತಃ ಪ್ರಾತಃ ಪಠೇತ್ತು ಯಃ ।
ಸ ಸರ್ವವ್ಯಾಧಿನಿರ್ಮುಕ್ತಃ ಪರಂ ಸುಖಮವಾಪ್ನುಯಾತ್ ॥ ೪ ॥

## ॥ ವಿಘ್ನೇಶಸ್ತೋತ್ರಮ್ ॥

ಪ್ರಾತಃ ಸ್ಮರಾಮಿ ಗಣನಾಥಮನಾಥಬಂಧುಂ
ಸಿಂದೂರಪೂರಪರಿಶೋಭಿತಗಂಡಯುಗ್ಮಂ
ಉದ್ದಂಡವಿಘ್ನಪರಿಖಂಡನಚಂಡದಂಡ
ಮಾಖಂಡಲಾದಿಸುರನಾಯಕವೃಂದವಂದ್ಯಮ್ ॥ ೧ ॥
ಪ್ರಾತರ್ನಮಾಮಿ ಚತುರಾನನವಂದ್ಯಮಾನ
ಮಿಚ್ಛಾನುಕೂಲಮಖಿಲಂ ಚ ವರಂ ದದಾನಂ ।

ತಂ ತುಂದಿಲಂ ದ್ವಿರಸನಪ್ರಿಯಯಜ್ಞಸೂತ್ರ
ಪುತ್ರಂ ವಿಲಾಸಚತುರಂ ಶಿವಯೋಶ್ಶಿವಾಯ ॥ ೨ ॥

ಪ್ರಾತರ್ಭಜಾಮ್ಯಭಯದಂ ಖಲು ಭಕ್ತಶೋಕ
ದಾವಾನಲಂ ಗಣವಿಭುಂ ವರಕುಂಜರಾಸ್ಯಂ ।
ಅಜ್ಞಾನಕಾನನವಿನಾಶನಹವ್ಯವಾಹ
ಮುತ್ಸಾಹವರ್ಧನಮಹಂ ಸುತಮೀಶ್ವರಸ್ಯ ॥ ೩ ॥

ಶ್ಲೋಕತ್ರಯಮಿದಂ ಪುಣ್ಯಂ ಸದಾ ಸಾಮ್ರಾಜ್ಯದಾಯಕಂ
ಪ್ರಾತರುತ್ಥಾಯ ಸತತಂ ಯಃ ಪಠೇತ್ಪ್ರಯತಃ ಪುಮಾನ್ ॥ ೪ ॥

# ॥ ದೇವೀಸ್ತೋತ್ರಮ್ ॥

ಪ್ರಾತಃ ಸ್ಮರಾಮಿ ಶರದಿಂದುಕರೋಜ್ವಲಾಭಾಂ
ಸದ್ರತ್ನವತ್ಸಕಲಕುಂಡಲಹಾರಶೋಭಾಂ ।
ದಿವ್ಯಾಯುಧೋರ್ಜಿತಸುನೀಲಸಹಸ್ರಹಸ್ತಾಂ
ರಕ್ತೋತ್ಪಲಾಭಚರಣಾಂ ಭವತೀಂ ಪರೇಶಾಂ ॥ ೧ ॥

ಪ್ರಾತರ್ನಮಾಮಿ ಮಹಿಷಾಸುರಚಂಡಮುಂಡ
ಶುಂಭಾಸುರಪ್ರಮುಖದೈತ್ಯವಿನಾಶದಕ್ಷಾಂ ।
ಬ್ರಹ್ಮೇಂದ್ರರುದ್ರಮುನಿಮೋಹನಶೀಲಲೀಲಾಂ
ಚಂಡೀಂ ಸಮಸ್ತಸುರಮೂರ್ತಿಮನೇಕರೂಪಾಂ ॥ ೨ ॥

ಪ್ರಾತರ್ಭಜಾಮಿ ಭಜತಾಮಖಿಲಾರ್ಥದಾತ್ರೀಂ
ಧಾತ್ರೀಂ ಸಮಸ್ತಜಗತಾಂ ದುರಿತಾಪಹಂತ್ರೀಂ ।
ಸಂಸಾರಬಂಧನವಿಮೋಚನಹೇತುಭೂತಾಂ
ಮಾಯಾಂ ಪರಾಂ ಸಮಧಿಗಮ್ಯ ಪರಸ್ಯ ವಿಷ್ಣೋಃ ॥ ೩ ॥

ಶ್ಲೋಕತ್ರಯಮಿದಂ ದೇವ್ಯಾಶ್ಚಂಡಿಕಾಯಾಃ ಪಠೇನ್ನರಃ ।
ಸರ್ವಾನ್ಕಾಮಾನವಾಪ್ನೋತಿ ವಿಷ್ಣುಲೋಕೇ ಮಹೀಯತೇ ॥ ೪ ॥

# ॥ ಶಿವಸ್ತೋತ್ರಮ್ ॥

ಪ್ರಾತಃ ಸ್ಮರಾಮಿ ಭವಭೀತಿಹರಂ ಸುರೇಶಂ
ಗಂಗಾಧರಂ ವೃಷಭವಾಹನಮಂಬಿಕೇಶಂ ।
ಖಟ್ವಾಂಗಶೂಲವರದಾಭಯಹಸ್ತಮೀಶಂ
ಸಂಸಾರರೋಗಹರಮೌಷಧಮದ್ವಿತೀಯಮ್ ॥ ೧ ॥

ಪ್ರಾತರ್ನಮಾಮಿ ಗಿರಿಶಂ ಗಿರಿಜಾರ್ಧದೇಹಂ
ಸರ್ಗಸ್ಥಿತಿಪ್ರಲಯಕಾರಣಮಾದಿದೇವಂ ।
ವಿಶ್ವೇಶ್ವರಂ ವಿಜಿತವಿಶ್ವಮನೋಭಿರಾಮಂ
ಸಂಸಾರರೋಗಹರಮೌಷಧಮದ್ವಿತೀಯಂ ॥ ೨ ॥

ಪ್ರಾತರ್ಭಜಾಮಿ ಶಿವಮೇಕಮನಂತಮಾದ್ಯಂ
ವೇದಾಂತವೇದ್ಯಮನಘಂ ಪುರುಷಂ ಮಹಾಂತಂ ।
ನಾಮಾದಿಭೇದರಹಿತಂ ಷಡಭಾವಶೂನ್ಯಂ
ಸಂಸಾರರೋಗಹರಮೌಷಧಮದ್ವಿತೀಯಮ್ ॥ ೩ ॥

ಪ್ರಾತಸ್ಸಮುತ್ಥಾಯ ಶಿವಂ ವಿಚಿಂತ್ಯ ಶ್ಲೋಕತ್ರಯಂ ಯೇನುದಿನಂ ಪಠಂತಿ ।
ತೇ ದುಃಖಜಾತಂ ಬಹುಜನ್ಮಸಂಚಿತಂ ಹಿತ್ವಾ ಪದಂ
ಯಾಂತಿ ತದೇವ ಶಂಭೋಃ॥ ೪ ॥

# ॥ ವಿಷ್ಣುಸ್ತೋತ್ರಮ್ ॥

ಪ್ರಾತಃ ಸ್ಮರಾಮಿ ಭವಭೀತಿಮಹಾರ್ತಿಶಾಂತ್ಯೈ
ನಾರಾಯಣಂ ಗರುಡವಾಹನಮಬ್ಜನಾಭಂ ।
ಗ್ರಾಹಾಭಿಭೂತವರವಾರಣಮುಕ್ತಿಹೇತುಂ
ಚಕ್ರಾಯುಧಂ ತರುಣವಾರಿಜಪತ್ರನೇತ್ರಮ್ ॥ ೧ ॥

ಪ್ರಾತರ್ನಮಾಮಿ ಮನಸಾ ವಚಸಾ ಚ ಮೂರ್ಧ್ನಾ
ಪಾದಾರವಿಂದಯುಗಲಂ ಪರಮಸ್ಯ ಪುಂಸಃ ।
ನಾರಾಯಣಸ್ಯ ನರಕಾರ್ಣವತಾರಣಸ್ಯ ।
ಪಾರಾಯಣಪ್ರವಣವಿಪ್ರಪರಾಯಣಸ್ಯ ॥ ೨ ॥

ಪ್ರಾತರ್ಭಜಾಮಿ ಭಜತಾಮಭಯಂಕರಂ ತಂ
ಪ್ರಾಕ್ಸರ್ವಜನ್ಮಕೃತಪಾಪಭಯಾಪಹತ್ಯೈ ।

ಯೋ ಗ್ರಾಹವಕ್ತ್ರಪತಿತಾಂಘ್ರಿಗಜೇಂದ್ರಘೋರ
ಶೋಕಪ್ರಣಾಶಮಕರೋದ್ಧೃತಶಂಖಚಕ್ರಃ ॥ ೩ ॥

ಶ್ಲೋಕತ್ರಯಮಿದಂ ವಿಷ್ಣೋಃ ಪ್ರಾತಃಕಾಲೇ ಪಠೇತ್ತು ಯಃ ।
ಲೋಕತ್ರಯಗುರುಸ್ತಸ್ಮೈ ದದ್ಯಾದಾತ್ಮಪದಂ ಹರಿಃ ॥ ೪ ॥

## ॥ ಶ್ರೀರಾಮಸ್ತೋತ್ರಮ್ ॥

ಪ್ರಾತಃ ಸ್ಮರಾಮಿ ರಘುನಾಥಮುಖಾರವಿಂದಂ
ಮಂದಸ್ಮಿತಂ ಮೃದುಲಭಾಷಿ ವಿಶಾಲಭಾಲಂ ।
ಕರ್ಣಾವಲಂಬಿಚಲಕುಂಡಲಶೋಭಿಗಂಡಂ
ಕರ್ಣಾಂತದೀರ್ಘನಯನಂ ನಯನಾಭಿರಾಮಮ್ ॥ ೧ ॥

ಪ್ರಾತರ್ನಮಾಮಿ ರಘುನಾಥಮುಖಾರವಿಂದಂ
ರಕ್ಷೋಗಣಾಯ ಭಯದಂ ವರದಂ ನಿಜೇಭ್ಯಃ ।
ಯದ್ರಾಜಸಂಸದಿ ವಿಭಜ್ಯ ಮಹೇಂದ್ರಚಾಪಂ
ಸೀತಾಕರಗ್ರಹಣಮಂಗಲಮಾಪ ಸದ್ಯಃ ॥ ೨ ॥

ಪ್ರಾತರ್ನಮಾಮಿ ರಘುನಾಥಪದಾರವಿಂದಂ
ಪದ್ಮಾಂಕುಶಾದಿಶುಭರೇಖಿ ಸುಖಾವಹಂ ಮೇ ।
ಯೋಗೀಂದ್ರಮಾನಸಮಧುವ್ರತಸೇವ್ಯಮಾನಂ
ಶಾಪಾಪಹಂ ಸಪದಿ ಗೌತಮಧರ್ಮಪತ್ನ್ಯಾಃ ॥ ೩ ॥

ಪ್ರಾತರ್ವದಾಮಿ ವಚಸಾ ರಘುನಾಥನಾಮ
ವಾಗ್ದೋಷಹಾರಿ ಸಕಲಂ ಶಮಲಂ ಕರೋತಿ ।
ಯತ್ಪಾರ್ವತೀ ಸ್ವಪತಿನಾ ಸಹ ಭೋಕ್ತುಕಾಮಾ
ಪ್ರೀತ್ಯಾ ಸಹಸ್ರಹರಿನಾಮಸಮಂ ಜಜಾಪ ॥ ೪ ॥

ಪ್ರಾತಃ ಶ್ರಯೇ ಶ್ರುತಿನುತಾಂ ರಘುನಾಥಮೂರ್ತಿಂ
ನೀಲಾಂಬುಜೋತ್ಪಲಸಿತೇತರರತ್ನನೀಲಾಂ ।
ಆಮುಕ್ತಮೌಕ್ತಿಕವಿಶೇಷವಿಭೂಷಣಾಢ್ಯಾಂ
ಧ್ಯೇಯಾಂ ಸಮಸ್ತಮುನಿಭಿರ್ಜನಮುಕ್ತಿಹೇತುಂ ॥ ೫ ॥

ಯಃ ಶ್ಲೋಕಪಂಚಕಮಿದಂ ಪ್ರಯತಃ ಪಠೇತ್ತು
ನಿತ್ಯಂ ಪ್ರಭಾತಸಮಯೇ ಪುರುಷಃ ಪ್ರಬುದ್ಧಃ ।
ಶ್ರೀರಾಮಕಿಂಕರಜನೇಷು ಸ ಏವ ಮುಖ್ಯೋ
ಭೂತ್ವಾ ಪ್ರಯಾತಿ ಹರಿಲೋಕಮನನ್ಯಲಭ್ಯಮ್ ॥ ೬ ॥

# ॥ ಅನ್ಯಸ್ತೋತ್ರಾಣಿ ॥

ಬ್ರಹ್ಮಾ ಮುರಾರಿಸ್ತ್ರಿಪುರಾಂತಕಾರಿರ್ಭಾನುಶ್ಶಶೀಭೂಮಿಸುತೋ ಬುಧಶ್ಚ ।
ಗುರುಶ್ಚಶುಕ್ರಶ್ಶನಿರಾಹುಕೇತವಃ ಕುರ್ವಂತು ಸರ್ವೇ
ಮಮ ಸುಪ್ರಭಾತಮ್ ॥ ೧ ॥

ಭೃಗುರ್ವಸಿಷ್ಠಃ ಕ್ರತುರಂಗಿರಾಶ್ಚ ಮನುಃ ಪುಲಸ್ತ್ಯಃ ಪುಲಹಶ್ಚ ಗೌತಮಃ ।
ರೈಭ್ಯೋ ಮರೀಚಿಃ ಚ್ಯವನಶ್ಚ ದಕ್ಷಃ ಕುರ್ವಂತು ಸರ್ವೇ
ಮಮ ಸುಪ್ರಭಾತಮ್ ॥ ೨ ॥

ಸನತ್ಕುಮಾರಃ ಸನಕಃ ಸನಂದನಃ ಸನಾತನೋಽಪ್ಯಾಸುರಿಪಿಂಗಲೌ ಚ ।
ಸಪ್ತಸ್ವರಾಸ್ಸಪ್ತರಸಾತಲಾನಿ ಕುರ್ವಂತು ಸರ್ವೇ ಮಮ ಸುಪ್ರಭಾತಮ್ ॥ ೩ ॥
ಸಪ್ತಾರ್ಣವಾಃ ಸಪ್ತ ಕುಲಾಚಲಾಶ್ಚ ಸಪ್ತರ್ಷಯೋ ದ್ವೀಪವನಾನಿ ಸಪ್ತ ।
ಭೂರಾದಿ ಕೃತ್ವಾ ಭುವನಾನಿ ಸಪ್ತ ಕುರ್ವಂತು ಸರ್ವೇ
ಮಮ ಸುಪ್ರಭಾತಮ್ ॥ ೪ ॥

ಪೃಥ್ವೀ ಸಗಂಧಾ ಸರಸಾಸ್ತಥಾಪಃ ಸ್ಪರ್ಶೀ ಚ ವಾಯುಃ ಜ್ವಲನಸ್ಸತೇಜಃ ।
ನಭಃ ಸಶಬ್ದಂ ಮಹತಾ ಸಹೈತೇ ಕುರ್ವಂತು ಸರ್ವೇ
ಮಮ ಸುಪ್ರಭಾತಮ್ ॥ ೫ ॥

ಇತ್ಥಂ ಪ್ರಭಾತೇ ಪರಮಂ ಪವಿತ್ರಂ ಪಠೇತ್ ಸ್ಮರೇದ್ವಾ ಶೃಣುಯಾಚ್ಚ ತದ್ವತ್ ।
ದುಃಸ್ವಪ್ನನಾಶಸ್ತ್ವಿಹ ಸುಪ್ರಭಾತಂ ಭವೇಚ್ಚ ನಿತ್ಯಂ ಭಗವತ್ಪ್ರಸಾದಾತ್ ॥ ೬ ॥

ವೈನಂ ಪೃಥುಂ ಹೈಹಯಮರ್ಜುನಂ ಚ ಶಾಕುಂತಲೇಯಂ ಭರತಂ ನಲಂ ಚ ।
ರಾಮಂ ಚ ಯೋ ವೈ ಸ್ಮರತಿ ಪ್ರಭಾತೇ
ತಸ್ಯಾರ್ಥಲಾಭೋ ವಿಜಯಶ್ಚ ಹಸ್ತೇ ॥ ೭ ॥

ಬಲಿರ್ವಿಭೀಷಣೋ ಭೀಷ್ಮಃ ಪ್ರಹ್ಲಾದೋ ನಾರದೋ ಧ್ರುವಃ ।
ಷಡೇತೇ ವೈಷ್ಣವಾಃ ಪ್ರೋಕ್ತಾಃ ಸ್ಮರಣಂ ಪಾಪನಾಶನಮ್ ॥ ೮ ॥

ಅಶ್ವತ್ಥಾಮಾ ಬಲಿರ್ವ್ಯಾಸೋ ಹನುಮಾಂಶ್ಚ ವಿಭೀಷಣಃ ।
ಕೃಪಃ ಪರಶುರಾಮಶ್ಚ ಸಪ್ತೈತೇ ಚಿರಜೀವಿನಃ ॥ ೯ ॥

ಸಪ್ತೈತಾನ್ ಸಂಸ್ಮರೇನ್ನಿತ್ಯಂ ಮಾರ್ಕಂಡೇಯಮಥಾಷ್ಟಮಂ ।
ಜೀವೇದ್ವರ್ಷಶತಂ ಸಾಗ್ರಮಪಮೃತ್ಯುವಿವರ್ಜಿತಃ ॥ ೧೦ ॥

ಅಹಲ್ಯಾ ದ್ರೌಪದೀ ಸೀತಾ ತಾರಾ ಮಂಡೋದರೀ ತಥಾ ।
ಪಂಚಕನ್ಯಾಸ್ಸ್ಮರೇನ್ನಿತ್ಯಂ ಮಹಾಪಾತಕನಾಶನಮ್ ॥ ೧೧ ॥

ಕರ್ಕೋಟಕಸ್ಯ ನಾಗಸ್ಯ ದಮಯಂತ್ಯಾ ನಲಸ್ಯ ಚ ।
ಋತುಪರ್ಣಸ್ಯ ರಾಜರ್ಷೇಃ ಕೀರ್ತನಂ ಕಲಿನಾಶನಮ್ ॥ ೧೨ ॥

ಧರ್ಮೋ ವಿವರ್ಧತಿ ಯುಧಿಷ್ಠಿರಕೀರ್ತನೇನ
ಪಾಪಂ ಪ್ರಣಶ್ಯತಿ ವೃಕೋದರಕೀರ್ತನೇನ ।
ಶತ್ರುರ್ವಿನಶ್ಯತಿ ಧನಂಜಯಕೀರ್ತನೇನ
ಮಾದ್ರೀಸುತೌ ಕಥಯತಾಂ ನ ಭವಂತಿ ರೋಗಾಃ ॥ ೧೩ ॥

ಪುಣ್ಯಶ್ಲೋಕೋ ನಲೋ ರಾಜಾ ಪುಣ್ಯಶ್ಲೋಕೋ ಯುಧಿಷ್ಠಿರಃ ।
ಪುಣ್ಯಶ್ಲೋಕಾ ಚ ವೈದೇಹೀ ಪುಣ್ಯಶ್ಲೋಕೋ ಜನಾರ್ದನಃ ॥ ೧೪ ॥

ವಿಶ್ವೇಶಂ ಮಾಧವಂ ಢುಂಢಿಂ ದಂಡಪಾಣಿಂ ಚ ಭೈರವಂ ।
ವಂದೇ ಕಾಶೀಂ ಗುಹಾಂ ಗಂಗಾಂ ಭವಾನೀಂ ಮಣಿಕರ್ಣಿಕಾಂ ॥ ೧೫ ॥

ಸಮುದ್ರವಸನೇ ದೇವಿ ಪರ್ವತಸ್ತನಮಂಡಿತೇ ।
ವಿಷ್ಣುಪತ್ನಿ ನಮಸ್ತುಭ್ಯಂ ಪಾದಸ್ಪರ್ಶಂ ಕ್ಷಮಸ್ವ ಮೇ ॥ ೧೬ ॥

## ॥ ವಿಶ್ವಕರ್ಮಸ್ತೋತ್ರ ॥

ಬ್ರಹ್ಮಾದಕ್ಷಃಕುಬೇರೋಯಮವರುಣಮರುದ್ವಹ್ನಿಚಂದ್ರೇಂದ್ರರುದ್ರಾಃ
ಶೈಲಾ ನದ್ಯಃ ಸಮುದ್ರಾಃ ಗ್ರಹಗಣಮನುಜಾಃ
ದೈತ್ಯಗಂಧರ್ವನಾಗಾಃ ।

ದ್ವೀಪಾ ನಕ್ಷತ್ರತಾರಾಃ ರವಿಮನುಮುನಯೋ ವ್ಯೋಮಭೂರಶ್ವಿನೌ ಚ
ಸಂಜಾತಾ ಯಸ್ಯ ಸರ್ವೇ ವಪುಷಿ ಸ ಭಗವಾನ್ ಪಾತು
ವೋ ವಿಶ್ವಕರ್ಮಾ ॥ ೧೭ ॥

ವೈದಿಕಾಚಾರ್ಯಮಾಚಾರ್ಯಭಾಸ್ಕರಂ ಜ್ಞಾನಭಾಸ್ಕರಂ ।
ಧರ್ಮಸಂಸ್ಥಾಪಿನಂ ವಂದೇ ಕಾಲಹಸ್ತಂ ಜಗದ್ಗುರುಂ ॥ ೧೮ ॥

# ॥ ಭಸ್ಮಧಾರಣವಿಧಿಃ ॥

**ಶ್ರಾದ್ಧೇ ಯಜ್ಞೇ ಜಪೇ ಹೋಮೇ ವೈಶ್ವದೇವೇ ಸುರಾರ್ಚನೇ ।**
**ಭಸ್ಮತ್ರಿಪುಂಡ್ರೈಃ ಪೂತಾತ್ಮಾ ಮೃತ್ಯುಂ ಜಯತಿ ಮಾನವಃ ॥**

**ಆಸನೇ ಉಪವಿಶ್ಯ ಆಚಮ್ಯ ಪ್ರಾಣಾಯಾಮಂ ಕೃತ್ವಾ । ಶರೀರಶುದ್ಧ್ಯರ್ಥಂ ಭಸ್ಮಧಾರಣಮಹಂ ಕರಿಷ್ಯೇ ॥**

**ಮಾನಸ್ತೋಕೇತಿ ಮಂತ್ರಸ್ಯ ಕುತ್ಸೋ ರುದ್ರೋ ಜಗತೀ ವಿಭೂತಿಧಾರಣೇ ವಿನಿಯೋಗಃ ॥ ಓಂ ಮಾನಸ್ತೋಕೇತನಯೇ ಮಾನ ಆಯೌ ಮಾನೋ ಗೋಷು ಮಾನೋ ಅಶ್ವೇಷು ರೀರಿಷಃ । ವೀರಾನ್ಮಾನೋ ರುದ್ರಭಾಮಿತೋವಧೀರ್ಹ ವಿಷ್ಮಂತಃ ಸದಮಿತ್ವಾಹವಾಮಹೇ ॥ ತ್ರ್ಯಾಯುಷಂ ಜಮದಗ್ನೇರಿತಿ ಲಲಾಟೇ । ಕಶ್ಯಪಸ್ಯ ತ್ರ್ಯಾಯುಷಮಿತಿ ಕಂಠೇ । ಅಗಸ್ತ್ಯಸ್ಯ ತ್ರ್ಯಾಯುಷಮಿತಿ ನಾಭೌ । ಯದ್ದೇವಾನಾಂ ತ್ರ್ಯಾಯಷಮಿತಿ ದಕ್ಷಿಣಸ್ಕಂಧೇ । ತನ್ಮೇ ಅಸ್ತು ತ್ರ್ಯಾಯುಷಮಿತಿ ವಾಮಸ್ಕಂಧೇ । ಸರ್ವಮಸ್ತು ಶತಾಯುಷಮಿತಿ ಶಿರಸಿ ॥**

---

ಶ್ರಾದ್ಧ, ಯಜ್ಞ, ಜಪ, ಹೋಮ, ವೈಶ್ವದೇವ, ದೇವಪೂಜೆ ಮುಂತಾದ ಸಕಲ ಕರ್ಮಗಳಲ್ಲಿಯೂ ಭಸ್ಮತ್ರಿಪುಂಡ್ರವನ್ನು ಧರಿಸಿ ಪವಿತ್ರಾತ್ಮನಾದವನು ಮೃತ್ಯುವನ್ನು ಜಯಿಸುತ್ತಾನೆ.

ಆಸನದಲ್ಲಿ ಕುಳಿತು ಆಚಮನ ಪ್ರಾಣಾಯಾಮಗಳನ್ನು ಮಾಡಿ, "ಶರೀರ ಶುದ್ಧ್ಯರ್ಥಂ ಭಸ್ಮಧಾರಣಮಹಂ ಕರಿಷ್ಯೇ" - ಎಂದು ಹೇಳಿ ನೀರನ್ನು ಬಿಟ್ಟು ಸಂಕಲ್ಪ ಮಾಡಬೇಕು. ಆ ಮೇಲೆ ಮಾನಸ್ತೋಕೇ... ಎಂಬ ಮಂತ್ರವನ್ನು ಉಚ್ಚರಿಸಿ ಭಸ್ಮವನ್ನು "ತ್ರ್ಯಾಯುಷಂ..." ಎಂದು ಹೇಳುತ್ತ ಆಯಾ ಅವಯವಗಳಲ್ಲಿ ಲೇಪಿಸಬೇಕು.

ಅಗ್ನಿಹೋತ್ರಾಗ್ನಿಜಂ ಭಸ್ಮ ವಿರಜಾಹೋಮಜಂ ತಥಾ ।
ಔಪಾಸನಸಮುತ್ಪನ್ನಂ ಸಮಿದಗ್ನಿಸಮುದ್ಭವಂ ॥

ಅಗ್ನಿಹೋತ್ರ, ವಿರಜಾಹೋಮ, ಔಪಾಸನ ಮುಂತಾದ ಹೋಮಗಳ ಭಸ್ಮ ಅಥವಾ ಸಮಿತ್ತುಗಳ ಭಸ್ಮವು ಉತ್ತಮವಾದುದು.

**ಕೌಶೇಯಂ ಕಂಬಲಂ ಚೈವ ಅಜಿನಂ ಪಟ್ಟಮೇವ ಚ ।**
**ದಾರುಜಂ ತಾಲಪತ್ರಂ ವಾ ಆಸನಂ ಪರಿಕಲ್ಪಯೇತ್ ॥**

ದರ್ಭಾಸನ, ಕಂಬಳಿ, ಕೃಷ್ಣಾಜಿನ, ವ್ಯಾಘ್ರಚರ್ಮ ಮುಂತಾದ ಚರ್ಮಾಸನಗಳು, ಮರದಿಂದ ನಿರ್ಮಿಸಿದ ಆಸನ, ತಾಳೆಗರಿಗಳಿಂದ ನಿರ್ಮಿಸಿದ ಆಸನ ಇವು ಉತ್ತಮ ಆಸನಗಳು.

# ॥ ಪ್ರಾತಃ ಸಂಧ್ಯಾ ॥

**ಪ್ರಾತಃ ಸಂಧ್ಯಾಕಾಲಃ**

ಉತ್ತಮಾ ತಾರಕೋಪೇತಾ ಮಧ್ಯಮಾ ಲುಪ್ತತಾರಕಾ ।
ಅಧಮಾ ಸೂರ್ಯಸಹಿತಾ ಪ್ರಾತಃಸಂಧ್ಯಾ ತ್ರಿಧಾ ಮತಾ ॥

ಶುಚೌ ದೇಶೇ ಪ್ರಾಙ್ಮುಖ ಉದಙ್ಮುಖೋ ವಾ ಉಪವಿಶ್ಯ । ಓಂ ಕೇಶವಾಯ ಸ್ವಾಹಾ । ಓಂ ನಾರಾಯಣಾಯ ಸ್ವಾಹಾ । ಓಂ ಮಾಧವಾಯ ಸ್ವಾಹಾ ॥ ಗೋವಿಂದಾಯ ನಮಃ । ವಿಷ್ಣವೇ ನಮಃ । ಮಧುಸೂದನಾಯ ನಮಃ । ತ್ರಿವಿಕ್ರಮಾಯ ನಮಃ । ವಾಮನಾಯ ನಮಃ । ಶ್ರೀಧರಾಯ ನಮಃ । ಹೃಷೀಕೇಶಾಯ ನಮಃ । ಪದ್ಮನಾಭಾಯ ನಮಃ । ದಾಮೋದರಾಯ ನಮಃ ಸಂಕರ್ಷಣಾಯ ನಮಃ । ವಾಸುದೇವಾಯ ನಮಃ । ಪ್ರದ್ಯುಮ್ನಾಯ ನಮಃ । ಅನಿರುದ್ಧಾಯ ನಮಃ । ಪುರುಷೋತ್ತಮಾಯ ನಮಃ । ಅಧೋಕ್ಷಜಾಯ ನಮಃ । ನಾರಸಿಂಹಾಯ ನಮಃ । ಅಚ್ಯುತಾಯ ನಮಃ । ಜನಾರ್ದನಾಯ ನಮಃ । ಉಪೇಂದ್ರಾಯ ನಮಃ । ಹರಯೇ ನಮಃ ॥ ಶ್ರೀಕೃಷ್ಣಾಯ ನಮಃ ॥ ದರ್ಭದ್ವಯ ಕೃತೇ ಪವಿತ್ರೇ ಗ್ರಂಥಿರಹಿತೇ ಗ್ರಂಥಿಯುತೇ ವಾ ಹಸ್ತಯೋರ್ಧೃತ್ವಾ ॥ ಪ್ರಣವಸ್ಯ ಪರಬ್ರಹ್ಮ ಋಷಿಃ । ಪರಮಾತ್ಮಾ ದೇವತಾ । ದೈವೀಗಾಯತ್ರೀಚ್ಛಂದಃ । ಸಪ್ತಾನಾಂ ವ್ಯಾಹೃತೀನಾಂ ವಿಶ್ವಾಮಿತ್ರ ಜಮದಗ್ನಿ ಭರದ್ವಾಜ ಗೌತಮಾತ್ರಿ ವಸಿಷ್ಠಕಶ್ಯಪಾ ಋಷಯಃ । ಅಗ್ನಿವಾಯ್ವಾದಿತ್ಯಬೃಹಸ್ಪತಿವರುಣೇಂದ್ರವಿಶ್ವೇದೇವಾ ದೇವತಾಃ । ಗಾಯತ್ರ್ಯುಷ್ಣಿಗನುಷ್ಟುಪ್ ಬೃಹತೀಪಂಕ್ತಿತ್ರಿಷ್ಟುಪ್‌ಜಗತ್ಯಶ್ಛಂದಾಂಸಿ । ಗಾಯತ್ರ್ಯಾ ವಿಶ್ವಾಮಿತ್ರ ಋಷಿಃ । ಸವಿತಾ ದೇವತಾ । ಗಾಯತ್ರೀ ಛಂದಃ । ಗಾಯತ್ರೀಶಿರಸಃ ಪ್ರಜಾಪತಿರ್ಋಷಿಃ । ಬ್ರಹ್ಮಾಗ್ನಿ ವಾಯ್ವಾದಿತ್ಯಾ ದೇವತಾಃ । ಯಜುಶ್ಛಂದಃ ಪ್ರಾಣಾಯಾಮೇ ವಿನಿಯೋಗಃ ॥

---

ಪ್ರಾತಃ ಸಂಧ್ಯಾವಂದನೆಗೆ ಯೋಗ್ಯವಾದ ಕಾಲ:- ಉಷಃಕಾಲದಲ್ಲಿ ಆಕಾಶದಲ್ಲಿ ಇನ್ನೂ ನಕ್ಷತ್ರಗಳು ಕಾಣಿಸುತ್ತಿದ್ದಾಗ ಉತ್ತಮಕಾಲ, ನಕ್ಷತ್ರಗಳು ಮಾಯವಾದ ಬಳಿಕ ಮಧ್ಯಮಕಾಲ ಸೂರ್ಯೋದಯವಾದ ಮೇಲೆ ಅಧಮಕಾಲ.

ಶುಚಿಯಾದ ಸ್ಥಳದಲ್ಲಿ ಪೂರ್ವ ಅಥವಾ ಉತ್ತರ ದಿಕ್ಕಿಗೆ ಮುಖಮಾಡಿ ಪದ್ಮಾಸನದಲ್ಲಿ ಕುಳಿತು, ಕೇಶವ-ನಾರಾಯಣ-ಮಾಧವ ಈ ಮೂರು ನಾಮಗಳನ್ನು ಉಚ್ಚರಿಸುತ್ತ ಮೂರು ಬಾರಿ ನೀರು ಕುಡಿದು ಆಚಮನ ಮಾಡಬೇಕು.

ಪವಿತ್ರ ಲಕ್ಷಣ:- ಅನಂತಗರ್ಭಿತಂ ಸಾಗ್ರಂ ಕೌಶಂ ಹಿ ದಲಮೇವ ಚ ।
ಪ್ರಾದೇಶಮಾತ್ರಂ ವಿಜ್ಞೇಯಂ ಪವಿತ್ರಂ ಯತ್ರಕುತ್ರಚಿತ್ ॥
ಚತುರ್ಭಿರ್ದರ್ಭಪಿಂಜೂಲೈರ್ಬ್ರಾಹ್ಮಣಸ್ಯ ಪವಿತ್ರಕಮ್ ।
ಏಕೈಕನ್ಯೂನಮುದ್ದಿಷ್ಟಂ ವರ್ಣೇ ವರ್ಣೇ ಯಥಾಕ್ರಮಮ್ ॥

ಓಂ ಭೂಃ। ಓಂ ಭುವಃ । ಓಂ ಸ್ವಃ । ಓಂ ಮಹಃ ಓಂ ಜನಃ । ಓಂ ತಪಃ ಓಂ ಸತ್ಯಂ । ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ ॥ ಓಂ ಆಪೋಜ್ಯೋತೀ ರಸೋಮೃತಂ ಬ್ರಹ್ಮ ಭೂರ್ಭುವಃಸ್ವರೋಮ್ ॥ ಏವಂ ತ್ರಿರುಕ್ತ್ವಾ ॥ ಮಮೋಪಾತ್ತದುರಿತಕ್ಷಯದ್ವಾರಾ ಶ್ರೀ ಪರಮೇಶ್ವರಪ್ರೀತ್ಯರ್ಥಂ ಪ್ರಾತಃಸಂಧ್ಯಾಮುಪಾಸಿಷ್ಯೇ ॥ ಮಾರ್ಜನಂ ॥ ಆಪೋಹಿಷ್ಠೇತಿ ತೃಚಸ್ಯಾಂಬರೀಷಃ ಸಿಂಧುದ್ವೀಪಋಷಿಃ ಆಪೋ ದೇವತಾ ಗಾಯತ್ರೀಛಂದಃ ಮಾರ್ಜನೇ ವಿನಿಯೋಗಃ ॥ ಓಂ ಆಪೋಹಿಷ್ಠಾ ಮಯೋಭುವಃ । ಓಂ ತಾನಊರ್ಜೇ ದಧಾತನ । ಓಂ ಮಹೇರಣಾಯ-ಚಕ್ಷಸೇ । ಓಂ ಯೋವಃ ಶಿವ ತಮೋರಸಃ। ಓಂ ತಸ್ಯ ಭಾಜಯತೇಹನಃ। ಓಂ ಉಶತೀರಿವ ಮಾತರಃ। ಓಂ ತಸ್ಮಾ ಅರಂಗ ಮಾಮವಃ । ಓಂ ಯಸ್ಯಕ್ಷ-ಯಾಯ ಜಿನ್ವಥ । ಓಂ ಆಪೋ ಜನಯಥಾಚನಃ ॥

---

**ಅನ್ಯಾನ್ಯಪಿ ಪವಿತ್ರಾಣಿ ಕುಶದೂರ್ವಾಮಯಾನಿ ಚ ।**
**ಹೇಮಾತ್ಮಕಪವಿತ್ರಸ್ಯ ಕಲಾಂ ನಾರ್ಹಂತಿ ಷೋಡಶೀಂ ॥**
**ಹೈಮೇನ ಸರ್ವದಾ ಸರ್ವಂ ಕುರ್ಯಾದೇವಾವಿಚಾರಯನ್ ।**
**ರೌಪ್ಯಂ ದಕ್ಷಪ್ರದೇಶಿನ್ಯಾಂ ಬಿಭೃಯಾದ್ವೀಕ್ಷಿತೋ ದ್ವಿಜಃ ॥**

ಚೂಪಾದ ತುದಿಗಳುಳ್ಳ ದರ್ಭೆಗಳಿಂದ ಪ್ರಾದೇಶಮಾತ್ರ (ಅಗಲಿಸಿ ಬಿಡಿಸಿ ಹಿಡಿದಾಗ ಉಂಗುಷ್ಠದ ತುದಿಯಿಂದ ತರ್ಜನಿಯ ತುದಿಯ ವರೆಗಿನಷ್ಟು) ಉದ್ದದ ಪವಿತ್ರವನ್ನು ಧರಿಸಬೇಕು. ನಾಲ್ಕು ದರ್ಭೆಗಳ ಪವಿತ್ರವು ಬ್ರಾಹ್ಮಣನಿಗೂ, ಒಂದೊಂದೇ ದರ್ಭೆಯನ್ನು ಕಡಿಮೆಮಾಡಿ ಯಥಾ ಕ್ರಮವಾಗಿ ಇತರ ವರ್ಣಗಳಿಗೂ ಪವಿತ್ರವು ವಿಹಿತವಾಗಿದೆ. ಚಿನ್ನದ ಪವಿತ್ರವು ಸರ್ವಶ್ರೇಷ್ಠವಾದುದು. ಸಕಲಕರ್ಮಗಳಲ್ಲಿಯೂ ಅದನ್ನು ಉಪಯೋಗಿಸಬಹುದು. ಪವಿತ್ರವನ್ನು ಅನಾಮಿಕೆ ಬೆರಳಲ್ಲಿ ಧರಿಸಬೇಕು.

ಪ್ರಾಣಾಯಾಮ ಕ್ರಮ:

**ದಕ್ಷಿಣೇ ರೇಚಯೇದ್ವಾಯುಂ ವಾಮೇನಾಪೂರಿತೋದರಮ್ ।**
**ಕುಂಭಕೇನ ಜಪಂ ಕುರ್ಯಾತ್ ಪ್ರಾಣಾಯಾಮೋ ಭವೇದಿತಿ ।**
**ಪಂಚಾಂಗುಲೀಭಿರ್ನಾಸಾಗ್ರಂ ಪೀಡಯೇತ್ಪ್ರಣವೇನ ವೈ ।**
**ಮುದ್ರೇಯಂ ಸರ್ವಪಾಪಘ್ನೀ ವಾನಪ್ರಸ್ಥಗೃಹಸ್ಥಯೋಃ ॥**
**ಕನಿಷ್ಠಾನಾಮಿಕಾಂಗುಷ್ಠೈರ್ಯತೇಶ್ಚ ಬ್ರಹ್ಮಚಾರಿಣಃ ।**
**ಪ್ರಣವವ್ಯಾಹೃತೀಃ ಸಪ್ತ ಗಾಯತ್ರೀಂ ಶಿರಸಾ ಸಹ ॥**
**ತ್ರಿಃ ಪಠೇದಾಯತಪ್ರಾಣಃ ಪ್ರಾಣಾಯಾಮಃ ಸ ಉಚ್ಯತೇ ॥**

ಬಲಮೂಗಿನಿಂದ ವಾಯುವನ್ನು ಒಳಕ್ಕೆ ಎಳೆದುಕೊಳ್ಳಬೇಕು. ಗೃಹಸ್ಥ ಮತ್ತು ವಾನಪ್ರಸ್ಥರು ಐದು ಬೆರಳುಗಳಿಂದಲೂ ಮೂಗನ್ನು ಬಿಗಿಯಾಗಿ ಮುಚ್ಚಿ ಹಿಡಿಯಬೇಕು. ಯತಿಗಳು ಮತ್ತು ಬ್ರಹ್ಮಚಾರಿಗಳು ಕಿರುಬೆರಳು ಅನಾಮಿಕ ಮತ್ತು ಉಂಗುಷ್ಠಗಳಿಂದ ಮೂಗನ್ನು ಹಿಡಿದು ಮುಚ್ಚಿಕೊಳ್ಳಬೇಕು.

## ಮಂತ್ರಾಚಮನಂ:

ಸೂರ್ಯಶ್ಚೇತಿ ಮಂತ್ರಸ್ಯ ಯಾಜ್ಞವಲ್ಕ್ಯಉಪನಿಷದಋಷಿಃ । ಸೂರ್ಯ ಮನ್ಯು ಮನ್ಯುಪತಿರಾತ್ರಯೋ ದೇವತಾಃ । ಪ್ರಕೃತಿಶ್ಛಂದಃ । ಅಭ್ಯಂತರಶುದ್ಧ್ಯರ್ಥೇ ಮಂತ್ರಾಚಮನೇ ವಿನಿಯೋಗಃ ॥ ಓಂ ಸೂರ್ಯಶ್ಚ ಮಾಮನ್ಯುಶ್ಚ ಮನ್ಯುಪತಯಶ್ಚ ಮನ್ಯುಕೃತೇಭ್ಯಃ । ಪಾಪೇಭ್ಯೋ ರಕ್ಷಂತಾಮ್ । ಯದ್ರಾತ್ರ್ಯಾಪಾಪಮಕಾರ್ಷಮ್ । ಮನಸಾ ವಾಚಾ ಹಸ್ತಾಭ್ಯಾಂ । ಪದ್ಭ್ಯಾಮುದರೇಣ ಶಿಶ್ನಾ । ರಾತ್ರಿಸ್ತದವಲುಂಪತು । ಯತ್ಕಿಂಚದುರಿತಂ ಮಯಿ । ಇದಮಹಂ ಮಾಮಮೃತಯೋನೌ । ಸೂರ್ಯೇ ಜ್ಯೋತಿಷಿ ಜುಹೋಮಿ ಸ್ವಾಹಾ ॥ ಇತಿ ಜಲಂ ಪೀತ್ವಾ ಆಚಮ್ಯ ॥ ಪ್ರಣವಸ್ಯ ಪರಬ್ರಹ್ಮಋಷಿಃ ಪರಮಾತ್ಮಾ ದೇವತಾ ದೈವೀಗಾಯತ್ರೀ ಛಂದಃ । ವ್ಯಾಹೃತೀನಾಂ ಪರಮೇಷ್ಠೀ ಪ್ರಜಾಪತಿಃ ಪ್ರಜಾಪತಿರ್ಬೃಹತೀ ಗಾಯತ್ರ್ಯಾ ವಿಶ್ವಾಮಿತ್ರಃ ಸವಿತಾ ಗಾಯತ್ರೀ । ಆಪೋಹಿಷ್ಠೇತಿ ನವರ್ಚಸ್ಯ ಸೂಕ್ತಸ್ಯಾಂಬರೀಷಃ ಸಿಂಧುದ್ವೀಪ ಆಪೋ ಗಾಯತ್ರೀ ಪಂಚಮೀ ವರ್ಧಮಾನಾ ಸಪ್ತಮೀ ಪ್ರತಿಷ್ಠಾ ಅಂತ್ಯೇ ದ್ವೇ ಅನುಷ್ಟುಭೌ ಮಾರ್ಜನೇ ವಿನಿಯೋಗಃ ॥ ಓಂ ಆಪೋಹಿಷ್ಠಾಮಯೋ-ಭುವಃ...ಆಪೋಜನಯಥಾಚನಃ ॥ ಓಂ ಶಂನೋದೇವೀರಭಿಷ್ಟಯ ಆಪೋ ಭವಂತು ಪೀತಯೇ । ಶಂಯೋರಭಿಸ್ರವಂತುನಃ । ಈಶಾನಾವಾರ್ಯಾಣಾಂಕ್ಷಯಂತೀಶ್ಚರ್ಷಣೀನಾಂ । ಅಪೋಯಾಚಾಮಿಭೇಷಜಂ । ಅಪ್ಸುಮೇಸೋಮೋ ಅಬ್ರವೀದಂತರ್ವಿಶ್ವಾನಿಭೇಷಜಾ । ಅಗ್ನಿಂ ಚ ವಿಶ್ವಶಂಭುವಂ । ಆಪಃಪೃಣೀತಭೇಷಜಂ ವರೂಥಂ ತನ್ವೇ ೩ ಮಮ । ಜ್ಯೋಕ್ಚಸೂರ್ಯಂದೃಶೇ ।

---

ಕೈಯಲ್ಲಿ ನೀರನ್ನು ಹಿಡಿದು ಮಂತ್ರಾಚಮನದ ಮಂತ್ರವನ್ನು ಹೇಳಿ, ಕುಡಿದು ಆಚಮನ ಮಾಡಬೇಕು. ಮಾರ್ಜನಮಾಡುವಾಗ ಸಕ್ಕೂದಿಂದ ಕೈಗೆ ನೀರು ಹಾಕಿ ಪ್ರತಿಯೊಂದು ಋಕ್ಕಿನ ಕೊನೆಯಲ್ಲಿ ಒಂದು ಬಾರಿಯಂತೆ ನೀರನ್ನು ಮೈಮೇಲೆ ಪ್ರೋಕ್ಷಿಸಿಕೊಳ್ಳಬೇಕು.

ಇದಮಾಪಃ ಪ್ರವಹತಯತ್ಕಿಂಚ ದುರಿತಂ ಮಯಿ । ಯದ್ವಾಮಭಿದುದ್ರೋಹ ಯದ್ವಾ ಶೇಪ ಉತಾನೃತಂ । ಆಪೋ ಅದ್ಯಾನ್ವಚಾರಿಷಂ ರಸೇನಸಮಗಸ್ಮಹಿ । ಪಯಸ್ವಾನಗ್ನಆಗಹಿತಂ ಮಾಸಂಸ್ಸೃಜವರ್ಚಸಾ ॥ ಅಘಮರ್ಷಣಂ ॥ ಋತಂ ಚೇತಿ ತೃಚಸ್ಯ ಮಾಧುಶ್ಛಂದಸೋ ಅಘಮರ್ಷಣಋಷಿಃ । ಭಾವವೃತ್ತಂ ದೇವತಾ । ಅನುಷ್ಟುಪ್ ಛಂದಃ ಅಘಮರ್ಷಣೇ ವಿನಿಯೋಗಃ ॥ ಓಂ ಋತಂ ಚ ಸತ್ಯಂ ಚಾಭೀದ್ಧಾತ್ತಪಸೋಧ್ಯಜಾಯತ । ತತೋ ರಾತ್ರ್ಯಜಾಯತ ತತಸ್ಸಮುದ್ರೋ ಅರ್ಣವಃ । ಸಮುದ್ರಾದರ್ಣವಾದಧಿಸಂವತ್ಸರೋ ಅಜಾಯತ । ಅಹೋರಾತ್ರಾಣಿ ವಿದಧದ್ವಿಶ್ವಸ್ಯ ಮಿಷತೋ ವಶೀ । ಸೂರ್ಯಾ ಚಂದ್ರಮಸೌಧಾತಾಯಥಾಪೂರ್ವಮಕಲ್ಪಯತ್ । ದಿವಂ ಚ ಪೃಥಿವೀಂ ಚಾಂತರಿಕ್ಷಮಥೋಸ್ವಃ ॥

ಇತಿ ವಾಮನಾಸಾಪುಟೇನ ವಾಯುಂ ನಿರುಧ್ಯ ದಕ್ಷಿಣನಾಸಯಾ ಪಾಪ ಪುರುಷಂ ನಿರಸ್ಯ ತಜ್ಜಲಮನವಲೋಕಯನ್ ವಾಮಭಾಗೇ ಕ್ಷಿತೌ ಕ್ಷಿಪೇತ್ ॥ ಆಚಮ್ಯ ॥ ಅರ್ಘ್ಯದಾನಂ ॥ ಪ್ರಣವಸ್ಯ ಪರಬ್ರಹ್ಮಋಷಿಃ ಪರಮಾತ್ಮಾ ದೇವತಾ ದೈವೀಗಾಯತ್ರೀ ಛಂದಃ । ವ್ಯಾಹೃತೀನಾಂ ಪರಮೇಷ್ಠೀ ಪ್ರಜಾಪತಿಃ ಪ್ರಜಾಪತಿ ಬೃಹತೀ । ಗಾಯತ್ರ್ಯಾ ವಿಶ್ವಾಮಿತ್ರಃ ಸವಿತಾ ಗಾಯತ್ರೀ । ಶ್ರೀ ಸೂರ್ಯಾಯ ಅರ್ಘ್ಯದಾನೇ ವಿನಿಯೋಗಃ ॥ ಓಂ ಭೂರ್ಭುವಃ ಸ್ವಃ । ತತ್ಸವಿತುರ್ವ..... ಪ್ರಚೋದಯಾತ್ ॥ ಶ್ರೀ ಸೂರ್ಯನಾರಾಯಣಾಯ ಇದಮರ್ಘ್ಯಂ ಸಮರ್ಪಯಾಮಿ ॥ ಇತಿ ತ್ರಿಃ ॥ ಕಾಲಾತಿಕ್ರಮೇ ಪ್ರಾಯಶ್ಚಿತ್ತಾರ್ಥಂ ಚತುರ್ಥಂ ॥ ತಚ್ಚ, ಕಾಲಲೋಪಜನಿತಪ್ರತ್ಯವಾಯಪರಿಹಾರಾರ್ಥಂ ಚತುರ್ಥಾರ್ಘ್ಯದಾನಂ ಕರಿಷ್ಯೇ ಇತಿ ದದ್ಯಾತ್ ॥ ಅಸಾವಾದಿತ್ಯೋ ಬ್ರಹ್ಮ ॥ ಇತ್ಯಾತ್ಮಾನಂ ಪ್ರದಕ್ಷಿಣಂ ಪರಿಷಿಚ್ಯ ಉಪಸ್ಪೃಶೇತ್ ॥ ಆಚಮ್ಯ ಪ್ರಾಣಾಯಾಮಂ ಕೃತ್ವಾ ॥

---

**ಅಘಮರ್ಷಣವಿಧಿ:-** ಋತಂ ಚ ಸತ್ಯಂ...ಎಂಬ ಮಂತ್ರವನ್ನು ಹೇಳಿ "ಮಥೋಸ್ವಃ" ಎಂದು ಉಚ್ಚರಿಸುತ್ತ ಎಡಮೂಗಿಗೆ ಬೆರಳನ್ನು ಒತ್ತಿ ಹಿಡಿದು ವಾಯುವನ್ನು ಬಂಧಿಸಿ ಕೈ

# ಗಾಯತ್ರೀ ಜಪಃ

**ಕುಶೋದಕೇನ ಜಪಸ್ಥಾನಂ ಪ್ರೋಕ್ಷ್ಯ । ಓಂ ಭೂರ್ಭುವಃ ಸ್ವರೋಂ ಇತಿ ಜಪಿತ್ವಾ । ಆಸನೇ ಪದ್ಮಾಸನೇನ ಉಪವಿಶ್ಯ ॥ ಪೃಥ್ವೀತಿ ಮಂತ್ರಸ್ಯ ಮೇರುಪೃಷ್ಠ ಋಷಿಃ। ಕೂರ್ಮೋ ದೇವತಾ । ಸುತಲಂ ಛಂದಃ ಆಸನೇ ವಿನಿಯೋಗಃ । ಓಂ ಪೃಥ್ವಿ ತ್ವಯಾ ಧೃತಾ ಲೋಕಾ ದೇವಿ ತ್ವಂ ವಿಷ್ಣುನಾ ಧೃತಾ । ತ್ವಂ ಚ ಧಾರಯ ಮಾಂ ದೇವಿ ಪವಿತ್ರಂ ಕುರು ಚಾಸನಂ । ಊರ್ಧ್ವಕೇಶಿ ವಿರೂಪಾಕ್ಷಿ ಮಾಂಸ ಶೋಣಿತಭಕ್ಷಣೇ । ತಿಷ್ಠ ದೇವಿ ಶಿಖಾ ಬಂಧೇ ಚಾಮುಂಡೇ ಹ್ಯಪರಾಜಿತೇ । ಅಪಸರ್ಪಂತು ತೇ ಭೂತಾ ಯೇ ಭೂತಾ ಭೂಮಿಸಂಸ್ಥಿತಾಃ । ಯೇ ಭೂತಾ ವಿಘ್ನಕರ್ತಾರಃ ತೇ ಗಚ್ಛಂತು ಶಿವಾಜ್ಞಯಾ । ಅಪಕ್ರಾಮಂತು ಭೂತಾನಿ ಪಿಶಾಚಾ ಸ್ಸರ್ವತೋ ದಿಶಂ । ಸರ್ವೇಷಾಮವಿರೋಧೇನ ಬ್ರಹ್ಮಕರ್ಮ ಸಮಾರಭೇ ॥ ಗಾಯತ್ರ್ಯಾ ವಿಶ್ವಾಮಿತ್ರ ಋಷಿಃ ಸವಿತಾ ದೇವತಾ । ಗಾಯತ್ರೀ ಛಂದಃ । ನ್ಯಾಸೇ ವಿನಿಯೋಗಃ ॥ ಓಂ ತತ್ಸವಿತುರಂಗುಷ್ಠಾಭ್ಯಾಂ ನಮಃ । ವರೇಣ್ಯಂ ತರ್ಜನೀಭ್ಯಾಂ ನಮಃ । ಭರ್ಗೋ ದೇವಸ್ಯ ಮಧ್ಯಮಾಭ್ಯಾಂ ನಮಃ । ಧೀಮಹಿ ಅನಾಮಿಕಾ ಭ್ಯಾಂ ನಮಃ । ಧಿಯೋ ಯೋ ನಃ ಕನಿಷ್ಠಿಕಾಭ್ಯಾಂ ನಮಃ । ಪ್ರಚೋದಯಾತ್**

---

ಯಲ್ಲಿರುವ ನೀರನ್ನು ಬಲಮೂಗಿನ ಗಾಳಿಯೊಂದಿಗೆ ತನ್ನ ಎಡಭಾಗದಲ್ಲಿ ನೆಲದಲ್ಲಿ ವಿಸರ್ಜಿಸಬೇಕು. ಹಾಗೆ ವಿಸರ್ಜಿಸಿದ ನೀರನ್ನು ನೋಡಬಾರದು. ಬಳಿಕ ಆಚಮನ ಮಾಡಿ ಅರ್ಘ್ಯದಾನವನ್ನು ಮಾಡಬೇಕು. "ಪ್ರಣವಸ್ಯ...ಅರ್ಘ್ಯದಾನೇ ವಿನಿಯೋಗಃ" ಎಂದು ಸಂಕಲ್ಪ ಮಾಡಿ ಸೂರ್ಯನಿಗೆ ಇದಿರಾಗಿ ಎದ್ದುನಿಂತು ಎರಡು ಕೈಗಳನ್ನೂ ಜೋಡಿಸಿ ದನದ ಕಿವಿಯ ಆಕಾರದ ಬೊಗಸೆಯನ್ನು ಮಾಡಿ, ಬೊಗಸೆ ತುಂಬ ನೀರನ್ನು ತುಂಬಿಸಿಕೊಂಡು ಗಾಯತ್ರೀ ಮಂತ್ರವನ್ನು ಹೇಳಬೇಕು. "ಶ್ರೀ ಸೂರ್ಯನಾರಾಯಣಾಯ ಇದಮರ್ಘ್ಯಂ ಸಮರ್ಪಯಾಮಿ" ಎಂದು ಹೇಳಿ ಬೊಗಸೆಯಲ್ಲಿರುವ ನೀರನ್ನು ಮೇಲಕ್ಕೆ ಎಸೆದು ನೀರಿನಲ್ಲಿ, ಪ್ರೋಕ್ಷಿಸಲ್ಪಟ್ಟ ಶುದ್ಧಸ್ಥಲದಲ್ಲಿ ಅಥವಾ ಯಾವುದಾದರೂ ಪಾತ್ರೆಯಲ್ಲಿ ಬೀಳುವಂತೆ ಮಾಡಬೇಕು. ಹೀಗೆ ಮೂರು ಅರ್ಘ್ಯಗಳನ್ನು ಕೊಡಬೇಕು. ಸಮಯ ಮೀರಿದ ದೋಷಪರಿಹಾರಕ್ಕೆ "ಕಾಲಲೋಪ ಜನಿತ..." ಎಂದು ಸಂಕಲ್ಪ ಮಾಡಿ ನಾಲ್ಕನೆಯ ಅರ್ಘ್ಯವನ್ನು ಮೊದಲು ಅರ್ಘ್ಯದಾನ ಮಾಡಿದ ಕ್ರಮದಲ್ಲೇ ಮಾಡಬೇಕು. ಇದಾದ ಮೇಲೆ ಬಲಗೈಯಲ್ಲಿ ಕೈತುಂಬ ನೀರು ಹಿಡಿದು, "ಅಸಾವಾದಿತ್ಯೋ ಬ್ರಹ್ಮ" ಎಂದು ಹೇಳುತ್ತ ಪ್ರದಕ್ಷಿಣಾಕಾರವಾಗಿ ತನ್ನ ಸುತ್ತಲೂ ಆ ನೀರು ಬೀಳುವಂತೆ ವೃತ್ತಾಕಾರವಾಗಿ ಚೆಲ್ಲಬೇಕು. ಆ ಮೇಲೆ ಆಚಮನ ಪ್ರಾಣಾಯಾಮಗಳನ್ನು ಮಾಡಿ ಗಾಯತ್ರೀಜಪಕ್ಕೆ ಸಿದ್ಧನಾಗಬೇಕು.

ದರ್ಭೆಗಳಿಂದ ಜಪಕ್ಕೆ ಕುಳಿತುಕೊಳ್ಳುವ ಸ್ಥಳವನ್ನು ಪ್ರೋಕ್ಷಿಸಿ, "ಓಂ ಭೂರ್ಭುವಃ ಸ್ವರೋಂ" ಎಂದು ಜಪಿಸಿ ಪದ್ಮಾಸನವನ್ನು ಹಾಕಿ ಕುಳಿತುಕೊಳ್ಳಬೇಕು.

ಕರತಲಕರಪೃಷ್ಠಾಭ್ಯಾಂ ನಮಃ ॥ ಓಂ ತತ್ಸವಿತುರ್ಹೃದಯಾಯ ನಮಃ । ವರೇಣ್ಯಂ ಶಿರಸೇ ಸ್ವಾಹಾ । ಭರ್ಗೋ ದೇವಸ್ಯ ಶಿಖಾಯೈ ವಷಟ್ । ಧೀಮಹಿ ಕವಚಾಯ ಹುಂ । ಧಿಯೋ ಯೋ ನೋ ನೇತ್ರತ್ರಯಾಯ ವೌಷಟ್ । ಪ್ರಚೋದಯಾತ್ ಅಸ್ತ್ರಾಯ ಫಟ್ ॥ ಇತಿ ದಿಗ್ಬಂಧಃ ॥ ಯೋ ದೇವಃ ಸವಿತಾಸ್ಮಾಕಂ ಧಿಯೋ ಧರ್ಮಾದಿಗೋಚರೇ ಪ್ರೇರಯೇತ್ತಸ್ಯ ತದ್ಭರ್ಗಸ್ತದ್ವರೇಣ್ಯಮುಪಾಸ್ಮಹೇ ॥ ಶುಕ್ಲೋ ವರ್ಣಃ । ಅಗ್ನಿರ್ಮುಖಂ । ಬ್ರಹ್ಮಾ ಶಿರಃ । ವಿಷ್ಣುರ್ಹೃದಯಂ । ರುದ್ರೋ ಲಲಾಟಂ । ಪೃಥಿವೀ ಕುಕ್ಷಿಃ । ತ್ರೈಲೋಕ್ಯಂ ಚರಣಾಃ । ಸಾಂಖ್ಯಾಯನ ಗೋತ್ರಂ । ತ್ರಿಪದಾ ಗಾಯತ್ರೀ । ಅಶೇಷ-ಪಾಪಕ್ಷಯಾರ್ಥಂ ಗಾಯತ್ರೀ ಜಪೇ ವಿನಿಯೋಗಃ ॥ ಮುಕ್ತಾವಿದ್ರುಮಹೇಮನೀಲಧವಲಚ್ಛಾಯೈರ್ಮುಖೈಸ್ತ್ರೀಕ್ಷಣೈರ್ಯುಕ್ತಾಮಿಂದುಕಲಾನಿಬದ್ಧಮುಕುಟಾಂ ತತ್ತ್ವಾರ್ಥವರ್ಣಾತ್ಮಿಕಾಂ । ಗಾಯತ್ರೀಂ ವರದಾಭಯಾಂ ಕುಶಕಶಾಶುಭ್ರಂಕಪಾಲಂಗುಣಂ ಶಂಖಂಚಕ್ರಮಥಾರವಿಂದಯುಗಲಂ ಹಸ್ತೈರ್ವಹಂತೀಂ ಭಜೇ ॥ ಬಾಲಾಂ ಬಾಲಾದಿತ್ಯಮಂಡಲಮಧ್ಯಸ್ಥಾಂ ರಕ್ತವರ್ಣಾಂ ರಕ್ತಾಂಬರಾನುಲೇಪನಸ್ರಗಾ-ಭರಣಾಂ ಚತುರ್ವಕ್ತ್ರಾಂ ದಂಡಕಮಂಡಲ್ವಕ್ಷಸೂತ್ರಾಭಯಾಂಕ ಚತುರ್ಭುಜಾಂ ಹಂಸಾಸನಾರೂಢಾಂ ಬ್ರಹ್ಮದೈವತ್ಯಾಂ ಋಗ್ವೇದಮುದಾಹರಂತೀಂ ಭೂರ್ಲೋಕಾಧಿಷ್ಠಾತ್ರೀಂ ಗಾಯತ್ರೀಂ ನಾಮ ದೇವತಾಂ ಧ್ಯಾಯಾಮಿ ॥ ಆಗಚ್ಛ ವರದೇ ದೇವಿ ಜಪೇ ಮೇ ಸನ್ನಿಧೌ ಭವ । ಗಾಯಂತಂ ತ್ರಾಯಸೇ ಯಸ್ಮಾದ್ಗಾಯತ್ರೀ ತ್ವಂ ತತಃ ಸ್ಮೃತಾ ॥ ಓಂ ಭೂರ್ಭುವಃ ಸ್ವಃ । ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋಯೋನಃ ಪ್ರಚೋದಯಾತ್ ॥ ಇತಿ ಗಾಯತ್ರೀ ಮಂತ್ರಂ ವಸ್ತ್ರಾಚ್ಛಾದಿತಹಸ್ತಪರ್ವಭಿರ್ಗಣಯನ್ ಅಷ್ಟೋತ್ತರಶತಮಷ್ಟಾವಿಂಶತಿರ್ದಶವಾರಂ ವಾ ಜಪ್ತ್ವಾ ಪುನಃ ತತ್ಸವಿತುರಿತಿ ಷಡಂಗನ್ಯಾಸಂ ಕೃತ್ವಾ ॥ ಉಪಸ್ಥಾನಮ್ ॥ ಜಾತವೇದಸೇ ಮಾರೀಚಃ ಕಶ್ಯಪೋ ಜಾತವೇದಾ ಅಗ್ನಿಸ್ತ್ರಿಷ್ಟುಪ್ । ಉಪಸ್ಥಾನೇ ವಿನಿಯೋಗಃ । ಓಂ ಜಾತವೇದಸೇಸುನವಾಮ

ಸೋಮಮರಾತೀಯತೋನಿದಹಾತಿವೇದಃ । ಸನಃ ಪರ್ಷದತಿದುರ್ಗಾಣಿವಿಶ್ವಾ ನಾವೇವ ಸಿಂಧುಂ ದುರಿತಾತ್ಯಗ್ನಿಃ ॥ ಮಿತ್ರೋಜನಾನಿತಿ ನವರ್ಚಸ್ಯ ಸೂಕ್ತಸ್ಯ ಗಾಥಿನೋ ವಿಶ್ವಾಮಿತ್ರಋಷಿಃ । ಮಿತ್ರೋ ದೇವತಾ ತ್ರಿಷ್ಟುಪ್ ಛಂದಃ ಅಂತ್ಯಾಶ್ಚತಸ್ರೋ ಗಾಯತ್ರ್ಯಃ ಸೂರ್ಯೋಪಸ್ಥಾನೇ ವಿನಿಯೋಗಃ ॥ ಮಿತ್ರೋಜನಾನ್ಯಾತಯತಿಬ್ರುವಾಣೋಮಿತ್ರೋದಾಧಾರಪೃಥಿವೀಮುತದ್ಯಾಂ ॥ ಮಿತ್ರಃ ಕೃಷ್ಟೀರನಿಮಿಷಾಭಿಚಷ್ಟೇಮಿತ್ರಾಯಹವ್ಯಂ ಘೃತವಜ್ಜುಹೋತ ॥ ಪ್ರಸ ಮಿತ್ರಮರ್ತೋ ಅಸ್ತುಪ್ರಯಸ್ವಾನ್ಯಸ್ತ ಆದಿತ್ಯಶಿಕ್ಷತಿವ್ರತೇನ ॥ ನ ಹನ್ಯತೇ ನ ಜೀಯತೇ ತ್ವೋತೋನೈನಮಂಹೋ ಅಶ್ನೋತ್ಯಂತಿತೋನದೂರಾತ್ ॥ ಅನ ಮೀವಾಸಇಳಯಾಮದಂತೋಮಿತಜ್ಞವೋವರಿಮನ್ನಾಪೃಥಿವ್ಯಾಃ ॥ ಆದಿತ್ಯಸ್ಯ ವ್ರತಮುಪಕ್ಷಿಯಂತೋ ವಯಂ ಮಿತ್ರಸ್ಯ ಸುಮತೌ ಸ್ಯಾಮ ॥ ಅಯಂ ಮಿತ್ರೋನಮಸ್ಯಃ ಸುಶೇವೋರಾಜಾಸುಕ್ಷತ್ರೋ ಅಜನಿಷ್ಟವೇಧಾಃ ॥ ತಸ್ಯವಯಂ ಸುಮತೌ ಯಜ್ಞಿಯಸ್ಯಾಪಿ ಭದ್ರೇಸೌಮನಸೇಸ್ಯಾಮ ಮಹಾಂ ಆದಿತ್ಯೋ ನಮಸೋಪಸದ್ಯೋಯಾತಯಜ್ಜನೋಗೃಣತೇಸುಶೇವಃ ॥ ತಸ್ಮಾಏತತ್ಪನ್ಯತಮಾ ಯಜುಷ್ಟಮಗ್ನೌ ಮಿತ್ರಾಯಹವಿರಾಜುಹೋತ ॥ ಮಿತ್ರಸ್ಯ ಚರ್ಷಣೀಧೃತೋ ವೋ ದೇವಸ್ಯ ಸಾನಸಿ ॥ ದ್ಯುಮ್ನಂಚಿತ್ರಶ್ರವಸ್ತಮಂ ॥ ಅಭಿಯೋಮಹಿನಾದಿವಂ ಮಿತ್ರೋಬಭೂವಸಪ್ರಥಾಃ ॥ ಅಭಿಶ್ರವೋಭಿಃ ಪೃಥಿವೀಂ ॥ ಮಿತ್ರಾಯ ಪಂಚಯೇಮಿರೇಜನಾ ಅಭಿಷ್ಟಿಶವಸೇ ॥ ಸ ದೇವಾನ್ವಿಶ್ವಾನ್ಬಿಭರ್ತಿ ॥ ಮಿತ್ರೋ ದೇವೇಷ್ವಾಯುಷುಜನಾಯ ವೃಕ್ತಬರ್ಹಿಷೇ ॥ ಇಷಇಷ್ಟವ್ರತಾ ಅಕಃ ॥ ತ್ರ್ಯಂಬಕಂ ಮೈತ್ರಾವರುಣಿರ್ವಸಿಷ್ಠೋರುದ್ರೋಽನುಷ್ಟುಪ್ ॥ ಉಪಸ್ಥಾನೇ ವಿನಿಯೋಗಃ ॥ ಓಂ ತ್ರ್ಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಂ । ಉರ್ವಾರುಕಮಿವ ಬಂಧನಾನ್ಮೃತ್ಯೋರ್ಮುಕ್ಷೀಯಮಾಮೃತಾತ್ ॥ ತಚ್ಛಂ ಯೋಃ ಶಂಯುರ್ವಿಶ್ವೇದೇವಾ ಶಕ್ವರೀ ॥ ಉಪಸ್ಥಾನೇ ವಿನಿಯೋಗಃ ॥ ಓಂ ತಚ್ಛಂಯೋರಾ ವೃಣೀಮಹೇ ಗಾತುಂ ಯಜ್ಞಾಯ ಗಾತುಂ ಯಜ್ಞಪತಯೇ

ದೃವೀ ಸ್ವಸ್ತಿರಸ್ತುನಃ ಸ್ವಸ್ತಿರ್ಮಾನುಷೇಭ್ಯಃ ॥ ಊರ್ಧ್ವಂಜಿಗಾತುಭೇಷಜಂ ॥ ಶಂನೋ ಅಸ್ತು ದ್ವಿಪದೇ ಶಂ ಚತುಷ್ಪದೇ ॥ ನಮೋ ಬ್ರಹ್ಮಣೇ ಪ್ರಜಾಪತಿರ್ವಿಶ್ವೇ ದೇವಾ ಜಗತೀ ॥ ಉಪಸ್ಥಾನೇ ವಿನಿಯೋಗಃ ॥ ಓಂ ನಮೋ ಬ್ರಹ್ಮಣೇ ನಮೋ ಅಸ್ತ್ವಗ್ನಯೇ ನಮಃ ಪೃಥಿವ್ಯೈ ನಮ ಓಷಧೀಭ್ಯಃ ॥ ನಮೋ ವಾಚೇ ನಮೋ ವಾಚಸ್ಪತಯೇ ನಮೋ ವಿಷ್ಣವೇ ಮಹತೇಕರೋಮಿ ॥ ಇತಿ ತ್ರಿಃ ॥ ಪ್ರಾಚ್ಯೈ ದಿಶೇ ಇಂದ್ರಾಯ ಚ ನಮಃ ॥ ಆಗ್ನೇಯ್ಯೈದಿಶೇ ಅಗ್ನಯೇ ಚ ನಮಃ । ದಕ್ಷಿಣಾಯ್ಯೈ ದಿಶೇ ಯಮಾಯ ಚ ನಮಃ । ನೈಋತ್ಯೈ ದಿಶೇ ನಿರ್ಋತಯೇ ಚ ನಮಃ ॥ ಪ್ರತೀಚ್ಯೈದಿಶೇ ವರುಣಾಯ ಚ ನಮಃ ॥ ವಾಯವ್ಯೈದಿಶೇ ವಾಯವೇ ಚ ನಮಃ ॥ ಉದೀಚ್ಯೈದಿಶೇ ಸೋಮಾಯ ಚ ನಮಃ ॥ ಈಶಾನ್ಯೈದಿಶೇ ಈಶ್ವರಾಯ ಚ ನಮಃ ॥ ಊರ್ಧ್ವಾಯೈದಿಶೇ ಬ್ರಹ್ಮಣೇ ಚ ನಮಃ ॥ ಅಧರಾಯೈದಿಶೇ ಅನಂತಾಯ ಚ ನಮಃ ॥ ಸಂಧ್ಯಾಯೈ ನಮಃ ॥ ಗಾಯತ್ರ್ಯೈ ನಮಃ ॥ ಸಾವಿತ್ರ್ಯೈ ನಮಃ ॥ ಸರಸ್ವತ್ಯೈ ನಮಃ ॥ ಸರ್ವಾಭ್ಯೋ ದೇವತಾಭ್ಯೋ ನಮಃ ॥ ಯಾಂ ಸದಾ ಸರ್ವಭೂತಾನಿ ಸ್ಥಾವರಾಣಿ ಚರಾಣಿ ಚ ॥ ಸಾಯಂ ಪ್ರಾತರ್ನಮಸ್ಯಂತಿ ಸಾ ಮಾ ಸಂಧ್ಯಾಭಿರಕ್ಷತು ॥ ಉತ್ತಮೇ ಶಿಖರೇ ಜಾತೇ ಭೂಮ್ಯಾಂ ಪರ್ವತಮೂರ್ಧನಿ । ಬ್ರಾಹ್ಮಣೇಭ್ಯೋಽಭ್ಯನುಜ್ಞಾತಾ ಗಚ್ಛ ದೇವಿ ಯಥಾಸುಖಂ ॥ ಭದ್ರಂನ ಇತಿ ಮಂತ್ರಸ್ಯ ಐಂದ್ರೋ ವಿಮದಋಷಿಃ ಅಗ್ನಿರ್ದೇವತಾ । ಏಕಪದಾ ವಿರಾಟ್ ಛಂದಃ । ಶಾಂತ್ಯರ್ಥೇ ಜಪೇ ವಿನಿಯೋಗಃ ॥ ಓಂ ಭದ್ರಂ ನೋ ಅಪಿ ವಾತ ಯಮನಃ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥ ಪ್ರದಕ್ಷಿಣಂ ಪರಿಭ್ರಮನ್ ॥ ಆಸತ್ಯಲೋಕಾತ್ಪಾತಾಲಾದಾಲೋಕಾಲೋಕಪರ್ವತಾತ್ । ಯೇ ಸಂತಿ ಬ್ರಾಹ್ಮಣಾ ದೇವಾಸ್ತೇಭ್ಯೋ ನಿತ್ಯಂ ನಮೋ ನಮಃ ॥ ಇತಿ ಗುರೂನಭಿವಾದ್ಯ ॥ ಸ್ವಸ್ತಿಕಾಕಾರ ಹಸ್ತಾಭ್ಯಾಂ ಕರ್ಣೌ ಸ್ಪೃಷ್ಟ್ವಾ ಅಮುಕಪ್ರವರೋ ಅಮುಕಗೋತ್ರೋ ತ್ಪನ್ನೋಽಹಮಮುಕಶರ್ಮಾ ಭೋ ಗುರೋ ತ್ವಾಮಭಿವಾದಯಾಮಿ ಇತಿ

**ಭೂಮ್ಯುಪಸಂಗ್ರಹಂ ಪ್ರಣಮೇತ್ ॥ ಅನೇನ ಪ್ರಾತಃ ಸಂಧ್ಯೋಪಾಸನೇನ ಕರ್ಮಣಾ ಶ್ರೀಪರಮೇಶ್ವರಃ ಪ್ರೀಯತಾಂ ॥ ಓಂ ತತ್ಸದ್ಬ್ರಹ್ಮಾರ್ಪಣಮಸ್ತು ॥ ದ್ವಿರಾಚಮ್ಯ ॥ ಪ್ರಮಾದಾತ್ಕುರ್ವತಾಂ ಕರ್ಮ ಪ್ರಚ್ಯವೇತಾಧ್ವರೇಷು ಯತ್ । ಸ್ಮರಣಾದೇವ ತದ್ವಿಷ್ಣೋಃ ಸಂಪೂರ್ಣಂ ಸ್ಯಾದಿತಿ ಶ್ರುತಿಃ ॥ ಪ್ರಾಯಶ್ಚಿತ್ತಾನ್ಯಶೇಷಾಣಿ ತಪಃ ಕರ್ಮಾತ್ಮಕಾನಿ ವೈ । ಯಾನಿ ತೇಷಾಮಶೇಷಾಣಾಂ ಕೃಷ್ಣಾನುಸ್ಮರಣಂ ಪರಂ ॥ ವಿಷ್ಣವೇ ನಮಃ ಇತಿ ತ್ರಿಃ ॥**

**॥ ಇತಿ ಪ್ರಾತಃ ಸಂಧ್ಯಾ ॥**

---

ಬಲಗೈಯನ್ನು ಬಟ್ಟೆಯಿಂದ ಮುಚ್ಚಿಕೊಂಡು ರುದ್ರಾಕ್ಷಿಮಾಲೆಯಿಂದ ಅಥವಾ ಬೆರಳುಗಳ ಗಂಟುಗಳಿಂದ ಗಾಯತ್ರೀಮಂತ್ರದ ಸಂಖ್ಯೆಯನ್ನು ಎಣಿಸಬೇಕು. ಅನಾಮಿಕಾ ಬೆರಳಿನ ಮಧ್ಯದ ಗಂಟಿನಿಂದ ಆರಂಭಿಸಿ ಪ್ರದಕ್ಷಿಣೆಯಿಂದ ವೃತ್ತಾಕಾರವಾಗಿ ತರ್ಜನಿಯ ಕೆಳಗಂಟಿನ ವರೆಗೆ ಹತ್ತು ಗಂಟುಗಳನ್ನು ಎಣಿಕೆಗೆ ತೆಕ್ಕೊಳ್ಳಬೇಕು. ಮಧ್ಯಮಾ ಬೆರಳಿನ ಎರಡನೆಯ ಮತ್ತು ಮೂರನೆಯ ಗಂಟುಗಳನ್ನು ಬಿಟ್ಟಾಗ ಹತ್ತು ಗಂಟುಗಳು ಎಣಿಕೆಗೆ ಸಿಗುತ್ತವೆ. ಗಾಯತ್ರೀಜಪವಾದ ಮೇಲೆ ಗಾಯತ್ರೀಮಂತ್ರದಿಂದ ಮೊದಲು ಮಾಡಿದಂತೆ ಷಡಂಗನ್ಯಾಸವನ್ನು ಮಾಡಿ ಎದ್ದುನಿಂತು ಉಪಸ್ಥಾನಮಂತ್ರಗಳನ್ನು ಹೇಳಬೇಕು.

**"ಪ್ರಾಚ್ಯೈ ದಿಶೇ ಇಂದ್ರಾಯ ನಮಃ"** ಎಂಬುದನ್ನು ಆಯಾ ದಿಕ್ಕಿಗೆ ಅಭಿಮುಖವಾಗಿ ತಿರುಗಿ ನಮಸ್ಕಾರ ಮಾಡುತ್ತ ಹೇಳಬೇಕು.

**"ಭದ್ರಂ ನೋ ಅಪಿವಾತಯಮನಃ"** ಎಂಬ ಮಂತ್ರವನ್ನು ಹೇಳುತ್ತ ನಿಂತಲ್ಲಿಯೇ ಪ್ರದಕ್ಷಿಣಾಕಾರವಾಗಿ ಒಂದು ಸುತ್ತು ತಿರುಗಬೇಕು.

ಗೋತ್ರೋಚ್ಚಾರ ಮಾಡಿ ಗುರುಗಳನ್ನು ಅಭಿವಾದನಮಾಡುವಾಗ ಸ್ವಸ್ತಿಕದ ಆಕೃತಿಯಲ್ಲಿ ಕೈಗಳನ್ನು ಒಂದರ ಮೇಲೊಂದು ಬರುವಂತೆ ಹಿಡಿದು ಕಿವಿಗಳನ್ನು ಮುಟ್ಟಿಕೊಂಡು ನೆಲದ ವರೆಗೆ ಬಗ್ಗಬೇಕು. ತನ್ನ ಪ್ರವರ ಗೋತ್ರ ಹೆಸರುಗಳನ್ನು ಹೇಳಿ ಮೂರು ಬಾರಿ ಅಭಿವಾದನಮಾಡಬೇಕು.

**"ಅನೇನ...ಪ್ರೀಯತಾಂ"** ಎಂದು ಹೇಳಿ ನೀರು ಬಿಡಬೇಕು. ಆಮೇಲೆ ಎರಡು ಸಲ ಆಚಮನ ಮಾಡಬೇಕು. ಕೊನೆಗೆ **"ವಿಷ್ಣವೇ ನಮಃ"** ಎಂದು ಮೂರು ಬಾರಿ ಹೇಳಬೇಕು.

# ಅಗ್ನಿಕಾರ್ಯಂ

ಬ್ರಹ್ಮಚಾರೀ ಸಂಧ್ಯೋಪಾಸನೋತ್ತರಂ ಆಚಮ್ಯ ಪ್ರಾಣಾನಾಯಮ್ಯ ದೇಶಕಾಲಾದ್ಯುಚ್ಚಾರ್ಯ ಶ್ರೀಪರಮೇಶ್ವರಪ್ರೀತ್ಯರ್ಥಂ ಪ್ರಾತರಗ್ನಿಕಾರ್ಯಂ (ಸಾಯಂಕಾಲೇ ತು ಸಾಯಮಗ್ನಿಕಾರ್ಯಂ) ಕರಿಷ್ಯ ಇತಿ ಸಂಕಲ್ಪ್ಯ । ಅಗ್ನಿಂ ಧ್ಯಾತ್ವಾ ಅಗ್ನೇಃ ಪರಿತಃ ತ್ರಿವಾರಂ ಸೋದಕೇನ ಪಾಣಿನಾ ಪರಿಸಮೂಹನಂ ತ್ರಿವಾರಂ ಪರ್ಯುಕ್ಷಣಂ ಚ ಕೃತ್ವಾ ಸಮಿಧಮಾದಾಯ ॥ ಅಗ್ನಯೇ ಸಮಿಧಮಿತ್ಯಸ್ಯ ಹಿರಣ್ಯಗರ್ಭೋಽಗ್ನಿರ್ಬೃಹತೀ ಸಮಿದಾಧಾನೇ ವಿನಿಯೋಗಃ । ಓಂ ಅಗ್ನಯೇ ಸಮಿಧಮಾಹಾರ್ಷಂ ಬೃಹತೇ ಜಾತವೇದಸೇ । ತಯಾತ್ವಮಗ್ನೇ ವರ್ಧಸ್ವ । ಸಮಿಧಾ ಬ್ರಹ್ಮಣಾವಯಂ ಸ್ವಾಹಾ ॥ ಇತಿ ಸಮಿಧಮಗ್ನೌ ಪ್ರಾಸ್ಯ । ಅಗ್ನಯ ಇದಂ ನ ಮಮೇತಿ ತ್ಯಾಗಮುಚ್ಚರೇತ್ ॥ ತತಃ ಪಾಣೀ ಪ್ರಕ್ಷಾಲ್ಯ

---

ಬೆಳಿಗ್ಗೆ ಸಂಜೆ ಎರಡು ಹೊತ್ತು ಬ್ರಹ್ಮಚಾರಿಯು ಸಂಧ್ಯಾವಂದನೆ ಮಾಡಿದ ಬಳಿಕ ಅಗ್ನಿಕಾರ್ಯವನ್ನು ತಪ್ಪದೆ ಮಾಡಬೇಕು. ಅಗ್ನಿಯ ಮುಂದೆ ಕುಳಿತು ಆಚಮನ ಪ್ರಾಣಾಯಾಮ ಗಳನ್ನು ಮಾಡಿ **"ಶ್ರೀಪರಮೇಶ್ವರಪ್ರೀತ್ಯರ್ಥಂ...."** ಎಂದು ಹೇಳಿ ನೀರು ಬಿಡಬೇಕು. ಬೆಳಿಗ್ಗೆ **"ಪ್ರಾತರಗ್ನಿಕಾರ್ಯಂ..."** ಎಂದೂ ಸಾಯಂಕಾಲ **"ಸಾಯಮಗ್ನಿಕಾರ್ಯಂ..."** ಎಂದೂ ಸಂಕಲ್ಪ ಮಾಡಬೇಕು. ಆಮೇಲೆ ಅಗ್ನಿಯ ಸುತ್ತಲೂ ಮೂರು ಬಾರಿ ನೀರನ್ನು ಪ್ರೋಕ್ಷಿಸಿ ಕೈಯಿಂದ ಉಜ್ಜಿ ಸ್ವಚ್ಛ ಮಾಡಬೇಕು. ಕೈಯಲ್ಲಿ ಸಮಿಧೆಯನ್ನು ಹಿಡಿದುಕೊಂಡು **"ಅಗ್ನಯೇ ಸಮಿಧ..."** ಎಂಬ ಮಂತ್ರವನ್ನು ಹೇಳಿ ಸ್ವಾಹಾ ಎಂದು ಅಗ್ನಿಗೆ ಸಮರ್ಪಿಸಬೇಕು. ಆಮೇಲೆ ಕೈ ತೊಳೆದು ಆ ಕೈಯಿಂದ **"ಓಂ ತೇಜಸಾಮಾ..."** ಎಂದು ಹೇಳುತ್ತಾ ಮೇಲಿನಿಂದ ಕೆಳಕ್ಕೆ ಎರಡು ಬಾರಿ ಮುಖವನ್ನು ತಿಕ್ಕಿಕೊಳ್ಳಬೇಕು. ಅಗ್ನಿಯ ಮುಂದೆ ಕೈಜೋಡಿಸಿ ನಿಂತು ಉಪಸ್ಥಾನವನ್ನು ಹೇಳಬೇಕು. ಆಮೇಲೆ ಆ ಅಗ್ನಿಯಿಂದಲೇ ಭಸ್ಮವನ್ನು ತೆಗೆದು **"ಮಾನಸ್ತೋಕೇ"** ಎಂಬ ಮಂತ್ರದಿಂದ ಭಸ್ಮಧಾರಣ ಮಾಡಬೇಕು. ಭಸ್ಮಧಾರಣವಿಧಿಯನ್ನು ಈ ಮೊದಲೇ ಹೇಳಲಾಗಿದೆ. ಆ ಮೇಲೆ ನಿಂತಲ್ಲಿಂದ ಬಗ್ಗಿ ಎರಡು ಅಂಗೈಗಳನ್ನು ಅಗ್ನಿಗೆ ಇದಿರಾಗಿ ನೆಲದಲ್ಲಿ ಹಿಡಿದು **"ಓಂ ಚಮೇ"** ಎಂಬ ಪ್ರಾರ್ಥನೆ ಮಾಡಬೇಕು. ಬೆಳಿಗ್ಗೆ **"ಪ್ರಾತರಗ್ನಿಕಾರ್ಯಹೋಮೇನ"** ಎಂದೂ ಸಂಜೆ **"ಸಾಯಮಗ್ನಿ-ಕಾರ್ಯಹೋಮೇನ"** ಎಂದೂ ಹೇಳಬೇಕು.

ಅಗ್ನೌ ಪ್ರತಾಪ್ಯ ಓಂ ತೇಜಸಾ ಮಾ ಸಮನಜ್ಮಿ ಇತಿ ಮುಖಮವಾಙ್ನಿಮೃಜ್ಯ ಪಾಣೀ ಪ್ರಕ್ಷಾಲ್ಯ ಏವಂ ದ್ವಿವಾರಂ ಕೃತ್ವಾ ಉಪಸ್ಥಾನಂ ಕುರ್ಯಾತ್ ॥ ಮಯಿ ಮೇಧಾಮಿತಿ ಷಣ್ಣಾಂ ಹಿರಣ್ಯಗರ್ಭಋಷಿಃ । ಪೂರ್ವೇಷಾಂ ತ್ರಯಾಣಾಂ ಅಗ್ನೀಂದ್ರಸೂರ್ಯಾ ದೇವತಾಃ ಉತ್ತರತ್ರಯಾಣಾಮಗ್ನಿರ್ದೇವತಾ । ಗಾಯತ್ರೀಛಂದಃ । ಅಗ್ನ್ಯುಪಸ್ಥಾನೇ ವಿನಿಯೋಗಃ ॥ ಓಂ ಮಯಿಮೇಧಾಂ ಮಯಿಪ್ರಜಾಂ ಮಯ್ಯಗ್ನಿಸ್ತೇಜೋ ದಧಾತು ॥ ಮಯಿ ಮೇಧಾಂ ಮಯಿ-ಪ್ರಜಾಂ ಮಯೀಂದ್ರ ಇಂದ್ರಿಯಂ ದಧಾತು ॥ ಮಯಿಮೇಧಾಂ ಮಯಿಪ್ರಜಾಂ ಮಯಿ ಸೂರ್ಯೋ ಭ್ರಾಜೋ ದಧಾತು ॥ ಯತ್ತೇ ಅಗ್ನೇ ತೇಜಸ್ತೇನಾಹಂ ತೇಜಸ್ವೀ ಭೂಯಾಸಂ ॥ ಯತ್ತೇ ಅಗ್ನೇ ವರ್ಚಸ್ತೇನಾಹಂ ವರ್ಚಸ್ವೀ ಭೂಯಾಸಂ ॥ ಯತ್ತೇ ಅಗ್ನೇ ಹರಸ್ತೇನಾಹಂ ಹರಸ್ವೀ ಭೂಯಾಸಂ ॥ ಇತ್ಯಗ್ನಿಮುಪಸ್ಥಾಯ ॥

ಮಾನಸ್ತೋಕ ಇತಿ ಮಂತ್ರೇಣ ವಿಭೂತಿಧಾರಣಂ ಕುರ್ಯಾತ್ ॥ ಓಂ ಚಮೇ ಸ್ವರಶ್ಚಮೇ ಯಜ್ಞೋಪಚತೇ ನಮಶ್ಚ ॥ ಯತ್ತೇನ್ಯೂನಂ ತಸ್ಮೈತ ಉಪಯತ್ತೇತಿರಿಕ್ತಂ ತಸ್ಮೈತೇ ನಮಃ ॥ ಅಗ್ನಯೇ ನಮಃ ಓಂ ಸ್ವಸ್ತಿ ॥ ಶ್ರದ್ಧಾಂ ಮೇಧಾಂ ಯಶಃ ಪ್ರಜ್ಞಾಂ ವಿದ್ಯಾಂ ಬುದ್ಧಿಂ ಶ್ರಿಯಂ ಬಲಂ ॥ ಆಯುಷ್ಯಂ ತೇಜ ಆರೋಗ್ಯಂ ದೇಹಿ ಮೇ ಹವ್ಯವಾಹನ ॥ ದೇಹಿ ಮೇ ಹವ್ಯವಾಹನೋಽನ್ನಮ ಇತಿ ॥ ಇತಿ ಸಂಪ್ರಾರ್ಥ್ಯ ॥ ಅನೇನ ಪ್ರಾತರಗ್ನಿಕಾರ್ಯಹೋಮೇನ ಭಗವಾನ್ ಶ್ರೀ ಅಗ್ನಿನಾರಾಯಣಃ ಪ್ರೀಯತಾಂ ॥ ಸಾಯಂ ತು ಸಾಯಮಗ್ನಿಕಾರ್ಯಹೋಮೇನೇತ್ಯೂಹಃ ॥ ಇತ್ಯಗ್ನಿಕಾರ್ಯಪ್ರಯೋಗಃ ॥

# ॥ ದೇವಪೂಜಾ ॥

॥ ಶ್ರೀ ಗಣೇಶಾಯ ನಮಃ ॥ ಆಚಮ್ಯ ಪ್ರಾಣಾಯಾಮಂ ಕೃತ್ವಾ ॥ ಶ್ರೀಮನ್ಮಹಾಗಣಾಧಿಪತಯೇ ನಮಃ । ಲಕ್ಷ್ಮೀನಾರಾಯಣಾಭ್ಯಾಂ ನಮಃ । ಉಮಾಮಹೇಶ್ವರಾಭ್ಯಾಂ ನಮಃ । ವಾಣೀಹಿರಣ್ಯಗರ್ಭಾಭ್ಯಾಂ ನಮಃ । ಶಚೀಪುರಂದರಾಭ್ಯಾಂ ನಮಃ । ಮಾತಾಪಿತೃಭ್ಯಾಂ ನಮಃ । ಇಷ್ಟದೇವತಾಭ್ಯೋ ನಮಃ । ಕುಲದೇವತಾಭ್ಯೋ ನಮಃ । ಗ್ರಾಮದೇವತಾಭ್ಯೋ ನಮಃ । ಸ್ಥಾನದೇವತಾಭ್ಯೋ ನಮಃ । ವಾಸ್ತುದೇವತಾಭ್ಯೋ ನಮಃ । ಆದಿತ್ಯಾದಿ ನವಗ್ರಹದೇವತಾಭ್ಯೋ ನಮಃ । ಸರ್ವೇಭ್ಯೋ ದೇವೇಭ್ಯೋ ನಮಃ । ಸರ್ವೇಭ್ಯೋ ಬ್ರಾಹ್ಮಣೇಭ್ಯೋ ನಮೋನಮಃ । ಏತತ್ಕರ್ಮಪ್ರಧಾನದೇವ ತಾಭ್ಯೋ ನಮಃ ॥ ಅವಿಘ್ನಮಸ್ತು ॥ ಸುಮುಖಶ್ಚೈಕದಂತಶ್ಚ ಕಪಿಲೋ ಗಜಕರ್ಣಕಃ । ಲಂಬೋದರಶ್ಚ ವಿಕಟೋ ವಿಘ್ನನಾಶೋ ಗಣಾಧಿಪಃ ॥ ಧೂಮ್ರ ಕೇತುರ್ಗಣಾಧ್ಯಕ್ಷೋ ಭಾಲಚಂದ್ರೋ ಗಜಾನನಃ । ದ್ವಾದಶೈತಾನಿ ನಾಮಾನಿ ಯಃ ಪಠೇತ್ ಶೃಣುಯಾದಪಿ । ವಿದ್ಯಾರಂಭೇ ವಿವಾಹೇ ಚ ಪ್ರವೇಶೇ ನಿರ್ಗಮೇ ತಥಾ । ಸಂಗ್ರಾಮೇ ಸಂಕಟೇ ಚೈವ ವಿಘ್ನಸ್ತಸ್ಯ ನ ಜಾಯತೇ ॥ ಶುಕ್ಲಾಂಬರ

---

ಕಾಮಾಸಕ್ತೋಽಥವಾ ಕ್ರುದ್ಧಃ ಶಾಲಿಗ್ರಾಮಶಿಲಾರ್ಚನಾತ್ । ಭಕ್ತ್ಯಾ ವಾ ಯದಿ ವಾಭಕ್ತ್ಯಾ ಕಲೌ ಮುಕ್ತಿಮವಾಪ್ನುಯಾತ್ ॥ ಸ್ಕಾಂದಪುರಾಣ ॥ ಯೋ ಮೋಹಾದಥವಾಲ ಸ್ಯಾದಕೃತ್ವಾ ದೇವತಾರ್ಚನಂ । ಭುಂಕ್ತೇ ಸ ಯಾತಿ ನರಕಂ ಸೂಕರೇಷ್ವಭಿಜಾಯತೇ ॥ ಕೂರ್ಮಪುರಾಣ ॥ ಕಾಮಕ್ರೋಧಗಳಿಗೆ ವಶನಾದವನಾದರೂ ಭಕ್ತಿಯಿಂದ ಅಥವಾ ಭಕ್ತಿಯಿಲ್ಲದೆ ಶಾಲಿಗ್ರಾಮ ಪೂಜೆಯನ್ನು ಮಾಡಿದವನು ಕಲಿಯುಗದಲ್ಲಿ ಮೋಕ್ಷವನ್ನು ಪಡೆಯುತ್ತಾನೆ. ಅಜ್ಞಾನದಿಂದ ಅಥವಾ ಆಲಸ್ಯದಿಂದ ದೇವರ ಪೂಜೆಯನ್ನು ಮಾಡದೆ ಆಹಾರ ಸ್ವೀಕಾರ ಮಾಡುವವನು ನರಕಕ್ಕೆ ಹೋಗುತ್ತಾನೆ ಅಲ್ಲದೆ ಜನ್ಮಾಂತರದಲ್ಲಿ ಹಂದಿಯಾಗಿ ಹುಟ್ಟುತ್ತಾನೆ. ಆದ್ದರಿಂದ ಪ್ರತಿಯೊಬ್ಬರೂ ತಪ್ಪದೆ ದೇವರ ಪೂಜೆಯನ್ನು ಮಾಡಲೇಬೇಕು.

ಸ್ನಾನಮಾಡಿ ಸಾಲಿಗ್ರಾಮವನ್ನು ಅಥವಾ ಇತರ ದೇವತಾ ಪ್ರತೀಕಗಳನ್ನು ಶುಚಿಯಾಗಿ ತೊಳೆದಿಟ್ಟು ದೇವಪೂಜೆಗೆ ಬೇಕಾದ ಇತರ ಸಾಮಗ್ರಿಗಳನ್ನೆಲ್ಲ ಬಳಿಯಲ್ಲಿ ಇರಿಸಿಕೊಂಡು, ಪದ್ಮಾಸನದಲ್ಲಿ ಕುಳಿತು ಆಚಮನ ಪ್ರಾಣಾಯಾಮಗಳನ್ನು ಮಾಡಬೇಕು. ಆ ಬಳಿಕ **"ಶ್ರೀಮನ್ಮಹಾಗಣಾಧಿಪತಯೇ ನಮಃ"** .....ಎಂದು ಮೊದಲಾಗಿ ಪ್ರತಿಸಲವೂ **"ನಮಃ"** ಎಂದು ಹೇಳಿದಾಗ ಅಕ್ಷತೆಗಳನ್ನು ದೇವರ ಮೇಲೆ ಸಮರ್ಪಿಸಬೇಕು. ಕೈಜೋಡಿಸಿ **"ಸುಮುಖ ಶ್ಚೈಕದಂತಶ್ಚ.... ಬ್ರಹ್ಮೇಶಾನ ಜನಾರ್ದನಾಃ"** ಎಂದು ಪ್ರಾರ್ಥಿಸಬೇಕು.

ಧರಂ ದೇವಂ ಶಶಿವರ್ಣಂ ಚತುರ್ಭುಜಂ । ಪ್ರಸನ್ನವದನಂ ಧ್ಯಾಯೇತ್ಸರ್ವ ವಿಘ್ನೋಪಶಾಂತಯೇ ॥ ಸರ್ವಮಂಗಲಮಾಂಗಲ್ಯೇ ಶಿವೇ ಸರ್ವಾರ್ಥಸಾಧಿಕೇ । ಶರಣ್ಯೇ ತ್ರ್ಯಂಬಕೇ ಗೌರಿ ನಾರಾಯಣಿ ನಮೋಸ್ತು ತೇ ॥ ಸರ್ವದಾ ಸರ್ವ ಕಾರ್ಯೇಷು ನಾಸ್ತಿ ತೇಷಾಮಮಂಗಲಂ । ಯೇಷಾಂ ಹೃದಿಸ್ಥೋ ಭಗವಾನ್ ಮಂಗಲಾಯತನಂ ಹರಿಃ ॥

ತದೇವ ಲಗ್ನಂ ಸುದಿನಂ ತದೇವ ತಾರಾಬಲಂ ಚಂದ್ರಬಲಂ ತದೇವ । ವಿದ್ಯಾಬಲಂ ದೈವಬಲಂ ತದೇವ ಲಕ್ಷ್ಮೀಪತೇ ತೇಽಂಘ್ರಿಯುಗಂ ಸ್ಮರಾಮಿ ॥ ಲಾಭಸ್ತೇಷಾಂ ಜಯಸ್ತೇಷಾಂ ಕುತಸ್ತೇಷಾಂ ಪರಾಜಯಃ । ಯೇಷಾಮಿಂ-ದೀವರಶ್ಯಾಮೋ ಹೃದಯಸ್ಥೋ ಜನಾರ್ದನಃ । ವಿನಾಯಕಂ ಗುರುಂ ಭಾನುಂ ಬ್ರಹ್ಮವಿಷ್ಣುಮಹೇಶ್ವರಾನ್ । ಸರಸ್ವತೀಂ ಪ್ರಣೌಮ್ಯಾದೌ ಸರ್ವಕಾರ್ಯಾರ್ಥ-ಸಿದ್ಧಯೇ । ಅಭೀಪ್ಸಿತಾರ್ಥಸಿದ್ಧ್ಯರ್ಥಂ ಪೂಜಿತೋ ಯಸ್ಸುರಾಸುರೈಃ । ಸರ್ವವಿಘ್ನಹರಸ್ತಸ್ಮೈ ಗಣಾಧಿಪತಯೇ ನಮಃ । ಸರ್ವೇಷ್ವಾರಬ್ಧಕಾರ್ಯೇಷು ತ್ರಯಸ್ತ್ರಿಭುವನೇಶ್ವರಾಃ । ದೇವಾ ದಿಶಂತು ನಸ್ಸಿದ್ಧಿಂ ಬ್ರಹ್ಮೇಶಾನಜನಾರ್ದನಾಃ ॥

ಶ್ರೀಮದ್ಭಗವತೋ ಮಹಾಪುರುಷಸ್ಯ ವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಬ್ರಹ್ಮಣೋ ದ್ವಿತೀಯೇ ಪರಾರ್ಧೇ ವಿಷ್ಣುಪದೇ ಶ್ರೀಶ್ವೇತವಾರಾಹಕಲ್ಪೇ ವೈವಸ್ವತಮನ್ವಂತರೇ ಅಷ್ಟಾವಿಂಶತಿತಮೇ ಯುಗಚತುಷ್ಕೇ ಕಲಿಯುಗೇ ಪ್ರಥಮ ಚರಣೇ ಜಂಬುದ್ವೀಪೇ ಭರತವರ್ಷೇ ದಕ್ಷಿಣಾಪಥೇ ರಾಮಕ್ಷೇತ್ರೇ ಬೌದ್ಧಾವತಾರೇ ದಂಡಕಾರಣ್ಯೇ ದೇಶೇ ಶಾಲಿವಾಹನಶಕೇ ಸಂಧೌ ವರ್ತಮಾನವ್ಯಾವಹಾರಿಕೇ, ... ನಾಮಸಂವತ್ಸರೇ, ... ಅಯನೇ, ... ಋತೌ ... ಮಾಸೇ ... ಪಕ್ಷೇ ... ತಿಥೌ, ... ವಾಸರೇ ... ದಿವಸನಕ್ಷತ್ರೇ, ... ಯೋಗೇ ... ಕರಣೇ, ... ಸ್ಥಿತೇ ವರ್ತಮಾನೇ ಚಂದ್ರೇ, ... ಸ್ಥಿತೇ ಶ್ರೀಸೂರ್ಯೇ, ... ಸ್ಥಿತೇ ದೇವಗುರೌ ಶೇಷೇಷು ಗ್ರಹೇಷು ಯಥಾಯಥಂ ರಾಶಿಸ್ಥಾನಸ್ಥಿತೇಷು ಸತ್ಸು ಶುಭನಾಮಯೋಗೇ ಶುಭಕರಣೇ ಏವಂಗುಣವಿಶೇಷಣವಿಶಿಷ್ಟಾಯಾಂ ಶುಭ (ಪುಣ್ಯ) ತಿಥೌ ಮಮ ಆತ್ಮನಃ ಶ್ರುತಿಸ್ಮೃತಿಪುರಾಣೋಕ್ತಫಲಪ್ರಾಪ್ತ್ಯರ್ಥಂ, ಅಸ್ಮಾಕಂ ಸಕುಟುಂಬಾನಾಂ ಸಪರಿವಾರಾಣಾಂ ದ್ವಿಪದಚತುಷ್ಪದಸಹಿತಾನಾಂ ಕ್ಷೇಮಸ್ಥೈರ್ಯಾಯುರಾರೋಗ್ಯೈಶ್ವರ್ಯಾಭಿವೃದ್ಧ್ಯರ್ಥಂ ಸಮಸ್ತಾಭ್ಯುದಯಾರ್ಥಂ ಚ ಶ್ರೀ ..... ದೇವತಾ ಪ್ರೀತ್ಯರ್ಥಂ ಯಥಾಮಿಲಿತೋಪಚಾರ ದ್ರವ್ಯೈಃ

---

ವರ್ತಮಾನ ವ್ಯಾವಹಾರಿಕೇ ಎಂಬಲ್ಲಿಂದ ಖಾಲಿಬಿಟ್ಟ ಸ್ಥಳಗಳಲ್ಲಿ ಆಯಾ ಸಂವತ್ಸರ ಅಯನ ಮುಂತಾದವುಗಳನ್ನು ಸೇರಿಸಿ ಪಠಿಸಬೇಕು. "ಕರಿಷ್ಯೇ" ಎಂದು ಸಂಕಲ್ಪ ಮಾಡುವಾಗ ಕೈಯಲ್ಲಿ ನೀರು ತೆಗೆದುಕೊಂಡು ಬಿಡಬೇಕು.

ಧ್ಯಾನಾವಾಹನಾದಿ ಷೋಡಶೋಪಚಾರಪೂಜಾಂ ಕರಿಷ್ಯೇ ॥ ಆಸನಾದಿ ವಿಧಿಂ ಶರೀರಶುದ್ಧ್ಯರ್ಥಂ ಪುರುಷಸೂಕ್ತನ್ಯಾಸಂ ಕಲಶಶಂಖಘಂಟಾದಿಪೂಜನಂ ಚ ಕರಿಷ್ಯೇ ॥ ಆದೌ ನಿರ್ವಿಘ್ನತಾಸಿದ್ಧ್ಯರ್ಥಂ ಮಹಾಗಣಪತಿಸ್ಮರಣಂ ಚ ಕರಿಷ್ಯೇ ॥

ಗಣಾನಾಂ ತ್ವಾ ಶೌನಕೋ ಗೃತ್ಸಮದೋ ಗಣಪತಿರ್ಜಗತೀ ॥ ಗಣಪತಿ ಸ್ಮರಣೇ ವಿನಿಯೋಗಃ ॥ ಓಂ ಗಣಾನಾಂ ತ್ವಾ ಗಣಪತಿಂ ಹವಾಮಹೇ ಕವಿಂ ಕವೀನಾಮುಪಮಶ್ರವಸ್ತಮಂ । ಜ್ಯೇಷ್ಠರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತ ಆನಃ ಶೃಣ್ವನ್ನೂತಿಭಿಃ ಸೀದಸಾದನಂ ॥ ವಕ್ರತುಂಡ ಮಹಾಕಾಯ ಕೋಟಿಸೂರ್ಯ ಸಮಪ್ರಭ ॥ ನಿರ್ವಿಘ್ನಂ ಕುರು ಮೇ ದೇವ ಸರ್ವಕಾರ್ಯೇಷು ಸರ್ವದಾ ॥ ಓಂ ಮಹಾಗಣಾಧಿಪತಯೇ ನಮೋ ನಮಃ ॥ ಆಸನವಿಧಿಃ ॥ ಪೃಥ್ವೀತಿ ಮಂತ್ರಸ್ಯ । ಮೇರುಪೃಷ್ಠಋಷಿಃ । ಕೂರ್ಮೋ ದೇವತಾ । ಸುತಲಂ ಛಂದಃ । ಆಸನೇ ವಿನಿಯೋಗಃ ॥ ಪೃಥ್ವಿ ತ್ವಯಾ ಧೃತಾ ಲೋಕಾ ದೇವಿ ತ್ವಂ ವಿಷ್ಣುನಾ ಧೃತಾ । ತ್ವಂ ಚ ಧಾರಯ ಮಾಂ ದೇವಿ ಪವಿತ್ರಂ ಕುರು ಚಾಸನಂ ॥ ಅಪಸರ್ಪಂತು ವಾಮದೇವೋ ಭೂತಾನ್ಯನುಷ್ಟುಪ್ । ಭೂತೋತ್ಸಾದನೇ ವಿನಿಯೋಗಃ । ಓಂ ಅಪಸರ್ಪಂತು ತೇ ಭೂತಾ ಯೇ ಭೂತಾ ಭೂಮಿಸಂಸ್ಥಿತಾಃ । ಯೇ ಭೂತಾ ವಿಘ್ನಕರ್ತಾರಃ ತೇ ಗಚ್ಛಂತು ಶಿವಾಜ್ಞಯಾ ॥ ಅಪಕ್ರಾಮಂತು ಭೂತಾನಿ ಪಿಶಾಚಾಃ ಸರ್ವತೋ ದಿಶಂ ॥ ಸರ್ವೇಷಾಮವಿರೋಧೇನ ಪೂಜಾ ಕರ್ಮ ಸಮಾರಭೇ ॥ ತೀಕ್ಷ್ಣದಂಷ್ಟ್ರ ಮಹಾಕಾಯ ಕಲ್ಪಾಂತದಹನೋಪಮ । ಭೈರವಾಯ ನಮಸ್ತುಭ್ಯಮನುಜ್ಞಾಂದಾತುಮರ್ಹಸಿ ॥ ಇತಿ ಭೈರವಂನಮಸ್ಕೃತ್ಯ । ವಾಮಪಾದತಲೇನ ಭೂಮಿಂ ತ್ರಿಃ ಪ್ರಹೃತ್ಯ ॥ ದೇವಾ ಆಯಾಂತು । ಯಾತು ಧಾನಾ ಅಪಯಾಂತು । ವಿಷ್ಣೋ ದೇವಯಜನಂ ರಕ್ಷಸ್ವ ॥ [2]ಭೂಮೌ

---

1. ಎಡಗಾಲಿನ ಹಿಮ್ಮಡಿಯಿಂದ ಮೂರು ಬಾರಿ ಭೂಮಿಯನ್ನು ಸ್ಪರ್ಶಿಸಬೇಕು.
2. ಅಂಗುಷ್ಠ ಮತ್ತು ತರ್ಜನೀ ಬೆರಳುಗಳನ್ನು ಅಗಲಿಸಿ ಮುಂಭಾಗದಲ್ಲಿ ನೆಲದಲ್ಲಿಟ್ಟು ಎಡಗೈಯಿಂದ ಗಂಟೆ ಬಾರಿಸುತ್ತ ಈ ಮಂತ್ರಗಳನ್ನು ಹೇಳಬೇಕು.

ಪ್ರಾದೇಶಂ ಕುರ್ಯಾತ್ ॥ ಯೇಭ್ಯೋ ಮಾತೇತ್ಯಸ್ಯ ಗಯಃಪ್ಲಾತೋ ವಿಶ್ವೇ ದೇವಾ ಜಗತೀ ಮನುಷ್ಯಗಂಧನಿವಾರಣೇ ವಿನಿಯೋಗಃ ॥ ಏವಾಪಿತ್ರ ಇತ್ಯಸ್ಯ ವಾಮದೇವೋ ಬೃಹಸ್ಪತಿರ್ವಿಶ್ವೇದೇವಾಸ್ತ್ರಿಷ್ಟುಪ್ । ಮನುಷ್ಯಗಂಧನಿವಾರಣೇ ವಿನಿಯೋಗಃ ॥ ಓಂ ಯೇಭ್ಯೋಮಾತಾಮಧುಮತ್ಪಿನ್ವತೇಪಯಃ ಪೀಯೂಷಂ ದ್ಯೌರದಿತಿರದ್ರಿಬರ್ಹಾಃ । ಉಕ್ಥಶುಷ್ಮಾನ್ ವೃಷಭರಾನ್ ಸ್ವಪ್ನಸಸ್ತಾಂ ಆದಿತ್ಯಾಂ ಅನುಮದಾ ಸ್ವಸ್ತಯೇ ॥ ಓಂ ಏವಾಪಿತ್ರೇವಿಶ್ವದೇವಾಯವೃಷ್ಣೇಯಜ್ಞೈರ್ವಿಧೇಮನಮಸಾಹವಿರ್ಭಿಃ । ಬೃಹಸ್ಪತೇ ಸುಪ್ರಜಾವೀರವಂತೋವಯಂ ಸ್ಯಾಮ ಪತಯೋ ರಯೀಣಾಂ ॥ ಸಹಸ್ರಶೀರ್ಷಾ ಷೋಳಶನಾರಾಯಣಃ ಪುರುಷೋಽನುಷ್ಟುಪ್ ಅಂತ್ಯಾತ್ರಿಷ್ಟುಪ್ । [3]ಸ್ವಾಂಗನ್ಯಾಸೇ ವಿನಿಯೋಗಃ ॥ ಓಂ ಸಹಸ್ರಶೀರ್ಷಾಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ । ಸ ಭೂಮಿಂ ವಿಶ್ವತೋ ವೃತ್ವಾತ್ಯತಿಷ್ಠದ್ದಶಾಂಗುಲಂ ॥ ವಾಮಕರಾಯ ನಮಃ ॥ ಓಂ ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚಭವ್ಯಂ । ಉತಾಮೃತತ್ವಸ್ಯೇಶಾ ನೋ ಯದನ್ನೇನಾತಿರೋಹತಿ ॥ ದಕ್ಷಿಣಕರಾಯ ನಮಃ ॥ ಓಂ ಏತಾವಾನಸ್ಯಮಹಿಮಾತೋಜ್ಯಾಯಾಂಶ್ಚಪೂರುಷಃ । ಪಾದೋಽಸ್ಯವಿಶ್ವಾಭೂತಾನಿತ್ರಿಪಾದಸ್ಯಾಮೃತಂ ದಿವಿ । ವಾಮಪಾದಾಯ ನಮಃ ॥ ಓಂ ತ್ರಿಪಾದೂರ್ಧ್ವ ಉದೈತ್ಪುರುಷಃ ಪಾದೋಽಸ್ಯೇಹಾಭವತ್ಪುನಃ । ತತೋವಿಷ್ವಙ್ವ್ಯಕ್ರಾಮತ್ಸಾಶನಾನಶನೇ ಅಭಿ । ದಕ್ಷಿಣಪಾದಾಯ ನಮಃ ॥ ಓಂ ತಸ್ಮಾದ್ವಿರಾಳಜಾಯತ ವಿರಾಜೋ ಅಧಿ ಪೂರುಷಃ । ಸಜಾತೋ ಅತ್ಯರಿಚ್ಯತ ಪಶ್ಚಾದ್ಭೂಮಿಮಥೋಪುರಃ । ವಾಮಜಾನವೇ ನಮಃ ॥ ಓಂ ಯತ್ಪುರುಷೇಣಹವಿಷಾದೇವಾಯಜ್ಞಮತನ್ವತ । ವಸಂತೋ ಅಸ್ಯಾಸೀದಾಜ್ಯಂ ಗ್ರೀಷ್ಮ ಇಧ್ಮಃ ಶರದ್ಧವಿಃ ॥ ದಕ್ಷಿಣಜಾನವೇ ನಮಃ ॥ ಓಂ ತಂ ಯಜ್ಞಂ ಬರ್ಹಿಷಿಪ್ರೌಕ್ಷನ್ ಪುರುಷಂ ಜಾತಮಗ್ರತಃ । ತೇನ ದೇವಾ

3. ಅಂಗನ್ಯಾಸದಲ್ಲಿ ಒಂದೊಂದೇ ಮಂತ್ರವನ್ನು ಹೇಳುತ್ತ ಆಯಾ ಅವಯವವನ್ನು ಕೈಯಿಂದ ಸ್ಪರ್ಶಿಸಬೇಕು.

ಅಯಜಂತ ಸಾಧ್ಯಾಋಷಯಶ್ಚಯೇ । ವಾಮಕಟ್ಯೈ ನಮಃ ॥ ಓಂ ತಸ್ಮಾದ್ಯಜ್ಞಾತ್ಸರ್ವಹುತಃ ಸಂಭೃತಂ ಪೃಷದಾಜ್ಯಂ । ಪಶೂನ್‌ತಾಂಶ್ಚಕ್ರೇ ವಾಯವ್ಯಾನಾರಣ್ಯಾನ್ ಗ್ರಾಮ್ಯಾಶ್ಚಯೇ ॥ ದಕ್ಷಿಣಕಟ್ಯೈ ನಮಃ ॥ ಓಂ ತಸ್ಮಾದ್ಯಜ್ಞಾತ್ಸರ್ವಹುತಋಚಃ ಸಾಮಾನಿ ಜಜ್ಞಿರೇ । ಛಂದಾಂಸಿ ಜಜ್ಞಿರೇ ತಸ್ಮಾದ್ಯಜುಸ್ತಸ್ಮಾದಜಾಯತ ॥ ನಾಭ್ಯೈ ನಮಃ ॥ ಓಂ ತಸ್ಮಾದಶ್ವಾ ಅಜಾಯಂತ ಯೇಕೇಚೋಭಯಾದತಃ । ಗಾವೋಹಜಜ್ಞಿರೇ ತಸ್ಮಾತ್ತಸ್ಮಾಜ್ಜಾತಾ ಅಜಾವಯಃ ॥ ಹೃದಯಾಯ ನಮಃ ॥ ಓಂ ಯತ್ಪುರುಷಂ ವ್ಯದಧುಃ ಕತಿಧಾವ್ಯಕಲ್ಪಯನ್ । ಮುಖಂಕಿಮಸ್ಯಕೌ ಬಾಹೂಕಾ ಊರೂಪಾದಾ ಉಚ್ಯೇತೇ ॥ ಕಂಠಾಯ ನಮಃ ॥ ಓಂ ಬ್ರಾಹ್ಮಣೋಽಸ್ಯಮುಖಮಾಸೀದ್ಬಾಹೂರಾಜನ್ಯಃ ಕೃತಃ । ಊರೂತದಸ್ಯಯದ್ವೈಶ್ಯಃ ಪದ್ಭ್ಯಾಂ ಶೂದ್ರೋ ಅಜಾಯತ ॥ ವಾಮಭುಜಾಯ ನಮಃ ॥ ಓಂ ಚಂದ್ರಮಾಮನಸೋ ಜಾತಶ್ಚಕ್ಷೋಃ ಸೂರ್ಯೋ ಅಜಾಯತ । ಮುಖಾದಿಂದ್ರಶ್ಚಾಗ್ನಿಶ್ಚ ಪ್ರಾಣಾದ್ವಾಯುರಜಾಯತ ॥ ದಕ್ಷಿಣಭುಜಾಯ ನಮಃ ॥ ಓಂ ನಾಭ್ಯಾ ಆಸೀದಂತರಿಕ್ಷಂ ಶೀರ್ಷ್ಣೋದ್ಯೌಃ ಸಮವರ್ತತ । ಪದ್ಭ್ಯಾಂಭೂಮಿರ್ದಿಶಃ ಶ್ರೋತ್ರಾತ್ತಥಾ ಲೋಕಾಂ ಅಕಲ್ಪಯನ್ ॥ ಮುಖಾಯ ನಮಃ ॥ ಓಂ ಸಪ್ತಾಸ್ಯಾಸನ್ಪರಿಧಯಃ ತ್ರಿಃ ಸಪ್ತಸಮಿಧಃ ಕೃತಾಃ । ದೇವಾ ಯದ್ಯಜ್ಞಂ ತನ್ವಾನಾ ಅಬಧ್ನನ್ಪುರುಷಂ ಪಶುಂ ॥ ನೇತ್ರಾಭ್ಯಾಂ ನಮಃ ॥ ಓಂ ಯಜ್ಞೇನ ಯಜ್ಞಮಯಜಂತದೇವಾಸ್ತಾನಿಧರ್ಮಾಣಿ ಪ್ರಥಮಾನ್ಯಾಸನ್ । ತೇಹನಾಕಂ ಮಹಿಮಾನಃ ಸಚಂತಯತ್ರಪೂರ್ವೇಸಾಧ್ಯಾಃ ಸಂತಿದೇವಾಃ ॥ ಮೂರ್ಧ್ನೇ ನಮಃ ॥ ಪಂಚಾಂಗನ್ಯಾಸಃ ॥ ಓಂ ಬ್ರಾಹ್ಮಣೋಽಸ್ಯಮುಖ ... ॥ ಹೃದಯಾಯ ನಮಃ ॥ ಓಂ ಚಂದ್ರಮಾಮನಸೋ ... ॥ ಶಿರಸೇ ಸ್ವಾಹಾ ॥ ಓಂ ನಾಭ್ಯಾ ಆಸೀದಂತರಿಕ್ಷಂ ... ॥ ಶಿಖಾಯೈ ವಷಟ್ ॥ ಓಂ ಸಪ್ತಾಸ್ಯಾನ್ ಪರಿಧಯಃ ... ॥ ಕವಚಾಯ ಹುಂ ॥ ಓಂ ಯಜ್ಞೇನಯಜ್ಞಮಯಜಂತ ... ॥ ಅಸ್ತ್ರಾಯಫಟ್ ॥ ಇತಿ ದಿಗ್ಬಂಧಃ ॥ ಕಲಶಾದಿಪೂಜನಂ ॥ ಕಲಶಸ್ಯ ಮುಖೇ ವಿಷ್ಣುಃ ಕಂಠೇ ರುದ್ರಃ

**ಸಮಾಶ್ರಿತಃ । ಮೂಲೇ ತತ್ರ ಸ್ಥಿತೋ ಬ್ರಹ್ಮಾ ಮಧ್ಯೇ ಮಾತೃಗಣಾಃ ಸ್ಮೃತಾಃ ॥ ಕುಕ್ಷೌ ತು ಸಾಗರಾಃ ಸರ್ವೇ ಸಪ್ತದ್ವೀಪಾ ವಸುಂಧರಾ । ಋಗ್ವೇದೋಽಥ ಯಜುರ್ವೇದಃ ಸಾಮವೇದೋಹ್ಯಥರ್ವಣಃ । ಅಂಗೈಶ್ಚ ಸಹಿತಾಃ ಸರ್ವೇ ಕಲಶಂ ತು ಸಮಾಶ್ರಿತಾಃ ॥ ಅತ್ರ ಗಾಯತ್ರೀ ಸಾವಿತ್ರೀ ಶಾಂತಿಃ ಪುಷ್ಟಿಕರೀ ತಥಾ । ಆಯಾಂತು ದೇವಪೂಜಾರ್ಥಂ ದುರಿತಕ್ಷಯಕಾರಕಾಃ ॥ ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ । ನರ್ಮದೇ ಸಿಂಧು ಕಾವೇರಿ ಜಲೇಽಸ್ಮಿನ್ ಸನ್ನಿಧಿಂ ಕುರು ॥ ಕಲಶೇ ಗಂಗಾತೀರ್ಥಾನ್ಯಾವಾಹಯಾಮಿ ॥ ಕಲಶದೇವತಾಭ್ಯೋ ನಮಃ ಸರ್ವೋಪಚಾರಾರ್ಥೇ ಗಂಧಾಕ್ಷತಪುಷ್ಪಂ ಸಮರ್ಪಯಾಮಿ ॥ ಧೇನುಮುದ್ರಾಂ ಪ್ರದರ್ಶ್ಯ ॥ ಪ್ರಕ್ಷಾಲಿತಂ ಶಂಖಂ ಪ್ರಣವೇನಾಪೂರ್ಯ ॥ ಓಂ ಶಂಖಾದೌ ಚಂದ್ರದೈವತ್ಯಂ ಕುಕ್ಷೌ ವರುಣದೇವತಾ ॥ ಪೃಷ್ಠೇ ಪ್ರಜಾಪತಿಂ ವಿದ್ಯಾದಗ್ರೇ ಗಂಗಾಸರಸ್ವತೀ ॥ ತ್ರೈಲೋಕ್ಯೇ ಯಾನಿ ತೀರ್ಥಾನಿ ವಾಸುದೇವಸ್ಯ ಚಾಜ್ಞಯಾ ॥ ಶಂಖೇ ತಿಷ್ಠಂತಿ ವಿಪ್ರೇಂದ್ರ ತಸ್ಮಾಚ್ಛಂಖಂ ಪ್ರಪೂಜಯೇತ್ ॥ ತ್ವಂ ಪುರಾ ಸಾಗರೋತ್ಪನ್ನೋ ವಿಷ್ಣುನಾ ವಿಧೃತಃ ಕರೇ । ನಮಿತಃ ಸರ್ವದೇವೈಶ್ಚ ಪಾಂಚಜನ್ಯ ನಮೋಸ್ತುತೇ ॥ ಓಂ ಪಾಂಚಜನ್ಯಾಯ ವಿದ್ಮಹೇ ಪಾವಮಾನಾಯ ಧೀಮಹಿ । ತನ್ನಃ ಶಂಖಃ ಪ್ರಚೋದಯಾತ್ ॥ ಶಂಖದೇವತಾಭ್ಯೋ ನಮಃ ಸರ್ವೋಪಚಾರಾರ್ಥೇ ಚಂದನಂ ಸಮರ್ಪಯಾಮಿ ॥ ಶಂಖಮುದ್ರಾಂ ಪ್ರದರ್ಶ್ಯ ॥ ಆಗಮಾರ್ಥಂ ತು ದೇವಾನಾಂ ಗಮನಾರ್ಥಂ**

---

ಕಲಶದ ನಾಲ್ಕೂ ಬದಿಗಳಲ್ಲಿ ಗಂಧವನ್ನು ಹಚ್ಚಿ ಹೂಗಳನ್ನಿಟ್ಟು ಕಲಶಪೂಜೆಯನ್ನು ಮಾಡುವುದು. ಶಂಖವನ್ನು ತೊಳೆದು ಓಂಕಾರವನ್ನು ಉಚ್ಚರಿಸುತ್ತ ನೀರನ್ನು ತುಂಬಿಸಬೇಕು. ಘಂಟೆಯನ್ನು ಒಮ್ಮೆ ಬಾರಿಸಿ ಘಂಟಾಪೂಜೆಯನ್ನು ಮಾಡುವುದು. ಎರಡೂ ಕೈಗಳನ್ನು ಅಭಿಮುಖವಾಗಿ ಒಂದರೊಡನಿನ್ನೊಂದನ್ನು ಒತ್ತಿ ಹಿಡಿದು ಒಂದರ ತರ್ಜನೀ ಅನಾಮಿಕೆಗಳನ್ನು ಇನ್ನೊಂದರ ಮಧ್ಯಮಾಕನಿಷ್ಠಿಕೆಗಳೊಂದಿಗೆ ಸೇರಿಸಿದಾಗ ಧೇನುಮುದ್ರೆಯಾಗುವುದು. ಬಲಗೈಯ ಮುಷ್ಟಿಯಿಂದ ಎಡ ಉಂಗುಷ್ಠವನ್ನು ಬಿಗಿಯಾಗಿ ಹಿಡಿದು ಎಡಗೈಯ ಬೆರಳುಗಳನ್ನು ಮುಂದೆ ಚಾಚಿ, ಚಾಚಿದ ಬಲಗೈಯ ಉಂಗುಷ್ಠದೊಂದಿಗೆ ಸೇರಿಸುವಾಗ ಶಂಖಮುದ್ರೆಯಾಗುವುದು. "ಅಪವಿತ್ರಃ..." ಎಂದು ಹೇಳುತ್ತ ಶಂಖೋದಕದಿಂದ ತನ್ನನ್ನೂ ಪೂಜಾಸಾಮಗ್ರಿಗಳನ್ನೂ ಪ್ರೋಕ್ಷಿಸಬೇಕು.

ತು ರಕ್ಷಸಾಂ । ಕುರ್ವೇ ಘಂಟಾರವಂ ತತ್ರ ದೇವತಾಹ್ವಾನಲಕ್ಷಣಂ ॥ ಘಂಟಾಯೈ ನಮಃ ಸರ್ವೋಪಚಾರಾರ್ಥೇ ಗಂಧಾಕ್ಷತಪುಷ್ಪಂ ಸಮರ್ಪಯಾಮಿ ॥ ಓಂ ದಿವೇದಿವೇ ಸದೃಶೀರನ್ಯಮರ್ಧಂ ಕೃಷ್ಣಾ ಅಸೇಧದಪಸದ್ಮನೋಜಾಃ । ಅಹಂ ದಾಸಾವೃಷಭೋವಸ್ನಯಂತೋದವ್ರಜೇ ವರ್ಚಿನಂ ಶಂಬರಂ ಚ ॥ ದೀಪ ದೇವತಾಭ್ಯೋ ನಮಃ ಸರ್ವೋಪಚಾರಾರ್ಥೇ ಗಂಧಾಕ್ಷತಪುಷ್ಪಂ ಸಮರ್ಪಯಾಮಿ ॥ ಕಲಶಶಂಖೋದಕೇನ ॥ ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋಪಿ ವಾ । ಯಃ ಸ್ಮರೇತ್ಪುಂಡರೀಕಾಕ್ಷಂ ಸ ಬಾಹ್ಯಾಭ್ಯಂತರಂ ಶುಚಿಃ ॥ ಆತ್ಮಾನಂ ಪ್ರೋಕ್ಷ್ಯ ಪೂಜಾದ್ರವ್ಯಾಣಿ ಚ ಸಂಪ್ರೋಕ್ಷೇತ್॥

ಅಥ ಧ್ಯಾನಂ ॥ ಅಂಜಲೌ ಪುಷ್ಪಂ ಗೃಹೀತ್ವಾ ॥ ಶಾಂತಾಕಾರಂ ಭುಜಗಶಯನಂ ಪದ್ಮನಾಭಂ ಸುರೇಶಂ । ವಿಶ್ವಾಧಾರಂ ಗಗನಸದೃಶಂ ಮೇಘವರ್ಣಂ ಶುಭಾಂಗಂ ॥ ಲಕ್ಷ್ಮೀಕಾಂತಂ ಕಮಲನಯನಂ ಯೋಗಿಭಿರ್ಧ್ಯಾನಗಮ್ಯಂ । ವಂದೇ ವಿಷ್ಣುಂ ಭವಭಯಹರಂ ಸರ್ವಲೋಕೈಕನಾಥಂ ॥ ಧ್ಯಾಯೇನ್ನಿತ್ಯಂ ಮಹೇಶಂ ರಜತಗಿರಿನಿಭಂ ಚಾರುಚಂದ್ರಾವತಂಸಂ ರತ್ನಾಕಲ್ಪೋಜ್ವಲಾಂಗಂ ಪರಶುಮೃಗವರಾಭೀತಿಹಸ್ತಂ ಪ್ರಸನ್ನಂ ॥ ಪದ್ಮಾಸೀನಂ ಸಮಂತಾತ್ ಸ್ತುತಮಮರಗಣೈಃ ವ್ಯಾಘ್ರಕೃತ್ತಿಂ ವಸಾನಂ ವಿಶ್ವಾದ್ಯಂ ವಿಶ್ವವಂದ್ಯಂ ನಿಖಿಲಭಯಹರಂ ಪಂಚವಕ್ತ್ರಂ ತ್ರಿನೇತ್ರಂ ॥ ಗಜವದನಮಚಿಂತ್ಯಂ ತೀಕ್ಷ್ಣದಂಷ್ಟ್ರಂ ತ್ರಿನೇತ್ರಂ ಬೃಹದುದರಮಶೇಷಂ ಭೂತಿರಾಜಂ ಪುರಾಣಂ ॥ ಅಮರವರಸುಪೂಜ್ಯಂ ರಕ್ತವರ್ಣಂ ಸುರೇಶಂ ಪಶುಪತಿಸುತಮೀಶಂ ವಿಘ್ನರಾಜಂ ನಮಾಮಿ ॥ ಸಶಂಖಚಕ್ರಂ ರವಿಮಂಡಲೇ ಸ್ಥಿತಂ ಕುಶೇಶಯಾಕ್ರಾಂತಮನಂತಮಚ್ಯುತಂ । ಭಜಾಮಿ ಬುದ್ಧ್ಯಾ ತಪನೀಯಮೂರ್ತಿಂ ಸುರೋತ್ತಮಂ ಚಿತ್ರವಿಭೂಷಣೋಜ್ವಲಂ ॥ ವಿದ್ಯುದ್ದಾಮಸಮಪ್ರಭಾಂ ಮೃಗಪತಿಸ್ಕಂಧಸ್ಥಿತಾಂ ಭೀಷಣಾಂ

---

ಯಾವ ದೇವರ ಪೂಜೆಯನ್ನು ಮಾಡಲಿದೆಯೋ ಆ ದೇವರ ಧ್ಯಾನಶ್ಲೋಕವನ್ನು ಹೇಳಬೇಕು. ಎರಡೂ ಕೈಗಳಲ್ಲಿ ತುಂಬ ಹೂಗಳನ್ನು ಹಿಡಿದು ಪುಷ್ಪಾಂಜಲಿಯನ್ನು ಅರ್ಪಿಸಬೇಕು. ಶಾಲಿಗ್ರಾಮಪೂಜೆಯಲ್ಲಿ ಆವಾಹನ ಮತ್ತು ವಿಸರ್ಜನೆಗಳು ಇರುವುದಿಲ್ಲ.

ಕನ್ಯಾಭಿಃ ಕರವಾಲಖೇಟವಿಲಸದ್ಧಸ್ತಾಭಿರಾಸೇವಿತಾಂ ॥ ಹಸ್ತೈಶ್ಚಕ್ರದರಾಲಿ ಖೇಟವಿಶಿಖಾಂ ಚಾಪಂ ಗುಣಂ ತರ್ಜನೀಂ ಬಿಭ್ರಾಣಾಮನಲಾತ್ಮಿಕಾಂ ಶಶಿಧರಾಂ ದುರ್ಗಾಂ ತ್ರಿನೇತ್ರಾಂ ಭಜೇ ॥ ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ । ಇತಿ ತತ್ತದ್ದೇವತಾಧ್ಯಾನಂ ॥ ಓಂ ಸಹಸ್ರಶೀರ್ಷಾ ... ॥ ಆಗಚ್ಛ ದೇವದೇವೇಶ ತೇಜೋರಾಶೇ ಜಗತ್ಪತೇ । ಕ್ರಿಯಮಾಣಾಂ ಮಯಾ ಪೂಜಾಂ ಗೃಹಾಣ ಸುರಸತ್ತಮ ॥ ಶ್ರೀ ಅಮುಕದೇವತಾಭ್ಯೋ ನಮಃ ಆವಾಹನಾರ್ಥೇ ಪುಷ್ಪಾಂಜಲಿಂ ಸಮರ್ಪಯಾಮಿ ॥ ಓಂ ಪುರುಷಏವೇದಂ ... ॥ ನಾನಾರತ್ನಸಮಾಯುಕ್ತಂ ಕಾರ್ತಸ್ವರವಿಭೂಷಿತಂ । ಆಸನಂ ದೇವದೇವೇಶ ಪ್ರೀತ್ಯರ್ಥಂ ಪ್ರತಿಗೃಹ್ಯತಾಂ ॥ ಶ್ರೀ ಅಮುಕದೇವತಾಭ್ಯೋ ನಮಃ ಆಸನಾರ್ಥೇ ತುಲಸೀಪತ್ರಂ ಸಮರ್ಪಯಾಮಿ ॥ ಓಂ ಏತಾವಾನಸ್ಯ ... ॥ ಪಾದ್ಯಂ ಗೃಹಾಣ ದೇವೇಶ ಸರ್ವಕ್ಷೇಮಸಮರ್ಥ ಭೋ । ಭಕ್ತ್ಯಾ ಸಮರ್ಪಿತಂ ದೇವ ಲೋಕನಾಥ ನಮೋಽಸ್ತು ತೇ ॥ ಶ್ರೀ ಅಮುಕ ... ಪಾದ್ಯಂ ಸಮರ್ಪಯಾಮಿ ॥ ಓಂ ತ್ರಿಪಾದೂರ್ಧ್ವ ಉದೈ ... ॥ ನಮಸ್ತೇ ದೇವದೇವೇಶ ನಮಸ್ತೇ ಧರಣೀಧರ ॥ ನಮಸ್ತೇ ಜಗದಾಧಾರ ಅರ್ಘ್ಯಂ ನಃ ಪ್ರತಿಗೃಹ್ಯತಾಂ ॥ ಶ್ರೀ ಅಮುಕ ... ಅರ್ಘ್ಯಂ ಸಮರ್ಪಯಾಮಿ ॥ ಓಂ ತಸ್ಮಾದ್ವಿರಾಳ ... ॥ ಕರ್ಪೂರವಾಸಿತಂ ತೋಯಂ ಮಂದಾಕಿನ್ಯಾಃ ಸಮಾಹೃತಂ । ಆಚಮ್ಯತಾಂ ಜಗನ್ನಾಥ ಮಯಾ ದತ್ತಂ ಹಿ ಭಕ್ತಿತಃ ॥ ಶ್ರೀ ಅಮುಕ ... । ಆಚಮನೀಯಂ ... । ಓಂ ಯತ್ಪುರುಷೇಣ ಹವಿಷಾ ... ॥ ಗಂಗಾಸರಸ್ವತೀ ರೇವಾ ಪಯೋಷ್ಣೀ ನರ್ಮದಾ ಜಲೈಃ । ಸ್ನಾಪಿತೋಽಸಿ ಮಯಾ ದೇವ ತಥಾ ಶಾಂತಿಂ ಕುರುಷ್ವ ಮೇ ॥ ಶ್ರೀ ಅಮುಕ ... ॥ ಸ್ನಾನೀಯಂ ... ॥ ಪಂಚಾಮೃತೈಃ ಸ್ನಪಯಿಷ್ಯೇ ॥ ಓಂ ಆಪ್ಯಾಯಸ್ವಸಮೇತುತೇ ವಿಶ್ವತಃ ಸೋಮವೃಷ್ಣ್ಯಂ । ಭವಾವಾಜಸ್ಯ ಸಂಗಥೇ ॥ ಕಾಮಧೇನೋಃ ಸಮುದ್ಭೂತಂ ದೇವರ್ಷಿಪಿತೃತೃಪ್ತಿದಂ । ಪಯೋ ದದಾಮಿ ದೇವೇಶ ಸ್ನಾನಾರ್ಥಂ ಪ್ರತಿಗೃಹ್ಯತಾಂ ॥ ಶ್ರೀ ಅಮುಕ ... ॥

ಸ್ನಾನಾರ್ಥೇ ಪಯಃ ಸ್ನಾನಂ ... ॥ ಪಯಃ ಸ್ನಾನಾನಾನಂತರಂ ಶುದ್ಧೋದಕ ಸ್ನಾನಂ ಸ .....॥ ಶುದ್ಧೋದಕಸ್ನಾನಾನಂತರಂ ಆಚಮನೀಯಂ ಸ .....॥ ಸಕಲಪೂಜಾರ್ಥೇ ಗಂಧಾಕ್ಷತಪುಷ್ಪಾಣಿ ಸಮರ್ಪಯಾಮಿ ॥ ಓಂ ದಧಿಕಾವ್ಣೋ ಅಕಾರಿಷಂ ಜಿಷ್ಣೋರಶ್ವಸ್ಯವಾಜಿನಃ । ಸುರಭಿನೋಮುಖಾಕರತ್ಪ್ರಣ ಆಯೂಂಷಿತಾರಿಷತ್ ॥ ಚಂದ್ರಮಂಡಲಸಂಕಾಶಂ ಸರ್ವದೇವಪ್ರಿಯಂ ದಧಿ । ಸ್ನಾನಾರ್ಥಂ ತೇ ಮಯಾ ದತ್ತಂ ಪ್ರೀತ್ಯರ್ಥಂ ಪ್ರತಿಗೃಹ್ಯತಾಂ ॥ ಶ್ರೀ ಅಮುಕ ....॥ ದಧಿಸ್ನಾನಂ ಸ .....॥ ದಧಿಸ್ನಾನಾನಂತರಂ ಶುದ್ಧೋದಕ ....॥ ಶುದ್ಧೋದಕ ....॥ ಸಕಲ .....॥ ಓಂ ಘೃತಂ ಮಿಮಿಕ್ಷೇ ಘೃತಮಸ್ಯಯೋನಿರ್ಘೃತೇಶ್ರಿತೋ ಘೃತಮ್ವಸ್ಯಧಾಮ । ಅನುಷ್ವದಮಾವಹಮಾದಯಸ್ವಸ್ವಾಹಾಕೃತಂವೃಷಭವಕ್ಷಿ ಹವ್ಯಂ ॥ ಆಜ್ಯಂ ಸುರಾಣಾಮಾಹಾರ ಆಜ್ಯಂ ಯಜ್ಞೇ ಪ್ರತಿಷ್ಠಿತಂ । ಆಜ್ಯಂ ಪವಿತ್ರಂ ಪರಮಂ ಸ್ನಾನಾರ್ಥಂ ಪ್ರತಿಗೃಹ್ಯತಾಂ ॥ ಶ್ರೀ ಅಮುಕ ...॥ ಘೃತಸ್ನಾನಂ ಸ.....॥ ಘೃತಸ್ನಾನಾ.....॥ ಶುದ್ಧೋದಕ.....ಸಕಲ.....॥ ಓಂ ಮಧುವಾತಾಋತಾಯತೇ ಮಧುಕ್ಷರಂತಿ ಸಿಂಧವಃ । ಮಾಧ್ವೀರ್ನಃ ಸಂತ್ವೋಷಧೀಃ । ಮಧುನಕ್ತಮುತೋಷಸೋಮಧುಮತ್ಪಾರ್ಥಿವಂ ರಜಃ । ಮಧುದ್ಯೌರಸ್ತುನಃ ಪಿತಾ । ಮಧುಮಾನ್ನೋವನಸ್ಪತಿರ್ಮಧುಮಾ ಅಸ್ತು ಸೂರ್ಯಃ ಮಾಧ್ವೀರ್ಗಾವೋ ಭವಂತು ನಃ ॥ ಸರ್ವೌಷಧಿಸಮುತ್ಪನ್ನಂ ಪೀಯೂಷಸಸದೃಶಂ ಮಧು । ಸ್ನಾನಾರ್ಥಂ ತೇ ಪ್ರಯಚ್ಛಾಮಿ ಗೃಹಾಣ ಪರಮೇಶ್ವರ ॥ ಶ್ರೀ ಅಮುಕ ...॥ ಮಧುಸ್ನಾನ ....। ಮಧುಸ್ನಾನಾನಂ ...॥ ಶುದ್ಧೋದಕ ... ॥ ಸಕಲ ... ॥ ಓಂ ಸ್ವಾದುಃ ಪವಸ್ವದಿವ್ಯಾಯಜನ್ಮನೇ

---

ಪಂಚಾಮೃತಾಭಿಷೇಕ ಮಾಡುವಾಗ ಮುಂಭಾಗದಲ್ಲಿ ತೀರ್ಥಕ್ಕಾಗಿ ಎರಡು ಪಾತ್ರೆಗಳನ್ನು ಇಟ್ಟುಕೊಳ್ಳಬೇಕು. ಒಂದರಲ್ಲಿ ಉಳಿದ ಪಂಚಾಮೃತವನ್ನೂ, ಇನ್ನೊಂದರಲ್ಲಿ ಶುದ್ಧೋದಕವನ್ನೂ ಸಂಗ್ರಹಿಸಬೇಕು. ಗಂಟೆ ಬಾರಿಸುತ್ತ ಅಭಿಷೇಕ ಮಾಡಬೇಕು. ಪ್ರತಿಯೊಂದು ಸ್ನಾನದ ಅಂತ್ಯದಲ್ಲಿ ಶುದ್ಧೋದಕ, ಆಚಮನೀಯ, ಗಂಧಾಕ್ಷತಪುಷ್ಪಗಳನ್ನೂ ಸಮರ್ಪಿಸಬೇಕು.

ಸ್ವಾದುರಿಂದ್ರಾಯಸುಹವೀತುನಾಮ್ನೇ । ಸ್ವಾದುರ್ಮಿತ್ರಾಯವರುಣಾಯ ವಾಯವೇ ಬೃಹಸ್ಪತಯೇಮಧುಮಾಂ ಅದಾಭ್ಯಃ ॥ ಇ ಕ್ಷುದಂಡಸಮುದ್ಭೂತ ದಿವ್ಯಶರ್ಕರಯಾ ಹರಿಂ । ಸ್ನಾಪಯಾಮಿ ಸದಾಭಕ್ತ್ಯಾ ಪ್ರೀತೋಭವ ಸುರೇಶ್ವರ ॥ ಶ್ರೀ ಅಮುಕ ... ॥ ಶರ್ಕರಾಸ್ನಾನಂ ... ॥ ಶರ್ಕರಾ ... ॥ ಶುದ್ಧೋದಕ ... ॥ ಸಕಲ ... ॥ ಓಂ ಗಂಧದ್ವಾರಾಂ ದುರಾಧರ್ಷಾಂ ನಿತ್ಯಪುಷ್ಟಾಂ ಕರೀಷಿಣೀಂ । ಈಶ್ವರೀಂ ಸರ್ವಭೂತಾನಾಂ ತಾಮಿಹೋಪಹ್ವಯೇಶ್ರಿಯಂ ॥ ಕರ್ಪೂರೈಲಾಸಮಾಯುಕ್ತಂ ಸುಗಂಧಿದ್ರವ್ಯಸಂಯುತಂ । ಗಂಧೋದಕಂ ಮಯಾ ದತ್ತಂ ಸ್ನಾನಾರ್ಥಂ ಪ್ರತಿಗೃಹ್ಯತಾಂ ॥ ಶ್ರೀ ಅಮುಕ... । ಗಂಧೋದಕಸ್ನಾನಂ ಸ ... ॥ ಗಂಧೋ ... ಶುದ್ಧೋದಕ ... ॥ ಶುದ್ಧೋ ದಕ ... ॥ ಸಕಲ ... ॥ ಅಮುಕದೇವತಾಭ್ಯೋ ನಮಃ ॥ ವಿಲೇಪನಾರ್ಥೇ ಚಂದನಂ ಸಮರ್ಪಯಾಮಿ ॥ ಅಮುಕ...ನಮಃ ॥ ಅಲಂಕಾರಾರ್ಥೇ ಅಕ್ಷ ತಾನ್ ಸಮರ್ಪಯಾಮಿ ॥ ಅಮುಕ ... ನಮಃ ॥ ಪೂಜಾರ್ಥೇ ಪುಷ್ಪಾಣಿ ತುಲಸೀಪತ್ರಾಣಿ ಚ ಸಮರ್ಪಯಾಮಿ ॥ ಅಮುಕ ...ನಮಃ ॥ ಬಿಲ್ವಪತ್ರಾಣಿ ದೂರ್ವಾಂಕುರಾಂಶ್ಚ ಸಮರ್ಪಯಾಮಿ ॥ ಅಮುಕ ...ನಮಃ ॥ ಧೂಪಂ ಸಮರ್ಪಯಾಮಿ ॥ ಅಮುಕ ...ನಮಃ ॥ ದೀಪಂ ಸಮರ್ಪಯಾಮಿ ॥ ಅಮುಕ ...ನಮಃ ॥ ನೈವೇದ್ಯಾರ್ಥೇ ನಾನಾವಿಧಖಾದ್ಯಂ ಶರ್ಕರಾಂ ಯತ್ಕಿಂಚಿ ದನ್ಯದ್ವಾ ಸಮರ್ಪಯಾಮಿ ॥ ಓಂ ಪ್ರಾಣಾಯ ಸ್ವಾಹಾ ॥ ಓಂ ಅಪಾನಾಯ ಸ್ವಾಹಾ ॥ ಓಂ ವ್ಯಾನಾಯ ಸ್ವಾಹಾ ॥ ಓಂ ಉದಾನಾಯ ಸ್ವಾಹಾ ॥ ಓಂ ಸಮಾನಾಯ ಸ್ವಾಹಾ ॥ ಓಂ ಬ್ರಹ್ಮಣೇ ಸ್ವಾಹಾ ॥ ನೈವೇದ್ಯಮಧ್ಯೇ ಪ್ರಾಶ ನಾರ್ಥೇ ಪಾನೀಯಂ ಸಮರ್ಪಯಾಮಿ ॥ ಓಂ ಪ್ರಾಣಾಯ ಸ್ವಾಹಾ ಉತ್ತರಾ ಪೋಶನಂ ಸಮರ್ಪಯಾಮಿ ॥ ಹಸ್ತಪ್ರಕ್ಷಾಲನಂ ಸಮರ್ಪಯಾಮಿ ॥ ಮುಖ ಪ್ರಕ್ಷಾಲನಂ ಸಮರ್ಪಯಾಮಿ ॥ ಕರೋದ್ವರ್ತನಾರ್ಥೇ ಚಂದನಂ ಸಮರ್ಪ ಯಾಮಿ ॥ ಮುಖವಾಸಾರ್ಥಂ ಪೂಗೀಫಲತಾಂಬೂಲಂ ಸಮರ್ಪಯಾಮಿ ॥ ಸುವರ್ಣಪುಷ್ಪ ದಕ್ಷಿಣಾಂ ಸಮರ್ಪ

ಯಾಮಿ ॥ ಅಮುಕ ... ನಮಃ ॥ ಪ್ರದಕ್ಷಿಣಾಂ ನಮಸ್ಕಾರಾಂಶ್ಚ ಸಮರ್ಪಯಾಮಿ ॥ ಮಂತ್ರಪುಷ್ಪಂ ಸಮರ್ಪಯಾಮಿ ॥ ಅನೇನ ಯಥಾ ಜ್ಞಾನೇನ ಕೃತಪೂರ್ವಾ ರಾಧನೇನ ಅಮುಕದೇವತಾ ಪ್ರೀಯತಾಂ ॥ ಓಂ ತತ್ಸತ್ ಬ್ರಹ್ಮಾರ್ಪಣಮಸ್ತು ॥ ಉತ್ತರದಿಶಿ ನಿರ್ಮಾಲ್ಯಂ ವಿಸರ್ಜಯೇತ್ ॥

## ॥ ಪುರುಷಸೂಕ್ತೇನ ಅಭಿಷೇಕಂ ಕುರ್ಯಾತ್ ॥

ಸಹಸ್ರಶೀರ್ಷಾಷೋಳಶನಾರಾಯಣಃ ಪೌರುಷಮಾನುಷ್ಟುಭಂ ತ್ರಿಷ್ಟು- ಬಂತಂ ಅಭಿಷೇಕೇವಿನಿಯೋಗಃ ॥ ಓಂ ಸಹಸ್ರಶೀರ್ಷಾಪುರುಷಃ... ॥ ಅತೋ ದೇವಾ ಇತಿ ಷಣ್ಣಾಂ ಕಾಣ್ವೋ ಮೇಧಾತಿಥಿರ್ದೇವಾ ವಿಷ್ಣುರ್ಗಾ- ಯತ್ರೀ ॥ ಅಭಿಷೇಕೇ ವಿನಿಯೋಗಃ ॥ ಓಂ ಅತೋ ದೇವಾ ಅವಂತುನೋ- ಯತೋವಿಷ್ಣುರ್ವಿಚಕ್ರಮೇ ॥ ಪೃಥಿವ್ಯಾಃ ಸಪ್ತಧಾಮಭಿಃ ॥ ಇದಂ ವಿಷ್ಣುರ್ವಿ ಚಕ್ರಮೇ ತ್ರೇಧಾ ನಿದಧೇ ಪದಂ । ಸಮೂಹ್ಯಮಸ್ಯ ಪಾಂಸುರೇ । ತ್ರೀಣಿ ಪದಾ ವಿಚಕ್ರಮೇ ವಿಷ್ಣುರ್ಗೋಪಾಅದಾಭ್ಯಃ ॥ ಅತೋ ಧರ್ಮಾಣಿ ಧಾರಯನ್ ॥ ವಿಷ್ಣೋಃ ಕರ್ಮಾಣಿಪಶ್ಯತಯತೋವ್ರತಾನಿಪಸ್ಪಶೇ ॥ ಇಂದ್ರಸ್ಯಯುಜ್ಯಃ ಸಖಾ ॥ ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ ॥ ದಿವೀವ ಚಕ್ಷುರಾತತಂ ॥ ತದ್ವಿಪ್ರಾಸೋ ವಿಪನ್ಯವೋ ಜಾಗೃವಾಂಸಃ ಸಮಿಂಧತೇ ॥ ವಿಷ್ಣೋರ್ಯತ್ಪರಮಂ ಪದಂ ॥ ದೇವಸ್ಯತ್ವಾಸವಿತುಃ ಪ್ರಸವೇಶ್ವಿನೋರ್ಬಾಹು- ಭ್ಯಾಂಪೂಷ್ಣೋಹಸ್ತಾಭ್ಯಾಮಗ್ನೇಸ್ತೇಜಸಾ ಸೂರ್ಯಸ್ಯವರ್ಚಸೇಂದ್ರಸ್ಯೇಂದ್ರಿಯೇಣಾ- ಭಿಷಿಂಚಾಮಿ ॥ ಬಲಾಯ ಶ್ರಿಯೈ ಯಶಸೇನ್ನಾದ್ಯಾಯ ಓಂ ಭೂರ್ಭುವಃಸ್ವಃ ಅಮೃತಾಭಿಷೇಕೋಸ್ತು ॥ ಶಾಂತಿಃ ಪುಷ್ಟಿಸ್ತುಷ್ಟಿಶ್ಚಾಸ್ತು ॥ ಅಮುಕದೇವತಾಭ್ಯೋ ನಮಃ ಮಹಾಭಿಷೇಕಸ್ನಾನಂ ಸಮರ್ಪಯಾಮಿ ॥

---

"ಪುರುಷಸೂಕ್ತ" "ವಿಷ್ಣುಸೂಕ್ತ" ಗಳಲ್ಲದೆ "ಶ್ರೀಸೂಕ್ತ" ಮುಂತಾದ ಇತರ ಸೂಕ್ತಗಳಿಂದಲೂ, ಗಂಟೆ ಬಾರಿಸುತ್ತ ಶುದ್ಧೋದಕದಿಂದ ಮಹಾಭಿಷೇಕವನ್ನು ಮಾಡಬಹುದು.

**ಮಹಾಭಿಷೇಕಸ್ನಾನಾನಂತರಂ ಶುದ್ಧೋದಕ ಸ್ನಾನಂ ಸಮರ್ಪಯಾಮಿ ॥ ಸ್ನಾನಾಂತೇ ಆಚಮನೀಯಂ ಸಮರ್ಪಯಾಮಿ ॥ ಓಂ ತದಸ್ತು ಮಿತ್ರಾವರುಣಾ-ತದಗ್ನೇ ಶಂಯೋರಸ್ಮಭ್ಯಮಿದಮಸ್ತುಶಸ್ತಂ । ಅಶೀಮಹಿಗಾಧಮುತಪ್ರತಿಷ್ಠಾಂ ನಮೋ ದಿವೇ ಬೃಹತೇಸಾದನಾಯ ॥ ಗೃಹಾ ವೈ ಪ್ರತಿಷ್ಠಾಸೂಕ್ತಂ ತತ್ಪ್ರತಿಷ್ಠಿ-ತತಮಯಾ ವಾಚಾ ಶಂಸ್ತವ್ಯಂ ತಸ್ಮಾದ್ಯದ್ಯಪಿ ದೂರ ಇವ ಪಶೂಲ್ಲಭತೇಗೃಹಾ-ನೇವೈನಾನಾಜಿಗಮಿಷತಿ ಗೃಹಾಹಿ ಪಶೂನಾಂ ಪ್ರತಿಷ್ಠಾ ಪ್ರತಿಷ್ಠಾ ॥ ನರ್ಯ-ಪ್ರಜಾಂ ಮೇ ಗೋಪಾಯ । ಅಮೃತತ್ವಾಯಜೀವಸೇ ॥ ಜಾತಾಂಜನಿಷ್ಯ-ಮಾಣಾಂ ಚ । ಅಮೃತೇಸತ್ಯೇ ಪ್ರತಿಷ್ಠಿತಾಂ ॥ ಸುಪ್ರತಿಷ್ಠಿತಮಸ್ತು ॥ ಓಂ ತಂ ಯಜ್ಞಂ ಬರ್ಹಿಷಿ...॥ ಸರ್ವಭೂಷಾಧಿಕೇ ಸೌಮ್ಯೇ ಲೋಕಲಜ್ಜಾನಿವಾರಣೇ । ಮಯೋಪಪಾದಿತೇ ತುಭ್ಯಂ ವಾಸಸೀ ಪ್ರತಿಗೃಹ್ಯತಾಂ ॥ ಅಮುಕ... ॥ ವಸ್ತ್ರಂ ಸಮರ್ಪಯಾಮಿ ॥ ಆಚಮನೀಯಂ ಸಮರ್ಪಯಾಮಿ ॥ ಓಂ ತಸ್ಮಾ-ದ್ಯಜ್ಞಾತ್ಸರ್ವಹುತಃ...॥ ದೇವ ದೇವ ನಮಸ್ತೇಽಸ್ತು ತ್ರಾಹಿ ಮಾಂ ಭವ-ಸಾಗರಾತ್ । ಬ್ರಹ್ಮಸೂತ್ರಂ ಸೋತ್ತರೀಯಂ ಗೃಹಾಣ ಪುರುಷೋತ್ತಮ ॥ ಅಮುಕ... ॥ ಯಜ್ಞೋಪವೀತಂ... ॥ ಆಚಮನೀಯಂ... ॥ (ಹರಿದ್ರಾ ಸ್ವರ್ಣವರ್ಣಾಭಾ ಸರ್ವಸೌಭಾಗ್ಯದಾಯಿನೀ । ಸರ್ವಾಲಂಕಾರ-ಮುಖ್ಯಾ ಹಿ ದೇವಿ ತ್ವಂ ಪ್ರತಿಗೃಹ್ಯತಾಂ ॥ ಅಮುಕದೇವತಾಯೈನಮಃ ಹರಿದ್ರಾಂ... ॥ ಹರಿದ್ರಾ ಚೂರ್ಣಸಂಯುಕ್ತಂ ಕುಂಕುಮಂ ಕಾಮದಾಯಕಂ । ವಸ್ತ್ರಾಲಂಕರಣಂ ಸರ್ವಂ ದೇವಿ ತ್ವಂ ಪ್ರತಿಗೃಹ್ಯತಾಂ ॥ ಅಮುಕ... ॥ ಕುಂಕುಮಂ... ॥ ಕಜ್ಜಲಂ ಕಾಮದಂ ರಮ್ಯಂ ಕಾಮಿನೀಕಾಮಸಂಭವಂ । ನೇತ್ರಯೋರ್ಭೂಷಣಾರ್ಥಾಯ ಕಜ್ಜಲಂ ಪ್ರತಿಗೃಹ್ಯತಾಂ ॥ ಅಮುಕ... ॥**

---

ಆವರಣದಲ್ಲಿ ಕೊಟ್ಟ ವಸ್ತುಗಳನ್ನು ವಿಶೇಷವಾಗಿ ಸ್ತ್ರೀದೇವತೆಗಳಿಗೆ ಮಾತ್ರ ಸಮರ್ಪಿಸುವುದು. ಆವರಣದೊಳಗಿರುವ ಶ್ಲೋಕಗಳನ್ನು ಹೇಳಿ ಆ ವಸ್ತುಗಳನ್ನು ಸ್ತ್ರೀ ದೇವತಾಪೂಜೆಯಲ್ಲಿ ಮಾತ್ರ ಸಮರ್ಪಿಸಬೇಕು. ಮಹಾಪೂಜೆಗಳಲ್ಲಿ ಅಷ್ಟೋತ್ತರ ಅಥವಾ ಸಹಸ್ರನಾಮಗಳಿಂದ ಅರ್ಚಿಸಬೇಕು.

ಕಜ್ಜಲಂ... ॥ ಉದಿತಾರುಣಸಂಕಾಶಂ ಜಪಾಕುಸುಮಸಂನಿಭಂ । ಸೀಮಂತ-ಭೂಷಣಾರ್ಥಾಯ ಸಿಂದೂರಂ ಪ್ರತಿಗೃಹ್ಯತಾಂ ॥ ಅಮುಕ ... ॥ ಸಿಂದೂರಂ... ॥ ಮಾಂಗಲ್ಯತಂತುಮಣಿಭಿರ್ಮುಕ್ತಾಫಲವಿರಾಜಿತಂ । ಕಂಠಸ್ಯ ಭೂಷಣಾರ್ಥಾಯ ಕಂಠಸೂತ್ರಂ ಪ್ರಗೃಹ್ಯತಾಂ ॥ ಅಮುಕ... ॥ ಕಂಠಸೂತ್ರಂ ... ॥ ಕಾಚಸ್ಯ ನಿರ್ಮಿತಂ ದಿವ್ಯಂ ಕಂಕಣಂ ಚ ಸುರೇಶ್ವರಿ । ಹಸ್ತಾಲಂಕರಣಾರ್ಥಾಯ ಕಂಕಣಂ ಪ್ರತಿಗೃಹ್ಯತಾಂ ॥ ಅಮುಕ... ॥ ಕಂಕಣಂ... ॥ ಅಲಂಕಾರಾನ್ಮಯಾ ದೇವಿ ಸುವರ್ಣೇನ ವಿನಿರ್ಮಿತಾನ್ । ಪ್ರೀತ್ಯರ್ಥಂ ತವ ದೇವೇಶಿ ಭೂಷಣಂ ಪ್ರತಿಗೃಹ್ಯತಾಂ ॥ ಅಮುಕ... ॥ ನಾನಾಭೂಷಣಾನಿ ... ॥ ನಾನಾಭರಣಶೋಭಾಢ್ಯಂ ನಾನಾರತ್ನೋಪಶೋಭಿತಂ । ಅರ್ಪಿತಂ ಚ ಮಯಾ ದೇವಿ ತಾಡಪತ್ರಂ ಪ್ರಗೃಹ್ಯತಾಂ ॥ ಅಮುಕ... ॥ ತಾಡಪತ್ರಂ... ॥ ಓಂ ಅಹಿರಿವಭೋಗೈಃ ಪರ್ಯೇತಿ ಬಾಹುಂ ಜ್ಯಾಯಾಹೇತಿಂ ಪರಿಬಾಧಮಾನಃ । ಹಸ್ತಘ್ನೋ ವಿಶ್ವಾ ವಯುನಾನಿ ವಿದ್ವಾನ್ಪುಮಾನ್ಪುಮಾಂಸಂ ಪರಿಪಾತು ವಿಶ್ವತಃ ॥ ಜ್ಯೋತ್ಸ್ನಾಪತೇ ನಮಸ್ತುಭ್ಯಂ ನಮಸ್ತೇ ವಿಶ್ವರೂಪಿಣೇ । ನಾನಾ-ಪರಿಮಲದ್ರವ್ಯಂ ಗೃಹಾಣ ಪರಮೇಶ್ವರ ॥ ಅಮುಕ... ॥ ನಾನಾಪರಿಮಲ-ದ್ರವ್ಯಾಣಿ... ॥ ಓಂ ತಸ್ಮಾದ್ಯಜ್ಞಾತ್ಸರ್ವಹುತಋಚಃ.... ॥ ಶ್ರೀಖಂಡಂ ಚಂದನಂ ದಿವ್ಯಂ ಗಂಧಾಢ್ಯಂ ಸುಮನೋಹರಂ । ವಿಲೇಪನಂ ಸುರಶ್ರೇಷ್ಠ ಚಂದನಂ ಪ್ರತಿಗೃಹ್ಯತಾಂ ॥ ಅಮುಕ... ॥ ಚಂದನಂ ಸಮರ್ಪಯಾಮಿ ॥ ಅಕ್ಷತಾಸ್ತಂಡುಲಾಃ ಶುಭ್ರಾಃ ಕುಂಕುಮೇನ ವಿರಾಜಿತಾಃ । ಮಯಾ ನಿವೇದಿತಾ ಭಕ್ತ್ಯಾ ಗೃಹಾಣ ಪರಮೇಶ್ವರ ॥ ಅಮುಕ... ॥ ಅಲಂಕಾರಾರ್ಥೇ ಅಕ್ಷ-ತಾನ್ ಸಮರ್ಪಯಾಮಿ ॥ ಓಂ ತಸ್ಮಾದಶ್ವಾ.... ॥ ಮಾಲ್ಯಾದೀನಿ ಸುಗಂಧೀನಿ ಮಾಲತ್ಯಾದೀನಿ ವೈ ಪ್ರಭೋ । ಮಯಾ ಹೃತಾನಿ ಪೂಜಾರ್ಥಂ ಪುಷ್ಪಾಣಿ ಪ್ರತಿಗೃಹ್ಯತಾಂ ॥ ಸೇವಂತಿಕಾಬಕುಲಚಂಪಕಪಾಟಲಾಬ್ಜೈಃ ಪುನ್ನಾಗ-

ಜಾತಿಕರವೀರರಸಾಲಪುಷ್ಪೈಃ । ಬಿಲ್ವಪ್ರವಾಲತುಲಸೀದಲಮಾಲತೀಭಿಸ್ತ್ವಾಂ ಪೂಜಯಾಮಿ ಜಗದೀಶ್ವರ ಮೇ ಪ್ರಸೀದ ॥ ಅಮುಕ... ॥ ಪುಷ್ಪಾಣಿ ಸಮರ್ಪಯಾಮಿ ॥ ಕೇಶವಾದಿ ಚತುರ್ವಿಂಶತಿನಾಮಭಿರ್ವಾ ಅಷ್ಟೋತ್ತರಶ-ತನಾಮಭಿಃ ಸಹಸ್ರನಾಮಭಿರ್ವಾ ತುಲಸೀದಲೈರನ್ಯೇನ ದ್ರವ್ಯೇಣ ವಾ ಪೂಜಯೇತ್ ॥ ಓಂ ಯತ್ಪುರುಷಂ ವ್ಯದಧುಃ... ॥ ವನಸ್ಪತಿರಸೋ-ದ್ಭೂತೋ ಗಂಧಾಢ್ಯೋ ಗಂಧ ಉತ್ತಮಃ । ಆಘ್ರೇಯಃ ಸರ್ವದೇವಾನಾಂ ಧೂಪೋಽಯಂ ಪ್ರತಿಗೃಹ್ಯತಾಂ ॥ ಅಮುಕ ...॥ ಧೂಪಂ ಸಮರ್ಪ-ಯಾಮಿ ॥ ಓಂ ಬ್ರಾಹ್ಮಣೋಽಸ್ಯಮುಖ.... ॥ ಆಜ್ಯಂ ಸುವರ್ತಿಸಂಯುಕ್ತಂ ವಹ್ನಿನಾ ಯೋಜಿತಂ ಮಯಾ । ದೀಪಂ ಗೃಹಾಣ ದೇವೇಶ ತ್ರೈಲೋಕ್ಯ ತಿಮಿರಾಪಹ ॥ ಅಮುಕ.....॥ ದೀಪಂ ಸಮರ್ಪಯಾಮಿ ॥ ಓಂ ಚಂದ್ರ-ಮಾಮನಸೋ... ॥ ನೈವೇದ್ಯಂ ಗೃಹ್ಯತಾಂ ದೇವ ಭಕ್ತಿಂ ಮೇಹ್ಯಚಲಾಂ ಕುರು । ಈಪ್ಸಿತಂ ಮೇ ವರಂ ದೇಹಿ ಪರತ್ರ ಚ ಪರಾಂ ಗತಿಂ ॥ ಶರ್ಕರಾ-ಖಂಡಖಾದ್ಯಾನಿ ದಧಿಕ್ಷೀರಘೃತಾನಿ ಚ । ಆಹಾರಂ ಭಕ್ಷ್ಯಭೋಜ್ಯಂ ಚ ನೈವೇದ್ಯಂ ಪ್ರತಿಗೃಹ್ಯತಾಂ ॥ ಅಮುಕ...॥ ಅಮುಕ ನೈವೇದಂ ಸಮ....॥ ಅಮೃತೋಪಸ್ತರಣಮಸಿ ಸ್ವಾಹಾ ॥ ಓಂ ಪ್ರಾಣಾಯ ಸ್ವಾಹಾ ॥ ಓಂ ಅಪಾ-ನಾಯ... ॥ ಓಂ ವ್ಯಾನಾಯ... ॥ ಓಂ ಉದಾನಾಯ... ॥ ಓಂ ಸಮಾನಾಯ... ॥ ಓಂ ಬ್ರಹ್ಮಣೇ .... ॥ ನೈವೇದ್ಯಮಧ್ಯೇ ಪಾನೀಯಂ ಸಮರ್ಪಯಾಮಿ ॥ ಪುನಃ । ಓಂ ಪ್ರಾಣಾಯ ಸ್ವಾಹಾ । ಉತ್ತರಾಪೋಶನಂ ಸಮರ್ಪಯಾಮಿ । ಹಸ್ತಪ್ರಕ್ಷಾಲನಂ ಸಮ... ॥ ಮುಖಪ್ರಕ್ಷಾಲನಂ ಸಮ... ॥ ಕರೋದ್ವರ್ತನಾರ್ಥೇ ಚಂದನಂ ಸಮ... ॥ ಪೂಗೀಫಲಂ ಮಹದ್ದಿವ್ಯಂ ನಾಗವಲ್ಲೀದಲೈರ್ಯುತಂ । ಕರ್ಪೂರೈಲಾಸಮಾಯುಕ್ತಂ ತಾಂಬೂಲಂ ಪ್ರತಿಗೃಹ್ಯತಾಂ ॥ ಅಮುಕ... ॥ ತಾಂಬೂಲಂ ಸಮ... ॥

ಇದಂ ಫಲಂ ಮಯಾ ದೇವ ಸ್ಥಾಪಿತಂ ಪುರತಸ್ತವ ॥ ತೇನ ಮೇ ಸುಫಲಾ- ವಾಪ್ತಿಃ ಭವೇಜ್ಜನ್ಮನಿ ಜನ್ಮನಿ ॥ ಫಲೇನ ಫಲಿತಂ ಸರ್ವಂ ತ್ರೈಲೋಕ್ಯಂ ಸಚರಾಚರಂ । ತಸ್ಮಾತ್ಫಲಪ್ರದಾನೇನ ಸಫಲಾಃ ಸ್ಯುರ್ಮನೋರಥಾಃ ॥ ಅಮುಕ... ॥ ಫಲಂ ಸಮ... ॥ ಹಿರಣ್ಯಗರ್ಭಗರ್ಭಸ್ಥಂ ಹೇಮಬೀಜಂ ವಿಭಾವಸೋಃ । ಅನಂತಪುಣ್ಯಫಲದಮತಃ ಶಾಂತಿಂ ಪ್ರಯಚ್ಛ ಮೇ ॥ ಅಮುಕ....॥ ದಕ್ಷಿಣಾಂ ಸಮ.... ॥ ಓಂ ಶ್ರಿಯೇಜಾತಃ ಶ್ರಿಯಆನಿರಿಯಾಯ ಶ್ರಿಯಂವಯೋ ಜರಿತೃಭ್ಯೋ ದದಾತಿ ಶ್ರಿಯಂ ವಸಾನಾ ಅಮೃತತ್ವಮಾಯನ್ಭವಂತಿಸತ್ಯಾಸಮಿಥಾಮಿತ ದ್ರೌ ॥ ಶ್ರಿಯಏವೈನಂತಚ್ಛ್ರಿಯಾಮಾದಧಾತಿ ಸಂತತಮೃಚಾವಷಟ್ ಕೃತ್ಯಂ ಸಂತತ್ಯೈ ಸಂಧೀಯತೇ ಪ್ರಜಯಾಪಶುಭಿರ್ಯ ಏವಂ ವೇದ । ಯಾಜ್ಯಯಾ ಯಜತಿ ಪ್ರತ್ತಿರ್ವೈಯಾಜ್ಯಾ ಪುಣ್ಯೈವ ಲಕ್ಷ್ಮೀಃ ಪುಣ್ಯಾಮೇವ ತಲ್ಲಕ್ಷ್ಮೀಂ ಸಂಭಾವಯತಿ ಪುಣ್ಯಾಂ ಲಕ್ಷ್ಮೀಂ ಸಂಸ್ಕುರುತೇ ॥ ಚಂದ್ರಾದಿತ್ಯೌ ಚ ಧರಣಿಃ ವಿದ್ಯುದಗ್ನಿಸ್ತಥೈವ ಚ । ತ್ವಮೇವ ಸರ್ವಜ್ಯೋತೀಂಷಿ ಆರ್ತಿಕ್ಯಂ ಪ್ರತಿಗೃಹ್ಯತಾಂ ॥ ಅಮುಕ... ॥ ಮಹಾನೀರಾಜನದೀಪಂ ಸಮರ್ಪಯಾಮಿ ॥ ಹೃತ್ಸ್ಥಾಜ್ಞಾನತಮೋನಾಶಕ್ಷಮಂ ಭಕ್ತ್ಯಾ ಸಮರ್ಪಿತಂ । ಕರ್ಪೂರದೀಪಮಮಲಂ ಗೃಹಾಣ ಪರಮೇಶ್ವರ ॥ ಅಮುಕ.... ॥ ಕರ್ಪೂರಾರ್ತಿಕ್ಯದೀಪಂ ಸಮ... ॥ ಓಂ ನಾಭ್ಯಾ ಆಸೀ ದಂತರಿಕ್ಷಂ... ॥ ನಮಃ ಸರ್ವಹಿತಾರ್ಥಾಯ ಜಗದಾಧಾರಹೇತವೇ । ಸಾಷ್ಟಾಂಗೋಽಯಂ ಪ್ರಣಾಮಸ್ತೇ ಪ್ರಯತ್ನೇನ ಮಯಾ ಕೃತಃ ॥ ನಮೋಽಸ್ತ್ವ ನಂತಾಯ ಸಹಸ್ರಮೂರ್ತಯೇ ಸಹಸ್ರಪಾದಾಕ್ಷಿಶಿರೋರುಬಾಹವೇ । ಸಹಸ್ರ ನಾಮ್ನೇ ಪುರುಷಾಯ ಶಾಶ್ವತೇ ಸಹಸ್ರಕೋಟೀಯುಗಧಾರಿಣೇ ನಮಃ ॥ ಅಮುಕ...... ॥ ನಮಸ್ಕಾರಾನ್ ಸಮ...... ॥ ಓಂ ಸಪ್ತಾಸ್ಯಾಸನ್ ಪರಿಧಯಃ.... ॥ ಯಾನಿ ಕಾನಿ ಚ ಪಾಪಾನಿ ಜನ್ಮಾಂತರಕೃತಾನಿ ಚ ॥ ತಾನಿ ತಾನಿ ವಿನಶ್ಯಂತಿ ಪ್ರದಕ್ಷಿಣ ಪದೇ ಪದೇ ॥ ಅಮುಕ.... ॥ ಪ್ರದಕ್ಷಿಣಾಃ ಸಮ ॥ ಓಂ ಯಜ್ಞೇನ ಯಜ್ಞ... ॥ ಹರಿಃ ಓಂ ॥

**ಗಣಾನಾಂ ತ್ವಾಂ ಗಣಪತಿಂ ಹವಾಮಹೇ ಕವಿಂ ಕವೀನಾಮುಪಮಶ್ರವಸ್ತಮಂ । ಜ್ಯೇಷ್ಠರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತ ಆನಃ ಶೃಣ್ವನ್ನೂತಿಭಿಃ ಸೀದಸಾದನಂ ॥ ಓಂ ಜಾತವೇದಸೇ ಸುನವಾಮ ಸೋಮಮರಾತೀ ಯತೋ ನಿದಹಾತಿವೇದಃ । ಸ ನಃ ಪರ್ಷದತಿ ದುರ್ಗಾಣಿ ವಿಶ್ವಾನಾವೇವ ಸಿಂಧುಂ ದುರಿತಾತ್ಯಗ್ನಿಃ ॥ ಓಂ ಕ್ಷೇತ್ರಸ್ಯಪತಿನಾ ವಯಂ ಹಿತೇನೇವ ಜಯಾಮಸಿ । ಗಾಮಾಶ್ವಂ ಪೋಷ-ಯಿತ್ನ್ವಾಸನೋಮೃಳಾತೀದೃಶೇ ॥ ಓಂ ವಾಸ್ತೋಷ್ಪತೇ ಪ್ರತಿಜಾನೀಹ್ಯಸ್ಮಾನ್ ತ್ಸ್ವಾವೇಶೋ ಅನಮೀವೋ ಭವಾನಃ ॥ ಯತ್ವೇಮಹೇಪ್ರತಿತನ್ನೋಜುಷಸ್ವ ಶಂನ್ನೋಭವದ್ವಿಪದೇ ಶಂ ಚತುಷ್ಪದೇ ॥ ಓಂ ನಮೋಮಹದ್ಭ್ಯೋ ನಮೋ ಅರ್ಭಕೇಭ್ಯೋ ನಮೋ ಯುವಭ್ಯೋ ನಮ ಆಶಿನೇಭ್ಯಃ । ಯಜಾಮ ದೇವಾನ್ಯದಿಶಕ್ನವಾಮಮಾಜ್ಯಾಯಸಃ ಶಂ ಸಮಾವೃಕ್ಷಿದೇವಾಃ ॥ ಓಂ ಮಮ-ತ್ತುನಃ ಪರಿಜ್ಮಾವಸರ್ಹಾಮಮತ್ತುವಾತೋಅಪಾಂವೃಷಣ್ವಾನ್ । ಶಿ ಶೀತ-ಮಿಂದ್ರಾಪರ್ವತಾಯುವಂ ನಸ್ತನ್ನೋವಿಶ್ವೇವರಿವಸ್ಯಂತು ದೇವಾಃ । ಓಂ ಕಥಾ ತೇ ಅಗ್ನೇ ಶುಚಯಂತ ಆಯೋರ್ದದಾಶುರ್ವಾಜೇಭಿರಾಶುಷಾಣಾಃ । ಉಭೇ ಯತ್ತೋಕೇ ತನಯೇ ದಧಾನಾ ಋತಸ್ಯಸಾಮನ್ರಣಯಂತ ದೇವಾಃ । ಓಂ ಯಜ್ಞೇನ ಯಜ್ಞಮಯಜಂತದೇವಾಸ್ತಾನಿಧರ್ಮಾಣಿ ಪ್ರಥಮಾನ್ಯಾಸನ್ । ತೇಹನಾಕಂ ಮಹಿಮಾನಃ ಸಚಂತಯತ್ರಪೂರ್ವೇ ಸಾಧ್ಯಾಃ ಸಂತಿ ದೇವಾಃ ॥**

---

ಬೊಗಸೆಯಲ್ಲಿ ತುಂಬ ಹೂಗಳನ್ನು ಹಿಡಿದು "**ಓಂ ಗಣಾನಾಂ ತ್ವಾ**" ಎಂಬಲ್ಲಿಂದ ಮಂತ್ರಪುಷ್ಪದ ಮಂತ್ರಗಳನ್ನು ಹೇಳಿ ಮಂತ್ರಪುಷ್ಪ ಸಮರ್ಪಣೆ ಮಾಡಬೇಕು. ಬೆರಳುಗಳ ಅಗ್ರಭಾಗಗಳು ನೆಲಕ್ಕೆ ತಾಗುವಂತೆ ಎರಡು ಅಂಗೈಗಳನ್ನು ದೇವರಿಗೆ ಅಭಿಮುಖವಾಗಿ ಹಿಡಿದು "**ಅಯಂ ಮೇ ಹಸ್ತೋ**" ಎಂಬ ಪ್ರಾರ್ಥನಾ ಮಂತ್ರವನ್ನು ಹೇಳಬೇಕು. ಕೈಯಲ್ಲಿ ತುಲಸೀದಲ ಮತ್ತು ನೀರನ್ನು ಹಿಡಿದು "**ಅನೇನ ಮಯಾ...**" ಎಂದು ಹೇಳಿ ಆ ನೀರನ್ನು ಬಿಡಬೇಕು. ನೀರು ತುಂಬಿದ ಶಂಖವನ್ನು ದೇವರ ಮೇಲೆ ಒಂದು ಪ್ರದಕ್ಷಿಣೆ ತಂದು ಆ ನೀರನ್ನು ತಲೆಯ ಮೇಲೆ ಹಾಕಿಕೊಳ್ಳಬೇಕು. ತೀರ್ಥವನ್ನು ಬೇರೆ ಪಾತ್ರೆಯಿಂದ ಸ್ವೀಕರಿಸಬೇಕು.

ಓಂ ದೇವೀಂವಾಚಮಜನಯಂತ ದೇವಾಂಸ್ತಾಂ ವಿಶ್ವರೂಪಾಃ ಪಶವೋ ವದಂತಿ । ಸಾನೋಮಂದ್ರೇಷಮೂರ್ಜಂ ದುಹಾನಾಧೇನುರ್ವಾಗಸ್ಮಾನುಪಸುಷ್ಟು ತಯಿತು ॥ ಓಂ ವಿಶ್ವತಶ್ಚಕ್ಷುರುತವಿಶ್ವತೋಮುಖೋವಿಶ್ವತೋ ಬಾಹುರುತವಿಶ್ವ ತಸ್ಪಾತ್ । ಸಂ ಬಾಹುಭ್ಯಾಂ ಧಮತಿ ಸಂಪದಸ್ತ್ರೈರ್ದ್ಯಾವಾಭೂಮೀಜನಯಂ ದೇವ ಏಕಃ ॥ ಓಂ ನಮಸ್ತೇ ಅಸ್ತು ಭಗವನ್ ವಿಶ್ವೇಶ್ವರಾಯ ಮಹಾದೇವಾಯ ತ್ರಿಯಂಬಕಾಯ ತ್ರಿಪುರುಷಾಯ ತ್ರಿಪುರಾಂತಕಾಯ ತ್ರಿಕಾಗ್ನಿಕಾಲಾಯ ಕಾಲಾಗ್ನಿರುದ್ರಾಯ ನೀಲಕಂಠಾಯ ಮೃತ್ಯುಂಜಯಾಯ ಸರ್ವೇಶ್ವರಾಯ ಸದಾಶಿವಾಯ ಶ್ರೀಮನ್ಮಹಾದೇವಾಯ ನಮಃ ॥ ಓಂ ರಾಜಾಧಿರಾಜಾಯ ಪ್ರಸಹ್ಯಸಾಹಿನೇ । ನಮೋ ವಯಂವೈಶ್ರವಣಾಯ ಕುರ್ಮಹೇ । ಸಮೇ ಕಾಮಾನ್ಕಾಮಕಾಮಾಯಮಹ್ಯಂ । ಕಾಮೇಶ್ವರೋವೈಶ್ರವಣೋ ದದಾತು । ಕುಬೇರಾಯವೈಶ್ರವಣಾಯ । ಮಹಾರಾಜಾಯ ನಮಃ ॥ ಪರ್ಯಾಪ್ತ್ಯಾ ಅನಂತರಾಯಾಯಸರ್ವಸ್ತೋಮೋತಿರಾತ್ರುತ್ತಮಮಹರ್ಭವತಿ ಸರ್ವಸ್ಯಾಪ್ತ್ಯೈ ಸರ್ವಸ್ಯಜಿತ್ಯೈ ಸರ್ವಮೇವ ತೇನಾಪ್ನೋತಿ ಸರ್ವಂ ಜಯತಿ ॥ ಯೋ ವೇದಾದೌ ಸ್ವರಃ ಪ್ರೋಕ್ತೋ ವೇದಾಂತೇ ಚ ಪ್ರತಿಷ್ಠಿತಃ । ತಸ್ಯ ಪ್ರಕೃತಿಲೀನಸ್ಯ ಯಃ ಪರಃ ಸ ಮಹೇಶ್ವರಃ ॥ ಅಮುಕ ... ॥ ಮಂತ್ರಪುಷ್ಪಂ ಸಮರ್ಪಯಾಮಿ ॥ ತತೋ ಗೀತಂ ವಾದ್ಯಂ ನೃತ್ಯಂ ಛತ್ರಂ ಚಾಮರಂ ದರ್ಪಣಮಾಂದೋಲನಂ ಸರ್ವರಾಜೋಪಚಾರಾರ್ಥೇ ತುಲಸೀಪತ್ರಂ ಸಮರ್ಪಯಾಮಿ ॥ ಪ್ರಾರ್ಥನಾ ॥ ಓಂ ಅಯಂ ಮೇ ಹಸ್ತೋ ಭಗವಾನಯಂ ಮೇ ಭಗವತ್ತರಃ । ಅಯಂ ಮೇ ವಿಶ್ವಭೇಷಜೋಯಂ ಶಿವಾಭಿಮರ್ಶನಃ । ಅಯಂ ಮಾತಾಯಂ ಪಿತಾಯಂ ಜೀವಾತುರಾಗಮತ್ । ಇದಂ ತವ ಪ್ರಸರ್ಪಣಂ ಸುಬಂಧವೇಹಿನಿರಿಹಿ ॥ ಆವಾಹನಂ ನ ಜಾನಾಮಿ ನ ಜಾನಾಮಿ ತವಾರ್ಚನಂ । ಪೂಜಾಂ ಚೈವ ನ ಜಾನಾಮಿ ಕ್ಷಮಸ್ವ ಪರಮೇಶ್ವರ ॥ ಮಂತ್ರಹೀನಂ ಕ್ರಿಯಾಹೀನಂ

ಭಕ್ತಿಹೀನಂ ಸುರೇಶ್ವರ । ಯತ್ಪೂಜಿತಂ ಮಯಾ ದೇವ ಪರಿಪೂರ್ಣಂ ತದಸ್ತು ಮೇ ॥ ಅಪರಾಧಸಹಸ್ರಂ ಚ ಕ್ರಿಯತೇಹರ್ನಿಶಂ ಮಯಾ । ದಾಸೋಯಮಿತಿ ಮಾಂ ಮತ್ವಾ ಕ್ಷಮಸ್ವ ಪರಮೇಶ್ವರ ॥ ಗತಂ ಪಾಪಂ ಗತಂ ದುಃಖಂ ಗತಂ ದಾರಿದ್ರ್ಯಮೇವ ಚ । ಆಗತಾ ಸುಖಸಂಪತ್ತಿಃ ಪುಣ್ಯಾಚ್ಚ ತವ ದರ್ಶನಾತ್ ॥ ರೂಪಂ ದೇಹಿ ಜಯಂ ದೇಹಿ ಯಶೋ ದೇಹಿ ದ್ವಿಷೋ ಜಹಿ । ಪುತ್ರಾನ್ ದೇಹಿ ಧನಂ ದೇಹಿ ಸರ್ವಾನ್ ಕಾಮಾಂಶ್ಚ ದೇಹಿ ಮೇ ॥ ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪಃ ಪೂಜಾಕ್ರಿಯಾದಿಷು । ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಂ ॥ ಇತಿ ಪ್ರಾರ್ಥನಾ ॥ ಅನೇನ ಮಯಾ ಯಥಾ-ಜ್ಞಾನೇನ ಯಥಾಮಿಲಿತೋಪಚಾರದ್ರವ್ಯೈಃ ಕೃತಪೂಜನೇನ ಶ್ರೀ ಅಮುಕ ದೇವತಾಃ ಪ್ರೀಯಂತಾಂ ॥ ತತೋ ನಿರ್ಮಾಲ್ಯಂ (ವಿಷ್ವಗ್ಭಿನ್ನಂ) ದೇವದತ್ತಂ ಭಾವಯಿತ್ವಾ ಶಿರಸಿ ಧಾರಯೇತ್ ॥ ಶಂಖಮಧ್ಯೇ ಸ್ಥಿತಂ ತೋಯಂ ಭ್ರಾಮಯನ್ ಕೇಶವೋಪರಿ । ಅಂಗಲಗ್ನಂ ಮನುಷ್ಯಾಣಾಂ ಬ್ರಹ್ಮಹತ್ಯಾಂ ವ್ಯಪೋಹತಿ ॥ ಅನೇನ ಮಂತ್ರೇಣ ಶಂಖೋದಕಂ ಶಿರಸಿ ಧಾರಯೇತ್ ॥ ಅಕಾಲಮೃತ್ಯುಹರಣಂ ಸರ್ವವ್ಯಾಧಿವಿನಾಶನಂ । ದೇವಪಾದೋದಕಂ ಪೀತ್ವಾ ಶಿರಸಾ ಧಾರಯಾಮ್ಯಹಂ ॥ ತೀರ್ಥಂ ಗ್ರಾಹ್ಯಂ ॥ ತತ್ತು ಪಾತ್ರಾಂತರೇಣೈವ ವಿಹಿತಂ ನ ಹಸ್ತೇನ ॥ ಇತಿ ದೇವಪೂಜಾ ॥

---

# ॥ ಮಧ್ಯಾಹ್ನ ಸಂಧ್ಯಾ ॥

**ಶ್ರೀ ಗಣೇಶಾಯ ನಮಃ ॥ ದರ್ಭಪವಿತ್ರಪಾಣಿರಾಚಮ್ಯ ಪ್ರಾಣಾ-ನಾಯಮ್ಯ ॥ ಮಮೋಪಾತ್ತದುರಿತಕ್ಷಯದ್ವಾರಾ ಶ್ರೀಪರಮೇಶ್ವರಪ್ರೀತ್ಯರ್ಥಂ ಮಧ್ಯಾಹ್ನಸಂಧ್ಯಾಮುಪಾಸಿಷ್ಯೇ ॥ ಆಪೋಹಿಷ್ಠೇತಿ ತೃಚೇನ ಪ್ರಥಮಂ ಮಾರ್ಜನಂ ಕೃತ್ವಾ ಮಂತ್ರಾಚಮನಂ ಕಾರ್ಯಂ ॥ ಆಪಃ ಪುನಂತ್ವಿತ್ಯಸ್ಯಾನು-ವಾಕಸ್ಯ ನಾರಾಯಣಯಾಜ್ಞವಲ್ಕ್ಯ ಆಪಃ ಪೃಥಿವೀ ಬಹ್ಮಣಸ್ಪತಿರಷ್ಟೀ ಮಂತ್ರಾ-ಚಮನೇ ವಿನಿಯೋಗಃ ॥ ಓಂ ಆಪಃ ಪುನಂತುಪೃಥಿವೀಂ ಪೃಥಿವೀಪೂತಾ ಪುನಾತು ಮಾಂ । ಪುನಂತು ಬ್ರಹ್ಮಣಸ್ಪತಿರ್ಬ್ರಹ್ಮಪೂತಾಪುನಾತು ಮಾಂ ॥ ಯದುಚ್ಛಿಷ್ಟ ಮಭೋಜ್ಯಂ ಯದ್ವಾ ದುಶ್ಚರಿತಂ ಮಮ । ಸರ್ವಂ ಪುನಂತು ಮಾಮಾಪೋ ಸತಾಂ ಚ ಪ್ರತಿಗ್ರಹಗ್‍ಂ ಸ್ವಾಹಾ ॥ ಇತಿ ಅಪಃ ಪೀತ್ವಾ ॥ ಆಚಮ್ಯ ಪ್ರಾತಃ ಸಂಧ್ಯಾವತ್ ದ್ವಿತೀಯಂ ತೃತೀಯಂ ಚತುರ್ಥಂ ಮಾರ್ಜನ-ಮಘಮರ್ಷಣಾಂತಂ ಕೃತ್ವಾ ॥ ಆಚಮ್ಯ ॥ ತಿಷ್ಠನ್ ಹಂಸಃ ಶುಚಿಷದಿತಿ**

---

ಮಧ್ಯಾಹ್ನ ಸಂಧ್ಯಾವಂದನೆಗೆ ಸರಿಯಾದ ಕಾಲ. **॥ ಸಾ ಚ ದ್ವಾದಶಘಟೀ ದಿನೋತ್ತರಂ ವಿಹಿತಾ ॥ ಅರ್ಧ್ಯರ್ಧಯಾಮಾದಾಸಾಯಂ ಸಂಧ್ಯಾ ಮಾಧ್ಯಾಹ್ನಿಕೀಷ್ಯತೇ ॥** ಹಗಲು ಹನ್ನೆರಡು ಗಳಿಗೆಯ ನಂತರ ಮಧ್ಯಾಹ್ನ ಸಂಧ್ಯಾವಂದನೆ ಮಾಡಬೇಕು **॥ ಯಸ್ಸಂಧ್ಯಾಂ ಯದಿ ನೋಪಾಸ್ತಿ ಅಗ್ನಿಕಾರ್ಯಂ ನಚೇತ್ಕೃತಂ । ಗಾಯತ್ರಷ್ಟಜಪಂ ಜಪ್ತಂ ಪ್ರಾಯಶ್ಚಿತ್ತಂ ದ್ವಿಜನ್ಮನಾಂ ॥** ಸಂಧ್ಯಾವಂದನೆ, ಅಗ್ನಿ ಕಾರ್ಯ, ಅಷ್ಟೋತ್ತರಶತಗಾಯತ್ರೀ ಜಪ ಮಾಡದ ಬ್ರಾಹ್ಮಣನು ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು.

ಪ್ರಾತಃ ಸಂಧ್ಯೆಯಂತೆ ಆಚಮನ ಪ್ರಾಣಾಯಾಮ ಪರ್ಯಂತ ಮಾಡಿ ಮಧ್ಯಾಹ್ನ ಸಂಧ್ಯೆಯ ಸಂಕಲ್ಪಮಾಡಬೇಕು. **"ಆಪಃ ಪುನಂತು"** ಎಂಬ ಮಂತ್ರದಿಂದ ಮಂತ್ರಾಚಮನಮಾಡಿ, ಎರಡನೆಯ ಮೂರನೆಯ ಮತ್ತು ನಾಲ್ಕನೆಯ ಮಾರ್ಜನಗಳನ್ನೂ ಅಘಮರ್ಷಣವನ್ನೂ ಮಾಡಬೇಕು. ಆಮೇಲೆ ಎದ್ದುನಿಂತು **"ಹಂಸಃ ಶುಚಿಷ"** ಎಂಬ ಮಂತ್ರದಿಂದ ಸೂರ್ಯನಿಗೆ ಅರ್ಘ್ಯಪ್ರದಾನ ಮಾಡಬೇಕು. ಒಂದೇ ಅರ್ಘ್ಯ ಸಾಕೆಂದು ಧರ್ಮಸಿಂಧು ಮೊದಲಾದವುಗಳಲ್ಲಿ ಹೇಳಿದೆ. ಆಚಾರದಲ್ಲಿಯೂ ಹಾಗೆಯೇ ಇದೆ.

**ಮಂತ್ರಸ್ಯ ಗೌತಮೋ ವಾಮದೇವಃ ಸೂರ್ಯೋ ಜಗತೀ ಸೂರ್ಯಾಯ ಅರ್ಘ್ಯದಾನೇ ವಿನಿಯೋಗಃ ॥ ಓಂ ಹಂಸ ಶುಚಿಷದ್ವಸುರಂತರಿಕ್ಷಸದ್ಧೋತಾ-ವೇದಿಷದತಿಥಿರ್ದುರೋಣಸತ್ ॥ ನೃಷದ್ವರಸದೃತಸದ್ವ್ಯೋಮಸದಬ್ಜಾಗೋಜಾ ಋತಜಾ ಅದ್ರಿಜಾ ಋತಂ ॥ ಶ್ರೀ ಸೂರ್ಯಾಯ ಇದಮರ್ಘ್ಯಂ ಸಮರ್ಪ-ಯಾಮಿ ॥ ಇತಿ ತ್ರಿಃ ಸಕೃದ್ವಾ ದದ್ಯಾತ್ ॥ ಆತ್ಮಾನಂ ಪರಿಷಿಚ್ಯ ॥ ಅಸಾವಾದಿತ್ಯೋಬ್ರಹ್ಮ ॥ ದ್ವಿರಾಚಮ್ಯ ॥ ಊರ್ಧ್ವಬಾಹುರುನ್ಮುಖಃ ಸೂರ್ಯ-ಮುಪತಿಷ್ಠೇತ್ ॥**

**ಉದುತ್ಯಮಿತಿ ತ್ರಯೋದಶರ್ಚಸ್ಯ ಸೂಕ್ತಸ್ಯ ಕಾಣ್ವಃ ಶ್ರೀಸೂರ್ಯೋ ದೇವತಾ । ನವಾದ್ಯಾ ಗಾಯತ್ರ್ಯಃ । ಅಂತ್ಯಾಶ್ಚತಸ್ರೋಽನುಷ್ಟುಭಃ । ಸೂರ್ಯೋ-ಪಸ್ಥಾನೇ ವಿನಿಯೋಗಃ ॥ ಓಂ ಉದುತ್ಯಂ ಜಾತವೇದಸಂ ದೇವಂ ವಹಂತಿ ಕೇತವಃ । ದೃಶೇವಿಶ್ವಾಯ ಸೂರ್ಯಂ ॥ ಅಪತ್ಯೇತಾಯವ್ರೋ ಯಥಾನಕ್ಷ-ತ್ರಾಯಂ ತ್ಯಕ್ತುಭಿಃ । ಸೂರಾಯ ವಿಶ್ವಚಕ್ಷಸೇ ॥ ಅದೃಶ್ರಮಸ್ಯಕೇತವ್ರೋ ವಿರಶ್ಮಯೋ ಜನಾಂ ಅನು । ಭ್ರಾಜಂತೋ ಅಗ್ನಯೋ ಯಥಾ ॥ ತರಣಿರ್ವಿ-ಶ್ವದರ್ಶತೋ ಜ್ಯೋತಿಷ್ಕೃದಸಿ ಸೂರ್ಯ । ವಿಶ್ವಮಾಭಾಸಿರೋಚನಂ ॥ ಪ್ರತ್ಯಜ್ ದೇವಾನಾಂ ವಿಶಃ ಪ್ರತ್ಯಜುದೇಷಿ ಮಾನುಷಾನ್ । ಪ್ರತ್ಯಜ್ ವಿಶ್ವಂ ಸ್ವರ್ದೃಶೇ ॥ ೧ ॥ ಯೇನಾ ಪಾವಕಚಕ್ಷಸಾ ಭುರಣ್ಯಂ ತಂಜನಾಂ ಅನು । ತ್ವಂ ವರುಣ ಪಶ್ಯಸಿ ॥ ವಿದ್ಯಾಮೇಷಿರಜಸ್ಪೃಥ್ವಹಾಮಿಮಾನೋ ಅಕ್ತುಭಿಃ । ಪಶ್ಯನ್ ಜನ್ಮಾನಿ ಸೂರ್ಯ ॥ ಸಪ್ತತ್ವಾ ಹರಿತೋ ರಥೇ ವಹಂತಿ ದೇವ ಸೂರ್ಯ । ಶೋಚಿಷ್ಕೇಶಂ ವಿಚಕ್ಷಣ ॥ ಅಯುಕ್ತಸಪ್ತಶುಂಧ್ಯುವಃ**

---

ಸೂರ್ಯನಿಗೆ ಅಭಿಮುಖವಾಗಿ ಎದ್ದುನಿಂತು ಕೈಗಳನ್ನು ಮೇಲೆತ್ತಿ **"ಉದುತ್ಯಂ"** ಅಥವಾ **"ಚಿತ್ರಂ ದೇವಾನಾಂ"** ಇವುಗಳಲ್ಲಿ ಒಂದು ಋಕ್‌ನಿಂದ ಉಪಸ್ಥಾನಮಾಡಬೇಕು. **"ಯುವತೀಂ..."** ಎಂಬುದು ವಿಶೇಷ. ಉಳಿದುದನ್ನೆಲ್ಲ ಪ್ರಾತಃ ಸಂಧ್ಯಾವಂದನೆ ಯಂತೆ ಮಾಡಬೇಕು.

ಸೂರೋರಥಸ್ಯನಪ್ತ್ಯಃ । ತಾಭಿರ್ಯಾತಿಸ್ವಯುಕ್ತಿಭಿಃ ॥ ಉದ್ವಯಂತಮಸಸ್ಪರಿ-ಜ್ಯೋತಿಷ್ಪಶ್ಯಂತ ಉತ್ತರಂ । ದೇವಂ ದೇವತ್ರಾ ಸೂರ್ಯಮಗನ್ಮಜ್ಯೋತಿ-ರುತ್ತಮಂ ॥ ಉದ್ಯನ್ನದ್ಯಮಿತ್ರಮಹಆರೋಹನ್ನುತ್ತರಾಂ ದಿವಂ । ಹೃದ್ರೋಗಂ ಮಮ ಸೂರ್ಯ ಹರಿಮಾಣಂ ಚ ನಾಶಯ ॥ ಶುಕೇಷು ಮೇ ಹರಿಮಾಣಂ ರೋಪಣಾಕಾಸುದಧ್ಮಸಿ । ಅಥೋ ಹಾರಿದ್ರವೇಷು ಮೇ ಹರಿಮಾಣಂ ನಿದಧ್ಮಸಿ ॥ ಉದಗಾದಯಮಾದಿತ್ಯೋವಿಶ್ವೇನಸಹಸಾಸಹ । ದ್ವಿಷಂತಂ ಮಹ್ಯಂ ರಂಧ-ಯನ್ಮೋ ಅಹಂದ್ವಿಷತೇರಧಂ ॥ ೨ ॥ ಚಿತ್ರಂ ದೇವಾನಾಮಿತಿ ಷಳರ್ಚಸ್ಯ ಸೂಕ್ತಸ್ಯ ಆಂಗಿರಸಃ ಕುತ್ಸಃ ಸೂರ್ಯಸ್ತ್ರಿಷ್ಟುಪ್ ಸೂರ್ಯೋಪಸ್ಥಾನೇ ವಿನಿಯೋಗಃ ॥ ಓಂ ಚಿತ್ರಂ ದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ । ಆಪ್ರಾದ್ಯಾವಾ ಪೃಥಿವೀ ಅಂತರಿಕ್ಷಂ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ ॥ ಸೂರ್ಯೋದೇವೀಮುಷಸಂ ರೋಚಮಾನಾಂ ಮರ್ಯೋ-ನಯೋಷಾಮಭ್ಯೇತಿ ಪಶ್ಚಾತ್ । ಯತ್ರಾ ನರೋ ದೇವಯಂತೋ ಯುಗಾನಿ ವಿತನ್ವತೇ ಪ್ರತಿಭದ್ರಾಯ ಭದ್ರಂ ॥ ಭದ್ರಾ ಅಶ್ವಾ ಹರಿತಃ ಸೂರ್ಯಸ್ಯ ಚಿತ್ರಾ ಏತಗ್ವಾ ಅನುಮಾದ್ಯಾಸಃ । ನಮಸ್ಯಂತೋ ದಿವ ಆಪೃಷ್ಠಮಸ್ಥುಃ ಪರಿದ್ಯಾವಾ ಪೃಥಿವೀಯಂತಿಸದ್ಯಃ ॥ ತತ್ಸೂರ್ಯಸ್ಯ ದೇವತ್ವಂ ತನ್ಮಹಿತ್ವಂ ಮಧ್ಯಾಕರ್ತೋ-ರ್ವಿತತಂ ಸಂಜಭಾರ ॥ ಯದೇದ ಯುಕ್ತ ಹರಿತಃ ಸಧಸ್ಥಾದಾದ್ರಾತ್ರೀವಾಸ-ಸ್ತನುತೇಸಿಮಸ್ಮೈ ॥ ತನ್ಮಿತ್ರಸ್ಯವರುಣಸ್ಯಾಭಿಚಕ್ಷೇ ಸೂರ್ಯೋ ರೂಪಂ ಕೃಣುತೇ ದ್ಯೋರುಪಸ್ಥೇ । ಅನಂತಮನ್ಯದ್ರುಶದಸ್ಯಪಾಜಃ ಕೃಷ್ಣ ಮನ್ಯದ್ಧರಿತಃ ಸಂಭರಂತಿ ॥ ಅದ್ಯಾದೇವಾ ಉದಿತಾ ಸೂರ್ಯಸ್ಯನಿರಂಹಸಃ ಪಿಪೃತಾನಿರ-ವದ್ಯಾತ್ ॥ ತನ್ನೋ ಮಿತ್ರೋ ವರುಣೋ ಮಾಮಹಂತಾಮದಿತಿಃ ಸಿಂಧುಃ ಪೃಥಿವೀ ಉತದ್ಯೌಃ ॥ ೩ ॥

ಇತ್ಯುಪಸ್ಥಾಯ ಉಪವಿಶ್ಯ ಆಚಮ್ಯ ಪ್ರಾಣಾಯಾಮಮಾಸನವಿಧಿಂ ನ್ಯಾಸಾಂಶ್ಚ ಕೃತ್ವಾ । ಯುವತೀಂ ಯುವಾದಿತ್ಯಮಂಡಲಮಧ್ಯಸ್ಥಾಂ ಶ್ವೇತ-ವರ್ಣಾಂ ಶ್ವೇತಾಂಬರಾನುಲೇಪನಸ್ರಗಾಭರಣಾಂ ಚತುರ್ವಕ್ತ್ರಾಂ ಪ್ರತಿವಕ್ತ್ರಂ ತ್ರಿನೇತ್ರಾಂ ಚಂದ್ರಶೇಖರಾಂ ತ್ರಿಶೂಲಖಡ್ಗಖಟ್ವಾಂಗ ಡಮರ್ವಂಕಚತುರ್ಭುಜಾಂ ವೃಷಭಾಸನಾರೂಢಾಂ ರುದ್ರದೈವತ್ಯಾಂ ಯಜುರ್ವೇದಮುದಾಹರಂತೀಂ ಭುವ-ರ್ಲೋಕಾಧಿಷ್ಠಾತ್ರೀಂ ಸಾವಿತ್ರೀಂ ನಾಮ ದೇವತಾಂ ಧ್ಯಾತ್ವಾ ॥ ಆಗಚ್ಛ ವರದೇ ದೇವಿ ..... ॥ ಯಥೇಷ್ಟಂ ಜಪಂ ಕುರ್ಯಾತ್ ॥ ವಿಷ್ಣುಸ್ಮರಣಾಂತ ಮನ್ಯತ್ಸರ್ವಂ ಪ್ರಾತಃ ಸಂಧ್ಯಾವತ್ ॥ ಪ್ರಸಂಗಾನ್ನಿಶಿ ತು-ರಾತ್ರೌ ಪ್ರಹರ-ಪರ್ಯಂತಮಿತ್ಯನುಜ್ಞಾತಃ ರಾತ್ರೌ ಮಧ್ಯಾಹ್ನ ಸಂಧ್ಯಾಯಾಂ 'ಆಕೃಷ್ಣೇನೇ'-ತ್ಯರ್ಘ್ಯದಾನಂ ॥ ಗಾಯತ್ರ್ಯಾ ಪ್ರಾಯಶ್ಚಿತ್ತಾರ್ಥಂ ದ್ವಿತೀಯಂ ದತ್ವಾ 'ಹವಿಷ್ಪಾಂತ' ಮಿತಿ ಪಂಚರ್ಚೇನೋಪಸ್ಥಾನಂ ಕಾರ್ಯಂ ॥

॥ ಇತಿ ಮಧ್ಯಾಹ್ನ ಸಂಧ್ಯಾ ॥

---

**"ರಾತ್ರೌ ಪ್ರಹರಪರ್ಯಂತಂ"** ಎಂಬ ಆಧಾರದಂತೆ ಮಧ್ಯಾಹ್ನ ಸಂಧ್ಯೆಯನ್ನು ರಾತ್ರಿಯಲ್ಲಿ ಮಾಡುವುದಾದರೆ, **"ಆಕೃಷ್ಣೇನ"** ಎಂಬ ಮಂತ್ರದಿಂದ ಅರ್ಘ್ಯದಾನ ಮಾಡಿ, ಪ್ರಾಯಶ್ಚಿತ್ತಕ್ಕಾಗಿ ಗಾಯತ್ರೀಮಂತ್ರದಿಂದ ಮತ್ತೊಂದು ಅರ್ಘ್ಯವನ್ನು ಕೊಟ್ಟು **"ಹವಿಷ್ಪಾಂತ"** ಎಂಬ ಮಂತ್ರದಿಂದ ಉಪಸ್ಥಾನ ಮಾಡಬೇಕು.

# ೭

# ವೈಶ್ವದೇವಪ್ರಯೋಗಃ

**ಅಥ ಪ್ರಾತಃ ಸಾಯಂ ವೈಶ್ವದೇವಸಹಕರಣಪಕ್ಷೇ ತಂತ್ರಪ್ರಯೋಗಃ । ಅಗ್ನೇಃ ಪಶ್ಚಾತ್ ಪ್ರಾಙ್ಮುಖ ಉಪವಿಶ್ಯ ಆಚಮ್ಯ ಪ್ರಾಣಾಯಾಮಂ ಕೃತ್ವಾ ದೇಶಕಾಲೌ ನಿರ್ದಿಶ್ಯ ಮಮೋಪಾತ್ತದುರಿತಕ್ಷಯದ್ವಾರಾ ಶ್ರೀಪರಮೇಶ್ವರ-ಪ್ರೀತ್ಯರ್ಥಂ ಆತ್ಮಾನ್ನಸಂಸ್ಕಾರಪಂಚಸೂನಾಜನಿತದೋಷಪರಿಹಾರಾರ್ಥಂ ಪ್ರಾತ-ರ್ವೈಶ್ವದೇವಂ ಸಾಯಂ ವೈಶ್ವದೇವಂ ಚ ಸಹ ತಂತ್ರೇಣ ಕರಿಷ್ಯೇ ॥ ಕುಂಡೇ ಸ್ಥಂಡೀಲಾದೌ ವಾ ಪಚನಾಗ್ನಿಂ, ಜುಷ್ಟೋದಮೂನಾ ಆತ್ರೇಯೋ ವಸುಶ್ರು-ತೋಽಗ್ನಿಸ್ತ್ರಿಷ್ಟುಪ್, ಏಹ್ಯಗ್ನೇ ರಾಹುಗಣೋ ಗೋತಮೋಽಗ್ನಿಸ್ತ್ರಿಷ್ಟುಪ್**

---

ಬೆಳಗ್ಗಿನ ಮತ್ತು ಸಾಯಂಕಾಲದ ವೈಶ್ವದೇವಯಜ್ಞವನ್ನು ಒಂದಾಗಿ ಮಾಡುವ ವಿಧಾನವನ್ನು ಇಲ್ಲಿ ಹೇಳಲಾಗಿದೆ. ಬೇರೆ ಬೇರೆಯಾಗಿ ಮಾಡುವುದಾದರೆ ಬೆಳಗ್ಗೆ **'ಪ್ರಾತರ್ವೈಶ್ವದೇವಂ'** ಎಂದೂ ಸಾಯಂಕಾಲ **'ಸಾಯಂ ವೈಶ್ವದೇವಂ'** ಎಂದೂ ಸಂಕಲ್ಪದಲ್ಲಿ ಹೇಳಿಕೊಳ್ಳಬೇಕು. ಚೆನ್ನಾಗಿ ಬೆಂಕಿ ಉರಿಯುತ್ತಿರುವ ಒಲೆಯಲ್ಲಿ ಅಥವಾ ಪ್ರತ್ಯೇಕವಾಗಿ ಸ್ಥಂಡಿಲವನ್ನು ನಿರ್ಮಿಸಿ ಅದರಲ್ಲಿ **'ಜುಷ್ಟೋದಮೂನಾ'** ಮುಂತಾಗಿ ಎರಡು ಮಂತ್ರಗಳನ್ನು ಹೇಳಿ ಅಕ್ಷತೆಗಳಿಂದ ಅಗ್ನಿಯನ್ನು ಆವಾಹಿಸಬೇಕು. ಬಳಿಕ ಮುಚ್ಚಿದ ಆಚ್ಛಾದನವನ್ನು ತೆಗೆದು **'ಭೂರ್ಭುವಃ ಸ್ವಃ'** ಇತ್ಯಾದಿ ಹೇಳುತ್ತ ಅಕ್ಷತೆಗಳನ್ನು ಹಾಕಿ ಅಗ್ನಿಯನ್ನು ಪ್ರತಿಷ್ಠಾಪಿಸಬೇಕು. ನೀರಿನಿಂದ ಪ್ರೋಕ್ಷಿಸಲ್ಪಟ್ಟ ಕಟ್ಟಿಗೆ ತುಂಡುಗಳನ್ನಿಟ್ಟು ಬಿದಿರ ಓಟೆಯಿಂದ ಚೆನ್ನಾಗಿ ಗಾಳಿ ಹಾಕಿ ಅಗ್ನಿಯು ಉರಿಯುವಂತೆ ಮಾಡಿದ ಮೇಲೆ **'ಚತ್ವಾರಿಶೃಂಗಾ'** ಎಂಬ ಮಂತ್ರವನ್ನು ಹೇಳುತ್ತ ಅಗ್ನಿಯ ಧ್ಯಾನಮಾಡಬೇಕು. ಧ್ಯಾನ ಮಾಡಿದ ಮೇಲೆ ಅಗ್ನಿಯ ಸುತ್ತಲೂ ಇರಬಹುದಾದ ಕಸಕಡ್ಡಿಗಳನ್ನೆಲ್ಲ ಕೈಯಿಂದ ಒರಸಿ ತೆಗೆದು ನೀರನ್ನು ಪ್ರೋಕ್ಷಿಸಿ, **'ವಿಶ್ವಾನಿನ'** ಎಂಬ ಮಂತ್ರವನ್ನು ಹೇಳುತ್ತ, ಪೂರ್ವ ದಿಕ್ಕಿನಿಂದ ಪ್ರಾರಂಭಿಸಿ ಒಂದೊಂದು ಚರಣದಿಂದ ಒಂದೊಂದು ದಿಕ್ಕಿನಲ್ಲಿ ಕ್ರಮವಾಗಿ ಗಂಧ ಅಕ್ಷತೆ-ಹೂಗಳನ್ನು ಇಡುತ್ತ ಬರಬೇಕು. ಆಮೇಲೆ **'ಯಸ್ಮೈತ್ವಂ ಸುಕೃತೇ'** ಎಂಬ ಮಂತ್ರವನ್ನು ಹೇಳುವಾಗ ಕೈಜೋಡಿಸಿಕೊಂಡಿರಬೇಕು. ಹಣೆಗೆ ಬೊಟ್ಟು ಇಟ್ಟು ತನ್ನನ್ನು ಅಲಂಕರಿಸಿ ಕೈ ತೊಳೆದು, ತುಪ್ಪ ಮುಟ್ಟಿಸಿದ ಅನ್ನವನ್ನು ಅಗ್ನಿಯ ಹತ್ತಿರ ಇಟ್ಟು ಪ್ರೋಕ್ಷಿಸಿ, ಅಗ್ನಿಯ ಪಶ್ಚಿಮದಲ್ಲಿಟ್ಟು ಮೂರು ಪಾಲು ಮಾಡಬೇಕು. ಎಡ ಅಂಗೈಯನ್ನು ಎದೆಯ ಮೇಲಿಟ್ಟು ಬಲಗೈಯಿಂದ ಹಸಿ ನೆಲ್ಲಿಕಾಯಿಯಷ್ಟು ಅನ್ನವನ್ನು ತೆಗೆದುಕೊಂಡು ಹೆಬ್ಬೆರಳಿನಿಂದ ಒತ್ತಿ ಅಂಗೈಯಲ್ಲಿ ಹಿಡಿದು, ಓಂಕಾರವಿಲ್ಲದ **'ಸೂರ್ಯಾಯ'** ಮುಂತಾದ ಮಂತ್ರಗಳನ್ನು ಹೇಳುತ್ತ ಆಹುತಿಕೊಡಬೇಕು. ಸಾಯಂಕಾಲದ ಯಜ್ಞದಲ್ಲಿ **'ಸೂರ್ಯಾಯ'** ಎಂಬುದಕ್ಕೆ ಬದಲಾಗಿ **'ಅಗ್ನಯೇ'** ಎಂಬ ಮಂತ್ರದಿಂದ ಆರಂಭಿಸಿ ಉಳಿದ ಒಂಭತ್ತು ಆಹುತಿಗಳನ್ನು ಕೊಡಬೇಕು. ಆಮೇಲೆ ಮೊದಲಿನಂತೆ ಮೂರುಬಾರಿ ಅಗ್ನಿಯ ಸುತ್ತಲೂ ಒರಸಿ ಶುಚಿಮಾಡಿ

**ಅಗ್ನ್ಯಾವಾಹನೇ ವಿನಿಯೋಗಃ ॥ ಓಂ ಜುಷ್ಟೋದಮೂನಾ ಅತಿಥಿರ್ದುರೋಣ ಇಮಂನೋಯಜ್ಞಮುಪಯಾಹಿ ವಿದ್ವಾನ್ । ವಿಶ್ವಾ ಅಗ್ನೇ ಅಭಿ ಯುಜೋ- ವಿಹತ್ಯಾಶತ್ರೂಯತಾಮಾಭರಾಭೋಜನಾನಿ । ಓಂ ವಿಹ್ಯಗ್ನ ಇಹ ಹೋತಾ ನಿಷೀದಾದಬ್ಧಃಸುಪುರಏತಾಭವಾನಃ । ಅವತಾಂ ತ್ವಾರೋದಸೀ ವಿಶ್ವಮಿನ್ವೇಯ- ಜಾಮಹೇ ಸೌಮನಸಾಯದೇವಾನ್ ॥ ಇತ್ಯಕ್ಷತೈರಾವಾಹ್ಯ ಆಚ್ಛಾದನಂ ದೂರೀಕೃತ್ಯ ಸಮಸ್ತವ್ಯಾಹೃತೀನಾಂ ಪರಮೇಷ್ಠೀ ಪ್ರಜಾಪತಿಃ ಪ್ರಜಾಪತಿರ್ಬೃ- ಹತೀ ॥ ಅಗ್ನಿಪ್ರತಿಷ್ಠಾಪನೇ ವಿನಿಯೋಗಃ ॥ ಓಂ ಭೂರ್ಭುವಃಸ್ವಃ ಪಾವಕ- ನಾಮಾನಮಗ್ನಿಂ ಪ್ರತಿಷ್ಠಾಪಯಾಮಿ ॥ ಪ್ರೋಕ್ಷಿತೇಂಧನಾನಿ ನಿಕ್ಷಿಪ್ಯ ವೇಣು- ಧಮನ್ಯಾ ಪ್ರಬೋಧ್ಯ ಧ್ಯಾಯೇತ್ ॥ ಚತ್ವಾರಿಶೃಂಗಾ ಗೌತಮೋವಾಮ- ದೇವೋಗ್ನಿಸ್ತ್ರಿಷ್ಟುಪ್ ಅಗ್ನಿಮೂರ್ತಿಧ್ಯಾನೇ ವಿನಿಯೋಗಃ ॥ ಓಂ ಚತ್ವಾರಿ- ಶೃಂಗಾತ್ರಯೋ ಅಸ್ಯಪಾದಾ ದ್ವೇ ಶೀರ್ಷೇಸಪ್ತಹಸ್ತಾಸೋಅಸ್ಯ । ತ್ರಿಧಾಬದ್ಧೋ- ವೃಷಭೋರೋರವೀತಿ ಮಹೋದೇವೋ ಮರ್ತ್ಯಾ ಆವಿವೇಶ ॥ ಸಪ್ತಹಸ್ತ- ಶ್ಚತುಃಶೃಂಗಃ ಸಪ್ತಜಿಹ್ವೋ ದ್ವಿಶೀರ್ಷಕಃ ॥ ತ್ರಿಪಾತ್ಪ್ರಸನ್ನವದನಃ ಸುಖಾಸೀನಃ ಶುಚಿಸ್ಮಿತಃ ॥ ಸ್ವಾಹಾಂ ತು ದಕ್ಷಿಣೇ ಪಾರ್ಶ್ವೇ ದೇವೀಂ ವಾಮೇ ಸ್ವಧಾಂ ತಥಾ ॥ ಬಿಭ್ರದ್ದಕ್ಷಿಣಹಸ್ತೈಸ್ತು ಶಕ್ತಿಮನ್ನಂ ಸ್ರುಚಂ ಸ್ರುವಂ ॥ ತೋಮರಂ ವ್ಯಜನಂ ವಾಮೈರ್ಘೃತಪಾತ್ರಂ ಚ ಧಾರಯನ್ ॥ ಮೇಷಾರೂಢೋ ಜಟಾ- ಬದ್ಧೋ ಗೌರವರ್ಣೋ ಮಹೌಜಸಃ ॥ ಧೂಮ್ರಧ್ವಜೋ ಲೋಹಿತಾಕ್ಷಃ ಸಪ್ತಾರ್ಚಿಃ ಸರ್ವಕಾಮದಃ ॥ ಆತ್ಮಾಭಿಮುಖಮಾಸೀನ ಏವಂ ರೂಪೋ ಹುತಾಶನಃ ॥ ಅಗ್ನೇ ವೈಶ್ವಾನರ ಶಾಂಡಿಲ್ಯಗೋತ್ರ ಮೇಷಧ್ವಜ**

---

ಅಲಂಕರಿಸಬೇಕು. ಅಗ್ನಿಗೆ ಪಂಚೋಪಚಾರ ಪೂಜೆಯನ್ನರ್ಪಿಸಿ, "**ಅಗ್ನಿಸ್ತು**" ಎಂಬ ಮಂತ್ರದಿಂದ ಪುಷ್ಪಾಂಜಲಿ ಅರ್ಪಿಸುವುದು. "**ಮಾನಸ್ತೋಕೇ**" ಮಂತ್ರದಿಂದ ಭಸ್ಮಧಾರಣಮಾಡುವುದು. ಎದ್ದುನಿಂತು ಬಗ್ಗಿ ಎರಡು ಅಂಗೈಗಳನ್ನು ನೆಲದಲ್ಲಿ ಅಗ್ನಿಗೆ ಅಭಿಮುಖರಾಗಿ ಹಿಡಿದು "**ಓಂಚಮೇ**" ಎಂಬ ಪ್ರಾರ್ಥನೆ ಮಾಡುವುದು.

ಪ್ರಾಙ್ಮುಖೋ ದೇವ ಮಮ ಸಮ್ಮುಖೋ ವರದೋ ಭವ ॥ ಇತಿ ಧ್ಯಾತ್ವಾ ಪರಿಸಮೂಹನ ಪರ್ಯುಕ್ಷಣೇ ಕೃತ್ವಾ ॥ ವಿಶ್ವಾನಿನ ಇತ್ಯಲಂಕೃತ್ಯ ॥

ವಿಶ್ವಾನಿನ ಇತಿ ತಿಸೃಣಾಂ ಆತ್ರೇಯೋ ವಸುಶ್ರುತೋಗ್ನಿಸ್ತ್ರಿಷ್ಟುಪ್ ॥ ದ್ವಯೋರರ್ಚನೇ ಅಂತ್ಯಾಯಾ ಉಪಸ್ಥಾನೇ ವಿನಿಯೋಗಃ ॥ ಓಂ ವಿಶ್ವಾನಿನೋ ದುರ್ಗಹಾ ಜಾತವೇದಃ ॥ ಓಂ ಸಿಂಧುಂನನಾವಾ ದುರಿತಾತಿಪರ್ಷಿ ॥ ಓಂ ಅಗ್ನೇಅತ್ರಿವನ್ನಮಸಾಗೃಣಾನಃ ॥ ಓಂ ಅಸ್ಮಾಕಂ ಬೋಧ್ಯವಿತಾತನೂನಾಂ ॥ ಓಂ ಯಸ್ತ್ವಾ ಹೃದಾ ಕೀರಿಣಾಮನ್ಯಮಾನಃ ॥ ಓಂ ಅಮರ್ತ್ಯಂ ಮರ್ತ್ಯೋ ಜೋಹವೀಮಿ ॥ ಓಂ ಜಾತವೇದೋಯಶೋ ಅಸ್ಮಾಸು ಧೇಹಿ ॥ ಓಂ ಪ್ರಜಾಭಿರಗ್ನೇ ಅಮೃತತ್ವಮಶ್ಯಾಂ ॥ ಓಂ ಯಸ್ಮೈ ತ್ವಂ ಸುಕೃತೇ ಜಾತವೇದ ಉಲೋಕ ಮಗ್ನೇ ಕೃಣವಃಸ್ಯೋನಂ ॥ ಅಶ್ವಿನಂ ಸಪುತ್ರಿಣಂ ವೀರವಂತಂಗೋಮಂತಂರ-ಯಿನ್ನಶತೇ ಸ್ವಸ್ತಿ ॥ ಆತ್ಮಾನಂ ಚಾಲಂಕೃತ್ಯ ಹಸ್ತಂ ಪ್ರಕ್ಷಾಲ್ಯ ॥ ಘೃತಾಕ್ತ-ಮನ್ನಮಗ್ನಾವಧಿಶ್ರಿತ್ಯ ಉದಗುದ್ವಾಸ್ಯ ಪ್ರೋಕ್ಷ್ಯ ಅಗ್ನೇಃ ಪಶ್ಚಿಮತೋ ನಿಧಾಯ ತ್ರಿಧಾ ವಿಭಜ್ಯ ॥ ಸವ್ಯಂ ಪಾಣಿತಲಂ ಹೃದಿ ನ್ಯಸ್ಯ ದಕ್ಷಿಣಹಸ್ತೇನ ದಕ್ಷಿಣ ಭಾಗಾದಾರ್ದ್ರಾಮಲಕಮಿತಮನ್ನಮಾದಾಯ ಅಂಗುಷ್ಠಾಗ್ರೇಣ ಪೀಡಿತಂ ಸಂಹ-ತಾಂಗುಲ್ಯುತ್ತಾನಪಾಣಿನಾ, ಪ್ರಣವಾದಿರಹಿತೈಃ ಸ್ವಾಹಾಂತೈಃ ಸೂರ್ಯಾದಿ ಮಂತ್ರೈಃ ಜುಹುಯಾತ್ ॥ ಸೂರ್ಯಾಯ ಸ್ವಾಹಾ ಸೂರ್ಯಾಯೇದಂ ನಮಮ ॥ ಪ್ರಜಾಪತಯೇ ಸ್ವಾಹಾ ಪ್ರಜಾಪತಯ ಇದಂ ನಮಮ ॥ ಅಗ್ನೀ-ಷೋಮಾಭ್ಯಾಂ ಸ್ವಾಹಾ ಅಗ್ನೀಷೋಮಾಭ್ಯಾಂ ಇದಂ ನಮಮ ॥ ಇಂದ್ರಾ-ಗ್ನಿಭ್ಯಾಂ ... ಇಂದ್ರಾ.... ॥ ದ್ಯಾವಾಪೃಥಿವೀಭ್ಯಾಂ ಸ್ವಾಹಾ ದ್ಯಾವಾ... ॥ ಧನ್ವಂತರಯೇ ಸ್ವಾಹಾ ಧನ್ವಂತರಯ ...... ॥ ಇಂದ್ರಾಯ ಸ್ವಾಹಾ ಇಂದ್ರಾಯ... ॥ ವಿಶ್ವೇಭ್ಯೋ ದೇವೇಭ್ಯಃ ಸ್ವಾಹಾ ವಿಶ್ವೇಭ್ಯೋ... ॥ ಬ್ರಹ್ಮಣೇ ಸ್ವಾಹಾ ಬ್ರಹ್ಮಣ ಇದಂ... ॥ ಸಾಯಂ ವೈಶ್ವದೇವೀಯಾಃ ॥ ಅಗ್ನಯೇ ಸ್ವಾಹಾ ಅಗ್ನಯ ಇದಂ ನಮಮ ॥ ಪ್ರಜಾಪತಯ ಇತ್ಯಾದಿ

ಬ್ರಹ್ಮಣಾ ಇತ್ಯಂತಂ ಪೂರ್ವವನ್ನವಾಹುತೀರ್ಹುತ್ವಾ ॥ (ಭೂಃ ಸ್ವಾಹಾ ಅಗ್ನಯ ಇದಂ.... ॥ ಭುವಃ ಸ್ವಾಹಾ ವಾಯವ.... ॥ ಸ್ವಃ ಸ್ವಾಹಾ ಸೂರ್ಯಾಯ..... ॥ ಭೂರ್ಭುವಃ ಸ್ವಃ ಸ್ವಾಹಾ ಪ್ರಜಾಪತಯ ಇದಂ ನಮಮ)

ತತಃ ತ್ರಿಸ್ತ್ರಿಃ ಪರಿಸಮೂಹನಪರ್ಯುಕ್ಷಣೇ ಕೃತ್ವಾ ಅಗ್ನ್ಯಲಂಕರಣಂ ॥ ಪಂಚೋಪಚಾರ ಪೂಜಾಂತೇ ॥ ಅಗ್ನಿಸ್ತು ವಿಶ್ರವ ಇತ್ಯಸ್ಯಾತ್ರೇಯೋವಸೂಯವ್ಯೋಗ್ನಿಸ್ತ್ರಿಷ್ಟುಪ್ ಪುಷ್ಪಾಂಜಲೌ ವಿನಿಯೋಗಃ ॥ ಓಂ ಅಗ್ನಿಸ್ತು ವಿಶ್ರವಸ್ತಮಂತುವಿಬ್ರಹ್ಮಾಣಮುತ್ತಮಂ ॥ ಅತೂರ್ತಂ ಶ್ರಾವಯತ್ಪತಿಂ ಪುತ್ರಂದದಾತಿದಾಶುಷೇ ॥ ಇತಿ ಪುಷ್ಪಾಂಜಲಿಂ ಸಮರ್ಪ್ಯ, "ಮಾನಸ್ತೋಕ" ಇತಿ ಮಂತ್ರೇಣ ವಿಭೂತಿಂ ಧಾರಯೇತ್ ॥ ಓಂ ಚ ಮೇ ಸ್ವರಶ್ಚ ಮೇ ಯಜ್ಞೋಪಚತೇನಮಶ್ಚ ॥ ಯತ್ತೇ ನ್ಯೂನಂ ತಸ್ಮೈತ ಉಪಯತ್ತೇತಿರಿಕ್ತಂ ತಸ್ಮೈತೇ ನಮಃ ॥ ಅಗ್ನಯೇ ನಮಃ ॥ ಸ್ವಸ್ತಿ ॥ ಶ್ರದ್ಧಾಂ ಮೇಧಾಂ ಯಶಃ ಪ್ರಜ್ಞಾಂ ವಿದ್ಯಾಂ ಬುದ್ಧಿಂ ಶ್ರಿಯಂ ಬಲಂ ॥ ಆಯುಷ್ಯಂ ತೇಜ ಆರೋಗ್ಯಂ ದೇಹಿ ಮೇ ಹವ್ಯವಾಹನ ॥ ಇತಿ ದೇವಯಜ್ಞಃ ॥

## ಅಥ ಭೂತಯಜ್ಞಃ

ಭೂಮಿಂ ಪ್ರೋಕ್ಷ್ಯ ದ್ವಿತೀಯಭಾಗಾದನ್ನಮಾದಾಯ ಪ್ರಾಚೀಮಾರಭ್ಯ ಈಶಾನಪರ್ಯಂತಂ ಚಕ್ರಾಕಾರಂ ನೈರಂತರ್ಯೇಣ, ಸೂರ್ಯಾಯ ಸ್ವಾಹಾ । ಪ್ರಜಾಪತಯೇ ಸ್ವಾಹಾ । ಸೋಮಾಯವನಸ್ಪತಯೇ ಸ್ವಾಹಾ । ಅಗ್ನೀಷೋಮಾಭ್ಯಾಂ ಸ್ವಾಹಾ । ಇಂದ್ರಾಗ್ನಿಭ್ಯಾಂ ಸ್ವಾಹಾ । ದ್ಯಾವಾಪೃಥಿ-

---

**ಭೂತಯಜ್ಞಃ** ಭೂಮಿಯನ್ನು ಪ್ರೋಕ್ಷಿಸಿ, ಶುಚಿಗೊಳಿಸಿ, ಮೊದಲು ಮೂರು ಭಾಗ ಮಾಡಿಟ್ಟ ಅನ್ನದ ಎರಡನೆಯ ಭಾಗದಿಂದ ತೆಗೆದು ಪೂರ್ವದಿಕ್ಕಿನಿಂದ ತೊಡಗಿ ಈಶಾನ್ಯ ದಿಕ್ಕಿನ ವರೆಗೆ ಚಕ್ರಾಕಾರದಲ್ಲಿ ಒಂದೊಂದೇ ಮಂತ್ರವನ್ನು ಹೇಳುತ್ತ, **"ವಾಸ್ತುದೇವತಾಭ್ಯಃ"** ಎಂಬಲ್ಲಿ ವರೆಗೆ ಬಲಿಗಳನ್ನು ಕೊಡಬೇಕು. ಆಮೇಲೆ ಚಕ್ರದ ಹೊರಗೆ ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ ದಿಕ್ಕುಗಳಲ್ಲಿ **"ಇಂದ್ರಾಯ"** ಮುಂತಾಗಿ ಎರಡೆರಡು ಬಲಿಗಳನ್ನು ಕೊಡುವುದು. ಚಕ್ರಮಧ್ಯದಲ್ಲಿ **"ಬ್ರಹ್ಮಣೇ ಸ್ವಾಹಾ"** ಎಂದೂ ಅದರ ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ ಮುಂದಿನ ನಾಲ್ಕು ಬಲಿಗಳನ್ನು ಕೊಡುವುದು.

ವೀಭ್ಯಾಂ ಸ್ವಾಹಾ । ಧನ್ವಂತರಯೇ ಸ್ವಾಹಾ । ಇಂದ್ರಾಯ ಸ್ವಾಹಾ । ವಿಶ್ವೇಭ್ಯೋ ದೇವೇಭ್ಯಃ ಸ್ವಾಹಾ । ಬ್ರಹ್ಮಣೇ ಸ್ವಾಹಾ । ಅದ್ಭ್ಯಃ ಸ್ವಾಹಾ ಓಷಧಿವನಸ್ಪತಿಭ್ಯಃ ಸ್ವಾಹಾ । ಗೃಹಾಯ ಸ್ವಾಹಾ । ಗೃಹದೇವತಾಭ್ಯಃ ಸ್ವಾಹಾ । ವಾಸ್ತುದೇವತಾಭ್ಯಃ ಸ್ವಾಹಾ । ಇತಿ ದತ್ವಾ ಚಕ್ರಾದ್ಬಹಿಃ ಪ್ರಾಚ್ಯಾಂ ಪ್ರಾಕ್ಸಂಸ್ಥಂ ॥ ಇಂದ್ರಾಯ ಸ್ವಾಹಾ । ಇಂದ್ರಪುರುಷೇಭ್ಯಃ ಸ್ವಾಹಾ ॥ ದಕ್ಷಿಣ ಉದಕ್ಸಂಸ್ಥಂ ॥ ಯಮಾಯ ಸ್ವಾಹಾ । ಯಮಪುರುಷೇಭ್ಯಃ ಸ್ವಾಹಾ ॥ ಪಶ್ಚಿಮತಃ ಪ್ರಾಕ್ಸಂಸ್ಥಂ ॥ ವರುಣಾಯ ಸ್ವಾಹಾ । ವರುಣ ಪುರುಷೇಭ್ಯಃ ಸ್ವಾಹಾ ॥ ಉತ್ತರ ಸ್ಯಾಮುದಕ್ಸಂಸ್ಥಂ ॥ ಸೋಮಾಯ ಸ್ವಾಹಾ । ಸೋಮಪುರುಷೇಭ್ಯಃ ಸ್ವಾಹಾ ॥ ಚಕ್ರಮಧ್ಯೇ ॥ ಬ್ರಹ್ಮಣೇ ಸ್ವಾಹಾ ॥ ತತ್ಪ್ರಾಚ್ಯಾಂ ॥ ಬ್ರಹ್ಮಪುರುಷೇಭ್ಯಃ ಸ್ವಾಹಾ ॥ ಬ್ರಹ್ಮಣೋ ದಕ್ಷಿಣತಃ ॥ ವಿಶ್ವೇಭ್ಯೋ ದೇವೇಭ್ಯಃ ಸ್ವಾಹಾ ॥ ಬ್ರಹ್ಮಣಃ ಪಶ್ಚಿಮತಃ ॥ ಸರ್ವೇಭ್ಯೋ ಭೂತೇಭ್ಯೋ ದಿವಾಚಾರಿಭ್ಯಃ ಸ್ವಾಹಾ ॥ ಚಕ್ರಾದುತ್ತರತಃ ॥ ರಕ್ಷೋಭ್ಯಃ ಸ್ವಾಹಾ । ಇತಿದತ್ವಾ ಉಪಸ್ಪೃಶ್ಯ ಉತ್ತರತೋ ಭೂಮಿಂ ಪ್ರೋಕ್ಷ್ಯ ದ್ವಿತೀಯಂ ಭೂತಯಜ್ಞಂ ಕುರ್ಯಾತ್ ॥ ರಾತ್ರೌ 'ದಿವಾ' ಪದಸ್ಥಾನೇ 'ನಕ್ತಂ' ಇತಿ । 'ಸೂರ್ಯ' ಪದಸ್ಥಾನೇ ಅಗ್ನಿಪದಂ ಇತಿ ವಿಶೇಷಃ ॥

# ಅಥ ಪಿತೃಯಜ್ಞಃ

ಪ್ರಾಚೀನಾವಿತೀ ॥ ಆಗ್ನೇಯ್ಯಭಿಮುಖಃ ಸವ್ಯಂಜಾನ್ವಾಚ್ಯೋತ್ತರಭಾಗಾ ದಂಗುಷ್ಠಪರ್ವಮಾತ್ರಮನ್ನಂ ಗೃಹೀತ್ವಾ ಪರಾಚೀನಪಾಣಿನಾ ಚಕ್ರಾದ್ದಕ್ಷಿಣತಃ 'ಸ್ವಧಾ ಪಿತೃಭ್ಯಃ' ಇತಿ ಮಂತ್ರೇಣ ಬಲಿಂ ದತ್ವಾ ಉಪಸ್ಪೃಶ್ಯ ॥ ದ್ವಿತೀಯ ಚಕ್ರಾಗ್ನೇಯಭಾಗೇ ಚ ತಥೈವ ದತ್ವಾ ಅಪಉಪಸ್ಪೃಶ್ಯ । ಸವ್ಯಂ ಪಿತೃಯಜ್ಞಾ-ನ್ನಶೇಷೇಣೈವ ಚಕ್ರಾದ್ಬಹಿಃ ನೈಋತಕೋಣೇ ಶ್ಯಾಮಾಯ, ಚಕ್ರಾದ್ವಾಯವ್ಯ-

---

**ಪಿತೃಯಜ್ಞ:** ಅಪಸವ್ಯದಲ್ಲಿ ಪಿತೃಯಜ್ಞವನ್ನು ಮಾಡಬೇಕು. ಆಗ್ನೇಯಕ್ಕೆ ಮುಖಮಾಡಿ ಎಡ ಮೊಣಕಾಲನ್ನು ನೆಲಕ್ಕೆ ಚಾಚಿ ಕುಳಿತು ಮೂರನೆಯ ಭಾಗದಿಂದ ಅನ್ನವನ್ನು ತೆಗೆದು ಚಕ್ರದ ದಕ್ಷಿಣ ಭಾಗದಲ್ಲಿ ಮತ್ತು ಎರಡನೆಯ ಚಕ್ರದ ಆಗ್ನೇಯ ಭಾಗದಲ್ಲಿ **"ಸ್ವಧಾ ಪಿತೃಭ್ಯಃ"** ಎಂದು ಎರಡು ಬಲಿಗಳನ್ನು ಕೊಡಬೇಕು. ಉಳಿದ ಅನ್ನದಿಂದ ಚಕ್ರಗಳ ಹೊರಗೆ ನೈಋತ್ಯ ದಿಕ್ಕಿನಲ್ಲಿ **'ಶ್ಯಾಮಾಯ'** ಎಂದೂ, ವಾಯುವ್ಯದಲ್ಲಿ **'ಶಬಲಾಯ'** ಎಂದೂ ಎರಡು ಬಲಿಗಳನ್ನು ಕೊಡಬೇಕು. ಆಮೇಲೆ ಹೊರಗೆ ಬಂದು ಅಂಗಳದಲ್ಲಿ ನೀರು ಪ್ರೋಕ್ಷಿಸಿ, **"ಐಂದ್ರವಾರುಣ..."** ಮಂತ್ರವನ್ನು ಹೇಳಿ ನೆಲದಲ್ಲಿ ಅನ್ನವನ್ನು ಚೆಲ್ಲಬೇಕು. ಬಲಿ ಆದಮೇಲೆ ಹಾಲು ಕರೆಯುವಷ್ಟು ಕಾಲ ಅತಿಥಿಗಳಿಗಾಗಿ ಕಾದುನಿಂತು ಶಾಂತಿಮಂತ್ರವನ್ನು ಹೇಳುತ್ತ ಮನೆಯ ಒಳಗೆ ಪ್ರವೇಶಿಸುವುದು.

ಕೋಣೇ ಶಬಲಾಯ ॥ ಇತ್ಯುಭಯತ್ರ ಬಲಿಂದತ್ವಾ; ಬಹಿರ್ಗತ್ವಾ ಗೃಹಾಂಗಣೇ ಜಲಮಾಸಿಚ್ಯ ಶ್ವಚಾಂಡಾಲಪತಿತಭೂತವಾಯಸೇಭ್ಯೋಽನ್ನಂ ಭೂಮೌ ವಿಕಿ-ರೇತ್ ॥ ಐಂದ್ರವಾರುಣವಾಯವ್ಯಾಯಾಮ್ಯಾನೈಋತಿಕಾಶ್ಚ ಯೇ । ತೇ ಕಾಕಾಃ ಪ್ರತಿಗೃಹ್ಣಂತು ಭೂಮ್ಯಾಂ ಪಿಂಡಂ ಮಯೋಜ್ಝಿತಂ ॥ ಇತಿಪಿತೃ ಯಜ್ಞಶೇಷೇಣ ದದ್ಯಾತ್ ॥ ವೈವಸ್ವತಕುಲೇ ಜಾತೌ ದ್ವೌ ಶ್ಯಾಮಶಬಲೌ ಶುನೌ । ತಾಭ್ಯಾಂ ಪಿಂಡೋ ಮಯಾ ದತ್ತೋ ರಕ್ಷೇತಾಂ ಪಥಿ ಮಾಂ ಸದಾ ॥ ಯೇ ಭೂತಾ ಪ್ರಚರಂತಿ ದಿವಾನಕ್ತಂ ಬಲಿಮಿಚ್ಛಂತೋ ವಿತುದಸ್ಯಪ್ರೇಷ್ಯಾಃ ॥ ತೇಭ್ಯೋ ಬಲಿಂ ಪುಷ್ಟಿಕಾಮೋ ದದಾಮಿ ಮಯಿ ಪುಷ್ಟಿಂ ಪುಷ್ಟಿಪತಿರ್ದದಾತು ॥ ರಾತ್ರೌ ಚೇನ್ನಕ್ತಮಿತಿ ಬ್ರೂಯಾತ್ ॥ ಬಲಿದಾನೋತ್ತರಮಂಗಣ ಏವ ಗೋದೋಹನಮಾತ್ರಂ ಸ್ಥಿತ್ವಾ ಅತಿಥಿಮಾಕಾಂಕ್ಷೇತ್ । ಪ್ರಕ್ಷಾಲಿತಪಾಣಿಪಾದ ಆಚಮ್ಯ ಗೃಹಂ ಪ್ರವಿಶನ್ನಿಮಂ ಮಂತ್ರಂ ಪಠೇತ್ ॥ ಓಂ ಶಾಂತಾ ಪೃಥಿವೀ ಶಿವಮಂತರಿಕ್ಷಂ ದ್ಯೌರ್ನೋರ್ದೇವ್ಯಭಯಂ ನೋ ಅಸ್ತು ॥ ಶಿವಾದಿಶಪ್ರದಿಶಉ-ದ್ದಿಶೋ ನ ಆಪೋ ವಿದ್ಯುತಃ ಪರಿಪಾಂತು ಸರ್ವತಃ ॥ ಶಾಂತಿಃ ಶಾಂತಿಃ ಶಾಂತಿಃ ॥ ಸರ್ವಾರಿಷ್ಟಶಾಂತಿರಸ್ತು ಇತಿ ಜಪಿತ್ವಾ ವಿಷ್ಣುಂ ಸ್ಮೃತ್ವಾ ಕರ್ಮಾರ್ಪಯೇತ್ ॥

॥ ಇತಿ ಪಿತೃಯಜ್ಞಃ ॥

---

೮

# ಭೋಜನ ವಿಧಿಃ

**ಪಾಣಿಪಾದೌ ಪ್ರಕ್ಷಾಲ್ಯ ಆಚಮ್ಯ ಶ್ರೀಪರ್ಣ್ಯಾದಿಪೀಠೇ ಪ್ರಾಙ್ಮುಖಃ ಪ್ರತ್ಯಙ್ಮುಖೋ ವಾ ಉಪವಿಶ್ಯ ಭೂಮಿಂ ಪ್ರೋಕ್ಷ್ಯ ಚತುರಸ್ರಮಂಡಲಂ ಕಾರಯಿತ್ವಾ ತದುಪರಿ ದ್ವಿಪಂಚಾಶತ್ಪಲಪರಿಮಿತಂ ಕಾಂಸ್ಯಪಾತ್ರಂ ಅನ್ಯದ್ವಾ ಪರ್ಣಪಾತ್ರಂ ನಿಧಾಯ ಪರಿವೇಷಣಂ ಕಾರಯಿತ್ವಾ ತಸ್ಮಾದನ್ನಾದ್ಗೋಗ್ರಾಸಾರ್ಥಂ ಅನ್ನಂ ಪಾತ್ರಾಂತರೇ ಕೃತ್ವಾ ॥ ಸೌರಭೇಯ್ಯಃ ಸರ್ವಹಿತಾಃ ಪವಿತ್ರಾಃ ಪುಣ್ಯರಾಶಯಃ ॥ ಪ್ರತಿಗೃಹ್ಣಂತು ಗೋಗ್ರಾಸಂ ಗಾವಸ್ತ್ರೈಲೋಕ್ಯಮಾತರಃ ॥ ಇತಿ ಮಂತ್ರೇಣ ಗವೇ ಗ್ರಾಸಂ ದತ್ವಾ ಆಚಮ್ಯ ಪ್ರಾಂಜಲಿರನ್ನಂ ಪ್ರಣಮ್ಯ ॥ ಅಸ್ಮಾಕಂ ನಿತ್ಯಮೇತದಸ್ತು ॥ ಇತಿ ಪ್ರಾರ್ಥ್ಯ ॥ ಓಂ ಭೂರ್ಭುವಃ ಸ್ವಃ ತತ್ಸವಿತು...ಇತಿ ಗಾಯತ್ರ್ಯಾ ಅನ್ನಮಭ್ಯುಕ್ಷ್ಯ ॥ ಓಂ ಸ್ವಾದೋಃಪಿತೋ-ಮಧೋಃಪಿತೋ ವಯಂತ್ವಾವವೃಮಹೇ । ಅಸ್ಮಾಕಮವಿತಾ ಭವ ॥ ಇತಿ ಮಂತ್ರಿತೋದಕೇನ ಅನ್ನಂ ಪ್ರೋಕ್ಷ್ಯ ॥ ಸತ್ಯಂ ತ್ವರ್ತೇನ ಪರಿಷಿಂಚಾಮಿ ॥**

---

ಭೋಜನಮಾಡುವಾಗ ಅನುಸರಿಸಬೇಕಾದ ಪರಿಷಿಂಚನವಿಧಿ: ಕೈಕಾಲು ತೊಳೆದು ಆಚಮನ ಮಾಡಿ ಪೂರ್ವ ಅಥವಾ ಪಶ್ಚಿಮಮುಖವಾಗಿ ಕುಳಿತು, ಭೂಮಿಯನ್ನು ಪ್ರೋಕ್ಷಿಸಿ ಚತುರಸ್ರ ಮಂಡಲ ಮಾಡಿ ಅದರ ಮೇಲೆ ಕಂಚಿನ ಪಾತ್ರೆ ಅಥವಾ ಎಲೆಯನ್ನಿಟ್ಟು ಬಳಸಿ ಆದ ಮೇಲೆ ಗೋಗ್ರಾಸಕ್ಕೆಂದು ಬೇರೆ ಪಾತ್ರೆಯಲ್ಲಿ ಸ್ವಲ್ಪ ಅನ್ನವನ್ನು ತೆಗೆದಿಡಬೇಕು. **"ಸೌರಭೇಯ್ಯಃ"** ಎಂಬ ಮಂತ್ರವನ್ನು ಹೇಳಿ ಗೋಗ್ರಾಸವನ್ನು ಸಮರ್ಪಿಸಬೇಕು. ಆಮೇಲೆ ಆಚಮನ ಮಾಡಿ ಕೈಜೋಡಿಸಿ ಅನ್ನಕ್ಕೆ ನಮಸ್ಕಾರ ಮಾಡಿ, **"ಅಸ್ಮಾಕಂ..."** ಎಂದು ಪ್ರಾರ್ಥಿಸಿ, ಗಾಯತ್ರೀ ಮತ್ತು **"ಸ್ವಾದೋಃಪಿ"** ಎಂಬ ಮಂತ್ರದಿಂದ ಅನ್ನವನ್ನು ಪ್ರೋಕ್ಷಿಸಬೇಕು. ಬಳಿಕ ಕೈ ತುಂಬ ನೀರು ತೆಕ್ಕೊಂಡು ಹಗಲು **"ಸತ್ಯಂತ್ವರ್ತೇನ"** ಎಂದೂ, ರಾತ್ರಿ **"ಋತಂತ್ವಾ"** ಎಂದೂ ಹೇಳಿ ಸುತ್ತುಗಟ್ಟಬೇಕು. **"ಅಂತಶ್ಚರತಿ..."** ಎಂಬ ಮಂತ್ರವನ್ನು ಹೇಳಿ ಪಾತ್ರೆಯ ಬಲಬದಿಯಲ್ಲಿ ನೀರಿನ ಧಾರೆಯನ್ನು ಮೂಡುಮುಖವಾಗಿ ಎರೆದು ಅದರ ಮೇಲೆ ಒಂದೊಂದಾಗಿ **'ಓಂ ಭೂಪತಯೇ'** ಇತ್ಯಾದಿ ಮೂರು ಅಥವಾ **'ಓಂ ಚಿತ್ರಾಯ'** ಇತ್ಯಾದಿ ಐದು ಬಲಿಗಳನ್ನು ಕೊಟ್ಟು ಅವುಗಳ ಮೇಲೆ ನೀರು ಬಿಟ್ಟು ಒಂದುಗೂಡಿಸಬೇಕು. ಕೈ ತೊಳೆದು ಕೈಯಲ್ಲಿ ನೀರು

**ಇತಿ ದಿವಾ ॥ ಋತಂ ತ್ವಾ ಸತ್ಯೇನ ಪರಿಷಿಂಚಾಮಿ ॥ ಇತಿ ರಾತ್ರೌ ॥ ಇತಿ ಪ್ರದಕ್ಷಿಣಮನ್ನಂ ಪರಿಷಿಚ್ಯ ॥ ಅಂತಶ್ಚರತಿ ಭೂತೇಷು ಗುಹಾಯಾಂ ವಿಶ್ವತೋ-ಮುಖಃ । ತ್ವಂ ಯಜ್ಞಃ ತ್ವಂ ವಷಟ್ಕಾರಃ ತ್ವಂ ವಿಷ್ಣುಃ ಪುರುಷಃ ಪರಃ ॥ ಪಾತ್ರಾದ್ದಕ್ಷಿಣತೋ ಭುವಿ ಉದಕಧಾರಾಂ ಪ್ರಾಕ್ಸಂಸ್ಥಾಂ ಕೃತ್ವಾ ತತ್ರ ಕ್ರಮೇಣ ಬಲಿಂ ದದ್ಯಾತ್ ॥ ಓಂ ಭೂಪತಯೇ ನಮಃ ॥ ಭುವನಪತಯೇ ನಮಃ । ಭೂತಾನಾಂ ಪತಯೇ ನಮಃ ॥ ಏವಂ ಬಲಿತ್ರಯಂ ಅಥವಾ ಓಂ ಚಿತ್ರಾಯ ಸ್ವಾಹಾ । ಓಂ ಚಿತ್ರಗುಪ್ತಾಯ ಸ್ವಾಹಾ । ಓಂ ಯಮಾಯ ಸ್ವಾಹಾ । ಓಂ ಯಮದೂತಾಯ ಸ್ವಾಹಾ । ಓಂ ಸರ್ವೇಭ್ಯೋ ಭೂತೇಭ್ಯಃ ಸ್ವಾಹಾ । ಇತಿ ಬಲಿಪಂಚಕಂ ವಾ ದದ್ಯಾತ್ ॥ ಏವಂ ಪ್ರಾಕ್ಸಂಸ್ಥಂ ದತ್ವಾ ತದುಪರ್ಯುದಕಂ ಚ ದತ್ವಾ ಬಲೀನುದ್ಧೃತ್ಯ ಹಸ್ತಂ ಪ್ರಕ್ಷಾಲ್ಯ ಅಪೋಶನಾರ್ಥಂ ಜಲಮಾದಾಯ ॥ ವಾಮಹಸ್ತಮಧ್ಯಮಾನಾಮಿಕಾಂಗುಷ್ಠೈಃ ಭೋಜನಪಾತ್ರಮಾಲಭ್ಯ ॥ ಅನ್ನಂ ಬ್ರಹ್ಮ ರಸೋ ವಿಷ್ಣುಃ ಭೋಕ್ತಾ ದೇವೋ ಮಹೇಶ್ವರಃ । ಪ್ರೀಯತಾಂ ಭಗವಾನೀಶಃ ಪರಮಾತ್ಮಾಸದಾಶಿವಃ। ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ । ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಂ ॥ ಇತ್ಯಸ್ಯ ಅರ್ಥಂ ಧ್ಯಾತ್ವಾ ॥ ಅಮೃತೋಪಸ್ತರಣಮಸಿ ॥ ಇತಿ ಅಪಃ ಪ್ರಾಶ್ಯ ಮೌನೀ ತರ್ಜನೀ ಮಧ್ಯಮಾಂಗುಷ್ಠೈಃ ಓಂ ಪ್ರಾಣಾಯ ಸ್ವಾಹಾ ॥ ಮಧ್ಯಮಾನಾಮಿಕಾಂ-ಗುಷ್ಠೈಃ ಓಂ ಅಪಾನಾಯ ಸ್ವಾಹಾ ॥ ಕನಿಷ್ಠಿಕಾನಾಮಿಕಾಂಗುಷ್ಠೈಃ ಓಂ ವ್ಯಾನಾಯ ಸ್ವಾಹಾ ॥ ಮಧ್ಯಮಾನಾಮಿಕಾಂಗುಷ್ಠೈಃ ಓಂ ಉದಾನಾಯ ಸ್ವಾಹಾ ॥ ಸರ್ವಾಭಿಃ ಓಂ ಸಮಾನಾಯ ಸ್ವಾಹಾ ॥ ಓಂ ಬ್ರಹ್ಮಣೇ ಸ್ವಾಹಾ ॥**

---

ಹಿಡಿದು ಎಡಗೈಯ ಮಧ್ಯಮಾ ಅನಾಮಿಕಾ ಮತ್ತು ಉಂಗುಷ್ಠಗಳಿಂದ ಎಲೆಯನ್ನು ಮುಟ್ಟಿ **"ಓಂ ಅನ್ನಂಬ್ರಹ್ಮ..."** **"ಅಮೃತೋಪಸ್ತರಣಮಸಿ"** ಹೇಳಿ ನೀರು ಕುಡಿಯುವುದು. **"ಪ್ರಾಣಾಯ ಸ್ವಾಹಾ"** ಮುಂತಾಗಿ ಆರು ಪ್ರಾಣಾಹುತಿಗಳನ್ನು ಮೇಲೆ ನಿರ್ದೇಶಿಸಿದ ಬೆರಳುಗಳಿಂದ ಅನ್ನವನ್ನು ತೆಗೆದು ಬಾಯಲ್ಲಿ ಇಡುವುದು ಕೈಯಿಂದ ನೀರನ್ನು ಮುಟ್ಟಿ ಬೇಕಾದಂತೆ ಊಟಮಾಡಬೇಕು. ಊಟವಾದ ಮೇಲೆ ಪಾತ್ರದಿಂದ ಸ್ವಲ್ಪ ಅನ್ನವನ್ನು ತೆಗೆದು ಮೂಸಿ **"ಉಚ್ಛಿಷ್ಟ..."** ಎಂದು ಹೇಳಿ ನೆಲದಲ್ಲಿ ಇಡಬೇಕು. **"ಅಮೃತಾ..."** ಎಂದು ಕೈಯಲ್ಲಿ ನೀರು ತೆಗೆದು ಅರ್ಧ ಕುಡಿಯಬೇಕು. **"ರೌರವೇ..."** ಎಂದು ಹೇಳಿ ಉಳಿದ ನೀರನ್ನು ನೆಲದಲ್ಲಿ ಬಿಡಬೇಕು. ಹೊರಗೆ ಹೋಗಿ ಕೈ ತೊಳೆದು ಆಚಮನ ಮಾಡಿ ಕೈಗೆ ತಾಗಿದ ನೀರನ್ನು ಕಣ್ಣಿಗೆ ಮುಟ್ಟಿಸಿ **"ಶರ್ಯಾತಿಂ..."** ಎಂದು ಹೇಳಿ ನೂರು ಹೆಜ್ಜೆಗಳಷ್ಟು ನಡೆದು **"ಅಗಸ್ತಿ..."** ಎಂದು ಹೇಳಿ ಹೊಟ್ಟೆಯ ಮೇಲೆ ಕೈಯಾಡಿಸಿ ತಾಂಬೂಲ ಸೇವನೆ ಮಾಡುವುದು.

ಜಲಂ ಸ್ಪೃಷ್ಟ್ವಾ ಯಥೇಷ್ಟಂ ಭೋಜನಂ ಕುರ್ಯಾತ್ ॥ ತತೋ ಭೋಜನಾಂತೇ ಪಾತ್ರಸ್ಥಮನ್ನಂ ಕಿಂಚಿದ್ಗೃಹೀತ್ವಾ ಅವಘ್ರಾಯ ॥ ಉಚ್ಛಿಷ್ಟಭಾಗೇಭ್ಯೋ ನಮಃ ॥ ಇತಿ ಭೂಮೌ ವಿಸೃಜ್ಯ ॥ ಉತ್ತರಾಪೋಶನಾರ್ಥಮುದಕಂ ಗೃಹೀತ್ವಾ ॥ ಅಮೃತಾಪಿಧಾನಮಸಿ ಸ್ವಾಹಾ ॥ ಇತಿ ಮಂತ್ರೇಣ ತದರ್ಧಂ ಪೀತ್ವಾ ॥ ರೌರವೇ ಪೂಯನಿಲಯೇ ಪದ್ಮಾರ್ಬುದನಿವಾಸಿನಾಂ । ಅರ್ಥಿನಾಮುದಕಂ ದತ್ತಮಕ್ಷಯ್ಯಮುಪತಿಷ್ಠತು ಇತಿ ಮಂತ್ರೇಣ ಅವಶಿಷ್ಟಂ ಜಲಂ ಪಿತೃತೀರ್ಥೇನ ಭೂಮೌ ನಿಷಿಚ್ಯ ಅಂಗಣಾದೌ ಪಾಣಿಮುಖೇ ಸಂಶೋಧಯೇತ್ ॥ ಹಸ್ತೌ ಪಾದೌ ಪ್ರಕ್ಷಾಲ್ಯ ಆಚಮ್ಯ ಹಸ್ತಲಗ್ನೋದಕಂ ನೇತ್ರಯೋರ್ನಿಷಿಂಚೇತ್ ॥ ಶರ್ಯಾತಿಂ ಚ ಸುಕನ್ಯಾಂ ಚ ಚ್ಯವನಂ ಶುಕ್ರಮಶ್ವಿನೌ ॥ ಭೋಜನಾಂತೇ ಸ್ಮರೇದ್ಯಸ್ತು ತಸ್ಯ ಚಕ್ಷುರ್ನ ಹೀಯತೇ ॥ ತತಃ ಶತಪದಾನಿ ಗತ್ವಾ ॥ ಅಗಸ್ತಿರಗ್ನಿರ್ವಡವಾನಲಶ್ಚ ಭುಕ್ತಂ ಮಯಾನ್ನಂ ಜರಯಂತ್ವಶೇಷಂ । ಸುಖಂ ಮಮೈತತ್ ಪರಿಣಾಮಸಂಭವಂ ಯಚ್ಛಂತ್ವರೋಗೋ ಮಮಚಾಸ್ತುದೇಹಃ ॥ ಇತ್ಯುದರಂ ಪರಿಮೃಜ್ಯ ತಾಂಬೂಲಂ ಭಕ್ಷಯೇತ್ ॥

॥ ಇತಿ ಭೋಜನವಿಧಿಃ ॥

---

# ಸಾಯಂ ಸಂಧ್ಯಾ

**ಪ್ರಾತಃ ಕಾಲವದಾಚಮನಂ ಪ್ರಾಣಾಯಾಮಂ ಚ ಕುರ್ಯಾತ್ ॥ ಮಮೋಪಾತ್ತದುರಿತಕ್ಷಯದ್ವಾರಾ ಶ್ರೀಪರಮೇಶ್ವರಪ್ರೀತ್ಯರ್ಥಂ ಸಾಯಂ-ಸಂಧ್ಯಾಮುಪಾಸಿಷ್ಯೇ ॥ ತತಃ ಅಪಃ ಪ್ರಾಶನಪರ್ಯಂತಂ ಪ್ರಾತಃ ಕಾಲವತ್ ॥ ಅಗ್ನಿಶ್ಚೇತಿ ಮಂತ್ರಸ್ಯ ಯಾಜ್ಞವಲ್ಕ್ಯ ಉಪನಿಷದ ಋಷಿಃ । ಅಗ್ನಿಮನ್ಯುಮನ್ಯು-ಪತ್ಯಹಾನಿ ದೇವತಾಃ । ಪ್ರಕೃತಿಶ್ಛಂದಃ । ಮಂತ್ರಾಚಮನೇವಿನಿಯೋಗಃ ॥ ಓಂ ಅಗ್ನಿಶ್ಚಮಾಮನ್ಯುಶ್ಚಮನ್ಯುಪತಯಶ್ಚಮನ್ಯುಕೃತೇಭ್ಯಃ । ಪಾಪೇಭ್ಯೋ ರಕ್ಷಂ-ತಾಂ ॥ ಯದಹ್ನಾ ಪಾಪಮಕಾರ್ಷಂ ॥ ಮನಸಾ ವಾಚಾ ಹಸ್ತಾಭ್ಯಾಂ ॥ ಪದ್ಭ್ಯಾಮುದರೇಣಶಿಶ್ನಾ ॥ ಅಹಸ್ತದವಲುಂಪತು ॥ ಯತ್ಕಿಂಚದುರಿತಂ ಮಯಿ ॥ ಇದಮಹಂಮಾಮಮೃತಯೋನೌ ॥ ಸತ್ಯೇಜ್ಯೋತಿಷಿ ಜುಹೋಮಿ ಸ್ವಾಹಾ ॥**

---

ಸಾಯಂಕಾಲದ ಸಂಧ್ಯಾವಂದನೆ. ಪ್ರಾತಃ ಸಂಧ್ಯಾವಂದನೆಯಂತೆ ಆಚಮನ ಪ್ರಾಣಾಯಾಮಗಳನ್ನು ಮಾಡಿ **"ಮಮೋಪಾತ್ತ..."** ಎಂದು ಸಂಕಲ್ಪ ಮಾಡುವುದು. ಆಮೇಲೆ **"ಆಪೋಹಿಷ್ಠಾಮ"** ಮಂತ್ರದಿಂದ ಮೊದಲಿನ ಮಾರ್ಜನ ಮಾಡಿ, **"ಅಗ್ನಿಶ್ಚಮಾಮನ್ಯುಶ್ಚ"** ಎಂಬ ಮಂತ್ರದಿಂದ ಮಂತ್ರಾಚಮನ ಮಾಡಿ ಪುನಃ ಎರಡನೆಯ ಮೂರನೆಯ ನಾಲ್ಕನೆಯ ಮಾರ್ಜನಗಳನ್ನೂ, ಅಘಮರ್ಷಣವನ್ನೂ ಮಾಡಿ ಗಾಯತ್ರೀಮಂತ್ರದಿಂದ ಮೂರು ಅರ್ಘ್ಯಗಳನ್ನು ಸೂರ್ಯನಿಗೆ ಕೊಡುವುದು. **"ಅಸಾವಾದಿತ್ಯೋ ಬ್ರಹ್ಮ"** ಎಂದು ತನ್ನ ಸುತ್ತಲೂ ನೀರು ಹಾಯಿಸಿ, ಕುಳಿತು ಎರಡು ಬಾರಿ ಆಚಮನವನ್ನೂ, ಪ್ರಾಣಾಯಾಮವನ್ನೂ ಮಾಡಿ, ದಿಗ್ಬಂಧನ, ಆಸನ, ನ್ಯಾಸ ಮುಂತಾದುವುಗಳನ್ನೂ ಪ್ರಾತಃ ಸಂಧ್ಯೆಯಲ್ಲಿದ್ದಂತೆ ಮಾಡಿ, **"ವೃದ್ಧಾಂ ವೃದ್ಧಾದಿತ್ಯಮಂಡಲ ..."** ಎಂದು ಧ್ಯಾನಮಾಡಿ, **"ಆಗಚ್ಛ ವರದೇ ದೇವಿ..."** ಎಂದು ಮೊದಲಾಗಿ ಹೇಳಿ ಸಾಧ್ಯವಿದ್ದಷ್ಟು ಗಾಯತ್ರೀ ಜಪವನ್ನು ಮಾಡಬೇಕು. ಆಮೇಲೆ ಎದ್ದುನಿಂತು ಉಪಸ್ಥಾನ ಹೇಳುವುದು.

ಉಪಸ್ಥಾನವಾದ ಮೇಲೆ **"ಯಾಂ ಸದಾ ಸರ್ವಭೂತಾನಿ"** ಎಂಬಲ್ಲಿ ವರೆಗೆ ಪ್ರಾತಃ ಸಂಧ್ಯಾವಂದನೆಯಂತೆ ಮಾಡಬೇಕು. **"ಅನೇನ ಸಾಯಂ ಸಂಧ್ಯಾವಂದನೇನ ಕರ್ಮಣಾ ಶ್ರೀಪರಮೇಶ್ವರಃ ಪ್ರೀಯತಾಂ"** ಎಂದು ನೀರನ್ನು ಬಿಟ್ಟು ಎರಡು ಸಲ ಆಚಮನ ಮಾಡಿ **"ಯಸ್ಯಸ್ಮೃತ್ಯಾ..."** ಮತ್ತು **"ಪ್ರಾಯಶ್ಚಿತ್ತಾನ್ಯಶೇಷಾಣಿ"** ಎಂದು ಹೇಳಿ ಮುಗಿಸಬೇಕು.

ಆಚಮ್ಯ ॥ ಪ್ರಾತಃಕಾಲವತ್ ದ್ವಿತೀಯಚತುರ್ಥಮಾರ್ಜನಾಘಮರ್ಷಣಾನಿ ಕೃತ್ವಾ ॥ ತಥಾ ಪಶ್ಚಿಮಾಭಿಮುಖಸ್ತಿಷ್ಠನ್ ಗಾಯತ್ರೀ ಮಂತ್ರೇಣ ತ್ರಿವಾರಮರ್ಘ್ಯಂ ದತ್ವಾ ॥ ಅಸಾವಾದಿತ್ಯೋ ಬ್ರಹ್ಮ ॥ ದ್ವಿರಾಚಮನಂ ಪ್ರಾಣಾಯಾಮಂ ಚ ಕೃತ್ವಾ । ಪ್ರಾತಃ ಕಾಲವತ್ ದಿಗ್ಬಂಧಾಸನಂ ಷಡಂಗಂ ಚ ಕೃತ್ವಾ ॥ ವೃದ್ಧಾಂ ವೃದ್ಧಾದಿತ್ಯಮಂಡಲಮಧ್ಯಸ್ಥಾಂ ಶ್ಯಾಮಾಂ ಶ್ಯಾಮಾಂಬರಾನುಲೇಪನಸ್ರಗಾಭರಣಾಂ ಏಕವಕ್ತ್ರಾಂ ಶಂಖಚಕ್ರಗದಾಪದ್ಮಾಂಕಚತುರ್ಭುಜಾಂ ಗರುಡಾಸನಾರೂಢಾಂ ವಿಷ್ಣುದೈವತ್ಯಾಂ ಸಾಮವೇದಮುದಾಹರಂತೀಂ ಸ್ವರ್ಲೋಕಾಧಿಷ್ಠಾತ್ರೀಂ ಸರಸ್ವತೀಂ ನಾಮ ದೇವತಾಂ ಧ್ಯಾಯಾಮಿ ॥ ಇತಿ ಧ್ಯಾತ್ವಾ ಯಥಾಶಕ್ತಿ ಗಾಯತ್ರೀ ಜಪಃ ॥

ಯಚ್ಚಿದ್ಧಿತೇತಿ ದಶರ್ಚಾಮಾಜೀಗರ್ತಿಃ ಶುನಃಶೇಫಃ ಸಕೃತ್ರಿಮೋ ವೈಶ್ವಾಮಿತ್ರೋ ದೇವರಾತ ಋಷಿಃ । ವರುಣೋ ದೇವತಾ । ಗಾಯತ್ರೀಛಂದಃ । ವರುಣೋಪಸ್ಥಾನೇ ವಿನಿಯೋಗಃ ॥ ಓಂ ಯಚ್ಚಿದ್ಧಿತೇವಿಶೋಯಥಾಪ್ರದೇವವರುಣವ್ರತಂ ॥ ಮಿನೀಮಸಿದ್ಯವಿದ್ಯವಿ ॥ ಮಾನೋವಧಾಯಹತ್ನವೇಜಿಹೀಳಾನಸ್ಯರೀರಧಃ ॥ ಮಾಹೃಣಾನಸ್ಯಮನ್ಯವೇ ॥ ವಿಮೃಳೀಕಾಯತೇಮನೋರಥೀರಶ್ವನ್ನಸಂದಿತಂ ॥ ಗೀರ್ಭಿರ್ವರುಣಸೀಮಹಿ ॥ ಪರಾಹಿಮೇವಿಮನ್ಯವಃ ಪತಂತಿವಸ್ಯಇಷ್ಟಯೇ ॥ ವಯೋನವಸತೀರುಪ ॥ ಕದಾಕ್ಷತ್ರ ಶ್ರಿಯಂನರಮಾವರುಣಂಕರಾಮಹೇ ॥ ಮೃಳೀಕಾಯೋರುಚಕ್ಷಸಂ ॥ ತದಿತ್ಸಮಾನ ಮಾಶಾತೇವೇನಂ ತಾನಪ್ರಯುಚ್ಛತಃ ॥ ಧೃತವ್ರತಾಯದಾಶುಷೇ ॥ ವೇದಾಯೋವೀನಾಂ ಪದಮಂತರಿಕ್ಷೇಣಪತತಾಂ ॥ ವೇದನಾವಃ ಸಮುದ್ರಿಯಃ ॥ ವೇದಮಾಸೋಧೃತವ್ರತೋ ದ್ವಾದಶಪ್ರಜಾವತಃ ವೇದಾಯಉಪಜಾಯತೇ ॥ ವೇದವಾತಸ್ಯವರ್ತನಿಮುರೋರ್ಋಷ್ವಸ್ಯಬೃಹತಃ ॥ ವೇದಾಯೇ ಅಧ್ಯಾಸತೇ ॥ ನಿಷಸಾದಧೃತವ್ರತೋವರುಣಃ ಪಸ್ತ್ಯಾ ೩ ಸ್ವಾ ॥ ಸಾಮ್ರಾಜ್ಯಾಯಸುಕ್ರತುಃ ॥ ಯಾಂ-

ಸದಾ ಸರ್ವಭೂತಾನೀತಿ ಸಮಾಪ್ತಿ ಪರ್ಯಂತಂ ಪ್ರಾತಃ ಕಾಲವತ್ ಕುರ್ಯಾತ್ ॥ ಅಂತೇ ದ್ವಿರಾಚಮ್ಯ ಯಸ್ಯಸ್ಮೃತ್ಯೇತಿ ವಿಷ್ಣುಂ ಸ್ಮೃತ್ವಾ ಪ್ರಾಯಶ್ಚಿತ್ತಾನ್ಯಶೇಷಾಣೀತಿ ಜಪೇತ್ ॥

॥ ಇತಿ ಸಾಯಂ ಸಂಧ್ಯಾ ॥

---

# ೧೦

# ಸಂಸ್ಕಾರಗಳು

## ಅವುಗಳ ವಿಧಾನ ಮತ್ತು ಫಲ

**ಗರ್ಭಾಧಾನಂ ಪುಂಸವನಂ ಸೀಮಂತೋನ್ನಯನಂ ತಥಾ ।**
**ಜಾತಕಂ ನಾಮಸಂಸ್ಕಾರೋ ನಿಷ್ಕ್ರಮಶ್ಚಾನ್ನಭೋಜನಂ ॥**
**ಚೌಲಕರ್ಮೋಪನಯನಂ ವೇದವ್ರತಚತುಷ್ಟಯಂ ।**
**ಕೇಶಾಂತಸ್ನಾನಮುದ್ವಾಹಃ ಸಂಸ್ಕಾರಾಃ ಷೋಡಶ ಸ್ಮೃತಾಃ ॥**

೧. ಗರ್ಭಾಧಾನ, ೨. ಪುಂಸವನ, ೩. ಸೀಮಂತೋನ್ನಯನ, ೪. ಜಾತಕರ್ಮ, ೫. ನಾಮಕರಣ, ೬. ನಿಷ್ಕ್ರಮಣ, ೭. ಅನ್ನಪ್ರಾಶನ, ೮. ಚೌಲ, ೯. ಉಪನಯನ, ೧೦.೧೧.೧೨.೧೩. ನಾಲ್ಕು ವೇದವ್ರತಗಳು, ೧೪. ಕೇಶಾಂತ (ಗೋದಾನ), ೧೫. ಸಮಾವರ್ತನ, ೧೬. ವಿವಾಹ. ಇವು ೧೬ ಪೂರ್ವಸಂಸ್ಕಾರಗಳು. ಕೆಲವರು ೨೫ ಸಂಸ್ಕಾರಗಳೆಂದೂ, ಇನ್ನೂ ಹಲವರು ೪೮ ಸಂಸ್ಕಾರಗಳಿವೆ ಎಂದೂ ಹೇಳಿದ್ದಾರೆ. ಆದರೆ ಮುಖ್ಯವಾಗಿ ಈ ಮೇಲಿನ ೧೬ ಸಂಸ್ಕಾರಗಳೇ ಪ್ರಸಿದ್ಧವಾಗಿವೆ. ಗರ್ಭಾಧಾನ, ಪುಂಸವನ, ಸೀಮಂತೋನ್ನಯನ, ಜಾತಕರ್ಮ, ನಾಮಕರಣ, ಅನ್ನಪ್ರಾಶನ, ಚೌಲ, ಉಪನಯನ, ವಿವಾಹ ಇವಿಷ್ಟು ಸಂಸ್ಕಾರಗಳನ್ನು ಸಾಮಾನ್ಯವಾಗಿ ಕೆಲವರು ಆಚರಿಸುತ್ತಾರೆ. ಇವುಗಳಲ್ಲೂ ಉಪನಯನ ಮತ್ತು ವಿವಾಹಗಳನ್ನು ಕೇವಲ ತೋರಿಕೆಗಾಗಿಯಾದರೂ ಹೆಚ್ಚಿನವರು ಆಚರಿಸುತ್ತಾರೆ. ಈ ಸಂಸ್ಕಾರಗಳ ವಿಧಿವಿಧಾನಗಳನ್ನು ಸರಿಯಾಗಿ ತಿಳಿದು, ಇವುಗಳಲ್ಲಿ ಬರುವ ಕ್ರಿಯಾಭಾಗಗಳ, ಮಂತ್ರಗಳ, ಆಚರಣೆಗಳ ಅಂತರಾರ್ಥವನ್ನು ಗ್ರಹಿಸಿ ಸ್ವರೂಪ, ವಿಧಾನ, ಫಲ ಇತ್ಯಾದಿಗಳನ್ನು ಇಲ್ಲಿ ಪ್ರಸ್ತಾವಿಸಲಾಗಿದೆ.

## ಸಂಸ್ಕಾರ ಫಲಗಳು

### ೧. ಗರ್ಭಾಧಾನ:-

**ನಿಷೇಕಾದ್ಬೈಜಿಕಂ ಚೈನೋ ಗಾರ್ಭಿಕಂ ಚಾಪಮೃಜ್ಯತೇ ।**
**ಕ್ಷೇತ್ರಸಂಸ್ಕಾರಸಿದ್ಧಿಶ್ಚ ಗರ್ಭಾಧಾನಫಲಂ ಸ್ಮೃತಂ ॥**

ಶರೀರಧಾರಣೆ ಮಾಡಿ ಈ ಪ್ರಪಂಚದಲ್ಲಿ ಜನ್ಮತಾಳಲಿರುವ ಜೀವಕ್ಕೆ ಪ್ರಥಮತಃ ಮಾಡುವ ಸಂಸ್ಕಾರವಿದು. ಹವನ, ಮಂತ್ರಪಠನ ಮತ್ತು ಇತರ ಕ್ರಿಯಾಭಾಗಗಳ ಮೂಲಕ ಈ ಸಂಸ್ಕಾರದಿಂದ ಬೀಜದಲ್ಲಿರುವ ದೋಷಗಳನ್ನು ದೂರೀಕರಿಸಿ ಕ್ಷೇತ್ರವನ್ನು ಪರಿಶುದ್ಧಗೊಳಿಸ

ಲಾಗುವುದು. ಇದು ದೋಷಯುಕ್ತವಾದ ಬೀಜದಿಂದ ಅಶುದ್ಧವಾದ ಕ್ಷೇತ್ರದಲ್ಲಿ ದುಃಸಂತಾವವು ಉತ್ಪನ್ನವಾಗುವುದನ್ನು ನಿವಾರಿಸುವುದು.

**೨. ಪುಂಸವನ:– ೩. ಸೀಮಂತೋನ್ನಯನ:–**

**ಗರ್ಭೇ ಭವೇ ಚ ಪುಂಸೂತೇಃ ಪುಂಸ್ತ್ವಸ್ಯ ಪ್ರತಿಪಾದನಂ ।**
**ನಿಷೇಕಫಲವಜ್ಞೇಯಂ ಫಲಂ ಸೀಮಂತಕರ್ಮಣಃ ।**

ಗರ್ಭಧಾರಣೆಯಾದ ತರುವಾಯ ಪುತ್ರೋತ್ಪತ್ತಿ ಅಥವಾ ಸತ್ಸಂತಾನಪ್ರಾಪ್ತಿಗಾಗಿ ಪುಂಸವನವನ್ನು ಆಚರಿಸಲಾಗುವುದು. ಗರ್ಭದ ಸ್ಥಿರತೆ, ಪುಷ್ಟಿ ಮತ್ತು ಬೆಳವಣಿಗೆಗಾಗಿ ಸೀಮಂತೋನ್ನಯನವನ್ನು ವಿಧಿಸಲಾಗಿದೆ.

**೪. ಜಾತಕರ್ಮ:–**

**ಗರ್ಭಾಂಬುಪಾನಜೋ ದೋಷೋ ಜಾತಾತ್ಸರ್ವೋಽಪಿ ನಶ್ಯತಿ ।**
**ಆಯುರ್ವರ್ಚೋಽಭಿವೃದ್ಧಿಶ್ಚ ಸಿದ್ಧಿರ್ವ್ಯವಹೃತೇಸ್ತಥಾ ॥**

ಗರ್ಭಕೋಶದಲ್ಲಿರುವ ಜೀವಿಯ ಶರೀರವು ರೂಪುಗೊಳ್ಳುತ್ತ ಬೆಳೆಯುತ್ತಿರುವಾಗ ದುಷ್ಟವಾದ ಉದಕಪಾನ ಮುಂತಾದವುಗಳಿಂದ ಉಂಟಾದ ಕಶ್ಮಲದೋಷವು ಜಾತಕರ್ಮದಿಂದ ದೂರವಾಗುತ್ತದೆ.

**೫. ನಾಮಕರಣ:–**

**ಆಯುರ್ವರ್ಚೋಽಭಿವೃದ್ಧಿಶ್ಚ ಸಿದ್ಧಿರ್ವ್ಯವಹೃತೇಸ್ತಥಾ ।**
**ನಾಮಕರ್ಮ ಫಲಂ ತ್ವೇತತ್ಸಮುದ್ದಿಷ್ಟಂ ಮನೀಷಿಭಿಃ ॥**

ಆಯುಸ್ಸು, ವರ್ಚಸ್ಸು ಮುಂತಾದವುಗಳ ಅಭಿವೃದ್ಧಿ ಮತ್ತು ಲೋಕ ವ್ಯವಹಾರ ದಲ್ಲಿ ವ್ಯಕ್ತಿಯನ್ನು ಪ್ರತ್ಯೇಕವಾಗಿ ಗುರುತಿಸುವ ಸಲುವಾಗಿ ನಾಮಕರಣ ಸಂಸ್ಕಾರವನ್ನು ಮಾಡಬೇಕು.

**೬. ನಿಷ್ಕ್ರಮಣ:– ೭. ಅನ್ನಪ್ರಾಶನ:–**

**ನಿಷ್ಕ್ರಮಾದಾಯುಶ್ರೀವೃದ್ಧಿರಪ್ಯುದ್ದಿಷ್ಟಾ ಮನೀಷಿಭಿಃ ।**
**ಅನ್ನಾಶನಾನ್ಮಾತೃಗರ್ಭಮಲಾಶಾದಪಿ ಶುದ್ಧ್ಯತಿ ॥**

ನಿಷ್ಕ್ರಮಣ ಎಂದರೆ ಮನೆಯಿಂದ ಮೊದಲ ಬಾರಿಗೆ ಹೊರಗೆ ಹೊರಡುವುದೆಂದರ್ಥ. ಈ ಸಂಸ್ಕಾರದಿಂದ ಆಯುಷ್ಯ ಮತ್ತು ಸಂಪತ್ತುಗಳು ವೃದ್ಧಿಯಾಗುವುವು. ಅನ್ನಪ್ರಾಶನವೆಂದರೆ ಮಗುವಿಗೆ ಮೊದಲ ಬಾರಿಗೆ ಅನ್ನವನ್ನು-ಆಹಾರವನ್ನು-ಕೊಡುವುದು. ವಿಧ್ಯುಕ್ತವಾಗಿ ಆಚರಿಸಿದ ಈ ಸಂಸ್ಕಾರದಿಂದ ಮಾತೃಗರ್ಭದಲ್ಲಿದ್ದಾಗ ಶರೀರದಲ್ಲಿ ಆವರಿಸಿಕೊಂಡಿದ್ದ ಕಶ್ಮಲಗಳು ದೂರವಾಗಿ ಶುದ್ಧಿಯುಂಟಾಗುತ್ತದೆ.

**೮. ಚೂಡಾಕರ್ಮ:- ೯. ಉಪನಯನ:-**

**ಬಲಾಯುರ್ವರ್ಚೋರ್ವೃದ್ಧಿಶ್ಚ ಚೂಡಾಕರ್ಮಫಲಂ ಸ್ಮೃತಂ ।**
**ಉಪನೀತೇಃ ಫಲಂ ತ್ವೇತತ್ ದ್ವಿಜತಾಸಿದ್ಧಿಪೂರ್ವಿಕಾ ॥**

ಚೌಲ ಅಥವಾ ಚೂಡಾಕರ್ಮ ಸಂಸ್ಕಾರದಿಂದ ಬಲ, ಆಯುಸ್ಸು ಮತ್ತು ವರ್ಚಸ್ಸುಗಳು ವೃದ್ಧಿಯಾಗುತ್ತವೆ. 'ಉಪನಯನ' ಎಂದರೆ ವಿದ್ಯಾಭ್ಯಾಸವನ್ನು ಪಡೆಯಲು ಯುಕ್ತವಾದ ವಯಸ್ಸಿಗೆ ಬಂದ ವಟುವನ್ನು ಗುರುವಿನ ಸಮೀಪಕ್ಕೆ ಕೊಂಡೊಯ್ಯುವುದು ಅಥವಾ 'ಉಪ' ಅಂದರೆ ಮೇಲಕ್ಕೆ-ಪ್ರಗತಿಯತ್ತ-ಕೊಂಡೊಯ್ಯುವುದು ಎಂದರ್ಥ. ಇದರಿಂದ ವೇದಾಭ್ಯಾಸಕ್ಕೆ ಅರ್ಹತೆ ಉಂಟಾಗುತ್ತದೆ. ದ್ವಿಜತ್ವವು ಪ್ರಾಪ್ತವಾಗುತ್ತದೆ. 'ದ್ವಿಜ' ಎಂದರೆ ಎರಡನೆಯ ಸಲ ಹುಟ್ಟಿದವನು. ಮಾತೃಗರ್ಭದಿಂದ ಹೊರಬಂದಾಗ ಕೇವಲ ಜಂತುವಾಗಿಯೇ ಜನಿಸಿದವನು. ಮುಂದೆ ಬುದ್ಧಿ, ಜ್ಞಾನ, ಸದಾಚಾರ, ನಿಯಮ, ನಿಷ್ಠೆ ಮುಂತಾದುವುಗಳನ್ನು ಗಳಿಸಿ ಸುಸಂಸ್ಕೃತನಾದ ಮಾನವನಾಗಿ ಬಾಳಲು ಇನ್ನೊಂದು ಜನ್ಮವನ್ನೇ ಪಡೆಯುತ್ತಾನೆ. ಇಂತಹ ಈ ಸಂಸ್ಕಾರವು ಅತ್ಯಂತ ಪ್ರಮುಖವಾದುದು.

**೧೦. ೧೧. ೧೨. ೧೩. ನಾಲ್ಕು ವೇದವ್ರತಗಳು:-**

ಆಶ್ರಮವಾಸಿಯಾಗಿ ಗುರುವಿನ ಬಳಿಯಲ್ಲಿದ್ದು ವೇದವಿದ್ಯಾಭ್ಯಾಸವು ಪೂರ್ಣವಾಗಲು ಈ ನಾಲ್ಕು ಸಂಸ್ಕಾರಗಳನ್ನು ಹೇಳಲಾಗಿದೆ. ಈ ಕಾಲದಲ್ಲಿ ಆಶ್ರಮವಾಸವೂ, ಗುರುಕುಲಪದ್ಧತಿಯೂ ವಿಶೇಷವಾಗಿ ಇಲ್ಲದುದರಿಂದ ಅವುಗಳ ವಿವರ ನೀಡಿಲ್ಲ.

**೧೪. ಕೇಶಾಂತ (ಗೋದಾನ):-**

ವೇದಾಭ್ಯಾಸ ಹಾಗೂ ಇತರ ವಿದ್ಯೆಗಳ ಅಧ್ಯಯನ ಪೂರ್ಣವಾದಾಗ ಆಚರಿಸಬೇಕಾದ ಸಂಸ್ಕಾರ ಕೇಶಾಂತ. ವಿದ್ಯಾಭ್ಯಾಸವನ್ನು ಪೂರ್ಣಗೊಳಿಸಿ, ಕೇಶಖಂಡನ, ಸ್ನಾನ ಇತ್ಯಾದಿಗಳಿಂದ ಅಲಂಕೃತನಾಗಿ ಬಳಿಕ ಗುರುವಿಗೆ ದಕ್ಷಿಣೆಯನ್ನು ಸಮರ್ಪಿಸುವುದು ಇದರ ಮುಖ್ಯ ಉದ್ದೇಶ.

**೧೫. ಸಮಾವರ್ತನ:-**

ಮುಂದೆ ಗೃಹಸ್ಥಾಶ್ರಮವನ್ನು ಪ್ರವೇಶಿಸಲು ಬೇಕಾದ ಸಿದ್ಧತೆಯನ್ನು ಮಾಡುವುದು ಸಮಾವರ್ತನ ಸಂಸ್ಕಾರದ ಫಲ.

**೧೬. ವಿವಾಹ:-**

**ದೇವಪಿತ್ರಾರ್ಣಾಪಗಮೋ ವಿವಾಹಸ್ಯ ಫಲಂ ಸ್ಮೃತಂ ॥**
**ಸಂಸ್ಕಾರರಹಿತಾ ಯೇ ತು ತೇಷಾಂ ಜನ್ಮ ನಿರರ್ಥಕಂ ॥**

ದೇವಋಣ ಮತ್ತು ಪಿತೃಋಣಗಳ ಪರಿಹಾರಕ್ಕಾಗಿ ವಿವಾಹವು ವಿಧಿಸಲ್ಪಟ್ಟಿದೆ. **"ಧರ್ಮಪ್ರಜಾಸಂಪತ್ತಿಃ ಪ್ರಯೋಜನಂ ವಿವಾಹಸ್ಯ"** ವಿವಾಹಸಂಸ್ಕಾರದ ಮುಖ್ಯ ಉದ್ದೇಶ, ಪ್ರಯೋಜನ ಸಂತಾನಪ್ರಾಪ್ತಿ. ಇದೊಂದು ಸಾಮಾಜಿಕ ಆವಶ್ಯಕತೆಯುಳ್ಳ ಸಂಸ್ಕಾರವೂ ಹೌದು.

ಮನುಷ್ಯಸಾಮಾನ್ಯರಲ್ಲಿ ಇದು ಪ್ರಚಲಿತವಾಗಿದೆ. ವಿವಾಹ ಸಂಸ್ಕಾರದ ಅಂಗಗಳಾಗಿ ವಾಗ್ದಾನ, ಕನ್ಯಾದಾನ, ಗೃಹಪ್ರವೇಶನೀಯಹೋಮ, ಗೃಹಪ್ರವೇಶ ಮುಂತಾದ ಇತರ ಮುಖ್ಯ ಮುಖ್ಯ ಕ್ರಿಯಾಭಾಗಗಳೂ ಸೇರಿಕೊಂಡಿವೆ.

ಒಟ್ಟಿನಲ್ಲಿ ಪ್ರತಿಯೊಬ್ಬ ಮನುಷ್ಯನಿಗೂ ಆಯಾ ಸಂದರ್ಭದಲ್ಲಿ, ಆಯಾ ವಯಸ್ಸಿನಲ್ಲಿ ಆಯಾ ಸಂಸ್ಕಾರದಿಂದ ಸಂಸ್ಕರಿಸಲ್ಪಡುವುದು ಅತ್ಯಂತ ಆವಶ್ಯಕವೂ ಅನಿವಾರ್ಯವೂ ಆಗಿದೆ. ಯಾವ ಮನುಷ್ಯನು ಸಂಸ್ಕರಿಸಲ್ಪಡುವುದಿಲ್ಲವೋ ಅವನು ಪಶುವಿಗೆ ಸಮಾನನಾಗಿರುತ್ತಾನೆ. ಅವನ ಜನ್ಮವೇ ವ್ಯರ್ಥವಾಗಿಹೋಗುತ್ತದೆ.

ಮೇಲೆ ಹೇಳಿದ ಈ ಪ್ರತಿಯೊಂದು ಸಂಸ್ಕಾರಕ್ಕೆ ಸರಿಯಾದ ಯೋಗ್ಯಕಾಲ, ವಿಶಿಷ್ಟಕರ್ಮಗಳ ಪ್ರತ್ಯೇಕ ಫಲ, ಕ್ರಿಯಾಭಾಗಗಳ ವಿವರ ಇತ್ಯಾದಿಗಳನ್ನು ಮುಂದೆ ಆಯಾ ಸಂಸ್ಕಾರಗಳ ನಿರೂಪಣೆಯ ಸಂದರ್ಭದಲ್ಲಿ ಪೂರ್ಣವಿವರದೊಂದಿಗೆ ಕೊಡಲಾಗುವುದು.

## ॥ ಸಂಸ್ಕಾರಪರಿಭಾಷಾ ॥

**ಸ್ನಾತಃ ಕುರ್ವೀತೋಪವೀತೀ ಸರ್ವಕರ್ಮ ಪವಿತ್ರವಾನ್ ।**
**ಆಚಾಂತಃ ಪುನರಾಚಾಮೇತ್ ತಿಲಕೀ ಬದ್ಧಚೂಡಕಃ ॥**
**ಶ್ರದ್ಧಯಾ ಕರ್ಮ ಕುರ್ವೀತ ಧೌತವಸ್ತ್ರಧರೋ ಭವೇತ್ ।**
**ಅವ್ಯಗ್ರೋಽಲಂಕೃತೋ ಮೌನೀ ದಂಭಾಸೂಯಾದಿವರ್ಜಿತಃ ।**
**ಆಪದ್ಯುಕ್ತೋಽಪಿ ಶುದ್ಧಸ್ಸನ್ನೇವ ಕರ್ಮ ಸಮಾಚರೇತ್ ।**
**ಜಪಹೋಮಾದಿಷು ನರಮನ್ಯಂ ನಾಕಾರಣಾತ್ ಸ್ಪೃಶೇತ್ ॥**
**ಅಬುದ್ಧಿಪೂರ್ವಸಂಸ್ಪರ್ಶಶ್ಚೇತ್ತದಾ ವಾರ್ಯುಪಸ್ಪೃಶೇತ್ ।**
**ಬುದ್ಧಿಪೂರ್ವಕಸಂಸ್ಪರ್ಶೇ ಪ್ರಾಣಾಯಾಮತ್ರಯಂ ಚರೇತ್ ॥**
**ಪೇಷಣಾದಿಕಯಂತ್ರೇಷು ಶಬ್ದೋ ಯಾವತ್ಪ್ರವರ್ತತೇ ।**
**ತಾವತ್ಕರ್ಮ ನ ಕರ್ತವ್ಯಂ ತಥಾ ಸಂಧ್ಯಾದ್ವಯೇಽಪಿ ಚ ॥**

ಯಾವುದೇ ಸಂಸ್ಕಾರ ಅಥವಾ ವೈದಿಕ ಕರ್ಮವನ್ನು ಮಾಡುವ ಕರ್ತನು ಮೊದಲು ಸ್ನಾನಮಾಡಿ ಶುಚಿರ್ಭೂತನಾಗಬೇಕು. ಆಮೇಲೆ ಯಜ್ಞೋಪವೀತ ಹಾಗೂ ಬಿಳಿಬಟ್ಟೆಗಳನ್ನು ಧರಿಸಿ, ಜುಟ್ಟು ಕಟ್ಟಿಕೊಂಡು, ತಿಲಕವನ್ನಿಟ್ಟು, ಪವಿತ್ರಧಾರಣೆ ಮಾಡಬೇಕು. ಆಚಮನ ಮಾಡಿ ಪವಿತ್ರವನ್ನು ಧರಿಸಿ ಮತ್ತೊಮ್ಮೆ ಆಚಮನ ಮಾಡಬೇಕು. ಗರ್ವ, ಅಸೂಯೆ ಮುಂತಾದ ಯಾವ ದುರ್ಭಾವನೆಗೂ ಮನಸ್ಸಿನಲ್ಲಿ ಎಡೆಗೊಡದೆ ಮೌನಿಯಾಗಿದ್ದು, ಚಿತ್ತಶಾಂತಿಯುಳ್ಳವನಾಗಿ ಶ್ರದ್ಧೆಯಿಂದ ಪ್ರತಿಯೊಂದು ಕರ್ಮವನ್ನೂ ಮಾಡಬೇಕು. ರೋಗಿಯಾಗಿದ್ದರೂ ಪರಿಶುದ್ಧನಾಗಿಯೇ ಕರ್ಮವನ್ನು ಆರಂಭಿಸಬೇಕು. ಜಪ, ಹೋಮ ಮುಂತಾದ ಕರ್ಮಗಳನ್ನು ಮಾಡುವಾಗ ಬೇರೆ ಯಾರನ್ನೂ ಮುಟ್ಟಬಾರದು. ತಿಳಿಯದೇ ಮುಟ್ಟಿಹೋದರೆ, ಉದಕಸ್ಪರ್ಶದಿಂದ ಶುದ್ಧನಾಗಬೇಕು.

ತಿಳಿದು ಮುಟ್ಟಿದರೆ ಮೂರು ಪ್ರಾಣಾಯಾಮಗಳನ್ನು ಮಾಡಬೇಕು. ಕಡೆಯುವ ಕಲ್ಲು, ಬೀಸುವ ಕಲ್ಲು ಅಥವಾ ಇತರ ಯಾವುದೇ ಕಾರಣದಿಂದ ಕರ್ಕಶಧ್ವನಿಯು ಬರುತ್ತಿರುವಾಗ ಯಾವ ಕರ್ಮವನ್ನೂ ಕೈಗೊಳ್ಳಬಾರದು. ಅಂತೆಯೇ ಬೆಳಗ್ಗೆ ಮತ್ತು ಸಂಜೆ ಎರಡು ಸಂಧ್ಯಾಕಾಲಗಳಲ್ಲಿಯೂ ಯಾವ ಕರ್ಮವನ್ನೂ ಮಾಡುವುದು ಯುಕ್ತವಲ್ಲ.

## ॥ ಪತ್ನೀ ಉಪವೇಶನ ಕ್ರಮಃ ॥

**ಚೌಲೇ ಚ ವ್ರತಬಂಧೇ ಚ ವಿವಾಹೇ ಯಜ್ಞಕರ್ಮಣಿ ।**
**ಪತ್ನೀಂ ದಕ್ಷಿಣತಃ ಕುರ್ಯಾದನ್ಯಸ್ಮಿನ್ವಾಮತಃ ಸ್ಮೃತಾ ॥**
**ಕನ್ಯಾದಾನಂ ವೃಷೋತ್ಸರ್ಗಂ ತಥಾಚೋಭಯತೋಮುಖಂ ।**
**ಅವಕ್ಷಾರಣಕೇ ಚೈವ ಕುರ್ಯಾತ್ತಿಷ್ಠನ್ನಚಾವಿಶನ್ ॥**
**ಸವ್ಯೇ ಪತ್ನೀ ತ್ರಿಷು ಸ್ಥಾನೇ ಪಿತ್ರ್ಯಾಣಾಂ ಪಾದಸೇಚನೇ ।**
**ರಥಸ್ಯಾರೋಹಣೇ ಚೈವ ಋತುಕಾಲೇ ತಥೈವ ಚ ॥**
**ಸವ್ಯೇ ಪ್ರಕ್ಷಾಲಯೇತ್ಪಾದೌ ಪತ್ನೀ ಪ್ರಕ್ಷಾಲನಂ ದದೌ ।**
**ನಾಂದೀಮುಖೇ ಚ ಸೋಮೇ ಚ ಪತ್ನೀ ದಕ್ಷಿಣತಃ ಸದಾ ।**
**ಆಶೀರ್ವಾದಾಭಿಷೇಕೇ ತು ಪತ್ನೀರುತ್ತರತೋ ಭವೇತ್ ॥**

ವೈದಿಕಕರ್ಮಗಳನ್ನು ಆಚರಿಸುವಾಗ ಪತ್ನಿಯನ್ನು ಕುಳಿತುಕೊಳ್ಳಿಸುವ ಕ್ರಮ:-

ಚೂಡಾಕರ್ಮ, ಉಪನಯನ, ವಿವಾಹ, ಯಜ್ಞ ಈ ಕಾರ್ಯಗಳಲ್ಲಿ ಪತ್ನಿಯನ್ನು ಬಲಭಾಗದಲ್ಲಿಯೂ ಇತರ ಕರ್ಮಗಳಲ್ಲಿ ಎಡಭಾಗದಲ್ಲಿಯೂ ಕುಳಿತುಕೊಳ್ಳಿಸಬೇಕು. ಕನ್ಯಾದಾನ ಮತ್ತು ವೃಷೋತ್ಸರ್ಗಗಳಲ್ಲಿ ಪತಿಪತ್ನಿಯರು ಒಬ್ಬರಿಗೊಬ್ಬರು ಎದುರುಬದುರಾಗಿ ಕುಳಿತುಕೊಳ್ಳಬೇಕು. ಅವಕ್ಷಾರಣಕರ್ಮವನ್ನು ಇಬ್ಬರೂ ಎದ್ದು ನಿಂತುಕೊಂಡೇ ಆಚರಿಸಬೇಕು. ಕಾಲು ತೊಳೆಯುವಾಗ, ರಥದ ಮೇಲೆ ಕುಳಿತಿರುವಾಗ ಋತುಕಾಲದಲ್ಲಿ ಪತ್ನಿಯು ಎಡಬದಿಯಲ್ಲೇ ಇರಬೇಕು. ಇತರರ ಪಾದಪ್ರಕ್ಷಾಲನ ಮಾಡುವಾಗ ಪತ್ನಿಯು ಎಡಭಾಗದಲ್ಲಿದ್ದು ಪತಿಗೆ ನೀರನ್ನು ಒದಗಿಸಿಕೊಡಬೇಕು. ನಾಂದೀಶ್ರಾದ್ಧ, ಸೋಮಯಾಗ ಮತ್ತು ಮಧುಪರ್ಕಗಳಲ್ಲಿ ಅವಳು ಬಲಬದಿಯಲ್ಲಿರಬೇಕು. ಯಜ್ಞಸಂಬಂಧಿಗಳಾದ ಎಲ್ಲ ಕರ್ಮಗಳಲ್ಲಿಯೂ ಪತ್ನಿಯು ಬಲಭಾಗದಲ್ಲಿರಬೇಕು. ಆಶೀರ್ವಾದ ಪಡೆಯುವಾಗ ಮತ್ತು ಅಭಿಷೇಕ ಕಾಲದಲ್ಲಿ ಆಕೆಯು ಎಡಬದಿಯಲ್ಲಿರಬೇಕು. (ಇದು ಆಶ್ವಲಾಯನರ ಮತ)

---

## ೧೧

# ॥ ಪಂಚಗವ್ಯಮೇಲನ ಪ್ರಾಶನ ವಿಧಿಃ ॥

**ಆಚಮ್ಯ ಪ್ರಾಣಾನಾಯಮ್ಯ ದೇಶಕಾಲಾದ್ಯುಚ್ಚಾರ್ಯ, ಶ್ರುತಿಸ್ಮೃತಿ-ಪುರಾಣೋಕ್ತಫಲಪ್ರಾಪ್ತ್ಯರ್ಥಂ ಪಂಚಗ್ಯಮೇಲನಂ ಕರಿಷ್ಯೇ ॥ ಇತಿ ಸಂಕಲ್ಪ್ಯ ॥ ಓಂ ಭೂರ್ಭುವಃ ಸ್ವಃ । ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ ॥ ಇತಿ ಗಾಯತ್ರ್ಯಾ ಗೋಮೂತ್ರಂ ॥ ಓಂ ಗಂಧದ್ವಾರಾಂ ದುರಾಧರ್ಷಾಂ ನಿತ್ಯಪುಷ್ಟಾಂಕರೀಷಿಣೀಂ । ಈಶ್ವರೀಂ ಸರ್ವಭೂತಾನಾಂತಾಮಿಹೋಪಹ್ವಯೇ ಶ್ರಿಯಂ ॥ ಇತಿ ಗೋಮಯಂ ॥ ಓಂ ಆಪ್ಯಾಯಸ್ವ ಸಮೇತುತೇ ವಿಶ್ವತಃ ಸೋಮವೃಷ್ಣ್ಯಂ । ಭವಾವಾಜಸ್ಯಸಂಗಥೇ ॥ ಇತಿ ಪಯಃ ॥ ಓಂ ದಧಿಕ್ರಾವ್ಣ್ಣೋಅಕಾರಿಷಂಜಿಷ್ಣೋರಶ್ವಸ್ಯವಾಜಿನಃ ॥ ಸುರಭಿ-ನೋಮುಖಾಕರತ್ಪ್ರಣ ಆಯೂಂಷಿತಾರಿಷತ್ ॥ ಇತಿ ದಧಿ ॥ ಓಂ ಶುಕ್ರಮಸಿ-ಜ್ಯೋತಿರಸಿತೇಜೋಽಸಿ ॥ ಇತಿ ಘೃತಂ ॥ ಓಂ ದೇವಸ್ಯತ್ವಾಸವಿತುಃ ಪ್ರಸವೇಽಶ್ವಿ-**

---

ಜಾತಾಶೌಚ, ಮೃತಾಶೌಚಾದಿಗಳ ನಿವೃತ್ತಿಯಾಗಬೇಕಿದ್ದರೆ ಶರೀರ, ವಾಕ್ ಮತ್ತು ಮನಸ್ಸುಗಳ ಶುದ್ಧಿಗೋಸ್ಕರ ಪಂಚಗವ್ಯ ಪ್ರಾಶನ ಮಾಡಬೇಕು. ಗೋಮೂತ್ರ, ಗೋಮಯ, ಗೋಕ್ಷೀರ, ಗೋದಧಿ, ಗೋಘೃತ - ಇವು ಪಂಚಗವ್ಯಗಳು. ಇವುಗಳನ್ನು ಸಂಗ್ರಹಿಸಿ ಆಚಮನ ಪ್ರಾಣಾಯಾಮಗಳನ್ನು ಮಾಡಿ ದೇಶ, ಕಾಲಗಳನ್ನು ಉಚ್ಚರಿಸಿ, "**ಶ್ರುತಿಸ್ಮೃತಿ...**" ಎಂದು ಸಂಕಲ್ಪ ಮಾಡಬೇಕು. ಆಮೇಲೆ ಗಾಯತ್ರೀ ಮಂತ್ರದಿಂದ ಗೋಮೂತ್ರವನ್ನೂ, ಮೇಲೆ ಹೇಳಿದ ಉಳಿದ ಒಂದೊಂದೇ ಮಂತ್ರದಿಂದ ಗೋಮಯ, ಹಾಲು, ಮೊಸರು, ತುಪ್ಪಗಳನ್ನು ಒಂದು ಪಾತ್ರೆಯಲ್ಲಿ ಹಾಕಿ "**ದೇವಸ್ಯತ್ವಾ**" ಎಂಬ ಮಂತ್ರದಿಂದ ದರ್ಭೆಗಳ ಮೂಲಕ ನೀರು ಸುರಿದು ಕುಶೋದಕವನ್ನೂ ಹಾಕಬೇಕು. ಆಮೇಲೆ "**ಆಪೋಹಿಷ್ಠಾಮ...**" ಎಂಬ ಮಂತ್ರವನ್ನು ಉಚ್ಚರಿಸುತ್ತ ಆ ದರ್ಭೆಗಳ ಸೂಡಿಯಿಂದ ಮಥಿಸಿ ಎಲ್ಲವನ್ನೂ ಒಂದುಗೂಡಿಸಬೇಕು. ಆಚಮನ ಪ್ರಾಣಾಯಾಮಗಳನ್ನು ಮಾಡಿ "**ಶರೀರವಾಙ್ಮನಃ ಶುದ್ಧ್ಯರ್ಥಂ ಪಂಚಗವ್ಯಪ್ರಾಶನಂ ಕರಿಷ್ಯೇ**" ಎಂದು ಸಂಕಲ್ಪಿಸಿ "**ಯತ್ವಗಸ್ಥಿ**" ಎಂಬ ಮಂತ್ರವನ್ನು ಹೇಳಿ ಮೂರು ಬಾರಿ ಕುಡಿದು ಆಚಮನ ಮಾಡಬೇಕು.

ನೋರ್ಬಾಹುಭ್ಯಾಂಪೂಷ್ಣೋ ಹಸ್ತಾಭ್ಯಾಂ ॥ ಇತಿ ಕುಶೋದಕಂ ॥ ಓಂ ಇತಿ ಪ್ರಣವೇನ ಆಲೋಡನಂ ದಿಕ್ಷು ವಿಕ್ಷೇಪಶ್ಚ ॥ ಆಪೋಹಿಷ್ಠೇತಿ ತೃಚೇನ ಅಭಿಮನ್ತ್ರಿಯಾತ್ ॥ ಅಥ ಪಂಚಗವ್ಯಪ್ರಾಶನಂ ॥ ಓಂ ಯತ್ವಗಸ್ಥಿಗತಂ ಪಾಪಂ ದೇಹೇ ತಿಷ್ಠತಿ ಮಾಮಕೇ । ಪ್ರಾಶನಂ ಪಂಚಗವ್ಯಸ್ಯ ದಹತ್ವಗ್ನಿರಿವೇಂಧನಂ ॥ ಇತಿ ತ್ರಿವಾರಂ ಪ್ರಾಶ್ಯ ಪ್ರತಿವಾರಂ ಆಚಮೇತ್ ॥

---

# ೧೨

# ॥ ಗಣಪತಿಪೂಜನಂ ॥

ಶ್ರೀಗಣೇಶಾಯ ನಮಃ ॥ ಕೃತಮಂಗಲಸ್ನಾನಃ ಸ್ವಲಂಕೃತಃ ಸಂಭೃತ-ಮಂಗಲಸಂಭಾರೋ ಮಂಗಲರಂಗವಲ್ಲೀಮಂಡಿತಶುದ್ಧಸ್ಥಲೇ ಪ್ರಾಙ್ಮುಖೋ ಯಜಮಾನ ಊರ್ಣವಸ್ತ್ರಾದ್ಯಾಚ್ಛಾದಿತೇ ಪೀಠೇ ಉಪವಿಶ್ಯ ಪತ್ನೀಂ ಸ್ವದಕ್ಷಿಣತಃ ಪ್ರಾಙ್ಮುಖೀಂ ಉಪವೇಶ್ಯ ಸಂಸ್ಕಾರ್ಯಂ ಚ ತಥೈವೋಪವೇಶ್ಯ ಶ್ರೋತ್ರಿಯೈಃ ॥

ಓಂ ಯಶಸ್ಕರಂ ಬಲವಂತಂ ಪ್ರಭುತ್ವಂ ತಮೇವ ರಾಜಾಧಿಪತಿರ್ಬಭೂವ । ಸಂಕೀರ್ಣನಾಗಾಶ್ವಪತಿರ್ನರಾಣಾಂ ಸುಮಂಗಲ್ಯಂ ಸತತಂ ದೀರ್ಘಮಾಯುಃ ॥

ಇತಿ ಮಂತ್ರಘೋಷಪುರಸ್ಸರಂ ಸುವಾಸಿನ್ಯಾ ಕೃತಮಂಗಲತಿಲಕೋ ದ್ವಿರಾಚಮ್ಯ ಪವಿತ್ರಪಾಣಿಃ ॥

ಓಂ ದೇವೀಂ ವಾಚಮಜನಯಂತ ದೇವಾಸ್ತಾಂ ವಿಶ್ವರೂಪಾಃ ಪಶವೋ ವದಂತಿ । ಸಾನೋಮಂದ್ರೇಷಮೂರ್ಜಂದುಹಾನಾಧೇನುರ್ವಾಗಸ್ಮಾನುಪಸು-ಷ್ಟುತೈತು ॥ ಯಾವತೀರ್ವೈದೇವತಾಸ್ತಾಃ ಸರ್ವಾ ವೇದವಿದಿ ಬ್ರಾಹ್ಮಣೇ ವಸಂತಿ । ತಸ್ಮಾದ್ಬ್ರಾಹ್ಮಣೇಭ್ಯೋ ವೇದವಿದ್ಭ್ಯೋ ದಿವೇ ದಿವೇ ನಮಸ್ಕುರ್ಯಾ-

---

ಯಾವುದೇ ಮಂಗಲಕಾರ್ಯವನ್ನು ಆರಂಭಿಸುವಾಗಲೂ ಸಕಲವಿಘ್ನಗಳೂ ಪರಿಹಾರವಾಗಿ ಸುಗಮವಾಗಿ ಕಾರ್ಯವು ಪರಿಸಮಾಪ್ತಿಯಾಗುವುದಕ್ಕೋಸ್ಕರ ಆದಿಯಲ್ಲಿ ಶ್ರೀಮಹಾಗಣಪತಿಯ ಪೂಜೆಯನ್ನು ಮಾಡಬೇಕು.

ಮಂಗಲಸ್ನಾನ ಮಾಡಿ, ತನ್ನನ್ನು ಅಲಂಕರಿಸಿಕೊಂಡು, ಕ್ರಿಯಾಭಾಗಕ್ಕೆ ಬೇಕಾದ ಎಲ್ಲ ಉಪಕರಣಗಳನ್ನೂ ಸುವಸ್ತುಗಳನ್ನೂ ಮೊದಲಾಗಿ ಸಂಗ್ರಹಿಸಿಟ್ಟುಕೊಂಡು, ರಂಗವಲ್ಲಿಯಿಂದ ಅಲಂಕರಿಸಲ್ಪಟ್ಟ ಶುದ್ಧಸ್ಥಳದಲ್ಲಿ ಉಣ್ಣೆ, ರೇಷ್ಮೆ ಮುಂತಾದ ಬಟ್ಟೆಗಳು ಹಾಸಿದ ಆಸನದಲ್ಲಿ ಪೂರ್ವಾಭಿಮುಖವಾಗಿ ತಾನು ಕುಳಿತುಕೊಂಡು, ಪತ್ನಿಯನ್ನೂ ಸಂಸ್ಕಾರ್ಯನನ್ನೂ ಬಲಬದಿಯಲ್ಲಿ ಕುಳ್ಳಿರಿಸಿ, ಬ್ರಾಹ್ಮಣರು **"ಯಶಸ್ಕರಂ"** ಮಂಗಲಸೂಕ್ತಗಳನ್ನು ಹೇಳಿದ ಮೇಲೆ, ಸುವಾಸಿನಿಯರಿಂದ ಹಣೆಯಲ್ಲಿ ತಿಲಕವನ್ನು ಇಡಿಸಿಕೊಳ್ಳಬೇಕು. ಆಮೇಲೆ ಎರಡು ಸಲ ಆಚಮನ ಮಾಡಿ ಪವಿತ್ರವನ್ನು ಧರಿಸಬೇಕು.

ನಾಶ್ಲೀಲಂ ಕೀರ್ತಯೇದೇತಾ ಏವ ದೇವತಾಃ ಪ್ರೀಣಾತಿ ॥ ಇತಿ ಮಂತ್ರೇಣ ಇಷ್ಟದೇವತಾದಿಭ್ಯಃ ಫಲತಾಂಬೂಲಂ ಅರ್ಪಯೇತ್ ॥ ಶ್ರೋತ್ರಿಯಾದೀನ್ ಪಿತರಾದೀನ್ ಜ್ಯೇಷ್ಠಾಂಶ್ಚ ನಮಸ್ಕೃತ್ಯ ॥ ಆಚಮ್ಯ ಕೇಶವಾದಿ ಚತುರ್ವಿಂಶತಿ-ನಾಮಭಿಃ ಪ್ರಾಣಾಯಾಮಂ ಕೃತ್ವಾ ॥ ಶ್ರೀಮನ್ಮಹಾಗಣಾಧಿಪತಯೇ ನಮಃ । ಗುರುಭ್ಯೋ ನಮಃ । ಸರಸ್ವತ್ಯೈ ನಮಃ । ವೇದಾಯ ನಮಃ । ವೇದಪುರು-ಷಾಯ ನಮಃ । ಇಷ್ಟದೇವತಾಭ್ಯೋ ನಮಃ । ಕುಲದೇವತಾಭ್ಯೋ ನಮಃ ಸ್ಥಾನದೇವತಾಭ್ಯೋ ನಮಃ । ಗ್ರಾಮದೇವತಾಭ್ಯೋ ನಮಃ । ಉಮಾಮಹೇಶ್ವ-ರಾಭ್ಯಾಂ ನಮಃ । ಶಚೀಪುರಂದರಾಭ್ಯಾಂ ನಮಃ । ಮಾತಾಪಿತೃಭ್ಯಾಂ ನಮಃ । ಆದಿತ್ಯಾದಿನವಗ್ರಹದೇವತಾಭ್ಯೋ ನಮಃ । ಏಕತ್ಕರ್ಮಪ್ರಧಾನದೇವ-ತಾಭ್ಯೋ ನಮಃ । ಸರ್ವೇಭ್ಯೋ ದೇವೇಭ್ಯೋ ನಮೋನಮಃ ॥ ಅವಿಘ್ನಮಸ್ತು ॥

ಸುಮುಖಶ್ಚೈಕದಂತಶ್ಚ ಕಪಿಲೋ ಗಜಕರ್ಣಕಃ । ಲಂಬೋದರಶ್ಚ ವಿಕಟೋ ವಿಘ್ನನಾಶೋ ಗಣಾಧಿಪಃ ॥ ಧೂಮ್ರಕೇತುರ್ಗಣಾಧ್ಯಕ್ಷೋ ಭಾಲ-ಚಂದ್ರೋ ಗಜಾನನಃ ॥ ದ್ವಾದಶೈತಾನಿ ನಾಮಾನಿ ಯಃ ಪಠೇಚ್ಛೃಣು-ಯಾದಪಿ । ವಿದ್ಯಾರಂಭೇ ವಿವಾಹೇ ಚ ಪ್ರವೇಶೇ ನಿರ್ಗಮೇ ತಥಾ ॥ ಸಂಗ್ರಾಮೇ ಸಂಕಟೇ ಚೈವ ವಿಘ್ನಸ್ತಸ್ಯ ನ ಜಾಯತೇ ॥ ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ ॥ ಪ್ರಸನ್ನವದನಂ ಧ್ಯಾಯೇತ್ಸರ್ವವಿಘ್ನೋ-ಪಶಾಂತಯೇ ॥ ಸರ್ವಮಂಗಲಮಾಂಗಲ್ಯೇ ಶಿವೇ ಸರ್ವಾರ್ಥಸಾಧಿಕೇ ॥ ಶರಣ್ಯೇ ತ್ರ್ಯಂಬಕೇ ಗೌರಿ ನಾರಾಯಣಿ ನಮೋಸ್ತು ತೇ ॥ ಸರ್ವದಾ ಸರ್ವ-

---

"**ದೇವೀಂವಾಚ....**" "**ಯಾವತೀ...**" ಈ ಮಂತ್ರಗಳನ್ನು ಹೇಳುತ್ತ ಇಷ್ಟದೇವತೆ ಕುಲದೇವತೆಗಳಿಗೆ ಫಲತಾಂಬೂಲಾದಿಗಳನ್ನು ಕೊಡಬೇಕು. ಬ್ರಾಹ್ಮಣರಿಗೆ, ಪಿತೃಗಳಿಗೆ, ಹಿರಿಯರಿಗೆ ನಮಸ್ಕರಿಸಿ ಪುನಃ ಆಚಮನ ಮಾಡಿ ಕೇಶವಾದಿ ಇಪ್ಪತ್ತನಾಲ್ಕು ನಾಮಗಳನ್ನು ಹೇಳಿ ಪ್ರಾಣಾಯಾಮ ಮಾಡಬೇಕು. "**ಶ್ರೀಮನ್ಮಹಾಗಣಾಧಿಪತಯೇ....**" ಎಂಬಲ್ಲಿಂದ "**ಬ್ರಹ್ಮೇಶಾನ**

**ಕಾರ್ಯೇಷು ನಾಸ್ತಿ ತೇಷಾಮಮಂಗಲಂ ॥ ಯೇಷಾಂ ಹೃದಿ ಸ್ಥೋ ಭಗವಾ-ನ್ಮಂಗಲಾಯತನಂ ಹರಿಃ ॥ ತದೇವ ಲಗ್ನಂ ಸುದಿನಂ ತದೇವ ತಾರಾಬಲಂ ಚಂದ್ರಬಲಂ ತದೇವ ॥ ವಿದ್ಯಾಬಲಂ ದೈವಬಲಂ ತದೇವ ಲಕ್ಷ್ಮೀಪತೇ ತೇಂಘ್ರಿಯುಗಂ ಸ್ಮರಾಮಿ ॥ ಲಾಭಸ್ತೇಷಾಂ ಜಯಸ್ತೇಷಾಂ ಕುತಸ್ತೇಷಾಂ ಪರಾಜಯಃ ॥ ಯೇಷಾಮಿಂದೀವರಶ್ಯಾಮೋ ಹೃದಯಸ್ಥೋ ಜನಾರ್ದನಃ ॥ ವಿನಾಯಕಂ ಗುರುಂ ಭಾನುಂ ಬ್ರಹ್ಮವಿಷ್ಣುಮಹೇಶ್ವರಾನ್ ॥ ಸರಸ್ವತೀಂ ಪ್ರಣಮ್ಯಾದೌ ಸರ್ವಕಾರ್ಯಾರ್ಥಸಿದ್ಧಯೇ ॥ ಅಭೀಪ್ಸಿತಾರ್ಥಸಿದ್ಧ್ಯರ್ಥಂ ಪೂಜಿತೋ ಯಃ ಸುರಾಸುರೈಃ ॥ ಸರ್ವವಿಘ್ನಹರಸ್ತಸ್ಮೈ ಗಣಾಧಿಪತಯೇ ನಮಃ ॥ ಸರ್ವೇಷ್ವಾರಬ್ಧಕಾರ್ಯೇಷು ತ್ರಯಸ್ತ್ರಿಭುವನೇಶ್ವರಾಃ ॥ ದೇವಾ ದಿಶಂತು ನಃ ಸಿದ್ಧಿಂ ಬ್ರಹ್ಮೇಶಾನಜನಾರ್ದನಾಃ ॥**

**ಶ್ರೀಮದ್ಭಗವತೋ ಮಹಾಪುರುಷಸ್ಯ ವಿಷ್ಣೋರಾಜ್ಞಯಾ ಪ್ರವರ್ತ-ಮಾನಸ್ಯ ಅದ್ಯ ಬ್ರಹ್ಮಣಃ ದ್ವಿತೀಯೇ ಪರಾರ್ಧೇ ವಿಷ್ಣುಪದೇ ಶ್ರೀಶ್ವೇತ ವಾರಾಹಕಲ್ಪೇ ವೈವಸ್ವತಮನ್ವಂತರೇ ಅಷ್ಟಾವಿಂಶತಿತಮೇ ಕಲಿಯುಗೇ ಪ್ರಥಮ ಚರಣೇ ಬೌದ್ಧಾವತಾರೇ ಭರತವರ್ಷೇ ಜಂಬೂದ್ವೀಪೇ ದಂಡಕಾರಣ್ಯೇ ದೇಶೇ ಗೋದಾವರ್ಯಾಃ ದಕ್ಷಿಣೇ ತೀರೇ ಶಾಲಿವಾಹನಶಕೇ ವರ್ತಮಾನವ್ಯಾವ-ಹಾರಿಕೇ ಅಮುಕ ನಾಮ ಸಂವತ್ಸರೇ ಅಮುಕ ಅಯನೇ, ಅಮುಕ ಋತೌ**

---

**ಜನಾರ್ದನಾಃ**'' ಎಂಬಲ್ಲಿ ವರೇಗೆ ಕೈಜೋಡಿಸಿ ಹೇಳುತ್ತ ಪ್ರಾರ್ಥಿಸಬೇಕು. "**ಶ್ರೀಮದ್ಭಗ ವತೋ....**'' ಎಂಬಲ್ಲಿಂದ ಸಂಕಲ್ಪವನ್ನು ಹೇಳುತ್ತ "**ಅಮುಕ**'' ಎಂದು ಇರುವಲ್ಲೆಲ್ಲ ಆಯಾ ಸಂವತ್ಸರಾದಿಗಳ ಹೆಸರುಗಳನ್ನು ಹೇಳಬೇಕು. ಕೈಯಲ್ಲಿ ನೀರನ್ನು ಹಿಡಿದು "**ಕರಿಷ್ಯೇ**'' ಎಂದಾಗಲೆಲ್ಲ ಆ ನೀರನ್ನು ಬಿಡಬೇಕು. ಐದು ಕುಪ್ಪೆ ಅಕ್ಕಿಯ ಮೇಲೆ ಒಂದು ತೆಂಗಿನಕಾಯಿಯನ್ನಿಟ್ಟು ಅದರ ಮೇಲೆ "**ಗಣಾನಾಂತ್ವಾ**'' ಎಂಬ ಮಂತ್ರವನ್ನೂ "**ಓಂ ಭೂರ್ಭುವಃಸ್ವ**'' **ಎಂದಿತ್ಯಾದಿ ಹೇಳಿ ಗಣಪತಿಯನ್ನು ಆವಾಹಿಸಬೇಕು.** "**ಓಂ ಭೂರ್ಭುವಃ ಸ್ವಃ**'' **ಗಣಪತಯೇ ನಮಃ**'' ಎಂದು ಪ್ರತಿಸಲವೂ ಹೇಳಿ, ಆಸನ, ಪಾದ್ಯ, ಅರ್ಘ್ಯ, ಆಚಮನ, ಸ್ನಾನ, ವಸ್ತ್ರ, ಗಂಧ, ಅಕ್ಷತಾ, ಪುಷ್ಪ, ದೂರ್ವಾಂಕುರ, ಧೂಪ, ದೀಪ, ನೈವೇದ್ಯ, ಫಲ, ತಾಂಬೂಲ, ದಕ್ಷಿಣಾ, ಪ್ರದಕ್ಷಿಣಾ ಮುಂತಾಗಿ ಷೋಡಶೋಪಚಾರ ಪೂಜೆಯನ್ನು ಮಾಡಬೇಕು. "**ನಿಷುಸೀದ**'' ಮಂತ್ರದಿಂದ ಪುಷ್ಪಾಂಜಲಿಯನ್ನರ್ಪಿಸಿ, ಪ್ರಾರ್ಥಿಸಿ, "**ಅನಯಾ ಪೂಜಯಾ**'' ಎಂದು ನೀರುಬಿಟ್ಟು ಪೂಜಾ ಸಮಾಪ್ತಿಯನ್ನು ಮಾಡಬೇಕು.

ಅಮುಕ ಮಾಸೇ, ಅಮುಕ ಪಕ್ಷೇ ಅಮುಕ ತಿಥೌ ಅಮುಕ ವಾಸರೇ ಅಮುಕ ನಕ್ಷತ್ರೇ ಅಮುಕ ಸ್ಥಿತೇ ವರ್ತಮಾನೇ ಚಂದ್ರೇ ಅಮುಕ ಮಹಾನಕ್ಷತ್ರೇ ಅಮುಕ ಸ್ಥಿತೇ ದೇವಗುರೌ ಶೇಷೇಷು ಗ್ರಹೇಷು ಯಥಾ ಯಥಾ ರಾಶಿಸ್ಥಾನಸ್ಥಿತೇಷು ಸತ್ಸು ಶುಭನಾಮಯೋಗ ಶುಭಕರಣ ಏವಂ ಗುಣ ವಿಶೇಷಣ ವಿಶಿಷ್ಟಾಯಾಂ ಶುಭ (ಪುಣ್ಯ) ತಿಥೌ ಮಮ ಆತ್ಮನಃ ಶ್ರುತಿಸ್ಮೃತಿಪುರಾಣೋಕ್ತಫಲಪ್ರಾಪ್ತ್ಯರ್ಥಂ ಅಮುಕ ಗೋತ್ರೋತ್ಪನ್ನಃ ಅಮುಕ ಶರ್ಮಾ ಅಹಂ ಅಮುಕ ಫಲಾವಾಪ್ತಯೇ ಅಮುಕ ಕರ್ಮ ಕರಿಷ್ಯೇ ॥

ತದಂಗತಯಾ ಆದೌ ಪುಣ್ಯಾಹವಾಚನಂ ಮಾತೃಕಾಪೂಜನಂ ನಾಂದೀ-ಶ್ರಾದ್ಧಂ (ಗ್ರಹಯಜ್ಞಂ ಮಂಡಪದೇವತಾ ಕುಲದೇವತಾಸ್ಥಾಪನಂ ಪೂಜನಂ) ಚ ಕರಿಷ್ಯೇ ॥ ತತ್ರಾದೌ ನಿರ್ವಿಘ್ನತಾಸಿದ್ಧಯೇ ಗಣಪತಿ ಪೂಜನಂ ಕರಿಷ್ಯೇ ॥ ಗಣಾನಾಂ ತ್ವಾ ಶೌನಕೋ ಗೃತ್ಸಮದೋ ಗಣಪತಿರ್ಜಗತೀ ॥ ಗಣಪತ್ಯಾವಾಹನೇ ವಿನಿಯೋಗಃ ॥ ಓಂ ಗಣಾನಾಂ ತ್ವಾ ಗಣಪತಿಂ ಹವಾಮಹೇಕವಿಂ-ಕವೀನಾಮುಪಮಶ್ರವಸ್ತಮಂ ॥ ಜ್ಯೇಷ್ಠ ರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತ ಆನಃ ಶೃಣ್ವನ್ನೂತಿಭಿಃ ಸೀದಸಾದನಂ ॥ ಓಂ ಭೂರ್ಭುವಃ ಸ್ವಃ ಋದ್ಧಿಬುದ್ಧಿ-ಸಹಿತಂ ಸಾಂಗಂ ಸಪರಿವಾರಂ ಸಾಯುಧಂ ಸಶಕ್ತಿಕಂ ಗಣಪತಿಂ ಆವಾಹ-ಯಾಮಿ ॥ ಓಂ ಭೂರ್ಭುವಃ ಸ್ವಃ ಗಣಪತಯೇ ನಮಃ ಆಸನಂ ಸಮರ್ಪ-ಯಾಮಿ ॥ ಇತ್ಯಾದಿ ಷೋಡಶೋಪಚಾರಾನ್ ಸಮರ್ಪ್ಯ ॥ ಓಂ ನಿಷುಸೀದ-ಗಣಪತೇಗಣೇಷು ತ್ವಾಮಾಹುರ್ವಿಪ್ರತಮಂಕವೀನಾಂ ॥ ನ ಋತೇತ್ವತ್ಕ್ರಿಯ-ತೇ ಕಿಂಚನಾರೇ ಮಹಾಮರ್ಕಂ ಮಘವಂ ಚಿತ್ರಮರ್ಚ ॥ ಓಂ ಭೂರ್ಭುವಃ ಸ್ವಃ ಗಣಪತಯೇ ನಮಃ ಪುಷ್ಪಾಂಜಲಿಂ ಸಮರ್ಪಯಾಮಿ ॥ ಕಾರ್ಯಂ ಮೇ ಸಿದ್ಧಿಮಾಯಾತು ಪ್ರಸನ್ನೇ ತ್ವಯಿ ಧಾತರಿ । ವಿಘ್ನಾನಿ ದೂರಮಾಯಾಂತು ಸರ್ವಾಣಿ ಸುರನಾಯಕ ॥ ಇತಿ ಸಂಪ್ರಾರ್ಥ್ಯ ॥ ಅನಯಾ ಪೂಜಯಾ ಸಕಲ ವಿಘ್ನಹರ್ತಾ ಗಣಪತಿಃ ಪ್ರೀಯತಾಂ ॥

# ೧೩

# ॥ ಪುಣ್ಯಾಹವಾಚನಂ ॥

ಸಂಪೂಜ್ಯ ಗಂಧಮಾಲ್ಯಾದ್ಯೈಃ ಬ್ರಾಹ್ಮಣಾನ್ ಸ್ವಸ್ತಿ ವಾಚಯೇತ್ ।
ಧರ್ಮಕರ್ಮಣಿ ಮಾಂಗಲ್ಯೇ ಸಂಗ್ರಾಮೇಽದ್ಭುತದರ್ಶನೇ ॥ ವ್ಯಾಸಃ ॥
ಶುಭೇ ಕರ್ಮಣಿ ಪುಣ್ಯಾಹವಾಚನೇ ಕಲಶದ್ವಯಂ ।
ಸ್ಥಾಪಯೇದಶುಭೇತ್ವೇಕಂ ಇತಿ ಯಜ್ಞವಿದೋ ವಿದುಃ ॥ ಸಂಗ್ರಹೇ ॥
ಹೇಮರಾಜತತಾಮ್ರಾ ವಾ ಮೃಣ್ಮಯಾ ಲಕ್ಷಣಾನ್ವಿತಾಃ ।
ಅಭಾವೇ ಪಂಚರತ್ನಾನಾಂ ಹೇಮ ಸರ್ವತ್ರ ಯೋಜಯೇತ್ ॥
॥ ವಿಷ್ಣುಧರ್ಮೋತ್ತರೇ ॥

ನ್ಯಗ್ರೋಧಪಿಪ್ಪಲಪ್ಲಕ್ಷ ಜಂಬೂಚೂತತರೂದ್ಭವಾಃ ।
ಪಲ್ಲವಾ ಪಂಚ ವಿಜ್ಞೇಯಾ ತ್ವಕ್ಷ ತೇಷಾಮಪೀಷ್ಯತೇ ॥
॥ ಬ್ರಹ್ಮಾಂಡಪುರಾಣೇ ॥

ಕುಷ್ಠ ಮಾಂಸೀ ಹರಿದ್ರೇ ದ್ವೇ ಮುರಾ ಶೈಲೇಯಚಂದನಂ ।
ಸಟೀಚಂಪಕಮುಸ್ತಾಶ್ಚ ಸರ್ವೌಷಧಿಗಣಃ ಸ್ಮೃತಃ ॥
॥ ಛಂದೋಗಪರಿಶಿಷ್ಟೇ ॥

---

**ಪುಣ್ಯಾಹವಾಚನ:-** **ಪುಣ್ಯಂ ಅಹಃ ಪುಣ್ಯಕಾರಕ,** ಪುಣ್ಯವನ್ನುಂಟುಮಾಡುವ ಮಂಗಲದಿನವಾಗಲಿ ಎಂಬ ಉದ್ದೇಶದಿಂದ ಮಾಡಿದ ವಾಚನ, ಬ್ರಾಹ್ಮಣರು ಕೊಟ್ಟ ಆಶೀರ್ವಾದ. ಸಂಸ್ಕರಿಸುವ ಕರ್ತೃವಿಗೂ, ಸಂಸ್ಕರಿಸಲ್ಪಡುವವನಿಗೂ ಈ ದಿನವು ಪುಣ್ಯಪ್ರದವಾಗಲಿ ಎಂಬುದಕ್ಕಾಗಿ ಸಕಲ ಶುಭಕರ್ಮಗಳ ಆರಂಭದಲ್ಲಿ ಅವಶ್ಯವಾಗಿ ಮಾಡಬೇಕಾದ ಕ್ರಿಯಾಭಾಗವಿದು. ಇದರಲ್ಲಿ ಸ್ವಸ್ತಿವಾಚನ ಸಮೃದ್ಧಿವಾಚನ ಇತ್ಯಾದಿಗಳು ಹೇಳಲ್ಪಡುತ್ತವೆ.

ಶುಭಕರ್ಮಗಳು, ಧರ್ಮಕಾರ್ಯಗಳು, ಸಂಗ್ರಾಮ, ಅದ್ಭುತವಿಷಯದರ್ಶನ ಮುಂತಾದ ಸಂದರ್ಭಗಳಲ್ಲಿ ಗಂಧಮಾಲ್ಯಾದಿಗಳಿಂದ ಬ್ರಾಹ್ಮಣರನ್ನು ಸತ್ಕರಿಸಿ, ಅವರಿಂದ ಸ್ವಸ್ತಿವಾಚನವನ್ನು ಮಾಡಿಸಿಕೊಳ್ಳಬೇಕು. (ವ್ಯಾಸ) ಶುಭಕಾರ್ಯಗಳಲ್ಲಿ ಮಾಡುವ ಪುಣ್ಯಾಹವಾಚನದಲ್ಲಿ ಎರಡು ಕಲಶಗಳನ್ನೂ ಅಶುಭಕರ್ಮಗಳಲ್ಲಿ ಒಂದು ಕಲಶವನ್ನೂ ಸ್ಥಾಪಿಸಬೇಕು. (ಸಂಗ್ರಹ)

ಸುವರ್ಣ, ಬೆಳ್ಳಿ, ತಾಮ್ರ ಅಥವಾ ಮಣ್ಣಿನ ಸುಂದರವಾದ, ಲಕ್ಷಣಯುಕ್ತವಾದ ಕಲಶಗಳನ್ನು ಸ್ಥಾಪಿಸಬೇಕು. ಕಲಶಗಳಲ್ಲಿ ಹಾಕಲು ಪಂಚರತ್ನಗಳು ಇಲ್ಲದಿದ್ದರೆ ಚಿನ್ನವನ್ನೇ ಉಪಯೋಗಿಸಬಹುದು (ವಿಷ್ಣುಧರ್ಮೋತ್ತರ)

ಆಲ, ಅಶ್ವತ್ಥ, ಪ್ಲಕ್ಷ, ನೇರಿಳೆ ಮತ್ತು ಮಾವು ಈ ಮರಗಳ ಎಲೆಗಳು ಪಂಚಪಲ್ಲವಗಳು. ಅವುಗಳ ತೊಗಟೆಯೂ ಆಗಬಹುದು.

॥ ಅಥ ಪುಣ್ಯಾಹವಾಚನಂ ॥ ಶ್ರೀಃ ॥ ಅಗ್ರೇ ಪ್ರತಿಕಲಶಂ ಮಂತ್ರಾ-ವೃತ್ತಿಃ ಉತ್ತರ ಸಂಸ್ಥಿತಾ ಚ ॥ ಕರ್ತಾ ಸ್ವಪುರತಃ ॥ ಓಂ ಮಹೀದ್ಯೌಃ ಪೃಥಿವೀಚನ ಇಮಂ ಯಜ್ಞಂ ಮಿಮಿಕ್ಷತಾಂ ॥ ಪಿಪೃತಾಂನೋಭರೀಮಭಿಃ ॥ ಇತಿ ಮಂತ್ರಾವೃತ್ಯಾ ದಕ್ಷಿಣೋತ್ತರತೋ ಭೂಮಿಂ ಸ್ಪೃಷ್ಟ್ವಾ ॥ ಓಂ ಓಷಧಯಃ ಸಂವದಂತೇ ಸೋಮೇನ ಸಹರಾಜ್ಞಾ ॥ ಯಸ್ಮೈ ಕೃಣೋತಿ ಬ್ರಾಹ್ಮಣಸ್ತಂ ರಾಜನ್ ಪಾರಯಾಮಸಿ ॥ ಇತಿ ತತ್ರೈವ ತಂದುಲಪುಂಜೌ ಕೃತ್ವಾ ॥ ಓಂ ಆಕಲಶೇಷುಧಾವತಿ ಪವಿತ್ರೇಪರಿಷಿಚ್ಯತೇ ॥ ಉಕ್ಥೈರ್ಯಜ್ಞೇಷು-ವರ್ಧತೇ ॥ ಇತಿ ತತ್ರ ದ್ವೌ ಕಲಶೌ ನಿಧಾಯ ॥ ಓಂ ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿಸ್ತೋಮಂ ಸಚತಾಪರುಷ್ಣ್ಯಾ ॥ ಅಸಿಕ್ನ್ಯಾ-ಮರುದ್ವೃಧೇವಿತಸ್ತಯಾರ್ಜೀಕೀಯೇ ಶೃಣುಹ್ಯಾಸುಷೋಮಯಾ ॥ ಇತಿ ತೀರ್ಥಜಲೇನ ಪ್ರತ್ಯೇಕಂ ಪೂರಯಿತ್ವಾ ॥ ಓಂ ಗಂಧದ್ವಾರಾಂ ದುರಾಧರ್ಷಾಂ ನಿತ್ಯಪುಷ್ಟಾಂ ಕರೀಷಿಣೀಂ ॥ ಈಶ್ವರೀಂ ಸರ್ವಭೂತಾನಾಂ ತಾಮಿಹೋಪಹ್ವ-ಯೇಶ್ರಿಯಂ ॥ ಇತಿ ಗಂಧಂ ಪ್ರಕ್ಷಿಪ್ಯ ॥ ಓಂ ಕಾಂಡಾತ್ಕಾಂಡಾತ್ಪ್ರರೋಹಂತೀ ಪರುಷಃ ಪರುಷಃ ಪರಿ ॥ ಏವಾನೋದೂರ್ವೇ ಪ್ರತನುಸಹಸ್ರೇಣಶತೇನ ಚ ॥ ಇತಿ ದೂರ್ವಾಃ ॥ ಓಂ ಅಶ್ವತ್ಥೇವೋನಿಷದನಂ ಪರ್ಣೇ ವೋವಸತಿಷ್ಕೃತಾ ॥ ಗೋಭಾಜಇತ್ಕಿಲಾಸಥಯತ್ಸನವಥಪೂರುಷಂ ॥ ಇತಿ ಪಲ್ಲವಾನ್ ॥ ಓಂ ಯಾಃ ಫಲಿನೀರ್ಯಾಅಫಲಾಅಪುಷ್ಪಾಯಾಶ್ಚಪುಷ್ಪಿಣೀಃ ॥ ಬೃಹಸ್ಪತಿಪ್ರಸೂತಾ-ಸ್ತಾನೋ ಮುಂಚಂತ್ವಂಹಸಃ ॥ ಇತಿ ಫಲಂ ॥ ಓಂ ಸಹಿರತ್ನಾನಿದಾಶುಷೇ ಸುವಾತಿ ಸವಿತಾ ಭಗಃ ॥ ತಂ ಭಾಗಂ ಚಿತ್ರಮೀಮಹೇ ॥ ಇತಿ ರತ್ನಾನಿ ॥

---

ಎರಡು ಕಲಶಗಳನ್ನು ಸ್ಥಾಪಿಸಿ ಪೂಜಿಸುವಾಗ ಪ್ರತಿ ಕಲಶಕ್ಕೂ ಬೇರೆ ಬೇರೆಯಾಗಿ ಎರಡೆರಡು ಸಲ ಮಂತ್ರವನ್ನು ಹೇಳಬೇಕು. ಮೊದಲು ದಕ್ಷಿಣಭಾಗದ ಕಲಶಕ್ಕೆ ಪೂಜೆ ಮಾಡಿ ಆಮೇಲೆ ಉತ್ತರಭಾಗದ ಕಲಶವನ್ನು ಪೂಜಿಸಬೇಕು. ಯಜಮಾನನು ತನ್ನ ಮುಂಭಾಗದಲ್ಲಿ **"ಮಹೀದ್ಯೌ"** ಎಂಬ ಮಂತ್ರವನ್ನು ಹೇಳುತ್ತ ಎರಡು ಕಡೆ ಎರಡು ಸಲ ನೆಲವನ್ನು ಮುಟ್ಟಿಕೊಳ್ಳಬೇಕು. **"ಓಷಧಯಃ"** ಎಂಬ ಮಂತ್ರದಿಂದ ಆ ಎರಡು ಕಡೆ ಐದೈದು ಕುಡ್ತೆ

ಓಂ ಹಿರಣ್ಯರೂಪಃ ಸಹಿರಣ್ಯಸಂದೃಗಪಾನ್ನಪಾತ್ಸೇದುಹಿರಣ್ಯವರ್ಣಃ । ಹಿರಣ್ಯಯಾತ್ಪರಿಯೋನೇರ್ನಿಷದ್ಯಾಹಿರಣ್ಯಾದಾದದತ್ಯನ್ನಮಸ್ಮೈ ॥ ಇತಿ ಹಿರಣ್ಯಂ ॥ ಓಂ ಯುವಾಸುವಾಸಾಃ ಪರಿವೀತ ಆಗಾತ್ಸಉಶ್ರೇಯಾನ್ಭವತಿಜಾಯಮಾನಃ ॥ ತಂಧೀರಾಸಃ ಕವಯ ಉನ್ನಯಂತಿ ಸ್ವಾಧ್ಯೋ೩ ಮನಸಾದೇವಯಂತಃ । ಇತಿ ವಸ್ತ್ರೇಣ ಸೂತ್ರೇಣ ವಾ ಕಲಶೌ ವೇಷ್ಟಯಿತ್ವಾ ॥ ಓಂ ಪೂರ್ಣಾದರ್ವಿ-ಪರಾಪತಸುಪೂರ್ಣಾಪುನರಾಪತ ॥ ವಸ್ನೇವವಿಕ್ರೀಣಾವಹಾ ಇಷಮೂರ್ಜಂ ಶತ-ಕ್ರತೋ ॥ ಇತಿ ಸತಂದುಲಾಭ್ಯಾಂ ಪೂರ್ಣಪಾತ್ರಾಭ್ಯಾಂ ಕಲಶಯೋರಾನನೇ ಪಿದಧ್ಯಾತ್ ॥

ತತ್ವಾಯಾಮಿ ಶುನಃಶೇಫೋ ವರುಣಸ್ತ್ರಿಷ್ಟುಪ್ ಉತ್ತರಕಲಶೇ ವರುಣಾವಾಹನೇ ವಿನಿಯೋಗಃ ॥ ಓಂ ತತ್ವಾಯಾಮಿ ಬ್ರಹ್ಮಣಾವಂದಮಾನ-ಸ್ತದಾಶಾಸ್ತೇಯಜಮಾನೋಹವಿರ್ಭಿಃ ॥ ಅಹೇಳಮಾನೋ ವರುಣೇಹ ಬೋಧ್ಯುರುಶಂ ಸಮಾನ ಆಯುಃ ಪ್ರಮೋಷೀಃ ॥ ಕಲಶೇ ವರುಣಂ ಸಾಂಗಂ ಸಪರಿವಾರಂ ಸಾಯುಧಂ ಸಶಕ್ತಿಕಂ ಆವಾಹಯಾಮಿ ॥ ಓಂ ಭೂರ್ಭುವಃ ಸ್ವಃ ವರುಣಾಯ ನಮಃ ಚಂದನಂ ಸಮರ್ಪಯಾಮಿ ಇತ್ಯಾದಿ ಪಂಚೋಪಚಾರೈಃ ಸಂಪೂಜ್ಯ ತತ್ವಾಯಾಮೀತಿ ಪುಷ್ಪಾಂಜಲಿಂ ಸಮರ್ಪ್ಯ ॥ ಅನೇನ ಪೂಜನೇನ ವರುಣಃ ಪ್ರೀಯತಾಂ ॥ ಕಲಶಸ್ಯ ಮುಖೇ ವಿಷ್ಣುಃ ಕಂಠೇ ರುದ್ರಃ ಸಮಾಶ್ರಿತಃ ।

---

ಅಥವಾ ಒಂದೊಂದು ಸೇರು ಅಕ್ಕಿಯನ್ನು ಸುರಿದು ಎರಡು ರಾಶಿ ಮಾಡಬೇಕು. "**ಆ ಕಲಶೇಷು**" ಎಂಬ ಮಂತ್ರ ಹೇಳಿ ಎರಡು ಕಲಶಗಳನ್ನಿಡಬೇಕು. (ಬಂಗಾರ, ಬೆಳ್ಳಿ, ತಾಮ್ರ ಅಥವಾ ಮಣ್ಣಿನ ಅಲಂಕರಿಸಿದ ಕಲಶಗಳು) "**ಇಮಂ ಮೇ**" ಎಂಬ ಮಂತ್ರವನ್ನು ಹೇಳಿ ಎರಡರಲ್ಲೂ ಶುದ್ಧವಾದ ನೀರನ್ನು ತುಂಬಿಸಬೇಕು. "**ಗಂಧದ್ವಾರಾಂ**" ಎಂಬ ಮಂತ್ರದಿಂದ ಕಲಶಗಳಲ್ಲಿ ಗಂಧವನ್ನು "**ಕಾಂಡಾತ್ಕಾಂಡಾತ್**" ಎಂಬ ಮಂತ್ರದಿಂದ ದೂರ್ವೆಗಳನ್ನು

---

1. ಉತ್ತರಕಲಶೇ ವರುಣಾವಾಹನೇಽಪಿ ದಕ್ಷಿಣಕಲಶೋದ್ವಿತ್ವ ಸಂಪಾದನಾರ್ಥಃ ॥ ದಕ್ಷಿಣಸ್ಥಃ ಸ್ಥಿರಶ್ಚೈವ ಉತ್ತರಸ್ಥಶ್ಚರಸ್ತಥಾ । ನ ಚಾಲಯೇದ್ದಕ್ಷಿಣಸ್ಥಮುತ್ತರಸ್ಥಂ ತು ಚಾಲಯೇತ್ । ಅನ್ಯಥಾ ಧರ್ಮಹಾನಿಃ ಸ್ಯಾದೇಷಧರ್ಮಃ ಸನಾತನಃ ॥

**ಮೂಲೇ ತತ್ರ ಸ್ಥಿತೋ ಬ್ರಹ್ಮಾ ಮಧ್ಯೇ ಮಾತೃಗಣಾಃ ಸ್ಮೃತಾಃ ॥ ಕುಕ್ಷೌತು ಸಾಗರಾಃ ಸರ್ವೇ ಸಪ್ತದ್ವೀಪಾ ವಸುಂಧರಾ । ಋಗ್ವೇದೋಽಥ ಯಜುರ್ವೇದಃ ಸಾಮವೇದೋಽಹ್ಯಥರ್ವಣಃ ॥ ಅಂಗೈಶ್ಚ ಸಹಿತಾಃ ಸರ್ವೇ ಕಲಶಂ ತು ಸಮಾಶ್ರಿತಾಃ । ಅತ್ರ ಗಾಯತ್ರೀ ಸಾವಿತ್ರೀ ಶಾಂತಿಃ ಪುಷ್ಟಿಕರೀ ತಥಾ ॥ ಆಯಾಂತು ಮಮ ಶಾಂತ್ಯರ್ಥಂ ದುರಿತಕ್ಷಯಕಾರಕಾಃ । ಸರ್ವೇ ಸಮುದ್ರಾಃ ಸರಿತಃ ತೀರ್ಥಾನಿ ಜಲದಾ ನದಾಃ ॥ ಆಯಾಂತು ಮಮ ಶಾಂತ್ಯರ್ಥಂ ದುರಿತಕ್ಷಯಕಾರಕಾಃ ॥ ಉತ್ತರಕಲಶೇ ಅಕ್ಷತಾನ್ ಕ್ಷಿಪೇತ್ ॥ ಮಾತೃ-ದೇವೋ ಭವ ॥ ಪಿತೃದೇವೋ ಭವ ॥ ಆಚಾರ್ಯದೇವೋ ಭವ ॥ ಅತಿಥಿದೇವೋ ಭವ ॥ ಸರ್ವೇಭ್ಯೋ ಬ್ರಾಹ್ಮಣೇಭ್ಯೋ ನಮೋನಮಃ ॥**

**ತತಃ ಅವನಿಕೃತಜಾನುಮಂಡಲಃ ಕಮಲಮುಕುಲಸದೃಶಮಂಜಲಿಂ ಶಿರಸ್ಯಾಧಾಯ ದಕ್ಷಿಣೇನ ಪಾಣಿನಾ ಸುವರ್ಣಪೂರ್ಣಕಲಶಂ ಧಾರಯಿತ್ವಾ ಆಶಿಷಃ ಪ್ರಾರ್ಥಯತೇ ॥ ಪ್ರಾರ್ಥನಾಮಾಹ ॥ ಏತಾಃ ಸತ್ಯಾಃ ಆಶಿಷಃ ಸಂತು ॥ ದೀರ್ಘಾನಾಗಾನದ್ಯೋ ಗಿರಯಃ ತ್ರೀಣಿ ವಿಷ್ಣುಪದಾನಿ ಚ-ತೇನಾಯುಃಪ್ರಮಾಣೇನ ಪುಣ್ಯಾಹಂ ದೀರ್ಘಮಾಯುರಸ್ತು ॥ ಬ್ರಾಹ್ಮಣ**

---

"**ಅಶ್ವತ್ಥೇವೋ**" ಎಂಬ ಮಂತ್ರದಿಂದ ಮೊದಲು ಹೇಳಿದ ಪಂಚಪಲ್ಲವಗಳನ್ನು "**ಯಾಃ ಫಲಿನೀ**" ಎಂಬುದರಿಂದ ಫಲಗಳನ್ನು "**ಸಹಿ ರತ್ನಾನಿ**" ರತ್ನಗಳನ್ನೂ "**ಹಿರಣ್ಯರೂಪಃ**" ಎಂಬ ಮಂತ್ರ ಹೇಳಿ ಚಿನ್ನವನ್ನೂ ಹಾಕಿ "**ಯುವಾಸುವಾಸ**" ಎಂಬ ಮಂತ್ರ ಹೇಳಿ ಹೊಸವಸ್ತ್ರ ಅಥವಾ ನೂಲನ್ನು ಕಲಶಗಳಿಗೆ ಸುತ್ತಿ ಕಟ್ಟಬೇಕು. "**ಪೂರ್ಣಾದರ್ವಿಪ**" ಎಂಬ ಮಂತ್ರವನ್ನು ಹೇಳಿ ಅಕ್ಕಿ ತುಂಬಿದ ಪಾತ್ರೆ ಅಥವಾ ತೆಂಗಿನಕಾಯಿಗಳಿಂದ ಕಲಶಗಳ ಮುಖವನ್ನು ಮುಚ್ಚಬೇಕು.

"**ತತ್ವಾಯಾಮಿ**" ಎಂಬ ಮಂತ್ರವನ್ನು ಹೇಳಿ, "**ಕಲಶೇ ವರುಣಂ ಸಾಂಗಂ....**" ಎಂದು ಉಚ್ಚರಿಸಿ ಉತ್ತರಕಲಶದಲ್ಲಿ ಅಕ್ಷತೆಗಳನ್ನು ಹಾಕಿ ವರುಣನನ್ನು ಆವಾಹಿಸಬೇಕು. "**ಓಂ ಭೂರ್ಭುವಃ ಸ್ವಃ ವರುಣಾಯ ನಮಃ**" ಎಂದು ಪ್ರತಿಸಲವೂ ಹೇಳುತ್ತ ಮೊದಲು ಚಂದನವನ್ನೂ ಆಮೇಲೆ ಅಕ್ಷತೆ, ಪುಷ್ಪ, ಧೂಪ, ದೀಪ, ನೈವೇದ್ಯಗಳೆಂಬ ಪಂಚೋಪಚಾರ ಪೂಜೆಯನ್ನು ಮಾಡಬೇಕು. ಕೊನೆಗೆ "**ತತ್ವಾಯಾಮಿ**" ಎಂಬ ಮಂತ್ರದಿಂದ ಪುಷ್ಪಾಂಜಲಿಯನ್ನರ್ಪಿಸಿ "**ಅನೇನ ಪೂಜನೇನ...**" ಎಂದು ನೀರು ಬಿಡಬೇಕು. ನಮಸ್ಕಾರ ಮಾಡುತ್ತ "**ಕಲಶಸ್ಯ ಮುಖೇ...**" ಶ್ಲೋಕಗಳನ್ನು ಹೇಳಿ ಉತ್ತರಕಲಶದ ಮೇಲೆ "**ಮಾತೃದೇವೋ ಭವ**" ಎಂಬವುಗಳನ್ನು ಹೇಳುತ್ತ ಅಕ್ಷತೆಗಳನ್ನು ಹಾಕಬೇಕು.

ಆಮೇಲೆ ಯಜಮಾನನು ಎರಡು ಮೊಣಕಾಲುಗಳನ್ನು ನೆಲಕ್ಕೆ ತಾಗಿಸಿ ಕುಳಿತು ಕಮಲದ ಮೊಗ್ಗಿನಂತೆ ತಲೆಯ ಮೇಲೆ ಎರಡು ಕೈ ಜೋಡಿಸಿ ನಮಸ್ಕರಿಸಿ ಬಲಗೈಯಿಂದ ಉತ್ತರಕಲಶವನ್ನು ತೆಕ್ಕೊಂಡು ಪ್ರಾರ್ಥಿಸಬೇಕು ಬ್ರಾಹ್ಮಣರು "**ಏತಾಃ ಸತ್ಯಾಃ**" ಎಂಬಲ್ಲಿಂದ

**ಹಸ್ತೇ ಶಿವಾ ಆಪಃ ಸಂತು ॥ ಸೌಮನಸ್ಯಮಸ್ತು ॥ ಅಕ್ಷತಂಚಾರಿಷ್ಟಂ ಚಾಸ್ತು ॥ ಗಂಧಾಃ ಪಾಂತು ॥ ಸೌಮಂಗಲ್ಯಂ ಚಾಸ್ತು ॥ ಅಕ್ಷತಾಃ ಪಾಂತು ॥ ಆಯುಷ್ಯ-ಮಸ್ತು ॥ ಪುಷ್ಪಾಣಿ ಪಾಂತು । ಸೌಶ್ರಿಯಮಸ್ತು ॥ ತಾಂಬೂಲಾನಿ ಪಾಂತು ॥ ಐಶ್ವರ್ಯಮಸ್ತು ॥ ದಕ್ಷಿಣಾಃ ಪಾಂತು ॥ ಬಹುದೇಯಂ ಚಾಸ್ತು ॥ ದೀರ್ಘ-ಮಾಯುಃ ಶ್ರೇಯಃ ಶಾಂತಿಃ ಪುಷ್ಟಿಸ್ತುಷ್ಟಿಶ್ಚಾಸ್ತು ॥ ಶ್ರೀರ್ಯಶೋ ವಿದ್ಯಾ ವಿನಯೋ ವಿತ್ತಂ ಬಹುಪುತ್ರಂ ಚಾಯುಷ್ಯಂ ಚಾಸ್ತು ॥ ಯಂ ಕೃತ್ವಾ ಸರ್ವ-ವೇದಯಜ್ಞಕ್ರಿಯಾಕರಣಕರ್ಮಾರಂಭಾಃ ಶುಭಾಃ ಶೋಭನಾಃ ಪ್ರವರ್ತಂತೇ ತಮಹಮೋಂಕಾರಮಾದಿಂ ಕೃತ್ವಾ ಋಗ್ಯಜುಃಸಾಮಾಶೀರ್ವಚನಂ ಬಹ್ವೃಷಿ-ಮತಂ ಸಂವಿಜ್ಞಾತಂ ಭವದ್ಭಿರನುಜ್ಞಾತಃ ಪುಣ್ಯಂ ಪುಣ್ಯಾಹಂ ವಾಚಯಿಷ್ಯೇ ॥ ವಿಪ್ರಾಃ ವಾಚ್ಯತಾಂ ॥ ತತೋ ಯಜಮಾನಃ ॥ ಓಂ ಭದ್ರಂಕರ್ಣೇಭಿಃ ಶೃಣು-ಯಾಮದೇವಾ ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ । ಸ್ಥಿರೈರಂಗೈಸ್ತುಷ್ಟು-ವಾಂಸಸ್ತನೂಭಿರ್ವ್ಯಶೇಮದೇವಹಿತಂ ಯದಾಯುಃ ॥ ಓಂ ದ್ರವಿಣೋದಾದ್ರ-ವಿಣಸಸ್ತುರಸ್ಯ ದ್ರವಿಣೋದಾಃ ಸನರಸ್ಯಪ್ರಯಂಸತ್ ॥ ದ್ರವಿಣೋದಾವೀರ-**

---

**"ದೀರ್ಘಮಾಯುರಸ್ತು"** ಎಂಬಲ್ಲಿ ವರೆಗೆ ಹೇಳಬೇಕು. ಆಮೇಲೆ ಯಜಮಾನನು "ಶಿವಾ ಆಪಃ" ಮುಂತಾಗಿ ಹೇಳುತ್ತ ಬ್ರಾಹ್ಮಣರಿಗೆ ನೀರು ಅಕ್ಷತೆ ಮುಂತಾದ್ದನ್ನು ಕೊಡಬೇಕು. **"ಅಸ್ತು"** ಎಂದು ಕೊನೆಗೆ ಬರುವ ವಾಕ್ಯಗಳನ್ನು ಬ್ರಾಹ್ಮಣರು ಹೇಳಬೇಕು. **"ಯಂಕೃತ್ವಾ"** ಎಂಬಲ್ಲಿಂದ **"ವಾಚಯಿಷ್ಯೇ"** ಎಂಬಲ್ಲಿವರೆಗೆ ಯಜಮಾನನು ಹೇಳಿದಾಗ ಬ್ರಾಹ್ಮಣರು **"ವಾಚ್ಯತಾಂ"** ಎಂದು ಹೇಳಬೇಕು. ಯಜಮಾನನು **"ಭದ್ರಂ ಕರ್ಣೇಭಿಃ....."** ಎಂಬಲ್ಲಿಂದ **"....ಪ್ರಜಾಮಾಯುರ್ಧನಂ"** ಎಂಬಲ್ಲಿ ವರೇಗಿನ ಮಂತ್ರಗಳನ್ನು ಹೇಳಿ, ಬ್ರಾಹ್ಮಣರನ್ನು ಸಂಬೋಧಿಸಿ, **"ವ್ರತನಿಯಮ....ಸಮಾಧೀಯತಾಂ"** ಎಂದು ಹೇಳಬೇಕು. ಬ್ರಾಹ್ಮಣರು, **"ಸಮಾಹಿತ...ಸ್ಮಃ"** ಯಜಮಾನ **"ಪ್ರಸೀದಂತು...."** ಬ್ರಾಹ್ಮಣರು **"ಪ್ರಸನ್ನಾ ಸ್ಮಃ"**. ಆಮೇಲೆ ಯಜಮಾನನು ತನ್ನ ಮುಂಭಾಗದಲ್ಲಿ ಒಂದು ತಟ್ಟೆಯನ್ನಿಟ್ಟುಕೊಂಡು, **"ಶಾಂತಿರಸ್ತು"** ಎಂಬಲ್ಲಿಂದ ಆರಂಭಿಸಿ **"ಇಷ್ಟಾಃ ಕಾಮಾಃಸಂಪದ್ಯಂತಾಂ"** ಎಂಬಲ್ಲಿ ವರೇಗೆ ಒಂದೊಂದು ಮಂತ್ರವನ್ನು ಉಚ್ಚರಿಸುವಾಗ ಒಂದೊಂದು ಬಾರಿಯಂತೆ ೨೨ ಸಲ ಸಕ್ಕಣದಿಂದ ನೀರು ಬಿಡಬೇಕು.

ವತೀಮಿಷನ್ನೋ ದ್ರವಿಣೋ ದಾರಾಸತೇ ದೀರ್ಘಮಾಯುಃ ॥ ಓಂ ಸವಿತಾ ಪಶ್ಚಾತ್ತಾತ್ಸವಿತಾಪುರಸ್ತಾತ್ಸವಿತೋತ್ತರಾತ್ತಾತ್ಸವಿತಾಧರಾತ್ತಾತ್ । ಸವಿತಾ ನಃ ಸುವತು ಸರ್ವತಾತಿಂ ಸವಿತಾನೋರಾಸತಾಂ ದೀರ್ಘಮಾಯುಃ ॥ ಓಂ ನವೋ ನವೋ ಭವತಿಜಾಯಮಾನೋಹ್ನಾಂ ಕೇತುರುಷಸಾಮೇತ್ಯಗ್ರಂ ॥ ಭಾಗಂ ದೇವೇಭ್ಯೋವಿದಧಾತ್ಯಾಯನ್ಪ್ರಚಂದ್ರಮಾಸ್ತಿರತೇ ದೀರ್ಘಮಾಯುಃ ॥ ಓಂ ಉಚ್ಚಾದಿವಿದಕ್ಷಿಣಾವಂತೋ ಅಸ್ಥುರ್ಯೇಽಅಶ್ವದಾ ಸಹತೇ ಸೂರ್ಯೇಣ ॥ ಹಿರಣ್ಯದಾ ಅಮೃತತ್ವಂ ಭಜಂತೇ ವಾಸೋದಾಃ ಸೋಮ ಪ್ರತಿರಂತ ಆಯುಃ ॥ ಓಂ ಆಪಉಂದಂತುಜೀವಸೇ ದೀರ್ಘಾಯುತ್ವಾಯ ವರ್ಚಸೇ ॥ ಯಸ್ತ್ವಾ-ಹೃದಾಕೀರಿಣಾಮನ್ಯಮಾನೋಮರ್ತ್ಯಂಮರ್ತ್ಯೋಜೋಹವೀಮಿ ॥ ಜಾತ-ವೇದೋ ಯಶೋ ಅಸ್ಮಾಸು ಧೇಹಿ ಪ್ರಜಾಭಿರಗ್ನೇ ಅಮೃತತ್ವಮಶ್ಯಾಂ ॥ ಯಸ್ಮೈತ್ವಂ ಸುಕೃತೇ ಜಾತವೇದ ಉಲೋಕಮಗ್ನೇಕೃಣವಃ ಸ್ಯೋನಂ ॥ ಅಶ್ವಿನಂ ಸಪುತ್ರಿಣಂ ವೀರವಂತಂ ಗೋಮತಂ ರಯಿಂ ನ ಶತೇ ಸ್ವಸ್ತಿ ॥ ಸಂತ್ವಾ ಸಿಂಚಾಮಿ ಯಜುಷಾ ಪ್ರಜಾಮಾಯುರ್ಧನಂ ಚ ॥ ವ್ರತನಿಯಮತ-ಪಃಸ್ವಾಧ್ಯಾಯಕ್ರತುದಮದಾನವಿಶಿಷ್ಟಾಃ ಭೋ ಬ್ರಾಹ್ಮಣಾಃ ಮನಃ ಸಮಾಧೀ-ಯತಾಂ ॥ ವಿಪ್ರಾಃ ಸಮಾಹಿತಮನಸಃ ಸ್ಮಃ ॥ ಯಜಮಾನಃ ಪ್ರಸೀದಂತು ಭವಂತಃ ॥ ವಿಪ್ರಾಃ ಪ್ರಸನ್ನಾ ಸ್ಮಃ ॥ ಯಜಮಾನಃ ॥ ಶಾಂತಿರಸ್ತು ॥ ಪುಷ್ಟಿ-ರಸ್ತು ॥ ತುಷ್ಟಿರಸ್ತು ॥ ವೃದ್ಧಿರಸ್ತು ॥ ಅವಿಘ್ನಮಸ್ತು ॥ ಆಯುಷ್ಯಮಸ್ತು ॥ ಆರೋಗ್ಯಮಸ್ತು ॥। ಶಿವಂ ಕರ್ಮಾಸ್ತು ॥ ಕರ್ಮ ಸಮೃದ್ಧಿರಸ್ತು ॥ ಧರ್ಮ ಸಮೃದ್ಧಿರಸ್ತು ॥ ವೇದಸಮೃದ್ಧಿರಸ್ತು ॥ ಶಾಸ್ತ್ರಸಮೃದ್ಧಿರಸ್ತು ॥ ಪುತ್ರ ಸಮೃದ್ಧಿರಸ್ತು ॥ ಧನಧಾನ್ಯ ಸಮೃದ್ಧಿರಸ್ತು ॥ ಇಷ್ಟ ಸಂಪದಸ್ತು ॥ ಬಹಿರ್ದೇಶೇ ಸರ್ವಾರಿಷ್ಟ-ನಿರಸನಮಸ್ತು ॥ ಯತ್ಪಾಪಂ ತತ್ಪ್ರತಿಹತಮಸ್ತು ॥ ಯಚ್ಛ್ರೇಯಸ್ತದಸ್ತು ॥ ಉತ್ತರೇ ಕರ್ಮಣ್ಯವಿಘ್ನಮಸ್ತು ॥ ಉತ್ತರೋತ್ತರಮಹರಹರಭಿವೃದ್ಧಿರಸ್ತು ॥ ಉತ್ತರೋತ್ತರಾಃ

ಕ್ರಿಯಾಃ ಶುಭಾಃ ಶೋಭನಾಃ ಸಂಪದ್ಯಂತಾಂ ॥ ಇಷ್ಟಾಃ ಕಾಮಾಃ ಸಂಪದ್ಯಂತಾಂ ॥ ತಿಥಿಕರಣ ಮುಹೂರ್ತ ನಕ್ಷತ್ರ ಸಂಪದಸ್ತು ॥ ತಿಥಿಕರಣ ಮುಹೂರ್ತ ನಕ್ಷತ್ರ ಗ್ರಹ ಲಗ್ನಾಧಿದೇವತಾಃ ಪ್ರೀಯಂತಾಂ ॥ (೨೨) ತಿಥಿಕರಣೇ ಮುಹೂರ್ತನಕ್ಷತ್ರೇ ಸಗ್ರಹೇ ಸದೈವತೇ ಪ್ರೀಯೇತಾಂ ॥ ದುರ್ಗಾಪಾಂಚಾಲ್ಯೌ ಪ್ರೀಯೇತಾಂ ॥ ಅಗ್ನಿಪುರೋಗಾಃ ವಿಶ್ವೇದೇವಾಃ ಪ್ರೀಯಂತಾಂ ॥ ಇಂದ್ರ ಪುರೋಗಾಃ ಮರುದ್ಗಣಾಃ ಪ್ರೀಯಂತಾಂ ॥ ಬ್ರಹ್ಮಪುರೋಗಾಃ ಸರ್ವೇ ವೇದಾಃ ಪ್ರೀಯಂತಾಂ ॥ ವಿಷ್ಣು ಪುರೋಗಾಃ ಸರ್ವೇ ದೇವಾಃ ಪ್ರೀಯಂತಾಂ ॥ ಮಾಹೇ-ಶ್ವರೀ ಪುರೋಗಾಃ ಉಮಾಮಾತರಃ ಪ್ರೀಯಂತಾಂ ॥ ವಸಿಷ್ಠ ಪುರೋಗಾಃ ಋಷಿ-ಗಣಾಃ ಪ್ರೀಯಂತಾಂ ॥ ಅರುಂಧತೀ ಪುರೋಗಾ ಏಕಪತ್ನ್ಯಃ ಪ್ರೀಯಂತಾಂ ॥ ಋಷಯಶ್ಛಂದಾಂಸ್ಯಾಚಾರ್ಯಾ ವೇದಾ ದೇವಾ ಯಜ್ಞಾಶ್ಚ ಪ್ರೀಯಂತಾಂ ॥ ಬ್ರಹ್ಮಚ ಬ್ರಾಹ್ಮಣಾಶ್ಚ ಪ್ರೀಯಂತಾಂ ॥ ಶ್ರೀಸರಸ್ವತ್ಯೌ ಪ್ರೀಯೇತಾಂ ॥ ಶ್ರದ್ಧಾಮೇಧೇ ಪ್ರೀಯೇತಾಂ ॥ ಭಗವತೀ ಕಾತ್ಯಾಯನೀ ಪ್ರೀಯತಾಂ ॥ ಭಗವತೀ ಮಾಹೇಶ್ವರೀ ಪ್ರೀಯತಾಂ ॥ ಭಗವತೀ ಪುಷ್ಟಿಕರೀ ಪ್ರೀಯತಾಂ ॥ ಭಗವತೀ ತುಷ್ಟಿಕರೀ ಪ್ರೀಯತಾಂ ॥ ಭಗವತೀ ಋದ್ಧಿಕರೀ ಪ್ರೀಯತಾಂ ॥ ಭಗವತೀ ವೃದ್ಧಿಕರೀ ಪ್ರೀಯತಾಂ ಭಗವಂತೌ ವಿಘ್ನವಿನಾಯಕೌ ಪ್ರಿಯೇತಾಂ ॥ ಭಗವಾನ್ ಸ್ವಾಮಿ ಮಹಾಸೇನಃ ಸಪತ್ನೀಕಃ ಸಸುತಃ ಸಪಾರ್ಷದಃ ಸರ್ವ-ಸ್ಥಾನಗತಃ ಪ್ರೀಯತಾಂ ॥ ಹರಿಹರಹಿರಣ್ಯಗರ್ಭಾಃ ಪ್ರೀಯಂತಾಂ ॥ ಸರ್ವಾಃ ಗ್ರಾಮದೇವತಾಃ ಪ್ರೀಯಂತಾಂ ॥ ಸರ್ವಾಃ ಕುಲದೇವತಾಃ ಪ್ರೀಯಂತಾಂ ॥

---

**"ತಿಥಿಕರಣ..."** ಮುಂತಾಗಿ ೨೬ ವಾಕ್ಯಗಳನ್ನು ಹೇಳುತ್ತ ಪ್ರಾರ್ಥಿಸಬೇಕು. ಆಮೇಲಿ **"ಹತಾಃ ಬ್ರಹ್ಮದ್ವಿಷಃ"** ಮುಂತಾಗಿ ೭ ವಾಕ್ಯಗಳನ್ನು ಹೇಳುವಾಗ ತಟ್ಟೆಯ ಹೊರಗೂ ನಂತರದ ೯ ವಾಕ್ಯಗಳನ್ನು ಹೇಳುವಾಗ ತಟ್ಟೆಯ ಒಳಗೂ ನೀರು ಬಿಡಬೇಕು. **ಅತಿವೃಷ್ಟಿರನಾವೃಷ್ಟಿ ರ್ಮೂಷಕಾಃ ಶಲಭಾಃ ಶುಕಾಃ । ಅತ್ಯಾಸನ್ನಾಶ್ಚ ರಾಜಾನ ಷಡೇತಾ ಈತಯಃ ಸ್ಮೃತಾಃ ॥** ಮಳೆ, ಮಳೆ ಬಾರದೆ ಇರುವುದು, ಇಲಿಗಳು, ಹಾತೆಗಳು, ಗಿಳಿ ಮುಂತಾದ ಪಕ್ಷಿಗಳು ಸಮೀಪದಲ್ಲಿ ರಾಜರ ಸೇನೆ ಡೇರೆ ಹಾಕುವುದು-ಈ ಆರನ್ನು ಈತಿಗಳೆಂದು ಕರೆಯುತ್ತಾರೆ.

ಸರ್ವಾಃ ವಾಸ್ತುದೇವತಾಃ ಪ್ರೀಯಂತಾಂ (೨೬) ಬಹಿರಪಃ ॥ ಹತಾಃ ಬ್ರಹ್ಮ-ದ್ವಿಷಃ ॥ ಹತಾಃ ಅಸ್ಯ ಕರ್ಮಣೋ ವಿಘ್ನಕರ್ತಾರಃ ॥ ಶತ್ರವಃ ಪರಾಭವಂತು ॥ ಶಾಮ್ಯಂತು ಘೋರಾಣಿ ॥ ಶಾಮ್ಯಂತು ಪಾಪಾನಿ ॥ ಶಾಮ್ಯಂತ್ವೀತಯಃ (೭) ಶುಭಾನಿ ವರ್ಧಂತಾಂ ॥ ಶಿವಾ ಆಹುತಯಃ ಸಂತು ॥ ಶಿವಾ ಓಷಧಯಃ ಸಂತು ॥ ಶಿವಾ ವನಸ್ಪತಯಃ ಸಂತು ॥ ಶಿವಾ ಅತಿಥಯಃ ಸಂತು ॥ ಅಹೋ ರಾತ್ರೇ ಶಿವೇ ಸ್ಯಾತಾಂ ॥ (೯) ನಿಕಾಮೇನಿಕಾ-ಮೇನಃ ಪರ್ಜನ್ಯೋ ವರ್ಷತು ॥ ಫಲಿನ್ಯೋ ನ ಓಷಧಯಃ ಪಚ್ಯಂತಾಂ ॥ ಯೋಗಕ್ಷೇಮೋ ನಃ ಕಲ್ಪತಾಂ ॥ (೧೫) ಶುಕ್ರಾಂಗಾರಕಬುಧಬೃಹಸ್ಪತಿಶನೈಶ್ಚರರಾಹುಕೇತುಸೋಮಸಹಿತಾ ಆದಿತ್ಯಪುರೋಗಾಃ ಸರ್ವೇ ಗ್ರಹಾಃ ಪ್ರೀಯಂತಾಂ ॥ ಭಗವಾನ್ನಾರಾಯಣಃ ಪ್ರೀಯತಾಂ ॥ ಭಗವಾನ್ ಪರ್ಜನ್ಯಃ ಪ್ರೀಯತಾಂ ॥ ಪ್ರೀಯತಾಂ ಭಗವಾನ್ ಸ್ವಾಮಿ ಮಹಾಸೇನಃ ॥ ಪುಣ್ಯಾಹಕಾಲಾನ್ವಾಚಯಿಷ್ಯೇ ॥ ವಾಚ್ಯತಾಮಿತಿ ವಿಪ್ರಾಃ ॥

ಓಂ ಉದ್ಗಾತೇವಶಕುನೇ ಸಾಮಗಾಯಸಿ ಬ್ರಹ್ಮಪುತ್ರ ಇವಸವನೇಷು-ಶಂಸಸಿ ॥ ವೃಷೇವವಾಜೀಶಿಶುಮತೀರಪೀತ್ಯಾ ಸರ್ವತೋನಃಶಕುನೇ ಭದ್ರಮಾ-ವದ ವಿಶ್ವತೋನಃ ಶಕುನೇ ಪುಣ್ಯಮಾವದ ॥ ಯಾಜ್ಯಯಾ ಯಜತಿ ಪ್ರತ್ಯೈರ್ಯ-ಯಾಜ್ಯಾಪುಣ್ಯೈವಲಕ್ಷ್ಮೀಃ ಪುಣ್ಯಾಮೇವತಲ್ಲಕ್ಷ್ಮೀಂ ಸಂಭಾವಯತಿ ಪುಣ್ಯಾಂ

---

ಯಜಮಾನನು **"ನಿಕಾಮೇ...."** ಎಂಬಲ್ಲಿಂದ **"ಸ್ವಾಮಿ ಮಹಾಸೇನಃ"** ಎಂಬಲ್ಲಿ ವರೇಗೆ ಹೇಳಿ, **"ಪುಣ್ಯಾಹಕಾಲಾನ್ ವಾಚಯಿಷ್ಯೇ"** ಎಂದು ಬ್ರಾಹ್ಮಣರನ್ನು ಕೇಳಿಕೊಳ್ಳಬೇಕು. ಬ್ರಾಹ್ಮಣರು **"ವಾಚ್ಯತಾಂ"** ಎಂದು ಹೇಳಬೇಕು. ಆ ಬಳಿಕ **"ಉದ್ಗಾತೇವ"** ಎಂಬಲ್ಲಿಂದ **"ಪುಣ್ಯಾಹ ಏವ ಕುರುತೇ"** ಎಂಬ ಮಂತ್ರಗಳನ್ನು ಹೇಳಿ **"ಮಹ್ಯಂ..."** ಎಂದಾರಂಭಿಸಿ **"ಅಮುಕ ಕರ್ಮಣಃ"** ಎಂಬಲ್ಲಿ ಆ ದಿನ ಮುಂದೆ ಮಾಡಲಿರುವ ಕರ್ಮದ ಹೆಸರನ್ನು ಹೇಳಿ **"ಪುಣ್ಯಾಹಂ ಭವಂತೋ..."** ಎಂದು ಮೂರುಬಾರಿ ಹೇಳಬೇಕು. ಬ್ರಾಹ್ಮಣರು ಪ್ರತಿಸಲವೂ **"ಓಂ ಪುಣ್ಯಾಹಂ"** ಎಂದು ಮೂರುಬಾರಿಯೂ ಹೇಳಬೇಕು.

ಲಕ್ಷ್ಮೀಂ ಸಂಸ್ಕುರತೇ ॥ ಯತ್ಪುಣ್ಯಂ ನಕ್ಷತ್ರಂ ॥ ತದ್ಬಟ್ ಕುರ್ವೀತೋಪವ್ಯುಷಂ ॥ ಯದಾ ವೈಸೂರ್ಯ ಉದೇತಿ ॥ ಅಥನಕ್ಷತ್ರಂ ನೈತಿ ॥ ಯಾವತಿತತ್ರ ಸೂರ್ಯೋ ಗಚ್ಛೇತ್ ॥ ಯತ್ರಜಘನ್ಯಂ ಪಶ್ಯೇತ್ ॥ ತಾವತಿ ಕುರ್ವೀತಯತ್ಕಾರೀಸ್ಯಾತ್ ॥ ಪುಣ್ಯಾಹ ಏವ ಕುರುತೇ ॥ ತಾನಿ ವಾ ಏತಾನಿ ಯಮನಕ್ಷತ್ರಾಣಿ ॥ ಯಾನ್ಯೇವದೇವನಕ್ಷತ್ರಾಣಿ ॥ ತೇಷು ಕುರ್ವೀತ ಯತ್ಕಾರೀಸ್ಯಾತ್ ॥ ಪುಣ್ಯಾಹ ಏವ ಕುರುತೇ ॥ ಮಹ್ಯಂ ಸಹಕುಟುಂಬಿನೇ ಮಹಾಜನಾನ್ನಮಸ್ಕುರ್ವಾಣಾಯ ಆಶೀರ್ವಚನಮಪೇಕ್ಷಮಾಣಾಯ ಅದ್ಯ ಕರಿಷ್ಯಮಾಣ ಅಮುಕಕರ್ಮಣಃ ಪುಣ್ಯಾಹಂ ಭವಂತೋ ಬ್ರುವಂತು ಇತಿ ತ್ರಿರ್ವದೇತ್ ॥ ಓಂ ಪುಣ್ಯಾಹಮಿತಿ ತ್ರಿರ್ವಿಪ್ರಾಃ ॥

ಓಂ ಸ್ವಸ್ತಯೇ ವಾಯುಮುಪಬ್ರವಾಮಹೈ ಸೋಮಂ ಸ್ವಸ್ತಿಭುವನಸ್ಯ ಯಸ್ಪತಿಃ ॥ ಬೃಹಸ್ಪತಿಂ ಸರ್ವಗಣಂ ಸ್ವಸ್ತಯೇ ಸ್ವಸ್ತಯ ಆದಿತ್ಯಾಸೋ ಭವಂತು ನಃ ॥ ಆದಿತ್ಯ ಉದಯನೀಯಃ ಪಥ್ಯೈವೇತಃ ಸ್ವಸ್ತ್ಯಾ ಪ್ರಯಂತಿ ಪಥ್ಯಾಂ ಸ್ವಸ್ತಿಮಭ್ಯುದ್ಯಂತಿ ಸ್ವಸ್ತ್ಯೇವೇತಃ ಪ್ರಯಂತಿ ಸ್ವಸ್ತ್ಯುದ್ಯಂತಿ ಸ್ವಸ್ತ್ಯುದ್ಯಂತಿ ॥ ಓಂ ಸ್ವಸ್ತಿ ನ ಇಂದ್ರೋ ವೃದ್ಧಶ್ರವಾಃ ॥ ಸ್ವಸ್ತಿ ನಃ ಪೂಷಾ ವಿಶ್ವವೇದಾಃ ॥ ಸ್ವಸ್ತಿ ನ ಸ್ತಾರ್ಕ್ಷ್ಯೋ ಅರಿಷ್ಟನೇಮಿಃ ॥ ಸ್ವಸ್ತಿ ನೋ ಬೃಹಸ್ಪತಿರ್ದಧಾತು ॥ ಅಷ್ಟೌ ದೇವಾ ವಸವಃ ಸೋಮ್ಯಾಸಃ ಚತಸ್ರೋ ದೇವೀರಜರಾಃ ಶ್ರವಿಷ್ಠಾಃ ॥ ತೇ ಯಜ್ಞಂ ಪಾಂತು ರಜಸಃ ಪರಸ್ತಾತ್ ॥ ಸಂವತ್ಸರೀಣಮಮೃತಗ್ಂ ಸ್ವಸ್ತಿ ॥ ಮಹ್ಯಮಿತ್ಯಾದ್ಯಾಖ್ಯಾಯ ಕರ್ಮಣೇ ಸ್ವಸ್ತಿ ಭವಂತೋ ಬ್ರುವಂತು ಇತಿ ತ್ರಿಃ ॥ ಓಂ ಆಯುಷ್ಮತೇ ಸ್ವಸ್ತೀತಿ ಪ್ರತಿವಚನಂ ತ್ರಿಃ ॥

---

ಯಜಮಾನನು "**ಓಂ ಸ್ವಸ್ತಯೇ....**" ಎಂದಾರಂಭಿಸಿ "**ಮಮೃತಗ್ಂ ಸ್ವಸ್ತಿ**" ಎಂಬಲ್ಲಿವರೇಗೆ ಮಂತ್ರಗಳನ್ನು ಹೇಳಿ ಮೊದಲಿನಂತೆ "**ಮಹ್ಯಂ**" ಎಂಬಲ್ಲಿಂದ ತೊಡಗಿ "**...ಖ್ಯಾಯ ಕರ್ಮಣೇ...**" ಎಂದು ಮೂರು ಬಾರಿ ಹೇಳಬೇಕು. ಬ್ರಾಹ್ಮಣರು "**ಆಯುಷ್ಮತೇ ಸ್ವಸ್ತಿ**" ಎಂದು ಮೂರು ಬಾರಿ ಪ್ರತಿವಚನ ಹೇಳಬೇಕು.

ಓಂ ಋಧ್ಯಾಮಸ್ತೋಮಂ ಸನುಯಾಮವಾಜಮಾನೋಮಂತ್ರಂ ಸರಥೇ - ಹೋಪಯಾತಂ ॥ ಯಶೋ ನ ಪಕ್ವಂ ಮಧುಗೋಷ್ವಂತರಾ ಭೂತಾಂಶೋ ಅಶ್ವಿನೋಃ ಕಾಮಮಪ್ರಾಃ ॥ ಸರ್ವಾಮೃದ್ಧಿಮೃಧ್ನುಯಾಮಿತಿತಂ ವೈ ತೇಜಸೈವ ಪುರಸ್ತಾತ್ಪರ್ಯಭವಚ್ಛಂದೋಭಿರ್ಮಧ್ಯತೋಕ್ಷರೈರುಪರಿಷ್ಟಾದ್ಗಾ-ಯತ್ಯಾ ಸರ್ವತೋದ್ವಾದಶಾಹಂ ಪರಿಭೂಯ ಸರ್ವಾಮೃದ್ಧಿಮಾರ್ಧ್ನೋತ್ಸರ್ವಾ-ಮೃದ್ಧಿಮೃಧ್ನೋತಿ ಯ ಏವಂ ವೇದ ॥ ಋಧ್ಯಾಸ್ತಹವ್ಯೈರ್ನಮಸೋಪಸದ್ಯ ॥ ಮಿತ್ರಂ ದೇವಂ ಮಿತ್ರಧೇಯಂ ನೋ ಅಸ್ತು ॥ ಅನೂರಾಧಾನ್ ಹವಿಷಾ-ವರ್ಧಯಂತಃ ॥ ಶತಂ ಜೀವೇಮಶರದಃ ಸವೀರಾಃ ತ್ರೀಣಿ ತ್ರೀಣಿ ವೈ ದೇವಾನಾಮೃದ್ಧಾನ್ನಿ ॥ ತ್ರೀಣಿ ಛಂದಾಗ್ಂ ಸಿ ತ್ರೀಣಿ ಸವನಾನಿ ॥ ತ್ರಯ ಇಮೇಲೋಕಾಃ ॥ ಋದ್ಧ್ಯಾಮೇವ ತದ್ವೀರ್ಯ ಏಷು ಲೋಕೇಷುಪ್ರತಿತಿಷ್ಠತಿ ॥ ಮಹ್ಯಮಿತ್ಯಾದಿ ಅಸ್ಯಕರ್ಮಣಃ ಋದ್ಧಿಂ ಭವಂತೋ ಬ್ರುವಂತು ಇತಿ ತ್ರಿಃ ॥ ಓಂ ಋದ್ಧ್ಯತಾಮಿತಿ ಪ್ರತಿವಚನಂ ತ್ರಿಃ ॥

ಓಂ ಶ್ರಿಯೇಜಾತಶ್ರಿಯ ಆನಿರಿಯಾಯ ಶ್ರಿಯಂ ವಯೋಜರಿತೃಭ್ಯೋ-ದಧಾತಿ ॥ ಶ್ರಿಯಂ ವಸಾನಾಅಮೃತತ್ವಮಾಯನ್ಭವಂತಿ ಸತ್ಯಾಸಮಿಥಾಮಿತ ದ್ರೌ ॥ ಶ್ರಿಯ ಏವೈನಂಚ್ಛ್ರಿಯಾಮಾದಧಾತಿ ಸಂತತಮೃಚಾವಷಟ್ ಕೃತ್ಯಂ ಸಂತತ್ಯೈ ಸಂಧೀಯತೇ ಪ್ರಜಯಾಪಶುಭಿರ್ಯ ಏವಂ ವೇದ ॥ ಯಸ್ಮಿನ್ ಬ್ರಹ್ಮಾಭ್ಯಜಯತ್ಸರ್ವಮೇತತ್ ॥ ಅಮುಂಚ ಲೋಕಮಿದಮುಂಚಸರ್ವಂ ॥

---

ಹಾಗೆಯೇ "**ಓಂ ಋದ್ಧ್ಯಾಸ್ಮ...**" ಎಂಬ ಮಂತ್ರಗಳನ್ನು ಹೇಳಿ "**ಮಹ್ಯಂ**" ಎಂದಾರಂಭಿಸಿ "**ಅಸ್ಯಕರ್ಮಣಃ ಋದ್ಧಿಂ...**" ಎಂದು ಯಜಮಾನನು ಮೂರುಬಾರಿ ಹೇಳಿದಾಗ ಬ್ರಾಹ್ಮಣರು "**ಓಂ ಋಧ್ಯತಾಂ**" ಎಂದು ಹೇಳಬೇಕು. "**ಶ್ರಿಯೇಜಾತಃ....**" ಈ ಮಂತ್ರಗಳನ್ನು ಬ್ರಾಹ್ಮಣರು ಹೇಳಿ ಮುತ್ತೈದೆಯರು ಯಜಮಾನನಿಗೆ ಆರತಿಮಾಡುವ ಸಂಪ್ರದಾಯವಿದೆ. "**ಮಹ್ಯಂ**" ಇತ್ಯಾದಿ "**ಅಸ್ತು ಶ್ರೀಃ**" ಎಂಬಲ್ಲಿ ವರೇಗೆ ಮೂರು ಸಲ ಹೇಳಬೇಕು. "**ಕರ್ಮಾಂಗ ದೇವತಾ**" ಎಂಬಲ್ಲಿ ಆ ದೇವತೆಯ ಹೆಸರನ್ನು ಹೇಳಬೇಕು.

ತನ್ನೋನಕ್ಷತ್ರಮಭಿಜಿದ್ವಿಜಿತ್ಯ ॥ ಶ್ರಿಯಂ ದಧಾತ್ವಹೃಣೀಯಮಾನಂ ॥ ಅಹೇ-ಬುಧ್ನಿಯುಮಂತ್ರಂ ಮೇ ಗೋಪಾಯ ॥ ಯಮೃಷಯಸ್ತ್ರಯಿವಿದಾವಿದುಃ ॥ ಋಚಃ ಸಾಮಾನಿಯಜೂಗ್‌ಂಷಿ ॥ ಸಾಹಿಶ್ರೀರಮೃತಾಸತಾಂ ॥ ಏತೈರ್ಮಂತ್ರೈ-ರ್ನೀರಾಜನಂ ಕಾರಯಂತಿ ॥ ಮಹ್ಯಮಿತ್ಯಾದಿ ಅಮುಕಕರ್ಮಣಃ ಶ್ರೀರಸ್ತ್ವಿತಿ ಭವಂತೋ ಬ್ರುವಂತು ಇತಿ ತ್ರಿಃ ॥ ಓಂ ಅಸ್ತುಶ್ರೀರಿತಿ ತ್ರಿರ್ವಿಪ್ರಾಃ ॥ ವರ್ಷ-ಶತಂ ಪೂರ್ಣಮಸ್ತು ॥ ಗೋತ್ರಾಭಿವೃದ್ಧಿರಸ್ತು ॥ ಕರ್ಮಾಂಗದೇವತಾ-ಪ್ರೀಯತಾಂ ॥ ಓಂ ಶುಕ್ರೇಭಿರಂಗೈರಜಆತತನ್ವಾನ್ ಕ್ರತುಂ ಪುನಾನಃ ಕವಿಭಿಃ ಪವಿತ್ರೈಃ ॥ ಶೋಚಿರ್ವಸಾನಃ ಪರ್ಯಾಯುರಪಾಂಶ್ರಿಯೋಮಿಮೀತೇಬೃಹತೀ-ರನೂನಾಃ ॥ ತದಪ್ಯೇಷಶ್ಲೋಕೋಭಿಗೀತೋ ಮರುತಃ ಪರಿವೇಷ್ಟಾರೋಮರು-ತ್ತಸ್ಯಾವಸನ್ ಗೃಹೇ ॥ ಆವಿಕ್ಷಿತಸ್ಯಕಾಮಪ್ರೇರ್ವಿಶ್ವೇದೇವಾಃಸಭಾಸದ ಇತಿ ॥

ತತಃ ಉತ್ತರಕಲಶಂ ದಕ್ಷಿಣಹಸ್ತೇ ದಕ್ಷಿಣಕಲಶಂ ವಾಮಹಸ್ತೇ ಗೃಹೀತ್ವಾ ತಾಭ್ಯಾಂ ಧಾರಾದ್ವಯಂ ಸಂತತಂ ಪಾತ್ರೇ ನಿಷಿಂಚೇದೇಭಿರ್ಮಂತ್ರೈಃ ॥ ವಾಸ್ತೋಷ್ಪತ ಇತಿ ಚತಸೃಣಾಂ ವಸಿಷ್ಠೋ ವಾಸ್ತೋಷ್ಪತಿಸ್ತ್ರಿಷ್ಟುಬಂತ್ಯಾ ಗಾಯತ್ರೀ ॥ ಉದಕಸೇಚನೇ ವಿನಿಯೋಗಃ ॥ ಓಂ ವಾಸ್ತೋಷ್ಪತೇ ಪ್ರತಿಜಾ-ನೀಹ್ಯಸ್ಮಾನ್ ತ್ಸ್ವಾವೇಶೋ ಅನಮೀವೋಭವಾನಃ ॥ ಯತ್ವೇಮಹೇಪ್ರತಿ-ತನ್ನೋಜುಷಸ್ವಶಂನ್ನೋಭವದ್ವಿಪದೇಶಂ ಚತುಷ್ಪದೇ ॥ ವಾಸ್ತೋಷ್ಪತೇ ಪ್ರತ ರಣೋ ನ ಏಧಿಗಯಸ್ಫಾನೋಗೋಭಿರಶ್ವೇಭಿರಿಂದೋ ॥ ಅಜರಾಸಸ್ತೇ ಸಖ್ಯೇಸ್ಯಾಮ

---

ಆಮೇಲೆ ಯಜಮಾನನು ಉತ್ತರಕಲಶವನ್ನು ಬಲಗೈಯಲ್ಲೂ ದಕ್ಷಿಣಾಕಲಶವನ್ನು ಎಡಗೈಯಲ್ಲೂ ಹಿಡಿದು ಮೇಲೆ ಮುಚ್ಚಿದ ಪೂರ್ಣಪಾತ್ರವನ್ನು ಕೆಳಗಿಟ್ಟು **"ವಾಸ್ತೋಷ್ಪತೇ..."** ಮಂತ್ರಗಳನ್ನು ಹೇಳುತ್ತ ಧಾರೆಯಾಗಿ ನೀರನ್ನು ತಟ್ಟೆಯಲ್ಲಿ ಸುರಿಯಬೇಕು. ಆಮೇಲೆ ಯಜಮಾನನ ಎಡಭಾಗದಲ್ಲಿ ಪತ್ನಿಯನ್ನು ಕುಳ್ಳಿರಿಸಿ, ಉತ್ತರದಿಕ್ಕಿಗೆ ಮುಖಮಾಡಿ ನಿಂತ ಬ್ರಾಹ್ಮಣರು **"ಸಮುದ್ರ ಜ್ಯೇಷ್ಠಾ..."** ಮಂತ್ರಗಳನ್ನು ಹೇಳುತ್ತ ತಟ್ಟೆಯಲ್ಲಿದ್ದ ನೀರನ್ನು ಪಲ್ಲವ ಮತ್ತು ದೂರ್ವಾಂಕುರಗಳಿಂದ ಅಭಿಷೇಚನ ಮಾಡಬೇಕು.

ಪಿತೇವ ಪುತ್ರಾನ್ಪ್ರತಿನೋಜುಷಸ್ವ ॥ ವಾಸ್ತೋಷ್ಪತೇ ಶಗ್ಮಯಾ ಸಂಸದಾತೇ ಸಕ್ಷೀಮಹಿರಣ್ವಯಾಗಾತುಮತ್ಯಾ ॥ ಪಾಹಿಕ್ಷೇಮಉತಯೋಗೇ ವರಂ ನೋ ಯೂಯಂ ಪಾತ ಸ್ವಸ್ತಿಭಿಃ ಸದಾನಃ ॥ ಅಮೀವಹಾವಾಸ್ತೋಷ್ಪತೇವಿಶ್ವಾರೂಪಾ ಣ್ಯಾವಿಶನ್ ॥ ಸಖಾಸುಷೇವ ಏಧಿ ನಃ ॥ ಶಿವಂ ಶಿವಂ ಶಿವಂ ॥

ತತಃ ಕರ್ತುರ್ವಾಮತಃ ಪತ್ನೀಮುಪವೇಶ್ಯ ಪಾತ್ರಪಾತಿತಜಲೇನ ಪಲ್ಲವ ದೂರ್ವಾಭಿಃ ಉದಙ್ಮುಖಾಸ್ತಿಷ್ಠಂತೋ ವಿಪ್ರಾಃ ಅಭಿಷಿಂಚೇಯುಃ ॥ ಸಮುದ್ರಜ್ಯೇಷ್ಠಾ ಇತಿ ಚತಸೃಣಾಂ ವಸಿಷ್ಠಾ ಆಪಸ್ತ್ರಿಷ್ಟುಪ್ ॥ ತ್ರಾಯಂತಾಮಿತಿ ತಿಸೃಣಾಂ ವಿಶ್ವಾಮಿತ್ರಜಮದಗ್ನಿವಸಿಷ್ಠಾ ಆಪೋಽನುಷ್ಟುಪ್ ॥ ಇಮಾ ಆಪ ಇತಿ ತಿಸೃಣಾಂ ಐತರೇಯ ಆಪೋಽನುಷ್ಟುಬ್ಬೃಗತ್ಯನುಷ್ಟುಭಃ ॥ ದೇವಸ್ಯತ್ವೇತ್ಯಸ್ಯೈತರೇಯಃ ಸವಿತಾ-ಶ್ವಿನೌ ಪೂಷಾ ಚ ಯಜುಃ ॥ ಸಮಸ್ತವ್ಯಾಹೃತೀನಾಂ ಪರಮೇಷ್ಠೀ ಪ್ರಜಾಪತಿರ್ಬೃಹತೀ ಅಭಿಷೇಕೇ ವಿನಿಯೋಗಃ ॥

ಓಂ ಸಮುದ್ರಜ್ಯೇಷ್ಠಾಃ ಸಲಿಲಸ್ಯ ಮಧ್ಯಾತ್ಪುನಾನಾಯಂತ್ಯನಿವಿಶ-ಮಾನಾಃ ॥ ಇಂದ್ರೋ ಯಾ ವಜ್ರೀವೃಷಭೋರರಾದತಾ ಆಪೋ ದೇವೀರಿಹ-ಮಾಮವಂತು ॥ ಯಾ ಆಪೋ ದಿವ್ಯಾ ಉತವಾಸ್ರವಂತಿ ಖನಿತ್ರಿಮಾ ಉತ-ವಾಯಾಃ ಸ್ವಯಂಜಾಃ ॥ ಸಮುದ್ರಾರ್ಥಾಯಾಃ ಶುಚಯಃ ಪಾವಕಾಸ್ತಾ ಆಪೋದೇವೀರಿಹಮಾಮವಂತು ॥ ಯಾಸಾಂ ರಾಜಾ ವರುಣೋ ಯಾತಿ ಮಧ್ಯೇ ಸತ್ಯಾನೃತೇ ಅವಪಶ್ಯಂ ಜನಾನಾಂ ॥ ಮಧುಶ್ಚುತಃ ಶುಚಯೋ ಯಾಃ ಪಾವಕಾಸ್ತಾ ಆಪೋ ದೇವೀರಿಹಮಾಮವಂತು ॥ ಯಾಸು ರಾಜಾ ವರುಣೋ ಯಾಸುಸೋಮೋ ವಿಶ್ವೇದೇವಾಯಾಸೂರ್ಜಂಮದಂತಿ ॥ ವೈಶ್ವಾನರೋ ಯಾಸ್ವಗ್ನಿಃ ಪ್ರವಿಷ್ಟುಸ್ತಾ ಆಪೋ ದೇವೀರಿಹ ಮಾಮವಂತು ॥ ತ್ರಾಯಂತಾಮಿಹ-ದೇವಾಸ್ತ್ರಾಯತಾಂ ಮರುತಾಂಗಣಃ ॥ ತ್ರಾಯಂತಾಂ ವಿಶ್ವಾಭೂತಾನಿ ಯಥಾ-ಯಮರಪಾಅಸತ್ ॥ ಆಪ ಇದ್ವಾ ಉಭೇಷಜೀರಾಪೋ ಅಮೀವಚಾತನೀಃ ॥

ಆಪಃ ಸರ್ವಸ್ಯ ಭೇಷಜೀಸ್ತಾಸ್ತೇ ಕೃಣ್ವಂತು ಭೇಷಜಂ ॥ ಹಸ್ತಾಭ್ಯಾಂ ದಶಶಾ-ಖಾಭ್ಯಾಂ ಜಿಹ್ವಾವಾಚಃ ಪುರೋಗವೀ ॥ ಅನಾಮಯಿತ್ನುಭ್ಯಾಂತ್ವಾತಾಭ್ಯಾಂ-ತ್ವೋಪಸ್ಪೃಶಾಮಸಿ ॥ ಇಮಾ ಆಪಃ ಶಿವತಮಾ ಇಮಾ ಸರ್ವಸ್ಯ ಭೇಷಜೀಃ ॥ ಇಮಾರಾಷ್ಟ್ರಸ್ಯವರ್ಧನೀರಿಮಾರಾಷ್ಟ್ರಭೃತೋಽಮೃತಾಃ ॥ ಯಾಭಿರಿಂದ್ರಮಭ್ಯ-ಷಿಂಚತ್ಪ್ರಜಾಪತಿಃ ಸೋಮಂ ರಾಜಾನಂ ವರುಣಂ ಯಮಂ ಮನುಂ ॥ ತಾಭಿ-ರದ್ಭಿರಭಿಷಿಂಚಾಮಿತ್ವಾಮಹಂ ರಾಜ್ಞಾಂತ್ವಮಧಿರಾಜೋಭವೇಹ ॥ ಮಹಾಂ-ತಂತ್ವಾಮಹೀನಾಂ ಸಮ್ರಾಜಂ ಚರ್ಷಣೀನಾಂ ದೇವೀಜನಿತ್ರ್ಯಜೀಜನದ್ಭದ್ರಾಜ-ನಿತ್ರ್ಯಜೀಜನತ್ ॥ ದೇವಸ್ಯತ್ವಾ ಸವಿತುಃ ಪ್ರಸವೇಶ್ವಿನೋರ್ಬಾಹುಭ್ಯಾಂ ಪೂಷ್ಣೋಹಸ್ತಾಭ್ಯಾಮಗ್ನೇಸ್ತೇಜಸಾಸೂರ್ಯಸ್ಯವರ್ಚಸೇಂದ್ರಸ್ಯೇಂದ್ರಿಯೇಣಾಭಿಷಿಂ-ಚಾಮಿ ॥ ಬಲಾಯಶ್ರಿಯೈಯಶಸೇನ್ನಾದ್ಯಾಯ ॥ ಓಂ ಭೂರ್ಭುವಃ ಸ್ವಃ ಅಮೃತಾಭಿಷೇಕೋಽಸ್ತು ॥ ಶಾಂತಿಃ ಪುಷ್ಟಿಃ ತುಷ್ಟಿಶ್ಚಾಸ್ತು ॥ ದ್ವಿರಾಚಮೇತ್ ॥ ("ಬಲಾಯಶ್ರಿಯೈ ಯಶಸೇನ್ನಾದ್ಯಾಯ" ಇತ್ಯಾದ್ಯನಂತರಂ ॥ ಸುರಾಸ್ತ್ವಾಮ ಭಿಷಿಂಚಂತು ಬ್ರಹ್ಮವಿಷ್ಣುಮಹೇಶ್ವರಾಃ ॥ ವಾಸುದೇವೋ ಜಗನ್ನಾಥಃ ತಥಾ ಸಂಕರ್ಷಣೋ ವಿಭುಃ ॥ ಪ್ರದ್ಯುಮ್ನಶ್ಚಾನಿರುದ್ಧಶ್ಚ ಭವಂತು ವಿಜಯಾಯ ತೇ ॥ ಆಖಂಡಲೋಽಗ್ನಿರ್ಭಗವಾನ್ ಯಮೋ ವೈ ನಿರ್ಋತಿಸ್ತಥಾ ॥ ವರುಣಃ

---

ಕೆಲವರು "**ಬಲಾಯಶ್ರಿಯೈಯಶಸೇನ್ನಾದ್ಯಾಯ**" ಎಂದಾದ ಮೇಲೆ, "**ಸುರಾಸ್ತ್ವಾ-ಮಭಿಷಿಂಚಂತು...**" ಈ ಶ್ಲೋಕಗಳನ್ನೂ ಹೇಳಿ ಅಭಿಷೇಚನ ಮಾಡಿ, "**ಭೂರ್ಭುವಃ ಸ್ವಃ ಅಮೃತಾಭಿಷೇಕೋಽಸ್ತು**" ಎಂದು ಪರಿಸಮಾಪ್ತಿ ಮಾಡುತ್ತಾರೆ.

ಅಭಿಷೇಚನವಾದ ಮೇಲೆ ಕಲಶೋದಕ ತೀರ್ಥವನ್ನೂ, ಪ್ರಸಾದವನ್ನೂ ಬ್ರಾಹ್ಮಣರು ಯಜಮಾನನಿಗೆ ಹಾಗೂ ಇತರರಿಗೆ ಕೊಡಬೇಕು. ಆಮೇಲೆ ಯಜಮಾನನು, ಎರಡು ಸಲ ಆಚಮನ ಮಾಡಿ ಬ್ರಾಹ್ಮಣರಿಗೆ ದಕ್ಷಿಣೆ ಕೊಟ್ಟು "**ಆಮೂರಜ...**" ಎಂಬ ಮಂತ್ರವನ್ನು ಹೇಳಿ "**ಪುಣ್ಯಾಹವಾಚನ....ರಸ್ತ್ವಿತಿ ಭವಂತೋ ಬ್ರುವಂತು**" ಎಂದು ಪ್ರಾರ್ಥಿಸಬೇಕು. ಬ್ರಾಹ್ಮಣರು "**ಪುಣ್ಯಾಹವಾಚನ.....ರಸ್ತು**" ಎಂದು ಹೇಳಬೇಕು.

ಪವನಶ್ಚೈವ ಧನಾಧ್ಯಕ್ಷಸ್ತಥಾ ಶಿವಃ ॥ ಬ್ರಹ್ಮಣಾ ಸಹಿತಾಃ ಸರ್ವೇ ದಿಕ್ಪಾಲಾಃ ಪಾಂತು ತೇ ಸದಾ ॥ ಕೀರ್ತಿರ್ಲಕ್ಷ್ಮೀರ್ಧೃತಿರ್ಮೇಧಾ ಪುಷ್ಟಿಃ ಶ್ರದ್ಧಾ ಕ್ರಿಯಾ ಮತಿಃ ॥ ಬುದ್ಧಿರ್ಲಜ್ಜಾವಪುಃಶಾಂತಿಃ ಕ್ಷಾಂತಿಸ್ತುಷ್ಟಿಶ್ಚ ಮಾತರಃ ॥ ಏತಾಸ್ತ್ವಾ ಮಭಿಷಿಂಚಂತು ದೇವಪತ್ನ್ಯಃ ಸಮಾಗತಾಃ ॥ ಆದಿತ್ಯಶ್ಚಂದ್ರಮಾ ಭೌಮೋ ಬುಧಜೀವಸಿತಾರ್ಕಜಾಃ ॥ ಗ್ರಹಾಸ್ತ್ವಾಮಭಿಷಿಂಚಂತು ರಾಹುಕೇತುಶ್ಚ ಪೂಜಿತಾಃ ॥ ದೇವದಾನವಗಂಧರ್ವಾ ಯಕ್ಷರಾಕ್ಷಸಪನ್ನಗಾಃ ॥ ಋಷಯೋ ಮುನಯೋ ಗಾವೋ ದೇವಮಾತರ ಏವ ಚ ॥ ದೇವಪತ್ನ್ಯೋ ದ್ರುಮಾ ನಾಗಾ ದೈತ್ಯಾಶ್ಚಾಪ್ಸರಸಾಂ ಗಣಾಃ ॥ ಅಸ್ತ್ರಾಣಿ ಸರ್ವಶಸ್ತ್ರಾಣಿ ರಾಜಾನೋ ವಾಹನಾನಿ ಚ ॥ ಔಷಧಾನಿ ಚ ರತ್ನಾನಿ ಕಾಲಸ್ಯಾವಯವಾಶ್ಚ ಯೇ ॥ ಸರಿತಃ ಸಾಗರಾಃ ಶೈಲಾಃ ತೀರ್ಥಾನಿ ಜಲದಾ ನದಾಃ ॥ ಏತೇ ತ್ವಾಮಭಿಷಿಂಚಂತು ಸರ್ವಕಾಮಾರ್ಥಸಿದ್ಧಯೇ ॥ ಓಂ ಭೂರ್ಭುವಃ ಸ್ವಃ ಅಮೃತಾಭಿಷೇಕೋಽಸ್ತು ॥ ಶಾಂತಿಃ ಪುಷ್ಟಿಸ್ತುಷ್ಟಿಶ್ಚಾಸ್ತು ॥ ದ್ವಿರಾಚಮೇತ್ ॥

ಆಮೂರಜಪ್ರತ್ಯಾವರ್ತಯೇಮಾಃ ಕೇತುಮದ್ದುಂದುಭಿರ್ವಾವದೀತಿ ॥ ಸಮಶ್ವಪರ್ಣಾಶ್ಚರಂತಿನೋನರೋಽಸ್ಮಾಕಮಿಂದ್ರರಥಿನೋ ಜಯಂತು ॥ ಪುಣ್ಯಾಹವಾಚನಫಲಸಮೃದ್ಧಿರಸ್ತ್ವಿತಿ ಭವಂತೋ ಬ್ರುವಂತು ॥ ಪುಣ್ಯಾಹವಾಚನಫಲಸಮೃದ್ಧಿರಸ್ತ್ವಿತಿ ವಿಪ್ರಾಃ ॥

॥ ಇತಿ ಪುಣ್ಯಾಹವಾಚನಂ ॥

# ॥ ಮಾತೃಕಾಪೂಜನಂ ॥

**॥ ಶ್ರೀಃ ॥ ಗೌರೀ ಪದ್ಮಾ ಶಚೀ ಮೇಧಾ ಸಾವಿತ್ರೀ ವಿಜಯಾ ಜಯಾ ॥ ದೇವಸೇನಾ ಸ್ವಧಾ ಸ್ವಾಹಾ ಮಾತರೋ ಲೋಕಮಾತರಃ ॥ ಧೃತಿಃ ಪುಷ್ಟಿಸ್ತಥಾ ತುಷ್ಟಿರಾತ್ಮನಃ ಕುಲದೇವತಾ ॥ ಬ್ರಾಹ್ಮೀ ಮಾಹೇಶ್ವರೀ ಚೈವ ಕೌಮಾರೀ ವೈಷ್ಣವೀ ತಥಾ ॥ ವಾರಾಹೀ ಚ ತಥೇಂದ್ರಾಣೀ ಚಾಮುಂಡಾಸಪ್ತ ಮಾತರಃ ॥ ಗೌರ್ಯೈ ನಮಃ ಗೌರೀಂ ಆವಾಹಯಾಮಿ ॥ ಪದ್ಮಾಯೈ ನಮಃ ಪದ್ಮಾಂ.... ॥ ಶಚ್ಯೈ.... ಶಚೀಂ.... ॥ ಮೇಧಾಯೈ... ಮೇಧಾಂ....॥ ಸಾವಿತ್ರ್ಯೈ... ಸಾವಿತ್ರೀಂ.... ॥ ವಿಜಯಾಯೈ.... ವಿಜಯಾಂ.... ॥ ಜಯಾಯೈ.... ಜಯಾಂ.... ॥ ದೇವ ಸೇನಾಯೈ... ದೇವಸೇನಾಂ... ॥ ಸ್ವಧಾಯೈ... ಸ್ವಧಾಂ.... ॥ ಸ್ವಾಹಾಯೈ..... ಸ್ವಾಹಾಂ...... ॥ ಮಾತೃಭ್ಯೋ......ಮಾತೄಃ...... ॥ ಲೋಕಮಾತೃಭ್ಯೋ..... ಲೋಕಮಾತೄಃ ॥ ಧೃತ್ಯೈ.... ಧೃತಿಂ.... ॥ ಪುಷ್ಟ್ಯೈ....ಪುಷ್ಟಿಂ.... ॥ ತುಷ್ಟ್ಯೈ... ತುಷ್ಟಿಂ..... ॥ ಆತ್ಮನಃ ಕುಲದೇವತಾಯೈ..... ಆತ್ಮನಃ ಕುಲದೇವತಾಂ..... ॥ ಬ್ರಾಹ್ಮ್ಯೈ ನಮಃ ಬ್ರಾಹ್ಮೀಂ... ॥ ಮಾಹೇಶ್ವರ್ಯೈ... ಮಾಹೇಶ್ವರೀಂ....॥ ಕೌಮಾರ್ಯೈ... ಕೌಮಾರೀಂ... ॥ ವೈಷ್ಣವ್ಯೈ... ವೈಷ್ಣವೀಂ ...॥ ವಾರಾಹ್ಯೈ... ವಾರಾಹೀಂ.... ॥ ಇಂದ್ರಾಣ್ಯೈ..... ಇಂದ್ರಾಣೀಂ... ॥ ಚಾಮುಂಡಾಯೈ... ಚಾಮುಂಡಾಂ... ॥ ಗಣಪತಯೇ ನಮಃ ಗಣಪತಿಂ ಆವಾಹಯಾಮಿ ॥ ದುರ್ಗಾಯೈ..... ದುರ್ಗಾಂ... ॥ ಕ್ಷೇತ್ರಪಾಲಾಯ... ಕ್ಷೇತ್ರಪಾಲಂ... ॥ ವಾಸ್ತೋಷ್ಪತಯೇ..... ವಾಸ್ತೋಷ್ಪತಿಂ..... ॥ ಗೌರ್ಯಾದಿ ಷೋಡಶಮಾತೄಃ ಬ್ರಾಹ್ಮ್ಯಾದಿ**

---

**ಮಾತೃಕಾಪೂಜನವಿಧಿ:-** ಅಕ್ಕಿಯ ರಾಶಿಯ ಮೇಲೆ, ಗೌರೀ ಮೊದಲಾಗಿ ಹದಿನಾರು, ಬ್ರಾಹ್ಮೀ ಮೊದಲಾಗಿ ಏಳು ಮತ್ತು ಗಣಪತಿ, ದುರ್ಗಾ ಕ್ಷೇತ್ರಪಾಲ, ವಾಸ್ತೋಷ್ಪತಿ ಇಷ್ಟು ದೇವತೆಗಳನ್ನು **"ಗೌರ್ಯೈ ನಮಃ...ಆವಾಹಯಾಮಿ"** ಎಂದು ಆಯಾ ನಾಮಮಂತ್ರವನ್ನು ಹೇಳಿ ಆವಾಹಿಸಬೇಕು. ಆಮೇಲೆ ಕೈಯಲ್ಲಿ ಅಕ್ಕಿಕಾಳು (ಅಕ್ಷತೆ) ಹಿಡಿದು **"ತದಸ್ತು ಮಿತ್ರಾ"** ಎಂಬ ಮಂತ್ರವನ್ನು ಹೇಳಿ **"ಸುಪ್ರತಿಷ್ಠಿತಮಸ್ತು"** ಎಂದು ಹೇಳುತ್ತ ಅದನ್ನು ಹಾಕಬೇಕು.

ಸಪ್ತಮಾತೄಃ ಗಣಪತಿಂ ದುರ್ಗಾಂ ಕ್ಷೇತ್ರಪಾಲಂ ವಾಸ್ತೋಷ್ಪತಿಂ ಚ ಏತೇಷ್ವಕ್ಷತ ಪುಂಜೇಷ್ವಾವಾಹಯಾಮಿ ॥ ಓಂ ತದಸ್ತು ಮಿತ್ರಾವರುಣಾತದಗ್ನೇಶಂ-ಯೋರಸ್ಮಭ್ಯಮಿದಮಸ್ತುಶಸ್ತಂ ॥ ಅಶೀಮಹಿಗಾಧಮುತಪ್ರತಿಷ್ಠಾಂ ನಮೋ ದಿವೇ ಬೃಹತೇ ಸಾದನಾಯ ॥ ಗೃಹಾವೈ ಪ್ರತಿಷ್ಠಾಸೂಕ್ತಂ ತತ್ಪ್ರತಿಷ್ಠಿತತಮಯಾ ವಾಚಾ ಶಂಸ್ತವ್ಯಂ ತಸ್ಮಾದ್ಯದ್ಯಪಿ ದೂರ ಇವ ಪಶೂಂಲ್ಲಭತೇ ಗೃಹಾನೇವೈ ನಾನಾ ಜಿಗಮಿಷತಿ ಗೃಹಾಹಿಂ ಪಶೂನಾಂ ಪ್ರತಿಷ್ಠಾ ಪ್ರತಿಷ್ಠಾ ॥ ಸುಪ್ರತಿಷ್ಠಿತ-ಮಸ್ತು ॥

ಓಂ ಭೂರ್ಭುವ ಸ್ವಃ ಗೌರ್ಯಾದ್ಯಾವಾಹಿತದೇವತಾಭ್ಯೋ ನಮಃ ... ಇತಿ ಷೋಡಶೋಪಚಾರೈಃ ಸಂಪೂಜ್ಯ ॥ ಓಂ ಗೌರೀರ್ಮಿಮಾಯಸ-ಲಿಲಾನಿತಕ್ಷತ್ಯೇಕಪದೀದ್ವಿಪದೀ ಸಾ ಚತುಷ್ಪದೀ ॥ ಅಷ್ಟಾಪದೀ ನವಪದೀ ಬಭೂವುಷೀ ಸಹಸ್ರಾಕ್ಷರಾ ಪರಮೇವ್ಯೋಮನ್ ॥ ಇತಿ ಪುಷ್ಪಾಂಜಲಿಂ ಸಮರ್ಪ್ಯ ॥ ಅನೇನ ಷೋಡಶೋಪಚಾರಪೂಜನೇನ ಗೌರ್ಯಾದ್ಯಾವಾಹಿತ ದೇವತಾಃ ಪ್ರೀಯಂತಾಂ ॥

---

# ॥ ನಾಂದೀಶ್ರಾದ್ಧಂ ॥

[ವೃದ್ಧೌ ತೀರ್ಥೇ ಚ ಸನ್ಯಸ್ತೇ ತಾತೇ ಚ ಪತಿತೇ ಸತಿ ॥ ಏಭ್ಯ ಏವ ಪಿತಾ ದದ್ಯಾತ್ತೇಭ್ಯೋ ದದ್ಯಾತ್ ಸ್ವಯಂ ಸುತಃ ॥ ಪಿತ್ರನ್ಯಕರ್ತೃಕಸಂಸ್ಕಾರಾದೌ ಸಂಸ್ಕಾರ್ಯಪಿತ್ರಾದಿಭ್ಯ ಏವ ದದ್ಯಾನ್ನ ಸ್ವೇಭ್ಯಃ ॥

ಸದೂರ್ವಾಂಕುರಾನಕ್ಷತಾನ್ ಜಲಂ ಚಾದಾಯ ॥ ಸತ್ಯವಸುಸಂಜ್ಞಕಾಃ ವಿಶ್ವೇದೇವಾಃ ನಾಂದೀಮುಖಾಃ ಭೂರ್ಭುವಃ ಸ್ವಃ ಇದಂ ವಃ ಪಾದ್ಯಂ ಸ್ವಾಹಾ ನಮ ಇಯಂ ಚ ವೃದ್ಧಿಃ ॥ ಮಾತೃಪಿತಾಮಹೀ ಪ್ರಪಿತಾಮಹ್ಯಃ ನಾಂದೀಮುಖ್ಯಃ ಭೂರ್ಭುವಃ ಸ್ವಃ ಇದಂ ವಃ ॥ ಪಾದ್ಯಂ...... ವೃದ್ಧಿಃ ॥ ಪಿತೃಪಿತಾಮಹ ಪ್ರಪಿತಾಮಹಾಃ ನಾಂದೀಮುಖಾ ಭೂರ್ಭುವಃ ಸ್ವಃ ಇದಂ...... ವೃದ್ಧಿಃ ॥ ಮಾತಾಮಹ ಮಾತುಃ ಪಿತಾಮಹ ಮಾತುಃ ಪ್ರಪಿತಾಮಹಾಃ ಪತ್ನೀಸಹಿತಾಃ ನಾಂದೀಮುಖಾಃ ಭೂರ್ಭುವಃ ಸ್ವಃ ಇದಂ... ..... ವೃದ್ಧಿಃ ।

ಸತ್ಯವಸುಸಂಜ್ಞಕಾಃ ವಿಶ್ವೇದೇವಾಃ ನಾಂದೀಮುಖಾಃ ಭೂರ್ಭುವಃ ಸ್ವಃ ಇದಂ ವಃ ಆಸನಗಂಧಾದ್ಯುಪಚಾರಕಲ್ಪನಂ ಸ್ವಾಹಾ ನಮ ಇಯಂ ಚ ವೃದ್ಧಿಃ ॥ ಮಾತೃಪಿತಾಮಹೀ ಪ್ರಪಿತಾಮಹ್ಯಃ ನಾಂದೀಮುಖ್ಯಃ ಭೂರ್ಭುವಃ

---

॥ **ವೃದ್ಧೌ ತೀರ್ಥೇಚ...** ॥ ನಾಂದೀಶ್ರಾದ್ಧ ಮುಂತಾದವುಗಳನ್ನು ಮಾಡುವಾಗ ಮಾಡುವ ಕರ್ತೃವಿನ ತಂದೆಯು ಸನ್ಯಾಸಿ ಅಥವಾ ಪತಿತನಾಗಿದ್ದರೆ, ತಂದೆಯು ಯಾರು ಯಾರಿಗೆ ತರ್ಪಣಾದಿಗಳನ್ನು ಕೊಡಬೇಕೋ ಅವರೆಲ್ಲರಿಗೂ ಈತನು ಕೊಡಬೇಕು. ಸಂಸ್ಕಾರ್ಯನಾದವನ ಸಂಸ್ಕಾರವನ್ನು ಆತನ ತಂದೆಯಲ್ಲದೆ ಚಿಕ್ಕಪ್ಪ, ಮಾವ ಮುಂತಾಗಿ ಬೇರೆ ಯಾರಾದರೂ ಮಾಡುವ ಸಂದರ್ಭದಲ್ಲಿ ಸಂಸ್ಕಾರ್ಯನ ಪಿತೃಗಳಿಗೇ ತರ್ಪಣ ಕೊಡಬೇಕೇ ವಿನಹ ಮಾಡುವವನ ಪಿತೃಗಳಿಗಲ್ಲ.

ಕೈಯಲ್ಲಿ ದೂರ್ವೆ ಅಕ್ಷತೆ ಮತ್ತು ನೀರನ್ನು ಹಿಡಿದು **"ಸತ್ಯವಸುಸಂಜ್ಞಕಾ"** ಇತ್ಯಾದಿ ಹೇಳಿ **"ಇದಂ ವಃ ಪಾದ್ಯಂ"** ಎಂದು ಹೇಳುತ್ತ ನೀರು ಬಿಡಬೇಕು. ಹಾಗೆಯೇ ಮುಂದೆ ತಾಯಿ, ತಂದೆಯ ತಾಯಿ, ಅಜ್ಜನ ತಾಯಿ; ತಂದೆ, ಅಜ್ಜ, ತಂದೆಯ ಅಜ್ಜ; ತಾಯಿಯ ತಂದೆ, ತಾಯಿಯ ಅಜ್ಜ, ತಾಯಿಯ ತಂದೆಯ ಅಜ್ಜ, ಪತ್ನಿಯರಿಂದ ಒಡಗೂಡಿದ ಇವರಿಗೆ-ಎಂದು ಮೊದಲಾಗಿ ಹೇಳಿ ಮೊದಲಿನಂತೆ ನೀರು ಬಿಡಬೇಕು. ಮೊದಲಿನಂತೆ **"ಸತ್ಯವಸುಸಂಜ್ಞಕಾಃ"** ಎಂಬಲ್ಲಿಂದ ಆರಂಭಿಸಿ **"ಮಾತಾಮಹ"** ಎಂಬಲ್ಲಿವರೇಗೆ ಹೇಳುತ್ತ

**ಸ್ವಃ ಇದಂ ವಃ.... ವೃದ್ಧಿಃ ॥ ಪಿತೃಪಿತಾಮಹಾಃ ನಾಂದೀ ಮುಖಾಃ ಭೂರ್ಭುವಃ ಸ್ವಃ ಇದಂ ..... ವೃದ್ಧಿಃ ॥ ಮಾತಾಮಹ ಮಾತುಃ ಪಿತಾಮಹ ಮಾತುಃ ಪ್ರಪಿತಾಮಹಾಃ ಪತ್ನೀಸಹಿತಾಃ ನಾಂದೀಮುಖಾಃ ಭೂರ್ಭುವಃ ಸ್ವಃ ಇದಂ.... ವೃದ್ಧಿಃ ॥ ಗೌರ್ಯಾದಿ ಷೋಡಶ ಮಾತರಃ ಬ್ರಾಹ್ಮ್ಯಾದಿ ಸಪ್ತಮಾತರಃ ಏತಾಃ ಗಣಪತಿ ಚತುಷ್ಟಯಸಹಿತಾಃ ಭೂರ್ಭುವಃ ಸ್ವಃ ಇದಂ ವಃ ಯುಗ್ಮಬ್ರಾಹ್ಮಣಭೋಜನಪರ್ಯಾಪ್ತಾನ್ನಸ್ಥಾನೇ ಕಿಂಚಿದ್ಧಿರಣ್ಯಂ ಸ್ವಾಹಾ ನಮ ಇಯಂ ಚ ವೃದ್ಧಿಃ ॥ ಸತ್ಯವಸುಸಂಜ್ಞಕಾ ವಿಶ್ವೇದೇವಾಃ ನಾಂದೀಮುಖಾಃ ಭೂರ್ಭುವಃ ಸ್ವಃ ಇದಂ ವಃ ಯಗ್ಮ... ವೃದ್ಧಿಃ ॥ ಮಾತೃಪಿತಾಮಹೀಪ್ರಪಿತಾಮಹ್ಯಃ ನಾಂದೀಮುಖ್ಯಃ ಭೂರ್ಭುವಃ ಸ್ವಃ ಇದಂ .......ವೃದ್ಧಿಃ ॥ ಪಿತೃಪಿತಾಮಹಪ್ರಪಿತಾಮಹಾಃ ನಾಂದೀಮುಖಾಃ ಭೂರ್ಭುವಃ ಸ್ವಃ ಇದಂ.... ವೃದ್ಧಿಃ ॥ ಮಾತಾಮಹ ಮಾತುಃ ಪಿತಾಮಹ ಮಾತುಃ ಪ್ರಪಿತಾಮಹಾಃ ಪತ್ನೀಸಹಿತಾಃ ನಾಂದೀಮುಖಾಃ ಭೂರ್ಭುವಃ ಸ್ವಃ ಇದಂ... ವೃದ್ಧಿಃ ॥ ಓಂ ಉಪಾಸ್ಮೈಗಾಯತಾ ನರಃಪವಮಾನಾಯೇಂದವೇ ॥ ಅಭಿದೇವಾಂ ಇಯಕ್ಷತೇ ॥ ಅಭಿತೇ ಮಧುನಾಪಯೋಥರ್ವಾಣೋ ಅಶಿಶ್ರಯುಃ। ದೇವಂ ದೇವಾಯ ದೇವಯು ॥ ಸನಃ ಪವಸ್ವಶಂಗವೇಶಂ ಜನಾಯಶಮರ್ವತೇ ॥ ಶಂರಾಜನ್ನೋಷಧೀಭ್ಯಃ ॥ ಬಭ್ರವೇನುಸ್ವತವಸೇರು**

---

ಪ್ರತಿಸಲವೂ ಆಸನಗಂಧಾದಿ ಉಪಚಾರಗಳನ್ನು ಕಲ್ಪಿಸಿಕೊಂಡು ನೀರು ಬಿಡಬೇಕು. ಗೌರ್ಯಾದಿ ಮಾತೆಯರು, ಸತ್ಯವಸು ವಿಶ್ವೇದೇವರು, **"ಮಾತೃ ಪಿತಾಮಹ..... ಪಿತೃಪಿತಾಮಹ... ಮಾತಾಮಹ..."** ಮುಂತಾಗಿ ಎಲ್ಲ ಐದು ವರ್ಗದವರಿಗೆ ಪ್ರತ್ಯೇಕ ಪ್ರತ್ಯೇಕವಾಗಿ ಇಬ್ಬರು ಬ್ರಾಹ್ಮಣರಿಗೆ ಹೊಟ್ಟೆ ತುಂಬ ಉಣ್ಣಲು ಸಾಕಾಗುವಷ್ಟು ದ್ರವ್ಯಗಳಿಗೆ ಪರ್ಯಾಪ್ತವಾದ ಸುವರ್ಣವನ್ನು ಕೊಡುವೆನೆಂದು ನೀರುಬಿಡಬೇಕು. ಮಾಡಿದ ನಾಂದೀಶ್ರಾದ್ಧದ ಪೂರ್ಣಫಲಸಿದ್ಧಿಗಾಗಿ ದ್ರಾಕ್ಷೆ ಮತ್ತು ನೆಲ್ಲಿಕಾಯಿಗಳಿಗೆ ಸಾಕಾಗುವಷ್ಟು ದಕ್ಷಿಣೆಯನ್ನು ಕೊಡುವೆನೆಂದು ನೀರು ಬಿಟ್ಟು ದಕ್ಷಿಣೆ ಕೊಡಬೇಕು. ಬಳಿಕ **"ಮಾತಾಮಾತಾ ಮಹೀ..."** ಎಂಬಲ್ಲಿಂದ...... **"ದಧಾತಿ ದಧಾತಿ"** ಎಂಬಲ್ಲಿ ವರೆಗೆ ಪ್ರಾರ್ಥಿಸಿ, ಬಂಗಾರದಿಂದ ಪಾತ್ರೆಯನ್ನು ಬಾರಿಸಿ ಶಬ್ದ ಮಾಡಬೇಕು. **"ಅನೇಕ ನಾಂದೀಶ್ರಾದ್ಧೇನ..."** ಎಂದು ಹೇಳಿ ನೀರು ಬಿಡಬೇಕು.

ಣಾಯದಿವಿಷ್ಪೃಶೇ ॥ ಸೋಮಾಯಗಾಥಮರ್ಚತ ॥ ಹಸ್ತಚ್ಯುತೇಭಿರದ್ರಿಭಿಃ ಸುತಂ ಸೋಮಂ ಪುನೀತನ ॥ ಮಧಾವಾಧಾವತಾಮಧು ॥ ಪ್ರಜಾಪತೇನತ್ವ-ದ್ದೇತಾನ್ಯನ್ಯೋ ವಿಶ್ವಾಜಾತಾನಿಪರಿತಾಬಭೂವ ॥ ಯತ್ಕಾಮಸ್ತೇ ಜುಹುಮ-ಸ್ತನ್ನೋ ಅಸ್ತು ವಯಂ ಸ್ಯಾಮಪತಯೋ ರಯೀಣಾಂ ॥ ಕೃತಸ್ಯ ನಾಂದೀ-ಶ್ರಾದ್ಧಸ್ಯ ಪ್ರತಿಷ್ಠಾಫಲಸಿದ್ಧ್ಯರ್ಥಂ ದ್ರಾಕ್ಷಾಮಲಕನಿಷ್ಕ್ರಯಿಣೀಂ ದಕ್ಷಿಣಾಂ ದಾತುಮಹಮುತ್ಸೃಜ್ಯೇ ॥

ಮಾತಾಪಿತಾಮಹೀಚ್ಚೈವ ತಥೈವ ಪ್ರಪಿತಾಮಹೀ । ಪಿತಾಪಿತಾಮಹ-ಶ್ಚೈವ ತಥೈವ ಪ್ರಪಿತಾಮಹಃ ॥ ಮಾತಾಮಹಸ್ತತ್ಪಿತಾ ಚ ಪ್ರಮಾತಾಮಹ-ಕಾದಯಃ ॥ ಏತೇ ಭವಂತು ಸುಪ್ರೀತಾಃ ಪ್ರಯಚ್ಛಂತು ಚ ಮಂಗಲಂ ॥ ಓಂ ಇಳಾಮಗ್ನೇಪುರುದಂಸಂ ಸನಿಂಗೋಃ ಶಶ್ವತ್ತಮಂಹವಮಾನಾಯಸಾಧ ॥ ಸ್ಯಾನ್ನಃ ಸೂನುಸ್ತನಯೋ ವಿಜಾವಾಗ್ನೇ ಸಾತೇ ಸುಮತಿರ್ಭೂತ್ವಸ್ಮೇ ॥ ಇಳಾ-ಮುಪಹ್ವಯತೇ ಪಶವೋ ವಾ ಇಳಾಪಶೂನೇವ ತದುಪಹ್ವಯತೇ ಪಶೂನ್ಯ-ಜಮಾನೇ ದಧಾತಿ ದಧಾತಿ ॥ ಯಥಾಚಾರಂ ಹಿರಣ್ಯೇನ ಭಾಂಡವಾದನಂ ॥ ಅನೇನ ನಾಂದೀಶ್ರಾದ್ಧೇನ ನಾಂದೀಮುಖದೇವತಾಃ ಪ್ರೀಯಂತಾಂ ವೃದ್ಧಿಃ ।

ಕೃತಸ್ಯ ಕರ್ಮಣಃ ಸಾಂಗತಾಸಿದ್ಧ್ಯರ್ಥಂ ನಾನಾನಾಮಗೋತ್ರೇಭ್ಯೋ ಬ್ರಾಹ್ಮಣೇಭ್ಯಃ ಗಂಧಾದಿನಾ ಪೂಜಯಿಷ್ಯೇ ॥ ತೇಭ್ಯಃ ಭೂಯಸೀಂ ದಕ್ಷಿಣಾಂ

---

ಮಾಡಿದ ಕರ್ಮವು ಸಾಂಗವಾಗಿ ನೆರವೇರುವುದಕ್ಕಾಗಿ ಅನೇಕ ಗೋತ್ರಗಳ ಬ್ರಾಹ್ಮಣರಿಗೆ ಗಂಧಾದಿಗಳಿಂದ ಅರ್ಚಿಸಿ ದಕ್ಷಿಣೆಕೊಡುವೆನೆಂದು ಸಂಕಲ್ಪಿಸಿ ಹಾಗೇ ಮಾಡಬೇಕು. "**ಓಂ ಉತ್ತಿಷ್ಠ...ಪುನರಾಗಮನಾಯ ಚ**" ಎಂದು ಹೇಳಿ ಅಕ್ಷತೆಗಳನ್ನು ಹಾಕಬೇಕು.

ವಿವಾಹ ಮತ್ತು ಉಪನಯನಗಳಲ್ಲಿ "**ಸತ್ಯವಸು**" ವಿಶ್ವೇದೇವರೂ, ಸೋಮಯಾಗ, ಗರ್ಭಾಧಾನ, ಪುಂಸವನ, ಸೀಮಂತೋನ್ನಯನಾದಿ ಕರ್ಮಗಳ ಆರಂಭದ ನಾಂದೀಶ್ರಾದ್ಧದಲ್ಲಿ "**ಕ್ರತುದಕ್ಷ**" ವಿಶ್ವೇದೇವರೂ ಆಗಿರುತ್ತಾರೆ. ನಾಂದೀಶ್ರಾದ್ಧವು ವೃದ್ಧಿಶ್ರಾದ್ಧವಾದುದರಿಂದ ದರ್ಭೆಯ ಬದಲು ದೂರ್ವೆಯ ಪವಿತ್ರ ಹಾಕಿಕೊಳ್ಳಬೇಕು. ಯಜ್ಞಾದಿಗಳ ನಾಂದೀಶ್ರಾದ್ಧವಾದರೆ ಬುಡದ ಭಾಗವಿಲ್ಲದ ದರ್ಭಾಗ್ರಗಳನ್ನು ತೆಗೆದುಕೊಳ್ಳಬೇಕು.

ದಾತುಮಹಮುತ್ಸೃಜ್ಯೇ ॥ ಓಂ ಉತ್ತಿಷ್ಠ ಬ್ರಹ್ಮಣಸ್ಪತೇ ದೇವಯಂತಸ್ತ್ವೇ- ಮಹೇ ॥ ಉಪಪ್ರಯಂತು ಮರುತಃ ಸುದಾನವಇಂದ್ರ ಪ್ರಾಶೂರ್ಭವಾಸಚ ॥ ಅಭ್ಯಾರಮಿತದ್ರಯೋನಿಷಿಕ್ತಂ ಪುಷ್ಕರೇ ಮಧು । ಅವತಸ್ಯ ವಿಸರ್ಜನೇ ॥ ಯಾಂತು ದೇವಗಣಾಃ ಸರ್ವೇ ಪೂಜಾಮಾದಾಯ ಪಾರ್ಥಿವೀಂ ॥ ಇಷ್ಟಕಾಮಪ್ರಸಿದ್ಧ್ಯರ್ಥಂ ಪುನರಾಗಮನಾಯ ಚ ॥ ಇತಿ ಆವಾಹಿತದೇವತಾ ಉತ್ಥಾಪಯೇತ್ ॥ ಕರ್ಮಾಂಗದೇವತಾಸ್ವರೂಪೀ ಶ್ರೀ ಪರಮೇಶ್ವರಃ ಪ್ರೀಯತಾಂ ॥

॥ ಇತಿ ನಾಂದೀಶ್ರಾದ್ಧಂ ॥

---

# ಕರ್ಮಾಂಗದೇವತಾಃ

**ಶ್ರೀಃ ॥ ವಿವಾಹಸ್ಯ ಅಗ್ನಿರ್ದೇವತಾ । ತೇನ ವಿವಾಹಾಂಗಭೂತ-ಸ್ವಸ್ತಿವಾಚನಾದ್ಯಂತೇ ಕರ್ಮಾಂಗದೇವತಾ ಅಗ್ನಿಃ ಪ್ರೀಯತಾಮಿತಿ ವದೇತ್ ॥ ಔಪಾಸನೇ ಅಗ್ನಿಸೂರ್ಯಪ್ರಜಾಪತಯಃ ಸ್ಥಾಲೀಪಾಕೇ ಅಗ್ನಿಃ ಗರ್ಭಾಧಾನೇ ಬ್ರಹ್ಮಾ ಪುಂಸವನೇ ಪ್ರಜಾಪತಿಃ ಸೀಮಂತೇ ಧಾತಾ ಜಾತಕರ್ಮಣಿ ಮೃತ್ಯುಃ ನಾಮಕರ್ಮನಿಷ್ಕ್ರಮಣಾನ್ನಪ್ರಾಶನೇಷು ಸವಿತಾ ಚೌಲೇ ಕೇಶಿನಃ ಉಪ-ಯನನೇ ಇಂದ್ರಶ್ರದ್ಧಾಮೇಧಾಃ ಅಂತೇ ಸುಶ್ರವಾಃ ಪುನರುಪನಯನೇ ಅಗ್ನಿಃ ಸಮಾ ವರ್ತನಸ್ಯೇಂದ್ರಃ ಉಪಕರ್ಮಣಿ ವ್ರತೇಷು ಚ ಸವಿತಾ ॥ ವಾಸ್ತುಹೋಮೇ ವಾಸ್ತೋಷ್ಪತಿಃ ಅಂತೇ ಪ್ರಜಾಪತಿಃ ಆಗ್ರಹಣೇ ಆಗ್ರಯಣದೇವತಾ ಸರ್ಪಬಲೇಃ ಸರ್ಪಾಃ ತಡಾಗಾದೀನಾಂ ವರುಣಃ ಗ್ರಹಯಜ್ಞೇ ನವಗ್ರಹಾಃ ॥ ಕೂಷ್ಮಾಂಡ ಹೋಮೇ ಚಂದ್ರಾಯಣೇ ಅಗ್ನ್ಯಾಧಾನೇ ಚ ಅಗ್ನ್ಯಾಧಯಃ ಅಗ್ನಿಷ್ಟೋಮಸ್ಯ ಅಗ್ನಿಃ ಅನ್ಯೇಷ್ವಿಷ್ಟಕರ್ಮಸು ಪ್ರಜಾಪತಿಃ ॥**

**॥ ಇತಿ ಕರ್ಮಾಂಗದೇವತಾ ಊಹನೀಯಾಃ ॥**

---

ಬೇರೆ ಬೇರೆ ಕರ್ಮಗಳಿಗೆ ಪ್ರತ್ಯೇಕ ಪ್ರತ್ಯೇಕವಾಗಿ ಕರ್ಮಾಂಗದೇವತೆಗಳನ್ನು ನಿರ್ದೇಶಿಸಿದ್ದಾರೆ. ಆದ್ದರಿಂದ ವಿವಾಹದ ಅಂಗವಾಗಿ ಮಾಡಿದ ಪುಣ್ಯಾಹವಾಚನದಲ್ಲಿ **"ಕರ್ಮಾಂಗದೇವತಾ ಅಗ್ನಿಃ ಪ್ರೀಯತಾಂ"** ಎಂದು ಹೇಳಬೇಕು. ಹಾಗೆಯೇ ಈ ಮುಂದೆ ನಿರ್ದೇಶಿಸಿದಂತೆ ಕರ್ಮ ಮತ್ತು ಆ ಕರ್ಮದ ಅಂಗದೇವತೆ ಯಾರೆಂದು ತಿಳಿದು ಆಯಾ ದೇವತೆ 'ಪ್ರೀಯತಾಂ' ಎಂದು ಹೇಳಬೇಕು. ೧. ಔಪಾಸನಹೋಮ ಅಗ್ನಿ ಸೂರ್ಯ ಪ್ರಜಾಪತಿ. ೨. ಸ್ಥಾಲೀಪಾಕ ಅಗ್ನಿ. ೩. ಗರ್ಭಾಧಾನ ಬ್ರಹ್ಮಾ ೪. ಪುಂಸವನ ಪ್ರಜಾಪತಿ. ೫. ಸೀಮಂತೋನ್ನಯನ ಧಾತಾ. ೬. ಜಾತಕರ್ಮ ಮೃತ್ಯು. ೭. ೮. ೯. ಜಾತಕರ್ಮ ನಿಷ್ಕ್ರಮ ಅನ್ನಪ್ರಾಶನ ಸವಿತಾ. ೧೦. ಚೌಲ ಕೇಶಿನ. ೧೧. ಉಪನಯನ ಇಂದ್ರ ಶ್ರದ್ಧಾ ಮೇಧಾ, ಉಪನಯನಾಂತ್ಯದಲ್ಲಿ ಸುಶ್ರವ. ೧೨. ಪುನರುಪನಯನ ಅಗ್ನಿ. ೧೩. ಸಮಾವರ್ತನ ಇಂದ್ರ. ೧೪. ಉಪಾಕರ್ಮ ಮತ್ತು ಇತರ ವ್ರತಗಳು ಸವಿತಾ. ೧೫. ವಾಸ್ತುಹೋಮ ವಾಸ್ತೋಷ್ಪತಿ ಅಂತ್ಯದಲ್ಲಿ ಪ್ರಜಾಪತಿ. ೧೬. ಆಗ್ರಯಣ (ಕಾರ್ತಿಕ ಪೌರ್ಣಮಿಯಂದು ನೂತನ ದಂಪತಿಗಳು ಮಾಡುವ ಹೋಮ) ಆಗ್ರಯಣ. ೧೭. ಸರ್ಪಬಲಿ ಸರ್ಪ ೧೮. ಕೆರೆ ಸರೋವರ ಇತ್ಯಾದಿಗಳಿಗೆ ಸಂಬಂಧಿಸಿದ ಕರ್ಮ ವರುಣ. ೧೯. ಗ್ರಹಯಜ್ಞ ನವಗ್ರಹಗಳು. ೨೦. ೨೧. ೨೨. ಕೂಷ್ಮಾಂಡಹೋಮ, ಚಾಂದ್ರಾಯಣ, ಅಗ್ನ್ಯಾಧಾನ ಅಗ್ನಿ. ೨೩. ಅಗ್ನಿಷ್ಟೋಮ ಅಗ್ನಿ. ಇತರ ಕರ್ಮಗಳಲ್ಲಿ ಪ್ರಜಾಪತಿ.

---

# ಮಂಡಪದೇವತಾ ಪ್ರತಿಷ್ಠಾ

## ॥ ಉಪನಯನ ವಿವಾಹ ಪೂರ್ವದಿನಕೃತ್ಯಂ ॥

ಶ್ರೀಃ ॥ ಸಾಚೇತ್ಥಂ ॥ ದೂರ್ವಾಶಮಿೂಪಲ್ಲವಕುಲದೇವತಾವೃಕ್ಷಫಲ-ವಾಸಾಮ್ರಾದಿಪ್ರಶಸ್ತವೃಕ್ಷಪತ್ರವೇಷ್ಟಿತಾನ್ ಸೂತ್ರೇಣ ಷೋಢಾ ವೇಷ್ಟ-ಯೇತ್ ॥ ತತ್ರೈಕತ್ರಮುಸಲಮೇಕತ್ರಛುರಿಕಾದಿಶಸ್ತ್ರಂ ಮಧ್ಯೇ ಪ್ರಕ್ಷಿಪ್ಯ ವೇಷ್ಟಯೇತ್ ॥ ತಾನಿ ಷಡ್ವಂಶಪಾತ್ರೇ ನಿಧಾಯ ತನ್ಮಧ್ಯೇ ಉದಕ್ಸಂಸ್ಥೇಷು ಚತುರ್ಷು ಕ್ರಮೇಣ ನಂದಿನೀಂ ನಲಿನೀಂ ಮೈತ್ರಾಂ ಉಮಾಂ ಪಶುವರ್ಧಿನೀಂ ಭಗವತೀಂ ಚ ಆವಾಹ್ಯ ತಂಡುಲಪೂರ್ಣೇ ಹರಿದ್ರಾಖಂಡಪೂಗೀಫಲಯುತೇ ನ್ಯುಬ್ಜಶರಾವಪಿಹಿತೇ ಶರಾವೇಣ ಸಹ ಸೂತ್ರವೇಷ್ಟಿತೇ ಹರಿದ್ರಾದಿರಂಜಿತೇ ಕಲಶೇ ಅವಿಘ್ನಸಂಜ್ಞಂ ಚಾವಾಹ್ಯ ॥

ಓಂ ನದಿನ್ಯೈ ನಮಃ ನಂದಿನೀಂ ಆವಾಹಯಾಮಿ ॥ ಓಂ ನಲಿನ್ಯೈ ನಮಃ ನಲಿನೀಂ ಆವಾಹಯಾಮಿ ॥ ಓಂ ಮೈತ್ರಾಯೈ ನಮಃ ಮೈತ್ರಾಂ ಆವಾಹಯಾಮಿ ॥ ಓಂ ಉಮಾಯೈ ನಮಃ ಉಮಾಂ ಆವಾಹಯಾಮಿ ॥ ಓಂ ಪಶುವರ್ಧಿನ್ಯೈ ನಮಃ ಪಶುವರ್ಧಿನೀಂ ಆವಾಹಯಾಮಿ ॥ ಓಂ ಶಸ್ತ್ರಗರ್ಭ-ಭಗವತ್ಯೈ ನಮಃ ಶಸ್ತ್ರಗರ್ಭಾಂ ಭಗವತೀಂ ಆವಾಹಯಾಮಿ ॥ ಓಂ ಅವಿಘ್ನ-ಸಂಜ್ಞಕಗಣಪತಯೇ ನಮಃ ಅವಿಘ್ನಸಂಜ್ಞಕಗಣಪತಿಂ ಆವಾಹಯಾಮಿ ॥

---

ಮಂಡದೇವತಾಪ್ರತಿಷ್ಠೆ, ಉಪನಯನ ಅಥವಾ ವಿವಾಹದ ಹಿಂದಿನ ದಿನ ಮಾಡಬೇಕಾದ ಕಾರ್ಯ, ದೂರ್ವೆ, ಶಮಿೂಪಲ್ಲವ, ಕುಲದೇವತಾವೃಕ್ಷದ ಎಲೆಗಳು ಇವುಗಳನ್ನು ಮಾವು ಮುಂತಾದ ಮರಗಳ ದೊಡ್ಡ ಎಲೆಗಳನ್ನಿಟ್ಟು ಸುತ್ತಿ ಆರು ಸುತ್ತು ನೂಲಿನಿಂದ ಕಟ್ಟಬೇಕು. ಇಂತಹ ಆರು ಕಟ್ಟುಗಳನ್ನು ತಯಾರಿಸಿ ಒಂದರಲ್ಲಿ ಒನಕೆಯ ಸಂಕೇತವಾಗಿ ಒಂದು ಕೋಲಿನ ತುಂಡನ್ನೂ ಇನ್ನೊಂದರಲ್ಲಿ ಶಸ್ತ್ರದ ಸಂಕೇತವಾಗಿ ಒಂದು ಚೂರಿಯನ್ನೂ ಇಡಬೇಕು. ಈ ಆರು ಕಟ್ಟುಗಳನ್ನೂ ಬಿದಿರಿನ ದಬ್ಬೆಗಳಿಂದ ಮಾಡಿದ ಒಂದು ಪಾತ್ರೆಯಲ್ಲಿಡಬೇಕು. ಅದರ ಮಧ್ಯಭಾಗದಲ್ಲಿ ಉತ್ತರಾದಿಕ್ರಮದಿಂದ ಅನುಕ್ರಮವಾಗಿ ನಂದಿನೀ ನಲಿನೀ ಇತ್ಯಾದಿ ದೇವತೆಗಳನ್ನು ಆವಾಹಿಸಬೇಕು. ಅರಸಿನ ಇತ್ಯಾದಿ ಬಣ್ಣಗಳಿಂದ ಅಲಂಕರಿಸಿದ ಒಂದು ಮಣ್ಣಿನ ಕಲಶಪಾತ್ರೆಯಲ್ಲಿ ಅಕ್ಕಿಯನ್ನು ತುಂಬಿಸಿ; ಅಡಿಕೆ, ಅರಸಿನ ತುಂಡುಗಳನ್ನು ಹಾಕಿ ಅದರ ಬಾಯಿಮುಚ್ಚಿ ಅದನ್ನು ನೂಲಿನಿಂದ ವೇಷ್ಟನಮಾಡಿ ಆ ಕಲಶದ ಮೇಲೆ ಅವಿಘ್ನಗಣಪತಿಯನ್ನು ಆವಾಹಿಸಬೇಕು.

**"ಓಂ ನಂದಿನ್ಯೈ ನಮಃ"** ಮುಂತಾಗಿ ಒಂದೊಂದೇ ಮಂತ್ರವನ್ನು ಹೇಳುತ್ತ ಅಕ್ಷತೆಗಳನ್ನು ಹಾಗಿ ಆವಾಹನೆ ಮಾಡುವುದು.

ಓಂ ತದಸ್ತುಮಿತ್ರಾ....... ॥ ಗೃಹಾವೈ ಪ್ರತಿಷ್ಠಾ...... ॥ ಓಂ ನಂದಿನ್ಯಾದಿ ಮಂಡಪದೇವತಾಭ್ಯೋ ನಮಃ ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ ॥ ಓಂ ನಂದಿನ್ಯಾದಿ...... ಆಸನಂ ॥ ಓಂ ನಂದಿನ್ಯಾದಿ...... ಪಾದ್ಯಂ ॥ ಅರ್ಘ್ಯಂ ॥ ಆಚಮನೀಯಂ ॥ ಸ್ನಾನಂ ॥ ಸುವಾಸಿನ್ಯಾ ಸುಗಂಧ ತೈಲಸ್ನಾನಂ ಹರಿದ್ರಾರೋಪರಣಂ ಉಷ್ಣೋದಕೇನ ಮಾಂಗಲ್ಯಸ್ನಾನ್ನಂ ॥ ಮಂಗಲಸ್ನಾನಂ ॥ ಶುದ್ಧೋದಕ ಸ್ನಾನಂ ॥ ವಸ್ತ್ರ ॥ ಉಪವಸ್ತ್ರ ವಸ್ತ್ರೋ-ಪವಸ್ತ್ರಾಂತರೇಣ ಆಚಮನೀಯಂ ॥ ಚಂದನಂ ॥ ಅಲಂಕಾರಾರ್ಥೇ ಅಕ್ಷತಾಃ ॥ ಹರಿದ್ರಾಕುಂಕುಮಂ ॥ ಪುಷ್ಪಂ ॥ ಧೂಪಂ ॥ ದೀಪಂ ॥ ನೈವೇದ್ಯಂ ॥ ನೈವೇದ್ಯಮಧ್ಯೇ ಪಾನೀಯಂ ॥ ಉತ್ತರಾಪೋಶನಂ ॥ ಹಸ್ತಪ್ರಕ್ಷಾಲನಂ ॥ ಮುಖಪ್ರಕ್ಷಾಲನಂ ॥ ಕರೋದ್ವರ್ತನಾರ್ಥೇ ಚಂದನಂ ॥ ಮುಖವಾಸಾರ್ಥೇ ತಾಂಬೂಲಂ ॥ ಸುವರ್ಣಪುಷ್ಪ ದಕ್ಷಿಣಾಂ ॥ ನೀರಾಜನಂ ॥ ಅನೇನ ಪೂಜ-ನೇನ ನಂದಿನ್ಯಾದಿ ಮಂಡಪದೇವತಾಃ ಪ್ರೀಯಂತಾಂ ॥

ಓಂ ನಂದಿನ್ಯೈ ನಮಃ ನಂದಿನೀಂ ಸ್ಥಾಪಯಾಮಿ ॥ ಇತಿ ಮಂತ್ರೇಣ ಮಾತೃಕಾಸ್ಥಾಪಿತ ವಂಶಪಾತ್ರೇ ಸ್ಥಾಪಯಿತ್ವಾ ॥ ಓಂ ಸಮುದ್ರ ಜ್ಯೇಷ್ಠಾ..... ॥ ಓಂ ಆಪೋಹಿಷ್ಠಾಮಯೋಭುವಃ..... ॥ ಇತಿ ಮಂತ್ರಾಂಭ್ಯಾಂ ಪ್ರೋಕ್ಷ್ಯ ॥ ಓಂ ಗಂಧದ್ವಾರಾಂ... ॥ ಇತಿ ಗಂಧಾಕ್ಷತಾನ್ ॥ ಓಂ

---

ಆವಾಹಿಸಿದ ಮೇಲೆ "**ತದಸ್ತುಮಿತ್ರಾ.....**" "**ಗೃಹಾ ವೈ ಪ್ರತಿಷ್ಠಾ**" ಈ ಮಂತ್ರಗಳನ್ನು ಹೇಳಿ ಪ್ರತಿಷ್ಠಾಪಿಸಬೇಕು. ಆಮೇಲೆ "**ನಂದಿನ್ಯಾದಿ ಮಂಡಪದೇವತಾಭ್ಯೋ ನಮಃ ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ**" ಹೀಗೆ ಪ್ರತಿ ಸಲವೂ "**ನಂದಿನ್ಯಾದಿ ಮಂಡಪದೇವತಾಭ್ಯೋ ನಮಃ**" ಎಂದು ಹೇಳಿ ಆಸನ ಇತ್ಯಾದಿ ನೀರಾಜನದ ವರೆಗೆ ಷೋಡಶೋಪಚಾರ ಪೂಜೆ ಮಾಡಬೇಕು. ಸ್ನಾನವನ್ನು ಅರ್ಪಿಸುವಾಗ ಸುವಾಸಿನಿಯು ಬಂದು ಸುಗಂಧ ಎಣ್ಣೆಯನ್ನರ್ಪಿಸಿ, ಅರಸಿನ ಹಚ್ಚಿ, ಬಿಸಿ ನೀರಿನಿಂದ ಮಂಗಲಸ್ನಾನ ಮಾಡಿಸಬೇಕು. ವಸ್ತ್ರ ಮತ್ತು ಉಪವಸ್ತ್ರಗಳ ಮಧ್ಯದಲ್ಲಿ ಒಂದು ಆಚಮನೀಯ ಕೊಡಬೇಕು. ಸಮರ್ಪಣೆ ಆದಮೇಲೆ ನಂದಿನೀ ಮುಂತಾದವರನ್ನು ಆವಾಹಿಸಿದ ಒಂದೊಂದೇ ಕಟ್ಟವನ್ನು ತೆಗೆದು ಮಾತೃಕೆಗಳನ್ನು ಸ್ಥಾಪಿಸಿದ ಬಿದಿರದಬ್ಬೆಯ ಪಾತ್ರೆಯಲ್ಲಿಟ್ಟು "**ಓಂ ನಂದಿನ್ಯೈ ನಮಃ..... ಸ್ಥಾಪಯಾಮಿ**" ಎಂದು ಹೇಳಿ "**ದಧಿಕ್ರಾವ್ಣೋ**" "**ಕಾಂಡಾತ್ಕಾಂಡಾತ್**" ಈ ಮಂತ್ರಗಳಿಂದ ಪ್ರೋಕ್ಷಿಸಿ, "**ಗಂಧದ್ವಾರಾಂ**" "**ದಧಿಕ್ರಾವ್ಣೋ**" "**ಕಾಂಡಾತ್ಕಾಂಡಾತ್**" ಈ ಮಂತ್ರಗಳಿಂದ ಗಂಧ, ದಧಿ, ದೂರ್ವೆಗಳನ್ನು ಅರ್ಪಿಸಬೇಕು. ಅಂತೆಯೇ ನಲಿನಿಯನ್ನು ಸ್ಥಾಪಿಸಿ ಮುಂದೆ ಸೂಚಿಸಿದ ಮಂತ್ರಗಳಿಂದ ಆಯಾ ಸಮರ್ಪಣೆಯನ್ನು ಮಾಡಬೇಕು. ಶಸ್ತ್ರಗರ್ಭಾಭಗವತೀ ಮತ್ತು ಅವಿಘ್ನ ಗಣಪತಿಯನ್ನು ಸ್ಥಾಪಿಸಿ, ಮಂತ್ರೋಚ್ಚಾರವಿಲ್ಲದೆ ಪ್ರೋಕ್ಷಣ, ಗಂಧ, ದಧಿ, ದೂರ್ವಾಂಕುರಗಳನ್ನರ್ಪಿಸಬೇಕು.

ದಧಿಕ್ರಾವ್ಣೋ..... ॥ ಇತಿ ದಧಿ ॥ ಓಂ ಕಾಂಡಾತ್ಕಾಂಡಾತ್... ॥ ಇತಿ ದೂರ್ವಾಂಕುರಾನ್ ಸಮರ್ಪಯೇತ್ ॥ ಏವಂ ನಲಿನೀ ಮೈತ್ರೋಮಾಪಶು- ವರ್ಧಿನೀ ನಾಮಕವೇಷ್ಟಿತಾನಿ ಉಕ್ತವತ್ ಸ್ಥಾಪಯಿತ್ವಾ ಪೂಜಯೇತ್ ॥ ಓಂ ನಲಿನ್ಯೈ ನಮಃ ನಲಿನೀಂ ಸ್ಥಾಪಯಾಮಿ ॥ ಓಂ ಯಾ ಆಪೋದಿವ್ಯಾ...... ॥ ಓಂ ಆಪೋಹಿಷ್ಠಾ.... ॥ ಓಂ ಗಂಧದ್ವಾರಾಂ.... ॥ ಓಂ ದಧಿಕ್ರಾವ್ಣೋ ... ॥ ಓಂ ಕಾಡಾತ್ಕಾಂಡಾತ್... ॥

ಓಂ ಮೈತ್ರಾಯೈ ನಮಃ ಮೈತ್ರಾಂ ಸ್ಥಾಪಯಾಮಿ ॥ ಓಂ ಯಾಸಾಂ- ರಾಜಾ... ॥ ಓಂ ಗಂಧದ್ವಾರಾಂ... ॥ ಗಂಧಂ ॥ ಓಂ ದಧಿಕ್ರಾವ್ಣೋ ... ॥ ದಧಿ ॥ ಓಂ ಕಾಂಡಾತ್ಕಾಂಡಾತ್ .... ॥ ದೂರ್ವಾಃ ಓಂ ಉಮಾಯೈ ನಮಃ ಉಮಾಂ ಸ್ಥಾಪಯಾಮಿ ॥ ಓಂ ಯಾಸುರಾಜಾ... ॥ ಓಂ ಆಪೋಹಿಷ್ಠಾ.... ॥ ಓಂ ಗಂಧದ್ವಾರಾಂ... ॥ ಓಂ ದಧಿಕ್ರಾವ್ಣೋ... ॥ ಓಂ ಕಾಂಡಾತ್ಕಾಂಡಾತ್ ... ॥ ಓಂ ಪಶುವರ್ಧಿನ್ಯೈ ನಮಃ ಪಶುವರ್ಧಿನೀಂ ಸ್ಥಾಪಯಾಮಿ ॥ ಓಂ ಸಮುದ್ರ ಜ್ಯೇಷ್ಠಾ... ॥ ಓಂ ಯಾ ಆಪೋ ದಿವ್ಯಾ... ॥ ಓಂ ಯಾಸಾಂರಾಜಾ ... ॥ ಓಂ ಯಾಸುರಾಜಾ.... ॥ ಓಂ ಆಪೋಹಿಷ್ಠಾ..... ॥ ಪ್ರೋಕ್ಷಣಂ ॥ ಓಂ ಗಂಧದ್ವಾರಾಂ... ॥ ಓಂ ದಧಿಕ್ರಾವ್ಣೋ... ॥ ಓಂ ಕಾಂಡಾತ್ಕಾಂಡಾತ್ ॥ ಓಂ ಶಸ್ತ್ರಗರ್ಭಾಭಗವತ್ಯೈ ನಮಃ ಶಸ್ತ್ರ ಗರ್ಭಾ ಭಗವತೀಂ ಸ್ಥಾಪಯಾಮಿ ॥ ಪ್ರೋಕ್ಷಣಾದಿ ಸರ್ವಂ ತೋಷ್ಣೀಂ ಕೃತ್ವಾ ॥ ಓಂ ಅವಿಘ್ನಸಂಜ್ಞಕ- ಗಣಪತಯೇ ನಮಃ ಅವಿಘ್ನಸಂಜ್ಞಕ ಗಣಪತಿಂ ಸ್ಥಾಪಯಾಮಿ ॥ ಪ್ರೋಕ್ಷಣಾದಿಕಂ ತೂಷ್ಣೀಂ ಕೃತ್ವಾ ॥

ಕೇಚಿತ್ ಮಂಡಪನಿರ್ಮಾಣಪೂರ್ವಕಂ ದೇವತಾಸ್ಥಾಪನಂ ಕುರ್ವಂತಿಂ ॥ ತದಿತ್ಥಂ ॥ ಸಪತ್ನೀಕ ಉತ್ಥಾಯ ಆಗ್ನೇಯಕೋಣಸ್ಥಮಂಡಪಸ್ತಂಭೋಪರಿ ನಂದಿನೀಂ, ತದಸ್ತು..... ಗೃಹಾವೈ..... ಪ್ರತಿಷ್ಠಾಪ್ಯ ॥ ತತೋ ನೈಋತ್ಯ ವಾಯವ್ಯ ಈಶಾನಸ್ತಂಭೇಷು ಮಂಡಪಮಧ್ಯೋಪರಿಭಾಗೇ ಕಾಷ್ಠೇ ಚ ಕ್ರಮೇಣ

---

ಕೆಲವರು ಒಂದು ಮಂಟಪವನ್ನು ನಿರ್ಮಾಣಮಾಡಿ ದೇವತಾಸ್ಥಾಪನೆ ಮಾಡುತ್ತಾರೆ. ಹಾಗೆ ಮಾಡುವುದಾದರೆ, ಮಂಟಪದ ಆಗ್ನೇಯ ದಿಕ್ಕಿನಲ್ಲಿರುವ ಕಂಬದ ಮೇಲೆ ನಂದಿನಿಯನ್ನು ಆವಾಹಿಸಿ, "ತದಸ್ತು...." "ಗೃಹಾವೈ...." ಮಂತ್ರಗಳಿಂದ ಸ್ಥಾಪಿಸಿ, ಅಂತೆಯೇ ನೈಋತ್ಯ ವಾಯವ್ಯ ಈಶಾನ್ಯ ಕಂಬಗಳ ಮೇಲೆ ಮತ್ತು ಮಂಟಪದ ಮಧ್ಯದಲ್ಲಿರುವ ಮರದ ತುಂಡಿನ ಮೇಲೆ ಕ್ರಮವಾಗಿ ನಲಿನೀ ಮೈತ್ರಾ, ಉಮಾ ಮತ್ತು ಪಶುವರ್ಧಿನಿಯನ್ನು ಆವಾಹಿಸಿ ಪೂಜಿಸಬೇಕು. ಈ ಎಲ್ಲ ಕಾರ್ಯಗಳನ್ನು ಪತ್ನೀ ಸಮೇತ ಎದ್ದುನಿಂತು ಮಾಡಬೇಕು.

ನಲಿನೀ ಮೈತ್ರೋಮಾ ಪಶುವರ್ಧಿನೀ ನಾಮಕವೇಷ್ಟಿತಾನಿ ಉಕ್ತವತ್ ಸ್ಥಾಪಯಿತ್ವಾ ಪೂಜಯೇತ್ ॥

ತತೋ ವಂಶಪಾತ್ರೇಣ ಸಹ ಭಗವತೀಂ ಗೌರ್ಯಾದಿಮಾತೃಕಾ ಸ್ಥಾಪಿತವಂಶಪಾತ್ರಂ ಸ್ವಯಂ ಗೃಹೀತ್ವಾ ಅವಿಘ್ನಕಲಶಂ ಚ ಪತ್ನ್ಯಾಗ್ರಾಹ-ಯಿತ್ವಾ ಸಹ ಬ್ರಾಹ್ಮಣಾಃ ॥

ಓಂ ಕನಿಕ್ರದಜ್ಜನುಷಂಪ್ರಬ್ರುವಾಣ ಇಯರ್ತಿವಾಚಮರಿತೇವನಾವಂ ॥ ಸುಮಂಗಲಶ್ಚ ಶಕುನೇ ಭವಾಸಿಮಾತ್ವಾಕಾಚಿದಭಿಭಾವಿಶ್ವ್ಯಾವಿದತ್ ॥ ಮಾತ್ವಾ-ಶ್ಯೇನ ಉದ್ವಧೀನ್ಮಾಸುಪರ್ಣೋರ್ಮಾತ್ವಾವಿದದಿಷುಮಾನ್ವೀರೋ ಅಸ್ತಾ ॥ ಪಿತ್ರ್ಯಾಮನುಪ್ರದಿಶಂಕನಿಕ್ರದತ್ಸುಮಂಗಲೋಭದ್ರವಾದೀವದೇಹ ॥ ಅವಕ್ರಂದ-ದಕ್ಷಿಣತೋ ಗೃಹಾಣಾಂ ಸುಮಂಗಲೋ ಭದ್ರವಾದೀಶಕುಂತೇ ॥ ಮಾನ-ಸ್ತೇನಈಶತಮಾಘಶಂ ಸೋ ಬೃಹದ್ವದೇಮವಿದಥೇಸುವೀರಾಃ ॥ ೧ ॥ ಪ್ರದಕ್ಷಿಣಿದಭಿಗೃಣಂತಿಕಾರವೋವಯೋವದಂತಋತುಥಾಶಕುಂತಯಃ ॥ ಉಭೇ-ವಾಚೌ ವದತಿ ಸಾಮಗಾ ಇವ ಗಾಯತ್ರಂ ಚ ತ್ರೈಷ್ಟುಭಂ ಚಾನುರಾಜಸಿ ॥ ಉದ್ಗಾತೇವ ಶಕುನೇ ಸಾಮಗಾಯಸಿ ಬ್ರಹ್ಮಪುತ್ರಇವಸವನೇಷು ಶಂಸಸಿ ॥ ವೃಷೇವ ವಾಜೀ ಶಿಶುಮತೀರಪೀತ್ಯಾ ಸರ್ವತೋನಃ ಶಕುನೇ ಭದ್ರಮಾವದ ವಿಶ್ವತೋನಃ ಶಕುನೇ ಪುಣ್ಯಮಾವದ ॥ ಆವದಂಸ್ತ್ವಂ ಶಕುನೇ ಭದ್ರಮಾವದ ತೂಷ್ಣೀಮಾಸೀನಃ ಸುಮತಿಂ ಚಿಕಿದ್ಧಿನಃ ॥ ಯದುತ್ಪತನ್ವದಸಿಕರ್ಕರಿರ್ಯಥಾ ಬೃಹದ್ವದೇಮವಿದಥೇ ಸುವೀರಾಃ ॥ ೨ ॥ ಇತಿ ಸೂಕ್ತಂ ಪಠನ್ ಮಂಗಲ-ವಾದ್ಯಘೋಷೇಣ ಗೃಹಾಂತರ್ಗತ್ವಾ ಈಶಾನ್ಯದೇಶೇ ತಂಡುಲಾದಿ ಪುಂಜತ್ರ-ಯೋಪರಿ ತ್ರೀಣ್ಯಪಿ ತದಸ್ತು.... ಗೃಹಾವೈ.... ಇತಿ ಸ್ಥಾಪಯಿತ್ವಾ ಆವಾಹಿತದೇವತಾಭ್ಯೋ ನಮಃ ಇತಿ ಮಂತ್ರೇಣ ಚಂದನಾದಿ ಪಂಚೋಪಚಾರೈಃ ಸಂಪೂಜ್ಯ ಸ್ಥಾಪಿತದೇವತಾಪ್ರೀತ್ಯರ್ಥಂ ಬ್ರಾಹ್ಮಣಸುವಾಸಿನೀಭೋಜನಂ ಸಂಕಲ್ಪ್ಯ ಭೂಯಸೀಂ ದಕ್ಷಿಣಾಂ ದದ್ಯಾತ್ ॥

**ತತೋ ನೀರಾಜಿತಾಭ್ಯಾಂ ದಂಪತೀಭ್ಯಾಂ ಸುಹೃದೋ ಯುವಂ ವಸ್ತ್ರಾಣಿ.... ಇತ್ಯಾದಿ ಮಂತ್ರೈಃ ವಸ್ತ್ರಾ ದದ್ಯುಃ ॥ ಓಂ ಯುವಂ ವಸ್ತ್ರಾಣಿ ಪೀವಸಾವಸಾಥೇಯುವೋರಚ್ಛಿದ್ರಾಮಂತವೋಹಸರ್ಗಾಃ । ಅವಾತಿ-ರತಮನೃತಾನಿವಿಶ್ವಋತೇನಮಿತ್ರಾವರುಣಾಸಚೇಥೇ ॥ ಓಂ ಪುನಾನಃ ಕಲಶೇಷ್ವಾ ವಸ್ತ್ರಾಣ್ಯರುಷೋಹರಿಃ ॥ ಪರಿಗವ್ಯಾನ್ಯವ್ಯತ ॥ ಓಂ ಅಭಿವಸ್ತ್ರಾ ಸುವಸನಾನ್ಯ-ರ್ಷಾಭಿಧೇನೂಃ ಸುದುಘಾಃಪೂಯಮಾನಾಃ ॥ ಅಭಿಚಂದ್ರಾಭರ್ತವೇನೋ-ಹಿರಣ್ಯಾಭ್ಯಶ್ವಾನ್‌ರಥಿನೋ ದೇವಸೋಮ ॥ ಓಂ ಸತುತುವಸ್ತ್ರಾಣ್ಯಧಪೇಶನಾನಿವ-ಸಾನೋಽಗ್ನಿರ್ನಾಭಾಃ ಪೃಥಿವ್ಯಾಃ ॥ ಅರುಷೋಜಾತಃ ಪದ ಇಳಾಯಾಃ ಪುರೋಹಿತೋರಾಜನ್ಯಕ್ಷೀಹದೇವಾನ್ ॥ ಓಂ ಪಸೇನಾನೀಃ ಶೂರೋ ಅಗ್ನೇ-ರಥಾನಾಂಗವ್ಯಂನೇತಿಹರ್ಷತೇ ಅಸ್ಯಸೇನಾ ॥ ಭದ್ರಾನ್ ಕೃಣ್ವನ್ನಿಂದ್ರಹವಾನ್-ಸಖಿಭ್ಯ ಆಸೋಮೋವಸ್ತ್ರಾರಭಸ್ವಾನಿ ದತ್ತೇ ॥ ಓಂ ಉಭಾಊನೂನಂ ತದಿದ ರ್ಥಯೇತೇ ವಿತನ್ವಾಥೇಧಿಯೋವಸ್ತ್ರಾಪಸೇವ ॥ ಸಧ್ರೀಚೀನಾಯಾತವೇ ಪ್ರೇಮ ಜೀಗಃ ಸುದಿನೇವಪೃಕ್ಷ ಆತಂಸಯೇಥೇ ॥ ತತೋಽತಿಕ್ರಾಂತ ಜಾತಕರ್ಮಾದಿ ಸಂಸ್ಕಾರಾನುಷ್ಠಾನಂ ॥**

**॥ ಇತಿ ಮಂಡಪದೇವತಾ ಪ್ರತಿಷ್ಠಾ ॥**

---

ಆಮೇಲೆ ಬಿದಿರಪಾತ್ರೆಯ ಸಮೇತ ಭಗವತಿಯನ್ನೂ ಗೌರ್ಯಾದಿ ಮಾತೃಕೆಗಳನ್ನೂ, ಆವಾಹಿಸಿದ ಪಾತ್ರೆಯನ್ನೂ ತಾನೇ ಎತ್ತಿಕೊಂಡು ಹೆಂಡತಿಯ ಕೈಯಲ್ಲಿ ಅವಿಘ್ನ ಗಣಪತಿ ಕಲಶವನ್ನು ಹಿಡಿಸಿಕೊಂಡು ಬ್ರಾಹ್ಮಣರೊಂದಿಗೆ ಈ ಮಂತ್ರಗಳನ್ನು ಹೇಳುತ್ತ ಮನೆಯ ಒಳಗೆ ಹೋಗಬೇಕು. ಮಂಗಲವಾದ್ಯಘೋಷದೊಂದಿಗೆ ಒಳಗೆ ಹೋಗಿ ಈಶಾನ್ಯ ದಿಕ್ಕಿನಲ್ಲಿ ಅಕ್ಕಿಯ ಮೂರು ರಾಶಿಗಳನ್ನು ಮಾಡಿ ಅವುಗಳ ಮೇಲೆ ಈ ಮೂರನ್ನೂ "**ತದಸ್ತು....**" "**ಗೃಹಾವೈ.....**" ಈ ಮಂತ್ರಗಳನ್ನು ಹೇಳಿ ಸ್ಥಾಪಿಸಿ, ಪಂಚೋಪಚಾರ ಪೂಜೆಮಾಡಿ, ಬ್ರಾಹ್ಮಣರಿಗೆ, ಸುವಾಸಿನಿಯರಿಗೆ ಭೋಜನ ದಕ್ಷಿಣಾದಿಗಳನ್ನು ಕೊಟ್ಟು ಸತ್ಕರಿಸಬೇಕು.

ಆಮೇಲೆ ದಂಪತಿಗಳನ್ನು ಕುಳ್ಳಿರಿಸಿ ಆರತಿ ಎತ್ತಿ "**ಯುವಂ ವಸ್ತ್ರಾಣಿ**" ಮುಂತಾದ ಮಂತ್ರಗಳನ್ನು ಹೇಳುತ್ತ ಇಷ್ಟಮಿತ್ರವರ್ಗದವರು ಬಟ್ಟೆಗಳ ಉಡುಗೊರೆ ಕೊಡಬೇಕು.

# ಕರ್ಮವಿಶೇಷೇ ಅಗ್ನಿನಾಮಾನಿ

ಶ್ರೀಃ ॥ ಲೌಕಿಕೇ ಪಾವಕೋಹ್ಯಗ್ನಿಃ ಪ್ರಥಮಃ ಪರಿಕೀರ್ತಿತಃ । ಅಗ್ನಿಸ್ತು ಮಾರುತೋ ನಾಮ ಗರ್ಭಾಧಾನೇ ಪ್ರಕೀರ್ತಿತಃ ॥ ಪುಂಸವೇ ಪವಮಾನಸ್ತು ಶೋಭನಃ ಶುಭಕರ್ಮಸು ॥ ಸೀಮಂತೇ ಮಂಗಲೋ ನಾಮ ಪ್ರಬಲೋ ಜಾತಕರ್ಮಣಿ ॥ ಪಾರ್ಥಿವೋ ನಾಮಕರಣೇ ಪ್ರಾಶನೇಽನ್ನಸ್ಯ ವೈ ಶುಚಿಃ ॥ ಸಭ್ಯನಾಮಾತು ಚೂಡಾಯಾಂ ವ್ರತಾದೇಶೇ ಸಮುದ್ಭವಃ ॥ ಗೋದಾನೇ ಸೂರ್ಯನಾಮಾಸ್ಯಾದ್ವಿವಾಹೇ ಯೋಜಿಕಃ ಸ್ಮೃತಃ ॥ ಆವಸಥ್ಯೇ ದ್ವಿಜೋ ಜ್ಞೇಯೋ ವೈಶ್ವದೇವೇ ತು ರುಕ್ಮಕಃ ॥ ಪ್ರಾಯಶ್ಚಿತ್ತೇ ವಿಟಶ್ಚೈವ ಪಾಕಯಜ್ಞೇಷು ಪಾವಕಃ ॥ ದೇವಾನಾಂ ಹವ್ಯವಾಹಶ್ಚ ಪಿತೄಣಾಂ ಕವ್ಯವಾಹನಃ ॥ ಶಾಂತಿಕೇ ವರದಃ ಪ್ರೋಕ್ತಃ ಪೌಷ್ಟಿಕೇ ಬಲವರ್ಧನಃ ॥ ಪೂರ್ಣಾಹುತ್ಯಾಂ ಮೃಡೋ ನಾಮ ಕ್ರೋಧೋಗ್ನಿಶ್ಚಾಭಿಚಾರಿಕೇ ॥ ವಶ್ಯಾರ್ಥೇ ಕಾಮದೋ ನಾಮ ವನದಾಹೇ ತು ದೂಷಕಃ ॥ ಕುಕ್ಷೌ ತು ಜಾಠರೋ ಜ್ಞೇಯಃ ಕ್ರವ್ಯಾದೋ ಮೃತದಾಹನೇ ॥ ವಹ್ನಿನಾಮಾ ಲಕ್ಷಹೋಮೇ ಕೋಟಿಹೋಮೇ ಹುತಾಶನಃ ॥ ವೃಷೋತ್ಸರ್ಗೇಽಧ್ವರೋ ನಾಮ ಸುಚಯೇ ಬ್ರಾಹ್ಮಣಃ ಸ್ಮೃತಃ ॥ ಸಮುದ್ರೇ-

---

ಬೇರೆ ಬೇರೆ ಕರ್ಮಗಳಲ್ಲಿ ನಿರ್ದಿಷ್ಟವಾದ ಅಗ್ನಿಯ ಹೆಸರುಗಳು:-

ಲೌಕಿಕಕಾರ್ಯ-ಪಾವಕ; ಗರ್ಭಾಧಾನ-ಮಾರುತ; ಪುಂಸವನ-ಪವಮಾನ; ಶುಭಕಾರ್ಯ-ಶೋಭನ; ಸೀಮಂತೋನ್ನಯನ-ಮಂಗಲ; ಜಾತಕರ್ಮ-ಪ್ರಬಲ; ನಾಮಕರಣ-ಪಾರ್ಥಿವ; ಅನ್ನಪ್ರಾಶನ-ಶುಚಿ; ಚೂಡಾಕರ್ಮ-ಸಭ್ಯ; ಉಪನಯನ-ಸಮುದ್ಭವ; ಗೋದಾನ-ಸೂರ್ಯ; ವಿವಾಹ-ಯೋಜಿಕ; ಅಗ್ನಿಹೋತ್ರ-ದ್ವಿಜ; ವೈಶ್ವದೇವ-ರುಕ್ಮಕ; ಪ್ರಾಯಶ್ಚಿತ್ತ-ವಿಟ; ಸ್ವಯಂಪಾಕ ಪಾವಕ; ದೇವಕಾರ್ಯ-ಹವ್ಯವಾಹನ; ಪಿತೃಕಾರ್ಯ-ಕವ್ಯವಾಹನ; ಶಾಂತಿ-ವರದ; ಪೌಷ್ಟಿಕಕಾರ್ಯ-ಬಲವರ್ಧನ; ಪೂರ್ಣಾಹುತಿ-ಮೃಡ; ಮಾರಣಕ್ರಿಯೆ-ಕ್ರೋಧ; ವಶೀಕರಣ-ಕಾಮದ; ವನದಹನ-ದೂಷಕ; ಹೊಟ್ಟೆಯಲ್ಲಿ-ಜಠರ; ಶವದಹನ-ಕ್ರವ್ಯಾದ; ಲಕ್ಷಹೋಮ-ವಹ್ನಿ; ಕೋಟಿಹೋಮ-ಹುತಾಶನ; ವೃಷೋತ್ಸರ್ಗ-ಅಧ್ವರ; ಸುಚಯ-ಬ್ರಾಹ್ಮಣ; ಸಮುದ್ರದಲ್ಲಿ-ವಾಡವ; ಪ್ರಳಯ-ಸಂವರ್ತಕ; ಬ್ರಹ್ಮಾ-ಗಾರ್ಹಪತ್ಯ ; ಈಶ್ವರ-ದಕ್ಷಿಣ; ವಿಷ್ಣು-ಆಹವನೀಯ. ಈ ಪ್ರಕಾರ ಅಗ್ನಿಹೋತ್ರದಲ್ಲಿ ಮೂರು ಅಗ್ನಿಗಳಿವೆ.

ವಾಡವೋಽಹ್ಯಗ್ನಿಃ ಕ್ಷಯೇ ಸಂವರ್ತಕಸ್ತಥಾ ॥ ಬ್ರಹ್ಮಾ ವೈ ಗಾರ್ಹಪತ್ಯಶ್ಚ ಈಶ್ವರೋ ದಕ್ಷಿಣಸ್ತಥಾ ॥ ವಿಷ್ಣುರಾಹವನೀಯಃ ಸ್ಯಾದಗ್ನಿಹೋತ್ರೇ ತ್ರಯೋಽಗ್ನಯಃ ॥ ಜ್ಞಾತ್ವೈವಮಗ್ನಿನಾಮಾನಿ ಗೃಹ್ಯಕರ್ಮಸಮಾರಭೇತ್ ॥ ಇಮಾನಿ ಸರ್ವಸಂಸ್ಕಾರ ಶಾಂತಿಕ ಪೌಷ್ಟಿಕಾದ್ಯನುಷ್ಠಾನೋಪಯುಕ್ತಾನಿ ತತ್ರ ತತ್ರ ಯೋಜ್ಯಾನ್ಯಗ್ನಿನಾಮಾನಿ ॥

॥ ಇತಿ ಕರ್ಮವಿಶೇಷೇ ಅಗ್ನಿನಾಮಾನಿ ॥

---

# ॥ ಕುಂಡಮಂಡಪವೇದೀ ಲಕ್ಷಣಂ ॥

**ಕುಂಡಲಕ್ಷಣಂ:- ಭವಿಷ್ಯಪುರಾಣೇ ॥ ಮುಷ್ಟಿಮಾನಂ ಶತಾರ್ಧಂ ತು ಶತೇಚಾರತ್ನಿಮಾತ್ರಕಂ । ಸಹಸ್ರೇ ತ್ವಥ ಹೋತವ್ಯಂ ಕುಂಡಂ ಕುರ್ಯಾತ್ಕ- ರಾತ್ಮಕಂ ॥ ವಿಶ್ವಕರ್ಮಾ-ವ್ಯಾಸಾತ್ ಖಾತಪರಃ ಪ್ರೋಕ್ತೋ ನಿಮ್ನಂ ತಿಥ್ಯಂಗು- ಲೇನ ತು । ಕಂಠಾತ್ಪರಂ ಮೇಖಲಾ ತು ಉನ್ನತಾ ಸ್ಯಾನ್ನವಾಂಗುಲೈಃ ॥ ಚತುಸ್ತ್ರಿದ್ವ್ಯಂಗುಲವ್ಯಾಸೋ ಮೇಖಲಾ ತ್ರಿತಯಸ್ಯ ತು ॥ ಸಿದ್ಧಾಂತಶೇಖರೇ ॥ ಏಕಾ ಷಡಂಗುಲೋತ್ಸೇಧಾ ವಿಸ್ತಾರಾ ಮೇಖಲಾ ಮತಾ ॥ ತ್ರೈಲೋಕ್ಯಸಾರೇ ॥ ದೀರ್ಘಾ ಸೀರ್ಯಾಂಗುಲಾ ಯೋನಿಸ್ತ್ರ್ಯಂಶೇನ ವಿಸ್ತರೇಣ ತು । ಏಕಾಂಗುಲೋ ಚ್ಛ್ರಿತಾ ಸಾ ತು ಪ್ರವಿಷ್ಟಾಭ್ಯಂತರೇ ತಥಾ ॥ ಕುಂಭದ್ವಯಾರ್ಧಂ ಸಂಯುಕ್ತಾ ಚಾಶ್ವತ್ಥದಲವನ್ ಮತಾ । ಅಂಗುಷ್ಠಮೇಖಲಾಯುಕ್ತಾ ಮಧ್ಯೇ ತ್ವಾಜ್ಯಧೃತಿಸ್ತಥಾ ॥ ಕುಂಡಾನಾಂ ಕಲ್ಪಯೇದಂತರ್ನಾಭಿಮಂಬುಜಸನ್ನಿಭಂ । ತತ್ತತ್ಕುಂಡಾನುಕಾರಾ ವಾ ಮಾನಮಸ್ಯ ನಿಗದ್ಯತೇ ॥ ದ್ವಿತೀಯ ಮೇಖ- ಲಾಯಾಂ ಪರಿಧಿ-ಪರಿಸ್ತರಣಾರ್ಥಮಂತರಂ ರಕ್ಷೇತ್ ॥ ಯಾವಾನ್ ಕುಂಡಸ್ಯ ವಿಸ್ತಾರಃ ಖನನಂ ತಾವದೀರಿತಂ ॥ ಪಶ್ಚಿಮಮೇಖಲೋಪರಿ ಕುಂಡವಿಸ್ತಾರಾರ್ಧಂ ದೀರ್ಘಾಂ ಕುಂಡವಿಸ್ತಾರತೃತೀಯಾಂಶವಿಸ್ತೃತಾಂ ಯೋನಿಂ ಭೂಮಿತೋ ರಚಯೇತ್ ॥ ಶಾರದಾಯಾಂ-ಸರ್ವಸಿದ್ಧಿಕರಂ ಕುಂಡಂ ಚತುರಸ್ರಮುದಾ ಹೃತಂ । ಮಾತ್ಸ್ಯೇ-ಮಾನಹೀನಾಧಿಕಂ ಕುಂಡಮನೇಕಭಯದಂ ಭವೇತ್ ॥**

---

**ಕುಂಡಮಂಡಲವೇದೀ ಲಕ್ಷಣ:-** ಗ್ರಹಯಜ್ಞ ಅಥವಾ ಇತರ ಹೋಮ ಕಾರ್ಯಗಳಿಂದ ಕೂಡಿದ ಕರ್ಮಗಳಿಗೆ ಯಜ್ಞಕುಂಡವನ್ನು ನಿರ್ಮಿಸಬೇಕಾದ ಸಂದರ್ಭದಲ್ಲಿ, ಒಂದರಿಂದ ನಲ್ವತ್ತೊಂಭತ್ತು ಸಂಖ್ಯೆಗಿಂತ ಕಡಿಮೆ ಆಹುತಿಗಳಾದರೆ ಕುಂಡವನ್ನು ಮಾಡದೆ ಹದಿನೆಂಟು ಅಂಗುಲ ಚಚೌಕದ ಸ್ಥಂಡಿಲವನ್ನು ಮಾಡಬೇಕು. ಐವತ್ತರಿಂದ ತೊಂಭತ್ತೊಂಭತ್ತು ಆಹುತಿಗಳ ವರೆಗಾದರೆ (ಅರತ್ನಿಮಾನ ಅಂದರೆ ಇಪ್ಪತ್ತೆರಡೂವರೆ ಅಂದರೆ ೨೧ ಅಂಗುಲ) ಚೌಕಾಕಾರದ ಕುಂಡ ಮಾಡಬೇಕು. ನೂರರಿಂದ ಒಂಭೈನೂರತೊಂಭತ್ತೊಂಭತ್ತು ಆಹುತಿಗಳ ವರೆಗಾದರೆ (ಅರತ್ನಿಮಾನ ಅಂದರೆ ಇಪ್ಪತ್ತೆರಡೂರವೆ ಅಂಗುಲ ಪ್ರಮಾಣದ) ಚೌಕಾಕಾರದ ಕುಂಡ ಮಾಡಬೇಕು. ಒಂದು ಸಾವಿರದಿಂದ ಒಂಭತ್ತು ಸಾವಿರದ ಒಂಭೈನೂರತೊಂಭತ್ತೊಂಭತ್ತು ಆಹುತಿಯ ವರೆಗೆ ಹಸ್ತಮಾನ ಅಂದರೆ ೨೪ ಅಂಗುಲದ ಚೌಕಾಕಾರದ ಕುಂಡವನ್ನು ಮಾಡಬೇಕು. ಒಂದು ಮೊಳ ಅಂದರೆ ೨೪ ಅಂಗುಲದ ಕುಂಡಕ್ಕೆ ೧೫ ಅಂಗುಲದಷ್ಟು ಆಳಕ್ಕೆ ಹೊಂಡ ಮಾಡಬೇಕು. ಆ ಹೊಂಡಕ್ಕೆ ಚಚೌಕವಾಗಿ ೧ ಅಂಗುಲದಷ್ಟು ಕುತ್ತಿಗೆಯನ್ನು ಬಿಟ್ಟು ಮೇಲೆ ೯ ಅಂಗುಲ ಪ್ರಮಾಣದ ವರೆಗೆ ಮೂರು ಪಟ್ಟಿಗಳನ್ನು ಮಾಡಬೇಕು. ಮೇಲಿನ ಮೊದಲನೆಯ ಪಟ್ಟಿಯು ೪ ಅಂಗುಲ ಎತ್ತರವೂ ೪ ಅಂಗುಲ ಅಗಲವೂ, ಎರಡನೆಯ ಪಟ್ಟಿಯು ೩-೩

**ಔಪಾಸನಕುಂಡಲಕ್ಷಣಂ:- ಸ್ಮೃತಿಸಾರೇ–ಅರತ್ನಿಮಾತ್ರಂ ವಿಜ್ಞೇಯ ಮಗ್ನೇರಾಯತನಂ ಶುಭಂ । ಶ್ರೌತೇ ಚೌಪಾಸನೇ ಕುಂಡಖಾತಯೋನಿವಿವರ್ಜಿತಂ ॥ ಮೇಖಲಾದ್ವಿತಯಂ ಕಾರ್ಯಂ ರೇಖಾಲಗ್ನಂತು ಬಾಹ್ಯತಃ । ಬಾಹ್ಯದ್ವ್ಯಂಗುಲವಿಸ್ತಾರಾಽಭ್ಯಂತರಾ ಚತುರಂಗುಲಾ ॥ ಬಾಹ್ಯಾ ಷಡಂ ಗುಲೋತ್ಸೇಧಾಽಭ್ಯಂತರಾ ದ್ವಾದಶಾಂಗುಲಾ । ಚತುರ್ವಿಂಶತ್ಯಂಗುಲಯೋಽರತ್ನಿಸ್ತದರ್ಧಂ ಪ್ರಾದೇಶಃ ॥ ಪ್ರಯೋಗರತ್ನೇ–ಚತುರ್ವಿಂಶತ್ಯಂಗುಲಂ ಸಾರ್ಧಂ ದ್ವಾವಿಂಶತ್ಯಂಗುಲಪ್ರಮಾಣಂ ವಾ ಷೋಡಶಾಂಗುಲಪ್ರಮಾಣಂ ವಾ ಚತುರಸ್ರಂ ಪ್ರತ್ಯೇಕಂ ಚತುರಂಗುಲೋತ್ಸೇಧಮೇಖಲಾತ್ರಯಯುಕ್ತಮಾಯತನಂ ॥**

---

ಅಂಗುಲವೂ ಕೆಳಗಿನ ಮೂರನೆಯ ಪಟ್ಟಿಯು ೨-೨ ಅಂಗುಲ ಪ್ರಮಾಣದಲ್ಲಿ ಚಚ್ಚೌಕವಾಗಿರಬೇಕು. ಒಂದೇ ಪಟ್ಟಿಯನ್ನು ಮಾಡುವುದಾದರೆ ಅದು ೬ ಅಂಗುಲ ಎತ್ತರವೂ ೬ ಅಂಗುಲ ಅಗಲವೂ ಇರಬೇಕು. ಪಶ್ಚಿಮಭಾಗದಲ್ಲಿರುವ ಪಟ್ಟಿಯ ಮೇಲೆ ಯೋನಿಯನ್ನು ನಿರ್ಮಿಸಬೇಕು. ಈ ಯೋನಿಯು ೨೪ ಅಂಗುಲ ಪ್ರಮಾಣದ ಕುಂಡಕ್ಕೆ ೧೨ ಅಂಗುಲ ಉದ್ದ ೮ ಅಂಗುಲ ಅಗಲವಿದ್ದು ಕುಂಡದ ಕೆಳಭಾಗದ ಪಟ್ಟಿಯಿಂದ ಆರಂಭಿಸಿ ಮೇಲಿನ ಪಟ್ಟಿಯ ಮೇಲೆ ೧ ಅಂಗುಲದಷ್ಟು ಎತ್ತರವಿರುವಂತೆ ಅಶ್ವತ್ಥದ ಎಲೆಯ ಆಕಾರದಲ್ಲಿ ಕುಂಡದ ಕಡೆಗೆ ಇಳಿಜಾರಾಗಿರಬೇಕು.

ಎಲೆಯ ದಂಟಿನ ಭಾಗದಲ್ಲಿ ಸುರಿದ ತುಪ್ಪವು ಸರಾಗವಾಗಿ ತುದಿಯ ವರೆಗೆ ಹರಿದು ಕುಂಡದಲ್ಲಿ ಬೀಳುವಂತಿರಬೇಕು. ಎಲೆಯ ದಂಟಿನ ಎರಡು ಬದಿಗಳಲ್ಲಿ ಅರ್ಧ ಕುಂಭಾಕೃತಿಯ ಎರಡು ಮುದ್ದೆಗಳನ್ನು ಇಡಬೇಕು. ೪-೪ ಅಂಗುಲ ಚೌಕಾಕಾರದ ಕುಂಡಾಕೃತಿಯನ್ನು ಮಾಡಿ ನಾಭಿಯನ್ನು ಕುಂಡದ ಮಧ್ಯಭಾಗದಲ್ಲಿ ಇಡಬೇಕು. ನಡುವಿನ ಪಟ್ಟಿಯ ಮೇಲೆ ಪರಿಧಿಯನ್ನು ವಿಸ್ತರಿಸಲು ಅಂತರವಿಡಬೇಕು. ಕುಂಡದ ವಿಸ್ತಾರದ ಪ್ರಮಾಣವನ್ನು ಹೊಂದಿಕೊಂಡು ಅದಕ್ಕನುಗುಣವಾಗಿ ಆಳವಾಗಿರುವಂತೆ ಹೊಂಡ ಮಾಡಬೇಕು. ಪಶ್ಚಿಮ ಭಾಗದಲ್ಲಿರುವ ಪಟ್ಟಿಯ ಮೇಲೆ ಕುಂಡದ ವಿಸ್ತಾರದ ಅರ್ಧ ಹಾಗೂ ಮೂರನೇ ಒಂದರಷ್ಟು ಉದ್ದ ಮತ್ತು ಅಗಲವಿರುವಂತೆ ಯೋನಿಯನ್ನು ನಿರ್ಮಿಸಬೇಕು. ಉದಾ:- ೨೧ ಅಂಗುಲ ವಿಸ್ತಾರದ ಕುಂಡವಾದರೆ ೧೦$\frac{1}{2}$ ಅಂಗುಲ ಉದ್ದ ಹಾಗೂ ೭ ಅಂಗುಲ ಅಗಲದ ಯೋನಿ ಇರಬೇಕು. ಈ ಪ್ರಕಾರ ಸಣ್ಣದು ಅಥವಾ ದೊಡ್ಡದು ಯಾವುದು ಬೇಕೋ ಅಂತಹ ಕುಂಡವನ್ನು ನಿರ್ಮಿಸಿಕೊಳ್ಳಬೇಕು. ಚತುರಸ್ರಕುಂಡವು ಸರ್ವಸಿದ್ಧಿಪ್ರದವಾಗಿದೆ. ಪ್ರಮಾಣಕ್ಕಿಂತ ಹೆಚ್ಚು ಅಥವಾ ಕಡಿಮೆಯಾಗಿ ಕುಂಡವನ್ನು ರಚಿಸಿದರೆ ಸುಖಪ್ರಾಪ್ತಿಯಾಗುವುದಿಲ್ಲ.

**ಔಪಾಸನಕುಂಡಲಕ್ಷಣ:-** ಔಪಾಸನ ಅಥವಾ ಗೃಹ್ಯೋಕ್ತ ಹೋಮಕ್ಕೆ ೨೪ ಅಂಗುಲಿ ಚೌಕಾಕಾರದ ಕುಂಡವಿರಬೇಕು. ಇದಕ್ಕೆ ಕುತ್ತಿಗೆ, ಹೊಂಡ, ಯೋನಿ ಇತ್ಯಾದಿಗಳ ಅವಶ್ಯಕತೆ ಇಲ್ಲ. ಕುಂಡದ ಹೊರಭಾಗದಲ್ಲಿ, ಬಾಹ್ಯ ಮತ್ತು ಅಭ್ಯಂತರವೆಂಬ ಎರಡು ಪಟ್ಟಿಗಳಿರಬೇಕು. ಬಾಹ್ಯ ಅಥವಾ ಹೊರಗಿನ ಪಟ್ಟಿಯು ಎರಡು ಅಂಗುಲ ಅಗಲವಾಗಿಯೂ ಎತ್ತರವಾಗಿಯೂ,

**ವೈಶ್ವದೇವಕುಂಡಲಕ್ಷಣಂ:- ಷಡಂಗುಲಮಿತೋಽಚ್ಛ್ರಾಯಂ ಗರ್ತೇಚ ಚತುರಂಗುಲಂ । ದ್ವಾದಶಾಂಗುಲವಿಸ್ತೀರ್ಣಂ ಕುಂಡಂ ತದ್ವೈಶ್ವದೇವಿಕಂ ॥**

**ಮಂಡಪಲಕ್ಷಣಂ:- ಹೇಮಾದ್ರೌ ಮತ್ಸ್ಯಪುರಾಣೇ-ಗೃಹಸ್ಯೋತ್ತರ ಪೂರ್ವೇಣ ಮಂಡಪಂ ಕಾರಯೇದ್ಬುಧಃ । ರುದ್ರಾಯತನಭೂಮೌ ವಾ ಚತುರಸ್ರಮುದಕ್ಪ್ಲವಂ ॥ ದಶಹಸ್ತಾನಥಾಷ್ಟೌ ವಾ ಹಸ್ತಾನ್ ಕುರ್ಯಾದ್ವಿಧಾ ನತಃ । ತಸ್ಯ ದ್ವಾರಾಣಿ ಚತ್ವಾರಿ ಕರ್ತವ್ಯಾನಿ ವಿಚಕ್ಷಣೈಃ**

**ಗೃಹವೇದೀ ಲಕ್ಷಣಂ:- ಮಾತ್ಸ್ಯಪುರಾಣೇ ತ್ರಿವಪ್ರಚತುರಸ್ರಂ ಚ ವಿತಸ್ತ್ಯುಚ್ಛ್ರಾಯಸಂಮಿತಂ । ದ್ವಿರಂಗುಲೋಚ್ಛ್ರಿತೋ ವಪ್ರಃ ಪ್ರಥಮಃ ಸಮುದಾಹೃತಃ ॥ ಅಂಗುಲ್ಯುಚ್ಛ್ರಾಯಸಂಯುಕ್ತಂ ವಪ್ರದ್ವಯಮಥೋಪರಿ । ದ್ವ್ಯಂಗುಲಸ್ತತ್ರವಿಸ್ತಾರಃ ಸರ್ವೇಷಾಂ ಕಥಿತೋ ಬುಧೈಃ ॥**

**ಸ್ಥಂಡಿಲಂ:-ಸ್ಮೃತಿಸಾರೇ-ಕುಂಡೇ ವಾ ಸ್ಥಂಡಿಲೇ ವಾಪಿ ಹೋಮ ಕರ್ಮ ಸಮಾಚರೇತ್ ।**

---

ಅಭ್ಯಂತರ ಅಥವಾ ಒಳಗಿನ ಪಟ್ಟಿಯು ೪ ಅಂಗುಲ ಅಗಲ ಮತ್ತು ೧೨ ಅಂಗುಲ ಎತ್ತರವಾಗಿ ಇರಬೇಕು. ಇಲ್ಲಿ ಅರತ್ನಿ ಅಂದರೆ ೨೪ ಅಂಗುಲವೆಂದೂ ಪ್ರಾದೇಶ ಅಂದರೆ ೧೨ ಅಂಗುಲವೆಂದೂ ಹೇಳಲ್ಪಟ್ಟಿದೆ. ಈ ಮೇಲೆ ಹೇಳಿದ ಕುಂಡದ ಪ್ರಮಾಣದಲ್ಲಿ ಅರತ್ನಿ ಎಂದರೆ ಮೊಣಕೈಯಿಂದ ಕನಿಷ್ಠಿಕೆಯ ತುದಿಯ ವರೆಗೆ ಒಂದು ಮೊಳ ಅಥವಾ ೨೨$\frac{1}{2}$ ಅಂಗುಲ ಎಂದು ತಿಳಿಯಬೇಕು. ಪ್ರಯೋಗ ರತ್ನದಲ್ಲಿ ಔಪಾಸನ ಕುಂಡವನ್ನು ೨೪, ೨೨$\frac{1}{2}$ ಅಥವಾ ೧೬ ಅಂಗುಲ ಚೌಕವಾಗಿದ್ದು ೪-೪ ಅಂಗುಲದ ૩ ಪಟ್ಟಿಗಳಿಂದ ಕೂಡಿರಬೇಕೆಂದು ಹೇಳಿದ್ದಾರೆ.

**ವೈಶ್ವದೇವಕುಂಡಲಕ್ಷಣ:-** ವೈಶ್ವದೇವ ಕುಂಡಕ್ಕೆ ೬ ಅಂಗುಲ ಎತ್ತರದ ಪಟ್ಟಿ, ೪ ಅಂಗುಲ ಆಳ ಮತ್ತು ಉದ್ದಗಲಗಳು ೧೨-೧೨ ಅಂಗುಲ ಇರಬೇಕು.

**ಮಂಡಪಲಕ್ಷಣಂ:-** ಗ್ರಹಯಜ್ಞಮಾಡಲು ಮಂಡಪವನ್ನು ನಿರ್ಮಿಸುವುದಾದರೆ ಅದು ಮನೆಯ ಉತ್ತರ ಅಥವಾ ಪೂರ್ವದಿಕ್ಕಿನಲ್ಲಿ ಇಲ್ಲವೇ ಈಶ್ವರದೇವರ ಮಂದಿರದ ಹತ್ತಿರ ೧೦ ಅಥವಾ ೮ ಮೊಳ ದಕ್ಷಿಣದಿಂದ ಉತ್ತರಕ್ಕೆ ಚೌಕಾಕಾರವಾಗಿರಬೇಕು. ಅದಕ್ಕೆ ನಾಲ್ಕು ಬಾಗಿಲುಗಳಿರಬೇಕು.

**ಗೃಹವೇದೀಲಕ್ಷಣ:-** ಗ್ರಹವೇದಿಯು ಒಂದು ಗೇಣು ಎತ್ತರವಿದ್ದು ಅದಕ್ಕೆ ಮೂರು ಪಟ್ಟಿಗಳಿರಬೇಕು. ಮೊದಲನೆಯ ಪಟ್ಟಿಯು ಎರಡು ಅಂಗುಲ ಹಾಗೂ ಎರಡನೆಯ ಮತ್ತು ಮೂರನೆಯ ಪಟ್ಟಿಗಳು ಒಂದೊಂದು ಅಂಗುಲ ಅಗಲವಿರಬೇಕು.

**ಸ್ಥಂಡಿಲ:-** ಅಗ್ನಿಗೆ ಆಧಾರವಾಗಿ ಕುಂಡವನ್ನು ರಚಿಸಬೇಕು. ಅದು ಅಸಾಧ್ಯವೆಂದಾದರೆ ಸ್ಥಂಡಿಲವನ್ನಾದರೂ ರಚಿಸಿ ಹೋಮಕಾರ್ಯ ಮಾಡಬೇಕು.

## ಯಜ್ಞಪಾತ್ರಾಕೃತಯಃ ।




೧. ಚರುಸ್ಥಾಲೀ ೨. ಪ್ರೋಕ್ಷಣೀ ೩. ದರ್ವೀಸ್ರುಕ್ ೪. ಸ್ರುವ ೫. ಪ್ರಣೀತಾ ೬. ಆಜ್ಯಪಾತ್ರಂ ೭. ಶೂರ್ಪಂ ೮. ಕೃಷ್ಣಾಜಿನಂ ೯. ಉಲೂಖಲ ೧೦. ಇಧ್ಮ ೧೧. ಬರ್ಹಿ ೧೨. ಮುಸಲ ೧೩. ದೃಷದ್ ೧೪. ಉಪಲ ೧೫. ಮೇಕ್ಷಣಂ

## ॥ ಯಜ್ಞಪಾತ್ರಾಕೃತಯಃ ತತ್ಪರಿಮಾಣಂ ಚ ॥

೧. ಚರುಸ್ಥಾಲೀ - ಇಯಂ ತಾಮ್ರಮಯೀ ಮಾರ್ತಿಕೀ ವಾ ಅಷ್ಟಾಂಗುಲಾ ದ್ವಾದಶಾಂಗುಲಾ ವಾ ಸಂಕುಚಿತಾನನಾ ।

೨. ಪ್ರೋಕ್ಷಣೀ - ಇಯಂ ಸ್ರುಗಾಕಾರಾ ವಾರಣವೃಕ್ಷಜಾ ವಿಸ್ತಾರಾರ್ಧ ನಿಮ್ನಾ ।

೩. ದರ್ವೀಸ್ರುಕ್ - ಇಯಂ ಪಾಲಾಶೀ ದ್ವಾದಶಾಂಗುಲಾ ।

೪. ಸ್ರುವಃ - ಅಯಂ ಖಾದಿರೋ ವಿತಸ್ತಿಪ್ರಮಾಣೋಽರ್ಧಾಂಗುಲಛಿದ್ರಃ ।

೫. ಪ್ರಣೀತಾ - ಅಯಂ ಪೈಪ್ಪಲಃ ಷಡಂಗುಲಃ ಚತುರಂಗುಲದಂಡಃ

೬. ಆಜ್ಯಪಾತ್ರಂ - ಇದಂ ಕಾಂಸ್ಯಜಂ ಮೃಣ್ಮಯಂ ವಾ ಷಡಂಗುಲಂ ।

೭. ಇಧ್ಮ - ಇದಂ ಪಂಚದಶಯಜ್ಞೀಯಸಮಿತ್ಕಂ ಪ್ರಾದೇಶಮಿತಂ ।

೮. ಬರ್ಹಿಃ - ಇದಂ ಪ್ರಾದೇಶಮಾತ್ರಮುಷ್ಟಿಪರಿಮಿತದರ್ಭರೂಪಂ ।

೯. ಶೂರ್ಪಂ - ಇದಂ ವಂಶನಿರ್ಮಿತಂ ।

೧೦. ಕೃಷ್ಣಾಜಿನಂ - ಇದಂ ಪುಂರೂಪ ಹರಿಣಸ್ಯ ಚರ್ಮ ।

---

### ಯಜ್ಞಪಾತ್ರೆಗಳ ಆಕಾರ ಮತ್ತು ಪ್ರಮಾಣ

೧. ಚರುಸ್ಥಾಲೀ – ೮ ಅಥವಾ ೧೨ ಅಂಗುಲ ಎತ್ತರವಿರುವ ಸಣ್ಣ ಬಾಯಿಯುಳ್ಳ ತಾಮ್ರ ಅಥವಾ ಮಣ್ಣಿನ ಪಾತ್ರೆ.

೨. ಪ್ರೋಕ್ಷಣೀ – ೮ ಅಂಗುಲ ಉದ್ದ ೪ ಅಂಗುಲ ಆಳವಿರುವ ಸ್ರುಕ್ಕಿನ ಆಕಾರದ ಕರೀಮರದ ಪಾತ್ರೆ.

೩. ದರ್ವೀಸ್ರುಕ್ – ಇದು ೧೩ ಅಂಗುಲ ಉದ್ದ ಹಾಗೂ ೬$\frac{೧}{೨}$ ಅಂಗುಲ ಆಳ ವಿರುವ ಪಲಾಶವೃಕ್ಷದ್ದಾಗಿರಬೇಕು.

೪. ಸ್ರುವಃ – ಇದು ಖಾದಿರವೃಕ್ಷದಾಗಿದ್ದು ೧೨ ಅಂಗುಲ ಉದ್ದ $\frac{೧}{೨}$ ಅಂಗುಲ ಆಳ, ತಳಭಾಗ ಒಂದು ಅಂಗುಲವುಳ್ಳದ್ದಾಗಿದ್ದು ಬಾಯಿ ದುಂಡಗಿರಬೇಕು.

೫. ಪ್ರಣೀತಾ – ೪ ಅಂಗುಲ ಹಿಡಿ ಇದ್ದು ೬ ಅಂಗುಲ ಚಚ್ಚೌಕ ಬಾಯಿಯುಳ್ಳ ಅಶ್ವತ್ಥಮರದ್ದಾಗಿರಬೇಕು.

೬. ಆಜ್ಯಪಾತ್ರೆ – ಇದು ೬ ಅಂಗುಲ ವಿಸ್ತಾರವುಳ್ಳ ಕಂಚು ಅಥವಾ ಮಣ್ಣಿನ ಪಾತ್ರೆ

೭. ಇಧ್ಮ – ಗೇಣುದ್ದವುಳ್ಳ ೧೫ ಯಜ್ಞೀಯ ಸಮಿಧೆಗಳುಳ್ಳದ್ದು.

೮. ಬರ್ಹಿ – ಗೇಣುದ್ದದ ಒಂದು ಮುಷ್ಟಿ ದರ್ಭೆಗಳು

೯. ಶೂರ್ಪ – ಬಿದಿರಿನಿಂದ ಮಾಡಿದ ಗೆರಸೆ

೧೦. ಕೃಷ್ಣಾಜಿನ – ಗಂಡು ಜಿಂಕೆಯ ಚರ್ಮ

೧೧. **ಉಲೂಖಲಂ** – ಇದಂ ಪಾಲಾಶದಾರುಕೃತಂ ।
೧೨. **ಮುಸಲಂ** – ಇದಂ ಖಾದಿರಂ ॥
೧೩. **ಮೇಕ್ಷಣಂ** – ಇದಂ ಯಜ್ಞಿಯದಾರುಜಂ ।
೧೪. **ದೃಷದ್** – ಇಯಂ ಪಾಷಾಣಮಯೀ ।
೧೫. **ಉಪಲಃ** – ಅಯಂ ಪಾಷಾಣಃ ಪೇಷಣಸಾಧನಂ ।

---

# ॥ ಕುಂಡಸಂಸ್ಕಾರಃ ॥

**ಛಾಯಾಮಂಡಪಸತ್ವೇ ತು ವಿಧಿವತ್ಪೂಜಾಭಾವಃ । ಗಂಧಾಕ್ಷತ ಪುಷ್ಪಾದಿಭಿಃ ಪೂಜಯೇತ್ । ಕುಂಡಮಂಡಪಂ ಪಂಚಗವ್ಯೇನ ಪ್ರೋಕ್ಷ್ಯ ಅಂಜಲೌ ಪುಷ್ಪಾಣ್ಯಾದಾಯ ಕುಂಡಂ ಸ್ಪೃಷ್ಟ್ವಾ ಆವಾಹಯೇತ್ । ಆವಾಹ ಯಾಮಿ ತತ್ಕುಂಡಂ ವಿಶ್ವಕರ್ಮವಿನಿರ್ಮಿತಂ । ಶರೀರಂ ಯಚ್ಛ ತೇ ದಿವ್ಯಮಗ್ನ್ಯ ಧಿಷ್ಠಾನಮದ್ಭುತಂ ॥ ೧ ॥ ಇತ್ಯಾವಾಹ್ಯ । ಯೇಚ ಕುಂಡೇ ಸ್ಥಿತಾ ದೇವಾಃ ಕುಂಡಾಂಗೇ ಯಾಶ್ಚ ದೇವತಾಃ । ಋದ್ಧಿಂ ಯಚ್ಛಂತು ತೇ ಸರ್ವೇ ಯಜ್ಞ ಸಿದ್ಧಿಂ ಮುದಾನ್ವಿತಾಃ ॥ ೨ ॥ ಹೇ ಕುಂಡ ತವ ನಿರ್ಮಾಣಂ ರಚಿತಂ ವಿಶ್ವ ಕರ್ಮಣಾ । ಅಸ್ಮಾಕಂ ವಾಛಿತಾಂ ಸಿದ್ಧಿಂ ಯಜ್ಞಸಿದ್ಧಿಂ ದದಾತು ಭೋ ॥ ೩ ॥**

---

೧೧. **ಉಲೂಖಲ** – ಮುತ್ತುಗದ ಮರದಿಂದ ಮಾಡಿದ್ದಾಗಿರಬೇಕು.
೧೨. **ಮುಸಲ** – ಖಾದಿರಮರದ ಸಣ್ಣ ಒನಕೆ
೧೩. **ಮೇಕ್ಷಣಂ** – ಚರುಹೋಮದಲ್ಲಿ ಉಪಯೋಗಿಸುವ ಯಜ್ಞಿಯ ಮರದ ಸಟ್ಟುಗ
೧೪. **ದೃಷದ್** – ಅರೆಯುವಕಲ್ಲು (ಅಡಿಗಲ್ಲು)
೧೫. **ಉಪಲಃ** – ಗುಂಡುಕಲ್ಲು

**ಕುಂಡಸಂಸ್ಕಾರಃ–** ಛಾಯಾಮಂಡಪವಿದ್ದರೆ ವಿಧಿಪ್ರಕಾರ ಪೂಜೆ ಮಾಡುವ ಅಗತ್ಯವಿಲ್ಲ. ಗಂಧ, ಅಕ್ಷತೆ ಪುಷ್ಪ ಇತ್ಯಾದಿಗಳಿಂದ ಪೂಜೆ ಮಾಡಬೇಕು. ಕುಂಡ ಹಾಗೂ ಮಂಟಪವನ್ನು ಪಂಚಗವ್ಯದಿಂದ ಪ್ರೋಕ್ಷಿಸಬೇಕು. (೧) **"ಆವಾಹಯಾಮಿತತ್ಕುಂಡಂ"** ಎಂದು ಹೇಳುತ್ತ ಬೊಗಸೆಯಿಂದ ಹೂಗಳನ್ನು ಹಾಕಿ ಆವಾಹಿಸಬೇಕು. **"ಯೇಚಕುಂಡೇ"** (೨) **"ಹೇ ಕುಂಡ"** (೩) ಈ ಮಂತ್ರದಿಂದ ಪ್ರಾರ್ಥನೆ ಮಾಡಿ ಕುಂಡದ ಮಧ್ಯಭಾಗದಲ್ಲಿ ವಿಶ್ವಕರ್ಮನನ್ನು ಪೂಜಿಸಬೇಕು. **"ಓಂ ವಿಶ್ವಕರ್ಮಣೇ ನಮಃ"** (೪) ಈ ಮಂತ್ರದಿಂದ ಗಂಧ, ಅಕ್ಷತೆ ಪುಷ್ಪ, ಧೂಪ, ದೀಪ, ನೈವೇದ್ಯ ಇತ್ಯಾದಿ ಉಪಚಾರಗಳಿಂದ ಪೂಜಿಸಬೇಕು. **"ಅಜ್ಞಾನಾತ್ ಜ್ಞಾನತೋ"** (೫) ಈ ಮಂತ್ರದಿಂದ ಪ್ರಾರ್ಥನೆ ಮಾಡಬೇಕು. ನಂತರ ಬಿಳಿ ಬಣ್ಣದಿಂದ ಅಲಂಕರಿಸಿದ

ಇತಿ ಸಂಪ್ರಾರ್ಥ್ಯ ವಿಶ್ವಕರ್ಮಾಣಂ ಸಂಪೂಜ್ಯ ॥ ಓಂ ವಿಶ್ವಕರ್ಮಣೇ ನಮಃ ವಿಶ್ವಕರ್ಮಾಣಂ ಆವಾಹಯಾಮಿ ॥ ೪ ॥ ಇತಿ ಮಂತ್ರೇಣ ಸಂಪೂಜ್ಯ ಪ್ರಾರ್ಥಯೇತ್ ॥ ಅಜ್ಞಾನಾತ್ ಜ್ಞಾನತೋವಾಪಿ ದೋಷಾಃ ಸ್ಯುಃ ಖನನೋ-ದ್ಭವಾಃ । ನಾಶಯ ತ್ವಂ ಹಿ ತಾನ್ ಸರ್ವಾನ್ ವಿಶ್ವಕರ್ಮನ್ ನಮೋಸ್ತು ತೇ ॥ ೫ ॥ ತತೋ ಉಪರಿ ಮೇಖಲಾಯಾಂ "ಇದಂ ವಿಷ್ಣು" ರಿತಿ ವಿಷ್ಣುಂ ಮಧ್ಯಮೇಖಲಾಯಾಂ "ಬ್ರಹ್ಮಜಜ್ಞಾನ" ಮಿತಿ ಬ್ರಹ್ಮಾಣಂ ಅಧೋ ಮೇಖಲಾಯಾಂ "ತಮೀಶಾನ" ಮಿತಿ ರುದ್ರಂ ಯೋನ್ಯಾಂ "ಗೌರೀರ್ಮಿಮಾಯೇತಿ" ಗೌರೀಮಾವಾಹ್ಯ ಪೂಜಯೇತ್ ॥ ತತೋಗ್ನಿಂಪ್ರತಿಷ್ಠಾಪ್ಯ ॥

---

ಮೊದಲನೆಯ ಮೇಖಲೆಯ ಮೇಲೆ "ಇದಂ ವಿಷ್ಣು" ಎಂಬ ಮಂತ್ರದಿಂದ ವಿಷ್ಣುವನ್ನೂ, ಕೆಂಪು ಬಣ್ಣದಿಂದ ಅಲಂಕರಿಸಿದ ಎರಡನೆಯ ಪಟ್ಟಿಯ ಮೇಲೆ "ಬ್ರಹ್ಮಜಜ್ಞಾನ" ಎಂಬ ಮಂತ್ರದಿಂದ ಬ್ರಹ್ಮನನ್ನೂ, ಕಪ್ಪು ಬಣ್ಣವುಳ್ಳ ಮೂರನೆಯ ಪಟ್ಟಿಯ ಮೇಲೆ "ತಮೀಶಾನಂ" ಎಂಬ ಮಂತ್ರದಿಂದ ರುದ್ರನನ್ನೂ, ಯೋನಿಯ ಸ್ಥಾನದಲ್ಲಿ "ಗೌರೀರ್ಮಿಮಾಯ" ಎಂಬ ಮಂತ್ರದಿಂದ ಗೌರಿಯನ್ನೂ ಆವಾಹಿಸಬೇಕು. ಬಳಿಕ ಕುಂಡದಲ್ಲಿ ಅಗ್ನಿಯನ್ನು ಪ್ರತಿಷ್ಠಾಪಿಸಬೇಕು.

# ॥ ಗರ್ಭಾಧಾನಸಂಸ್ಕಾರ ನಿರ್ಣಯಃ ॥

ತದುಪಯೋಗಿತಯಾ ಪ್ರಥಮರಜೋದರ್ಶನೇ ದುಷ್ಟಮಾಸಾದಿ ನಿರ್ಣೀಯತೇ – ತತ್ರ ಚೈತ್ರಜ್ಯೇಷ್ಠಾಷಾಢಭಾದ್ರಪದಕಾರ್ತಿಕಪೌಷಮಾಸಾಃದುಷ್ಟಾಃ, ಪ್ರತಿದ್ವಿಕ್ತಾಷ್ಟಮಿಷಷ್ಠೀದ್ವಾದಶೀ ಪಂಚದಶೋಽನಿಷ್ಟಫಲಾಸ್ತಿಥಯಃ ತಥಾ ರವಿಭೌಮಮಂದವಾರೇಷು ಭರಣೀಕೃತ್ತಿದಾರ್ದ್ರಾಶ್ಲೇಷಾ ಮಘಾಪೂರ್ವಾ ತ್ರಯ ವಿಶಾಖಾಜ್ಯೇಷ್ಠಾನಕ್ಷತ್ರೇಷು ವಿಷ್ಕಂಭಗಂಡಾತಿಗಂಡಶೂಲವ್ಯಾಘಾತವಜ್ರಪರಿಘ ಪೂರ್ವಾರ್ಧಂ ವ್ಯತೀಪಾತವೈಧೃತಿಯೋಗೇಷು ವಿಷ್ಟ್ಯಾಂ ಗ್ರಹಣೇ ರಾತ್ರಿ-ಸಂಧ್ಯಾಪರಾಹ್ಣಕಾಲೇಷು ನಿದ್ರಾಯಾಂ ಜೀರ್ಣರಕ್ತನೀಲಚಿತ್ರವಸ್ತ್ರೇಷು ನಗ್ನತ್ವೇ ಪರಗೃಹಪರಗ್ರಾಮೇಷು ಅಲ್ಪಾಧಿಕ ನೀಲಾದಿರಕ್ತತ್ವೇಚಾನಿಷ್ಟಫಲಂ । ಸಂಮಾರ್ಜನೀ ಕಾಷ್ಠತೃಣಾಗ್ನಿಶೂರ್ಪಾನ್ ಹಸ್ತೇ ದಧಾನಾ ಕುಲಟಾ ಸ್ಯಾತ್ । ವಸ್ತ್ರೇ ವಿಷಮಾ ರಕ್ತಬಿಂದವಃ ಪುತ್ರಫಲಾಃ । ಸಮಾಃ ಕನ್ಯಾಫಲಾಃ ॥

ಅಥ ಪ್ರಥಮರ್ತೌ ಅಕ್ಷತೈರಾಸನಂ ಕೃತ್ವಾ ತತ್ರ ತಾಮುಪವಿಶ್ಯ ಪತಿಪುತ್ರವತ್ಯಃ ಸ್ತ್ರಿಯೋ ಹರಿದ್ರಾ ಕುಂಕುಮಗಂಧಪುಷ್ಪಸ್ರಕ್ ತಾಂಬೂಲಾದಿ ತಸ್ಯೈ ದತ್ವಾ ದೀಪೈರ್ನೀರಾಜ್ಯ ಸದೀಪಾಲಂಕೃತೇ ಗೃಹೇ ತಾಂ ವಾಸಯೇಯುಃ । ಸುವಾಸಿನೀಭ್ಯೋ ಗಂಧಾದಿಕಂ ಲವಣಮುದ್ಗಾದಿ ಚ ದದ್ಯಾತ್ ।

**ಗರ್ಭಾಧಾನಕ್ಕೆ ಉಪಯೋಗಿಯಾಗಿರುವುದರಿಂದ ಪ್ರಥಮ ರಜೋದರ್ಶನಕ್ಕೆ ಅನಿಷ್ಟವಾದ ತಿಂಗಳು ಇತ್ಯಾದಿಗಳ ನಿರ್ಣಯ :-** ಚೈತ್ರ, ಜ್ಯೇಷ್ಠ, ಆಷಾಢ, ಭಾದ್ರಪದ, ಕಾರ್ತಿಕ, ಪೌಷ, - ಈ ತಿಂಗಳುಗಳು; ಪ್ರತಿಪದಾ, ರಿಕ್ತಾ (ಚತುರ್ಥೀ, ನವಮೀ, ಚತುರ್ದಶೀ) ಅಷ್ಟಮೀ, ಷಷ್ಠೀ, ದ್ವಾದಶೀ, ಪೂರ್ಣಿಮಾ—ಈ ತಿಥಿಗಳು; ರವಿವಾರ, ಮಂಗಳವಾರ, ಶನಿವಾರ—ಈ ವಾರಗಳು; ಭರಣೀ, ಕೃತ್ತಿಕಾ, ಆರ್ದ್ರಾ, ಆಶ್ಲೇಷಾ, ಮಘಾ, ಪೂರ್ವಾ, ಪೂರ್ವಾಷಾಢಾ, ಪೂರ್ವಾಭಾದ್ರಪದಾ, ವಿಶಾಖಾ, ಜ್ಯೇಷ್ಠ, ಈ ನಕ್ಷತ್ರಗಳಲ್ಲಿ ಮತ್ತು ವಿಷ್ಕಂಭ, ಗಂಡ, ಅತಿಗಂಡ, ಶೂಲ, ವ್ಯಾಘಾತ, ವಜ್ರ, ಪರಿಘದ ಪೂರ್ವಾರ್ಧ, ವ್ಯತೀಪಾತ, ವೈಧೃತಿ, ಭದ್ರಾ, ಗ್ರಹಣ ರಾತ್ರಿ, ಸಂಧಿಕಾಲ, ಅಪರಾಹ್ನಕಾಲ, ನಿದ್ರಾವಸ್ಥೆ, ಹರಿದವಸ್ತ್ರ, ಕೆಂಪುನೀಲಿ ವಸ್ತ್ರ, ಬಣ್ಣಬಣ್ಣದ ವಸ್ತ್ರ; ನಗ್ನತೆ, ಬೇರೆಯವರ ಮನೆ, ಬೇರೆ ಊರು, ಇಂತಹ ಸಂದರ್ಭಗಳಲ್ಲಿ ಪ್ರಥಮ ರಜೋದರ್ಶನವಾದರೆ ಅದು ನಿಂದ್ಯವಾಗಿರುತ್ತದೆ. ರಜೋದರ್ಶನವು ಸ್ವಲ್ಪ, ಅಧಿಕ ಅಥವಾ ನೀಲವರ್ಣವಾಗಿದ್ದರೆ ದುಷ್ಫಲ. ಕಸಬರಿಕೆ, ಕಟ್ಟಿಗೆ, ಹುಲ್ಲು, ಅಗ್ನಿ, ಮೊರ ಇವುಗಳು ಕೈಯಲ್ಲಿರುವಾಗ ರಜೋದರ್ಶನವಾದರೆ ಆ ಸ್ತ್ರೀಯು ವ್ಯಭಿಚಾರಿಣಿಯಾಗುತ್ತಾಳೆ. ಬಟ್ಟೆಯ ಮೇಲೆ ವಿಷಮ ಸಂಖ್ಯೆಯಲ್ಲಿ (೧, ೩, ೫) ರಕ್ತದ ಬಿಂದುಗಳಿದ್ದರೆ ಪುತ್ರಫಲವೂ ಸಮಸಂಖ್ಯೆಯಲ್ಲಿ (೨, ೪, ೬) ಇದ್ದರೆ ಕನ್ಯಾಫಲವೂ ಪ್ರಾಪ್ತವಾಗುತ್ತದೆ.

**ಪ್ರಥಮ ರಜೋದರ್ಶನದ ನಂತರ ಮಾಡಬೇಕಾದ ವಿಧಿ:-** ಅಕ್ಕಿಯನ್ನು ಹರಡಿ ಆಸನ ಮಾಡಿ ಅದರ ಮೇಲೆ ಆಕೆಯನ್ನು ಕುಳ್ಳಿರಿಸಿ, ಗಂಡ ಮತ್ತು ಮಕ್ಕಳು, ಇರುವ ಸುವಾಸಿನಿಯರು ಅರಸಿನ, ಕುಂಕುಮ, ಗಂಧ, ಹೂಮಾಲೆ, ತಾಂಬೂಲಾದಿಗಳನ್ನು ಅವಳಿಗೆ ಕೊಟ್ಟು, ಆರತಿ ಎತ್ತಿ ದೀಪ ಕನ್ನಡಿ ಇತ್ಯಾದಿಗಳಿಂದ ಶೋಭಿತವಾದ ಮನೆಯಲ್ಲಿ ಇರಿಸಿ, ಸುವಾಸಿನಿಯರಿಗೆ ಗಂಧ ಅರಸಿನ, ಕುಂಕುಮ ಮತ್ತು ಪಚ್ಚೆ ಹೆಸರು ಇತ್ಯಾದಿಗಳನ್ನು ಕೊಡಬೇಕು.

**ಗರ್ಭಾಧಾನ:-** ಇದು ಮಹತ್ವಪೂರ್ಣ ಸಂಸ್ಕಾರವಾಗಿದೆ. ಪತಿಯಿಂದ ಪತ್ನಿಯು ಮುಂದೆ ಹೊಂದಬಹುದಾದ ಸಂತತಿಗೆ ಸಂಬಂಧಿಸಿದ ಸಂಸ್ಕಾರವು ಇದಾಗಿರುವುದರಿಂದ ಇದು ಕ್ಷೇತ್ರಸಂಸ್ಕಾರವೆನಿಸುತ್ತದೆ. ಕ್ಷೇತ್ರವೆಂದರೆ ಬೀಜಬಿತ್ತುವ ಸ್ಥಾನ. ಗರ್ಭದ ಸ್ಥಾಪನೆ, ಪೋಷಣೆ ಹಾಗೂ ವರ್ಧನೆ ಆಗುವ ಸ್ಥಾನ, ರೈತನು ಸರಿಯಾಗಿ ಬಿತ್ತದಿದ್ದರೆ ಅವನಿಗೆ ಹೇಗೆ ಒಳ್ಳೆಯ ಬೆಳೆ ಸಿಗಲಾರದೋ ಅಂತೆಯೇ ಸರಿಯಾಗಿ ಗರ್ಭಾಧಾನ ಸಂಸ್ಕಾರವನ್ನು ಮಾಡದಿದ್ದರೆ ಸತ್ಸಂತಾನ ಪ್ರಾಪ್ತಿಯಾಗಲಾರದು. ಗರ್ಭಾಧಾನವೆಂದರೆ ನಿಷೇಕ. ಅದು ರಾತ್ರಿಯಲ್ಲಿ ಆಗಬೇಕು.

# ೧೯

# ಸ್ಥಾಲೀಪಾಕಪ್ರಯೋಗಃ

**ಶ್ರೀಃ ॥ ಯಜಮಾನೋ ದ್ವಿರಾಚಮ್ಯ ದರ್ಭಪಾಣಿಃ ಪ್ರಾಣಾನಾ-ಯಮ್ಯ ಮಮೋಪಾತ್ತದುರಿತಕ್ಷಯದ್ವಾರಾ ಶ್ರೀಪರಮೇಶ್ವರಪ್ರೀತ್ಯರ್ಥಂ ಅಮುಕ ಕರ್ಮ ಕರಿಷ್ಯೇ ॥ ತದಂಗಹೋಮಂ ಕರ್ತುಂ ಸ್ಥಂಡಿಲಾದಿ ಕರಿಷ್ಯೇ ॥ ಇತಿ ಸಂಕಲ್ಪ್ಯ ॥**

**ಗೋಮಯಾದಿಲಿಪ್ತೇ ಶುದ್ಧದೇಶೇ ಶುದ್ಧಮೃದಾ ಐಶಾನ್ಯಾರಂಭಮು-ದಕ್ಸಂಸ್ಥಂ ಚತುರಸ್ರಂ ಚತುರಂಗುಲೋನ್ನತಮಂಗುಲೋನ್ನತಂ ವಾ ಚತುರ್ದಿಕ್ಷು ಮಿಲಿತ್ವಾ ದ್ವಿಸಪ್ತತಿ ಅಂಗುಲಪರಿಧಿಕಂ ಫಲಿತಮಷ್ಟಾದಶಾಂಗುಲವಿಸ್ತೃತಂ ಹೋಮಾ ನುಸಾರೇಣ ತದಧಿಕಂ ವಾ ನ ತು ತತೋ ನ್ಯೂನಂ ಮಧ್ಯೋನ್ನತಂ ಸ್ಥಂಡಿಲಂ ಕುರ್ಯಾತ್ ॥ ತದ್ಗೋಮಯೇನ ಪ್ರದಕ್ಷಿಣಮುಪಲಿಪ್ಯ ॥**

---

**ಸ್ಥಾಲೀಪಾಕತಂತ್ರ:-** ಇದು ಮುಖ್ಯವಾಗಿ ವಿವಾಹಾಂಗವಾದ **'ಗೃಹಪ್ರವೇಶನೀಯ'** ಹೋಮ ಮಾಡಿದ ನಂತರ ಬರುವ ಹುಣ್ಣಿಮೆ ಅಥವಾ ಅಮಾವಾಸ್ಯೆಯ ದಿನ ಮಾಡಬೇಕಾದ ಕರ್ಮವಿಶೇಷವಾಗಿರುತ್ತದೆ. ಆದರೆ ಇತರ ಎಲ್ಲ ಕರ್ಮಗಳಲ್ಲಿಯೂ ಮಾಡಬೇಕಾದ ಹೋಮಕಾರ್ಯದ ಎಲ್ಲ ವಿಚಾರಗಳೂ ವಿಧಿವಿಧಾನಗಳೂ ಇದರಲ್ಲಿ ಬರುವುದರಿಂದ ಇದನ್ನು ಆರಂಭದಲ್ಲಿ ಇಲ್ಲಿಯೇ ಕೊಡಲಾಗಿದೆ. ಎಲ್ಲ ಹೋಮಕಾರ್ಯಗಳೂ ಇದರಲ್ಲಿ ಹೇಳಿದ ವಿಧಾನದಂತೆ ನಡೆಯುವುದರಿಂದ ಇದು ಹೋಮಕರ್ಮಗಳಿಗೆ ಮೂಲ ಸ್ವರೂಪದಂತಿದೆ. ಶಾಸ್ತ್ರದಲ್ಲಿ: ೧. ಸ್ಥಾಲೀಪಾಕತಂತ್ರ. ೨. ವೈಶ್ವದೇವಿಕತಂತ್ರ. ೩. ಅಗ್ನಿಹೋತ್ರಿಕತಂತ್ರ. ಎಂದು ಒಟ್ಟು ಮೂರು ತಂತ್ರಗಳನ್ನು ಹೇಳಿದ್ದಾರೆ.

೧. ಸ್ಥಾಲೀಪಾಕತಂತ್ರ:- ಇದನ್ನು ಅನುಸರಿಸುವಾಗ ಹೋಮಕ್ಕೆ ಸಂಬಂಧಿಸಿದ ಎಲ್ಲ ಕರ್ಮಗಳನ್ನೂ ಯಥಾಯೋಗ್ಯವಾಗಿ, ವಿಸ್ತಾರವಾಗಿ ಮಾಡಬೇಕಾಗುತ್ತದೆ. ಆದ್ದರಿಂದ ಇದನ್ನು **"ಆಧಾರತಂತ್ರ"** ಎಂದು ಕರೆಯುತ್ತಾರೆ. **"ಪಾಕಯಜ್ಞಾನಾಮೇತತ್ತಂತ್ರಂ"** (ಆಶ್ವಲಾಯನಗೃಹ್ಯಸೂತ್ರ ೧-೧೦-೨೫) ಈ ಸೂತ್ರದಿಂದ ಈ ತಂತ್ರವನ್ನು ವಿಧಿಸಲಾಗಿದೆ.

೨. ವೈಶ್ವದೇವಿಕತಂತ್ರ:- ಇದನ್ನು **"ಅಪೂರ್ವಿಕತಂತ್ರ"** ಎಂದು ಕರೆಯುತ್ತಾರೆ. ಈ ಕುರಿತು ಬೌಧಾಯನಸೂತ್ರದಲ್ಲಿ ಹಿಗೆ ಹೇಳಲ್ಪಟ್ಟಿದೆ: **"ಅಪೂರ್ವಿಕೇಷು ಯಾವದರ್ಥಂ ದ್ರವ್ಯಸಂಸ್ಕಾರಃ ಪರಿಸ್ತರಣಪರಿಷೇಚಕೌ ॥ ಯಾವದುಕ್ತಾ ಆಹುತಯೋ ಅನ್ಯಾನಿ ಚ ವೈಶೇಷಿಕಾಣಿ ಕರ್ಮಾಣಿ"** ಈ ತಂತ್ರದಲ್ಲಿ ದ್ರವ್ಯಸಂಸ್ಕಾರ, ಪರಿಸ್ತರಣ, ಪರಿಷೇಚನ, ಪ್ರಧಾನಹೋಮ ಮತ್ತು ಆ ಕರ್ಮಗಳಿಗಾಗಿಯೇ ಹೇಳಿದ ವಿಶೇಷ ಕರ್ಮಗಳನ್ನು ಮಾಡಿದರೆ ಸಾಕಾಗುತ್ತದೆ. ವೈಶ್ವದೇವದಲ್ಲಿ ಈ ತಂತ್ರವನ್ನೇ ಅಂಗೀಕರಿಸಲಾಗಿದೆ. ಆಶ್ವಲಾಯನ ಹಾಗೂ

**ದಕ್ಷಿಣೇಷ್ಟೌ ಉದೀಚ್ಯಾಂ ದ್ವೇ ಪ್ರತೀಚ್ಯಾಂ ಚತುಃ ಪ್ರಾಚ್ಯಾಮರ್ಧ-ಮಿತ್ಯಂಗುಲಾನಿ ತ್ಯಕ್ತ್ವಾ ದಕ್ಷಿಣೋಪಕ್ರಮಾಮುದಕ್ಸಂಸ್ಥಾಂ ಪ್ರಾದೇಶಮಾತ್ರಾ-ಮೇಕಾಂ ಲೇಖಾಂ ಲಿಖಿತ್ವಾ ತಸ್ಯಾ ದಕ್ಷಿಣೋತ್ತರಯೋಃ ಪ್ರಾಗಾಯತೇ ಪೂರ್ವರೇಖಯಾ ಅಸಂಸ್ಪೃಷ್ಟೇ ಪ್ರಾದೇಶಸಮ್ಮಿತೇ ದ್ವೇ ಲೇಖೇ ಲಿಖಿತ್ವಾ ತಯೋರ್ಮಧ್ಯೇ ಪರಸ್ಪರಮಸಂಸ್ಪೃಷ್ಟಾ ಉದಕ್ಸಂಸ್ಥಾಃ ಪ್ರಾಗಾಯತಾಃ ಪ್ರಾದೇ ಶಸಮ್ಮಿತಾಸ್ತಿಸ್ರ ಇತಿ ಷಡ್ಲೇಖಾ ಯಜ್ಞಿಯಶಕಲಮೂಲೇನ ದಕ್ಷಿಣ-ಹಸ್ತೇನೋಲ್ಲಿಖ್ಯ ಲೇಖಾಸು ತಚ್ಛಕಲಮುದಗಗ್ರಂ ನಿಧಾಯ ಸ್ಥಂಡಿಲಮದ್ಭಿರ-ಭ್ಯುಕ್ಷ್ಯ ಶಕಲಂ ಭಂಕ್ತ್ವಾ ಆಗ್ನೇಯ್ಯಾಂ ನಿರಸ್ಯ ಪಾಣಿಂ ಪ್ರಕ್ಷಾಲ್ಯ ವಾಗ್ಯತೋ ಭವೇತ್ ॥**

---

ಬೌಧಾಯನ ಸೂತ್ರಗಳ ಪ್ರಕಾರ ಈ ಎರಡು ತಂತ್ರಗಳ ಪೈಕಿ ಯಾವುದನ್ನು ಬೇಕಾದರೂ ಸ್ವೀಕರಿಸಿಕೊಳ್ಳಬಹುದು.

೩. ಅಗ್ನಿಹೋತ್ರಿಕ ತಂತ್ರ:- ಅಗ್ನಿಹೋತ್ರಕ್ಕೆ ಸಂಬಂಧಿಸಿದ ಕರ್ಮಗಳು ಮಾತ್ರ ಇದರಲ್ಲಿ ಇರುವುದರಿಂದ ಇತರ ಕರ್ಮಗಳಲ್ಲಿ ಇದರ ಉಪಯೋಗವೇನೂ ಇರುವುದಿಲ್ಲ. ಆದ್ದರಿಂದ ಈ ತಂತ್ರದ ಕುರಿತು ವಿಸ್ತಾರವಾದ ವಿವರಣೆಯ ಅವಶ್ಯಕತೆ ಇಲ್ಲ.

**ಸ್ಥಾಲೀಪಾಕಪ್ರಯೋಗ:-** ಯಜಮಾನನು ಎರಡು ಸಲ ಆಚಮನಮಾಡಿ, ಪವಿತ್ರ ಧರಿಸಿ ಪ್ರಾಣಾಯಾಮ ಮಾಡಿ, **"ಮಮೋಪಾತ್ತ...ಕರಿಷ್ಯೇ"** ಎಂದು ಸಂಕಲ್ಪಮಾಡಬೇಕು.

ಗೋಮಯಲೇಪದಿಂದ ಶುಚಿಯಾಗಿರುವ ಪ್ರದೇಶದಲ್ಲಿ ಶುದ್ಧವಾದ ಮಣ್ಣಿನಿಂದ ಈಶಾನ್ಯ ದಿಕ್ಕಿನಿಂದ ಆರಂಭಿಸಿ ಉತ್ತರದಿಂದ ಪ್ರದಕ್ಷಿಣಾಕಾರವಾಗಿ ನಾಲ್ಕು ಅಥವಾ ಒಂದು ಅಂಗುಲದಷ್ಟು ಎತ್ತರವಿರುವ ಎಪ್ಪತ್ತೆರಡು ಅಂಗುಲ ಸುತ್ತಳತೆ ಇರುವ ಚೌಕಾಕಾರದ ಸ್ಥಂಡಿಲವನ್ನು ಮಾಡಬೇಕು. ಅಂದರೆ ಒಂದೊಂದು ಬದಿಯು ಹದಿನೆಂಟು ಅಂಗುಲವಿಸ್ತಂತಾಯಿತು. ಹೋಮವನ್ನನುಸರಿಸಿ ಇದಕ್ಕಿಂತ ದೊಡ್ಡ ಸ್ಥಂಡಿಲವನ್ನೂ ಮಾಡಬಹುದು, ಸಣ್ಣದಾಗಬಾರದು, ಮಧ್ಯಭಾಗದಲ್ಲಿ ಎತ್ತರವಾಗಿರುವ ಈ ಸ್ಥಂಡಿಲವನ್ನು ಪ್ರದಕ್ಷಿಣಾಕಾರವಾಗಿ ಗೋಮಯದಿಂದ ಲೇಪಿಸಬೇಕು.

ಆಮೇಲೆ ದಕ್ಷಿಣದಲ್ಲಿ ಎಂಟು, ಉತ್ತರದಲ್ಲಿ ಎರಡು, ಪಶ್ಚಿಮದಲ್ಲಿ ನಾಲ್ಕು, ಪೂರ್ವದಲ್ಲಿ ಅರ್ಧ ಅಂಗುಲದಷ್ಟು ಸ್ಥಳವನ್ನು ಬಿಟ್ಟು ನಿಲ್ಲುವಂತೆ ದಕ್ಷಿಣದಿಂದ ಉತ್ತರಕ್ಕೆ ಪ್ರಾದೇಶ ಮಾತ್ರದ (ಗೋಟುದ್ದ) ಒಂದು ಗೆರೆಯನ್ನೂ, ಆ ಗೆರೆಯ ದಕ್ಷಿಣ ಮತ್ತು ಉತ್ತರ ಭಾಗದಲ್ಲಿ ಅಷ್ಟೇ ಉದ್ದದ, ಅದಕ್ಕೆ ತಾಗದ ಎರಡು ಗೆರೆಗಳನ್ನೂ ಪೂರ್ವಾಭಿಮುಖವಾಗಿ ಎಳೆದು ಅವುಗಳ ಮಧ್ಯದಲ್ಲಿ ಅಂತಹುದೇ ಮೂರು ಗೆರೆಗಳನ್ನೂ ಸಮಿಧೆಯಿಂದ ಎಳೆದು ಆ ಸಮಿಧೆಯನ್ನು ರೇಖೆಗಳ ಮೇಲೆ ಉತ್ತರಕ್ಕೆ ತುದಿ ಇರುವಂತೆ ಇಟ್ಟು ಸ್ಥಂಡಿಲವನ್ನು ನೀರಿನಿಂದ ಪ್ರೋಕ್ಷಿಸಿ ಸಮಿಧೆಯನ್ನು ಮುರಿದು, ಆಗ್ನೇಯ ದಿಕ್ಕಿಗೆ ಎಸೆದು ಮೌನವಾಗಿರಬೇಕು.

**ತತಸ್ತೈಜಸೇನಾಸಂಭವೇ ಮೃಣ್ಮಯೇನ ವಾ ಪಾತ್ರಯುಗ್ಮೇನ ಸಂಪುಟೀಕೃತ್ಯ ಸುವಾಸಿನ್ಯಾ ಶ್ರೋತ್ರಿಯಾಗಾರಾತ್ಸ್ವಗೃಹಾದ್ವಾ ಸಮೃದ್ಧಂ ನಿರ್ಧೂಮಮಗ್ನಿಮಾಹೃತಂ ಸ್ಥಂಡಿಲಾದಾಗ್ನೇಯ್ಯಾಂ ನಿಧಾಯ ॥ ಜುಷ್ಟೋದಮೂನಾ ಆತ್ರೇಯೋ ವಸುಶ್ರುತೋಗ್ನಿಸ್ತ್ರಿಷ್ಟುಪ್ ॥ ಏಹ್ಯಗ್ನೇ ರಾಹೂಗಣೋ ಗೋತಮೋಗ್ನಿಸ್ತ್ರಿಷ್ಟುಪ್ ॥ ಅಗ್ನ್ಯಾವಾಹನೇ ವಿನಿಯೋಗಃ ಓಂ ಜುಷ್ಟೋದಮೂನಾ ಅತಿಥಿರ್ದುರೋಣ ಇಮಂ ನೋ ಯಜ್ಞಮುಪಯಾಹಿವಿದ್ವಾನ್ ॥ ವಿಶ್ವಾ ಅಗ್ನೇ ಅಭಿಯುಜೋವಿಹತ್ಯಾಶತ್ರೂಯತಾಮಾಭರಾಭೋಜನಾನಿ ॥**

---

**ಪ್ರೋಕ್ಷಣ ಕ್ರಮ:- ಉತ್ತಾನೇನ ತು ಹಸ್ತೇನ ಕರ್ತವ್ಯಂ ಪ್ರೋಕ್ಷಣಂ ಭವೇತ್ ॥ ಅವಾಚೀನೇನ ಹಸ್ತೇನ ಕರ್ತವ್ಯಂ ಸ್ಯಾದವ್ರೋಕ್ಷಣಂ ॥ ಮುಷ್ಟೀಕರೋತಿ ಯತ್ತೋಯಮುಭುಕ್ಷಣಮಿತಿ ಸ್ಮೃತಂ ॥ ತಿರ್ಯಗ್ಭೂತೇನ ಹಸ್ತೇನ ಕೃತಂ ಪರ್ಯುಕ್ಷಣಂ ತಥಾ ॥** ಉತ್ತಾನ ಹಸ್ತದಿಂದ, ಅಂಗೈಯಿಂದ, ನೀರು ಸಿಂಪಡಿಸಿದರೆ "**ಪ್ರೋಕ್ಷಣ**"ವೆಂದೂ, ಕೈಯನ್ನು ಕೆಳಮುಖವಾಗಿ ಹಿಡಿದು ಪ್ರೋಕ್ಷಿಸಿದಾಗ "**ಅವ್ರೋಕ್ಷಣ**"ವೆಂದೂ, ಮುಷ್ಟಿಯಿಂದ ಸಿಂಪಡಿಸಿದಾಗ "**ಅಭ್ಯುಕ್ಷಣ**"ವೆಂದೂ ಅಡ್ಡ ಅಡ್ಡವಾಗಿ ಚಿಮುಕಿಸಿದಾಗ "**ಪರ್ಯುಕ್ಷಣ**"ವೆಂದೂ ತಿಳಿಯಬೇಕು.

**ಮೌನದಿಂದ ಇರಬೇಕಾದ ಆವಶ್ಯಕತೆ:-ಸ್ನಾಸ್ಯತೋ ವರುಣಃ ಕಾಂತಿಂ ಜುಹ್ವತೋಪಿ ಶ್ರಿಯಂ ಹರೇತ್ ॥ ಭುಂಜತೋ ಮೃತ್ಯುರಾಯುಷ್ಯಂ ತಸ್ಮಾನ್ಮೌನಂ ತ್ರಿಷು ಸ್ಮೃತಂ ॥** ಸ್ನಾನಮಾಡುವಾಗ ಮೌನಿಯಾಗಿರದಿದ್ದರೆ ವರುಣನು ಕಾಂತಿಯನ್ನೂ, ಹೋಮ ಮಾಡುವಾಗ ಅಗ್ನಿಯು ಸಂಪತ್ತನ್ನೂ, ಊಟಮಾಡುವಾಗ ಮೃತ್ಯುವು ಆಯುಷ್ಯವನ್ನೂ ಹರಣ ಮಾಡುತ್ತಾನೆ. ಆದ್ದರಿಂದ ಈ ಮೂರು ಸಂದರ್ಭಗಳಲ್ಲೂ ಮೌನದಿಂದಿರಬೇಕು.

ಆಮೇಲೆ ಚಿನ್ನ, ಬೆಳ್ಳಿ, ತಾಮ್ರ ಮುಂತಾದ ಲೋಹದ ಪಾತ್ರೆ ಅಥವಾ ಮಣ್ಣಿನ ಪಾತ್ರೆಯಲ್ಲಿ ಅಗ್ನಿಯ ಹೊಗೆ ಇಲ್ಲದ ಉಜ್ವಲವಾದ ಕೆಂಡಗಳನ್ನು ತೆಕ್ಕೊಂಡು ಮತ್ತೊಂದು ಪಾತ್ರೆಯಿಂದ ಅದನ್ನು ಮುಚ್ಚಿ ತಂದು ಸ್ಥಂಡಿಲದ ಆಗ್ನೇಯ ದಿಕ್ಕಿನಲ್ಲಿಟ್ಟು **"ಜುಷ್ಟೋದಮೂನಾ" "ಏಹ್ಯಗ್ನೇ"** ಎಂಬ ಮಂತ್ರಗಳನ್ನು ಹೇಳಿ, ಅಕ್ಷತೆಗಳನ್ನು ಹಾಕಿ ಆವಾಹಿಸಿ, ಮುಚ್ಚಳ ತೆಗೆದು ಪಾತ್ರೆಯನ್ನು ಎರಡು ಕೈಗಳಿಂದಲೂ ಅಗ್ನಿಯು ತನಗೆ ಎದುರಾಗುವಂತೆ ಎತ್ತಿಹಿಡಿದು **"ಓಂ ಭೂರ್ಭುವಃ ಸ್ವಃ"** ಎಂದು ಹೇಳುತ್ತ ಆರು ಗೆರೆಗಳ ಮೇಲೆ ಪ್ರತಿಷ್ಠಾಪಿಸಬೇಕು. ಅಗ್ನಿ ತಂದ ಪಾತ್ರೆಗೆ ಅಕ್ಷತೋದಕವನ್ನು ಹಾಕಿ ಎರಡು ಪಾತ್ರೆಗಳನ್ನೂ ಒಂದುಗೂಡಿಸಿ ಪ್ರೋಕ್ಷಿಸಿದ ಕಟ್ಟಿಗೆಗಳನ್ನಿಟ್ಟು ಬಿದಿರ ಒಟೆಯಿಂದ ಗಾಳಿ ಹಾಕಿ ಅಗ್ನಿಯನ್ನು ಪ್ರಜ್ವಲಿಸಿ ಹೀಗೆ ಧ್ಯಾನಿಸಬೇಕು.

**ಓಂ ವಿಹ್ಯಗ್ನ ಇಹ ಹೋತಾನಿಷೀದಾದಬ್ಧಃ ಸುಪುರ ಏತಾ ಭವಾನಃ ॥ ಅವತಾಂತ್ವಾ ರೋದಸೀ ವಿಶ್ವಮಿನ್ವೇಯಜಾಮಹೇಸೌಮನಸಾಯ ದೇವಾನ್ ॥ ಇತ್ಯಕ್ಷತೈ-ರಾವಾಹ್ಯ ಆಚ್ಛಾದನಂ ದೂರೀಕೃತ್ಯ ॥ ಸಮಸ್ತವ್ಯಾಹ್ಯಾಋತೀನಾಂ ಪರಮೇಷ್ಠೀ ಪ್ರಜಾಪತಿಃ ಪ್ರಜಾಪತಿರ್ಬೃಹತೀ ॥ ಅಗ್ನಿಪ್ರತಿಷ್ಠಾಪನೇ ವಿನಿಯೋಗಃ ॥ ಓಂ ಭೂರ್ಭುವಃ ಸ್ವಃ ॥ ಇತ್ಯಾತ್ಮಾಭಿಮುಖಂ ಪಾಣಿಭ್ಯಾಂ ಷಟ್ಸು ಲೇಖಾಸು ಅಮುಕನಾಮಾನಮಗ್ನಿಂ ಪ್ರತಿಷ್ಠಾಪಯಾಮಿ ಇತ್ಯಗ್ನಿಂ ಪ್ರತಿಷ್ಠಾಪ್ಯ ॥ ಆನೀತಾಗ್ನಿಪಾತ್ರೇ ಅಕ್ಷತೋದಕಂ ಪ್ರಾಸ್ಯ ಪಾತ್ರದ್ವಯಮೇಕೀಕೃತ್ಯ ॥ ಪ್ರೋಕ್ಷಿತೇಂಧನಾನಿ ನಿಕ್ಷಿಪ್ಯ ವೇಣುಧಮನ್ಯಾ ಪ್ರಭೋಧ್ಯ ॥ ಧ್ಯಾಯೇದೇವಂ ॥**

---

**ಉತ್ತಮವಾದ ಅಗ್ನಿ ಯಾವುದು?:- ಉತ್ತಮೋಽರಣಿಜನ್ಯೋಽಗ್ನಿರುತ್ತಮಃ ಸೂರ್ಯ ಕಾಂತಜಃ ॥ ಮಧ್ಯಮಃ ಶ್ರೋತ್ರಿಯಾಗಾರಾದಧಮಃ ಸ್ವಗೃಹಾದಿಜಃ ॥** [ಸಿದ್ಧಾಂತಶೇಖರ] ಅರಣಿ, ಶಮೀವೃಕ್ಷ, ಸೂರ್ಯಕಾಂತ ಇತ್ಯಾದಿಗಳಿಂದ ಸೃಷ್ಟಿಸಿ ತೆಗೆದ ಅಗ್ನಿಯು ಉತ್ತಮವಾದುದು. ತನ್ನ ಮನೆ ಅಥವಾ ಇತರ ಕಡೆಗಳಿಂದ ತಂದ ಅಗ್ನಿಯು ಅಧಮವಾದುದು.

**ಅಗ್ನಿಪ್ರತಿಷ್ಠಾಪನೆ:- ಕುಂಡೇ ವಾ ಸ್ಥಂಡಿಲೇ ವಾಪಿ ತತ್ತನ್ನಾಮ್ನಾ ಹವಿರ್ಭುಜಂ ॥ ವ್ಯಾಹೃತೀಭಿರ್ಮಧ್ಯದೇಶೇ ಯೋಗ್ಯಂ ಸ್ವಾಭಿಮುಖಂ ಕ್ಷಿಪೇತ್ ॥** ಯಜ್ಞಕುಂಡದಲ್ಲಿ ಅಥವಾ ಸ್ಥಂಡಿಲದಲ್ಲಿ **"ಓಂ ಭೂರ್ಭುವಃ ಸ್ವಃ"** ಎಂದು ವ್ಯಾಹೃತಿಗಳನ್ನು ಉಚ್ಚರಿಸಿ ಆಯಾ ಕರ್ಮಕ್ಕೆ ನಿರ್ದೇಶಿಸಿದ ಆಯಾ ಹೆಸರಿನ ಅಗ್ನಿಯನ್ನು ('ಅಮುಕ ನಾಮಾನಮಗ್ನಿಂ' ಎಂಬಲ್ಲಿ ಆ ಹೆಸರನ್ನು ಹೇಳಿ) ತನ್ನ ಮುಂಭಾಗದಲ್ಲಿ ಪ್ರತಿಷ್ಠಾಪಿಸಬೇಕು.

**ಪ್ರೋಕ್ಷಿಸದೇ ಕಟ್ಟಿಗೆಗಳನ್ನು ಅಗ್ನಿಯಲ್ಲಿ ಹಾಕಬಾರದು:- "ನಾಪ್ರೋಕ್ಷಿತಮಿಂಧನ-ಮಗ್ನಾವಾದಧ್ಯಾತ್".**

**ಅಗ್ನಿಪ್ರಜ್ವಲನ ಕ್ರಮ:- ವೇಣೋರಗ್ನೇಃ ಪ್ರಸೂತತ್ವಾದ್ವೇಣುರಗ್ನಿಶ್ಚ ಪಾವನೌ ॥ ತಸ್ಮಾದ್ವೇಣುಧಮನ್ಯೈವ ಧಮೇದಗ್ನಿಂ ವಿಚಕ್ಷಣಃ ॥ "ನ ವೇಣುನಾ ಅಗ್ನಿಂ ಸ್ಪೃಶೇತ್"** ಬಿದಿರಿನಿಂದ ಅಗ್ನಿಯು ಉತ್ಪನ್ನವಾಗುವುದರಿಂದ ವೇಣು ಮತ್ತು ಅಗ್ನಿ ಇವೆರಡೂ ಪವಿತ್ರ ವಾಗಿವೆ. ಮಾತ್ರವಲ್ಲ ಊದುವಾಗ ಬಿದಿರಕೊಳವೆಯನ್ನು ಅಗ್ನಿಗೆ ಮುಟ್ಟಿಸಬಾರದು. **"ವಸ್ತ್ರೇಣ ವಾಥ ಪರ್ಣೇನ ಪಾಣಿಶೂರ್ಪಾಸ್ಯದಾರುಭಿಃ ॥ ನ ಕುರ್ಯಾದಗ್ನಿಧಮನಂ ನಕುರ್ಯಾದ್ವ್ಯಜನಾದಿನಾ"** ॥ ವಸ್ತ್ರ, ಎಲೆ, ಕಟ್ಟಿಗೆತುಂಡು, ಕೈ, ಮೊರ, ಬಾಯಿ, ಬೀಸಣಿಗೆ ಮುಂತಾದವುಗಳಿಂದ ಅಗ್ನಿಯನ್ನು ಊದಬಾರದು. **"ಚತ್ವಾರಿಶೃಂಗಾ ..."** ಎಂಬಲ್ಲಿಂದ

ಚತ್ವಾರಿಶೃಂಗಾ ಗೋತಮೋ ವಾಮದೇವೋಽಗ್ನಿಸ್ತ್ರಿಷ್ಟುಪ್ ॥ ಅಗ್ನಿಮೂರ್ತಿ ಧ್ಯಾನೇ ವಿನಿಯೋಗಃ ॥ ಓಂ ಚತ್ವಾರಿಶೃಂಗಾತ್ರಯೋ ಅಸ್ಯಪಾದಾದ್ವೇ ಶೀರ್ಷೇ ಸಪ್ತಹಸ್ತಾಸೋ ಅಸ್ಯ ॥ ತ್ರಿಧಾಬದ್ಧೋ ವೃಷಭೋರೋರವೀತಿ ಮಹೋದೇವೋ ಮರ್ತ್ಯಾ ಆವಿವೇಶ ॥ ಸಪ್ತಹಸ್ತಶ್ಚತುಃಶೃಂಗಃ ಸಪ್ತಜಿಹ್ವೋ ದ್ವಿಶೀರ್ಷಕಃ ॥ ತ್ರಿಪಾತ್ಪ್ರಸನ್ನವದನಃ ಸುಖಾಸೀನಃ ಶುಚಿಸ್ಮಿತಃ ॥ ಸ್ವಾಹಾಂ ತು ದಕ್ಷಿಣೇ ಪಾರ್ಶ್ವೇ ದೇವೀಂ ವಾಮೇ ಸ್ವಧಾಂ ತಥಾ ॥ ಬಿಭ್ರದ್ದಕ್ಷಿಣ ಹಸ್ತೈಸ್ತು ಶಕ್ತಿಮನ್ನಂ ಸ್ರುಚಂ ಸ್ರುವಂ ॥ ತೋಮರಂ ವ್ಯಜನಂ ವಾಮೈಃ ಘೃತಪಾತ್ರಂ ಚ ಧಾರಯನ್ ॥ ಮೇಷಾರೂಢೋ ಜಟಾಬದ್ಧೋ ಗೌರವರ್ಣೋ ಮಹೌಜಸಃ ॥ ಧೂಮ್ರಧ್ವಜೋ ಲೋಹಿತಾಕ್ಷಃ ಸಪ್ತಾರ್ಚಿಃ ಸರ್ವಕಾಮದಃ ॥ ಆತ್ಮಾಭಿಮುಖಮಾಸೀನ ಏವಂ ರೂಪೋ ಹುತಾಶನಃ ॥ [ಅಥಾಗ್ನಿಮೂರ್ತಿಂ ವಕ್ಷ್ಯಾಮಿ ಸರ್ವಾಭೀಷ್ಟಪ್ರದಾಯಕಂ ॥ ಏಕದೇಹಂ ದ್ವಿಶೀರ್ಷಸ್ಕಂ ಜಟಾಮುಕುಟಮಂಡಿತಂ ॥ ಸುದೀಪ್ತಸ್ವರ್ಣವಪುಷಂ ಶಶಾಂಕಶಕಲಾನ್ವಿತಂ ॥ ಚತುಃಶ್ರೋತ್ರಂ ದ್ವಿನಾಸಂ ಚ ಷಡಕ್ಷಂ ಪಿಂಗಲಪ್ರಭಂ ॥ ಆಸ್ಯದ್ವಯಂ ಸುತಾಮ್ರೋಷ್ಠಂ ಸಪ್ತ ಜಿಹ್ವಾಸಮಾವೃತಂ ॥ ದಕ್ಷಿಣಾಸ್ಯೇ ಚತುರ್ಜಿಹ್ವಾಸ್ತಿಸ್ರೋ ವೈ ವಾಮವಕ್ತ್ರಕೇ ॥ ಪ್ರಸನ್ನಂ ಸುಸ್ಮಿತಂ ಶಾಂತಂ ಸಪ್ತಹಸ್ತಸಮನ್ವಿತಂ ॥ ದಕ್ಷಿಣೇ ಚ ಚತುರ್ಹಸ್ತಂ ವಾಮಭಾಗೇ ತ್ರಿಹಸ್ತಕಂ ॥ ಸ್ರುಕ್ ಸ್ರುವೌ ಶಕ್ತಿಮಿಧ್ಮಂ ಚ ಧಾರಯನ್ ದಕ್ಷಿಣೈರ್ಭುಜೈಃ ॥ ಧಾರಯನ್ತೋಮರಂ ವಾಮೇ ವ್ಯಜನಂ ಘೃತಪಾತ್ರಕಂ ॥ ತ್ರಿಮೇಖಲಂ ತ್ರಿಪಾದಂ ಚ ಮೇಷಾರೂಢಂ ವರಪ್ರದಂ ॥ ಯಜ್ಞಸೂತ್ರಧರಂ ಸೌಮ್ಯಂ ಸರ್ವಾಭರಣಭೂಷಿತಂ ॥ ರಕ್ತಾಂಬರಧರಂ ದೇವಂ ರಕ್ತಮಾಲಾವಿಭೂಷಿತಂ ॥ ರಕ್ತಚಂದನಲಿಪ್ತಾಂಗಂ ಜ್ವಾಲಾಕೋಟಿಸಮಪ್ರಭಂ ॥ ಸ್ವಾಹಾ ಚ ದಕ್ಷಿಣೇ ಪಾರ್ಶ್ವೇ ದೇವೀ ವಾಮೇ ಸ್ವಧಾ

---

"ಏವಂ ರೂಪೋ ಹುತಾಶನಃ" [ಅಥಾಗ್ನಿ... ಸುವರದೋ ಭವ] ಎಂಬಲ್ಲಿ ವರೇಗೆ ಕೈ ಜೋಡಿಸಿ ಅಗ್ನಿಮೂರ್ತಿಯ ಧ್ಯಾನಮಾಡಬೇಕು.

ಭವೇತ್ ॥ ಏವಂ ಸಂಚಿತ್ಯ ಮನಸಾ ವಹ್ನಿಮಧ್ಯೇ ತಮಾಹ್ವಯೇತ್ ॥ ಅಗ್ನೇ ವೈಶ್ವಾನರ ಶಾಂಡಿಲ್ಯಗೋತ್ರ ಮೇಷಧ್ವಜ ಪ್ರಾಙ್ಮುಖೋ ಮಮ ಸಮ್ಮುಖೋ ಭವ ॥ ಸುಪ್ರತಿಷ್ಠಿತೋ ಭವ ॥ ಸುಪ್ರಸನ್ನೋ ಭವ ॥ ಸುವರದೋ ಭವ ॥]

ತತೋ ಯದಿ ಸಮಿಧಾದೌ ಸಮಾರೋಪಿತೋಗ್ನಿಸ್ತರ್ಹಿ ಪ್ರತ್ಯವರೋ-ಹಣಂ ಕಾರ್ಯಂ ॥ ತಚ್ಚೈವಂ ॥ ಪ್ರತ್ಯವರೋಹೇತ್ಯಸ್ಯ ಹಿರಣ್ಯಗರ್ಭೋಽಗ್ನಿಸ್ತ್ರಿಷ್ಟುಪ್ ಸಮಾರೋಪಿತಸ್ಯಾಗ್ನೇಃಪ್ರತ್ಯವರೋಹಣೇ ವಿನಿಯೋಗಃ ॥ ಓಂ ಪ್ರತ್ಯವರೋಹ ಜಾತವೇದಃ ಪುನಸ್ತ್ವಂ ದೇವೇಭ್ಯೋ ಹವ್ಯಂ ವಹನಃ ಪ್ರಜಾ-ನನ್ ॥ ಪ್ರಜಾಂ ಪುಷ್ಟಿಂ ರಯಿಮಸ್ಮಾಸುಧೇಹ್ಯಥಾ ಭವ ಯಜಮಾನಾಯ-ಶಂಯೋಃ ॥ ಇತಿ ಮಂತ್ರೇಣ ಸಮಾರೋಪಿತಾಗ್ನಿಸಮಿಧಂ ಸ್ಥಾಪಿತೇಽಗ್ನೌ ಪ್ರಕ್ಷಿಪೇದಿತಿ ॥

ಸಮಿದ್ದ್ವಯಮಾದಾಯ ॥ ತತ್ರ ದೇವತಾಪರಿಗ್ರಹಾರ್ಥಮನ್ವಾಧಾನಂ ಕರಿಷ್ಯೇ ॥ ಅಸ್ಮಿನ್ ಅನ್ವಾಹಿತೇಽಗ್ನೌ ಜಾತವೇದಸಮಗ್ನಿಮಿಧ್ಮೇನ ಪ್ರಜಾಪತಿಂ ಪ್ರಜಾಪತಿಂ ಚಾಘಾರದೇವತೇ ಆಜ್ಯೇನ ॥ ಅಗ್ನೀಷೋಮೌ ಚಕ್ಷುಷೀ ಆಜ್ಯೇನ ॥ ಅತ್ರ ಪ್ರಧಾನಂ ॥ (ಅಗ್ನಿಮಗ್ನೀಷೋಮೌ ಚ ಪ್ರಧಾನದೇವತೇ ಚರುದ್ರವ್ಯೇಣ ॥ ದರ್ಶೇತು ಅಗ್ನಿಮಿಂದ್ರಾಗ್ನೀ ಚ ಪ್ರಧಾನದೇವತೇ ಚರುದ್ರವ್ಯೇಣ ಇತಿ ವಿಶೇಷಃ) ॥

ಶೇಷೇಣ ಸ್ವಿಷ್ಟಕೃತಮಗ್ನಿಂ ಇಧ್ಮಸನ್ನಹನೇನ ರುದ್ರಂ ಅಯಾಸಮಗ್ನಿಂ ದೇವಾನ್ ವಿಷ್ಣುಮಗ್ನಿಂ ವಾಯುಂ ಸೂರ್ಯಂ ಪ್ರಜಾಪತಿಂ ಚೈತಾಃ ಪ್ರಾಯಶ್ಚಿತ್ತ ದೇವತಾ ಆಜ್ಯೇನ ಜ್ಞಾತಾಜ್ಞಾತದೋಷನಿಬರ್ಹಣಾರ್ಥಂ ತ್ರಿವಾರಮಗ್ನಿಂ

---

**ಅಗ್ನಿಪ್ರತ್ಯವರೋಹಣ ಕ್ರಮ:-** ಸಮಿಧೆಗಳ ಮೇಲೆ ಅಗ್ನಿಯನ್ನು ಆವಾಹಿಸಿ ಇಡುವ ಹಾಗೂ ಅದನ್ನು ಒಂದೆಡೆಯಿಂದ ಇನ್ನೊಂದು ಸ್ಥಳಕ್ಕೆ ಕೊಂಡೊಯ್ಯುವ ಕ್ರಮ ಉಂಟು. ಹಾಗೆ ಮಾಡಿರುವ ಸಂದರ್ಭದಲ್ಲಿ ಹಾಗೆ ಸಮಿಧೆಗಳ ಮೇಲೆ ಆರೋಪಿಸಿದ ಅಗ್ನಿಯನ್ನು "ಪ್ರತ್ಯವರೋಹಣ" ಮಾಡಬೇಕು, ಇಳಿಸಬೇಕು. ಅದರ ಕ್ರಮ ಹೀಗಿದೆ. ಅಗ್ನಿಯನ್ನು

**ಮರುತಶ್ಚಾಜ್ಯೇನ ವಿಶ್ವಾನ್ ದೇವಾನ್ ಸಂಸ್ರಾವೇಣ ಯಕ್ಷ್ಯೇ ॥ ಅಂಗ ದೇವತಾಃ ಪ್ರಧಾನದೇವತಾಃ ಸರ್ವಾಃ ಸನ್ನಿಹಿತಾಸ್ಸಂತು ॥ ಏವಂ ಸಾಂಗೋ-ಪಾಂಗೇನ ಕರ್ಮಣಾ ಸದ್ಯೋ ಯಕ್ಷ್ಯೇ ॥ ಸಮಸ್ತವ್ಯಾಹೃತೀನಾಂ ಪರಮೇಷ್ಠೀ ಪ್ರಜಾಪತಿಃ ಪ್ರಜಾಪತಿರ್ಬೃಹತೀ ಅನ್ವಾಧಾನಸಮಿದ್ಧೋಮೇ ವಿನಿಯೋಗಃ ॥ ಓಂ ಭೂರ್ಭುವಃ ಸ್ವಃ ಸ್ವಾಹಾ ॥ ಪ್ರಜಾಪತಯ ಇದಂ ನಮಮ ॥**

**ಅಗ್ನ್ಯಾಯತನಾದಷ್ಟಾಂಗುಲಪರಿಮಿತೇ ದೇಶೇ ಐಶಾನೀಂ ದಿಶಮಾರಭ್ಯ ಪ್ರದಕ್ಷಿಣಂ ಸಮಂತಾತ್ಸೋದಕೇನ ಪಾಣಿನಾ ತ್ರಿಃ ಪರಿಮೃಜ್ಯ ಪೂರ್ವಮುಪರಿ-ನಿಹಿತ ದರ್ಭೈಃ ದಶಾಂಗುಲಮಿತೇ ದೇಶೇ ಪ್ರಾಚ್ಯಾದಿಷು ಪರಿಸ್ತೃಣೀಯಾತ್ ॥ ತತ್ರ ಪ್ರಾಚ್ಯಾಂ ಪ್ರತೀಚ್ಯಾಂ ಚೋದಗಗ್ರಾ ದರ್ಭಾಃ । ಅವಾಚ್ಯಾಮುದೀಚ್ಯಾಂಚ ಪ್ರಾಗಗ್ರಾಃ ॥ ಪೂರ್ವಪಶ್ಚಾತ್ಪರಿಸ್ತರಣಯೋರುಪರಿ ದಕ್ಷಿಣಪರಿಸ್ತರಣಂ ಉತ್ತರ-ಪರಿಸ್ತರಣಂ ತು ತದಗ್ರಯೋರಧಸ್ತಾತ್ ॥ ತೇ ಚ ದರ್ಭಾ ಅನಿಯತಸಂಖ್ಯಾ ಏಕೈಕಸ್ಯಾಂ ದಿಶಿ ಚತ್ವಾರಶ್ಚತ್ವಾರ ಇತಿ ಷೋಡಶ ವಾ ॥ ತತೋಽಗ್ನೇರ್ದಕ್ಷಿ-ಣತೋ ಬ್ರಹ್ಮಾಸನಾರ್ಥಂ ಉತ್ತರತಶ್ಚ ಪಾತ್ರಾಸಾದನಾರ್ಥಂ ಕಾಂಶ್ಚಿತ್ಪ್ರಾಗ-ಗ್ರಾನ್ ದರ್ಭಾನಾಸ್ತೃಣೀಯಾತ್ ॥ ಅಗ್ನೇರೈಶಾನತಃ ತ್ರಿರಂಭಸಾ ಪರಿಷಿಚ್ಯ ॥**

---

ಆವಾಹಿಸಿದ ಸಮಿಧೆಗಳನ್ನು ಕೈಯಲ್ಲಿ ಹಿಡಿದು **"ಪ್ರತ್ಯವರೋಹ"** ಎಂಬ ಮಂತ್ರವನ್ನು ಹೇಳಿ ಕುಂಡದಲ್ಲಿ ಅಥವಾ ಸ್ಥಂಡಿಲದಲ್ಲಿ ಸ್ಥಾಪಿಸಿದ ಅಗ್ನಿಯಲ್ಲಿ ಅವುಗಳನ್ನು ಸಮರ್ಪಿಸಬೇಕು.

ಆಮೇಲೆ ಬಲಮೊಣಕಾಲಿನ ಮೇಲೆ ಎಡಗೈಯನ್ನಿಟ್ಟು ಅದರ ಮೇಲೆ ಬಲಗೈಯಿಂದ ಎರಡು ಸಮಿಧೆಗಳನ್ನು ಹಿಡಿದು, **"ತತ್ರ ದೇವತಾಪರಿಗ್ರಹಾರ್ಥಂ... ಚಕ್ಷುಷೀ ಆಜ್ಯೇನ'** ಎಂದು ಹೇಳಿ ಆಯಾ ಕರ್ಮಾಂಗವಾಗಿ ಮಾಡುವ ಹೋಮದ ಪ್ರಧಾನದೇವತೆ, ಹವನದ್ರವ್ಯ ಮತ್ತು ಆಹುತಿಗಳ ಸಂಖ್ಯೆಯನ್ನು ಹೇಳಬೇಕು. ಬಳಿಕ **"ಶೇಷೇಣ ಸ್ವಿಷ್ಟಕೃತ... ಇದಂ ನಮಮ"** ಎಂದಿಷ್ಟು ಹೇಳಿ ಆಸಮಿಧೆಗಳನ್ನು ಅಗ್ನಿಯಲ್ಲಿ ಆಹುತಿ ಕೊಡಬೇಕು. ಆವರಣದಲ್ಲಿ ಕೊಟ್ಟ ಪ್ರಧಾನದೇವತೆ ಸ್ಥಾಲೀಪಾಕಕ್ಕೆ ಮಾತ್ರ ಸಂಬಂಧಿಸಿದ್ದು ಇತರ ಹೋಮಗಳಲ್ಲಿ ಇವನ್ನು ಹೇಳುವ ಆವಶ್ಯಕತೆ ಇಲ್ಲ.

**"ಇಧ್ಮಸನ್ನಹನ"** ಎಂದರೆ ಇಧ್ಮವನ್ನು ಕಟ್ಟುವ ದರ್ಭೆಯ ಹಗ್ಗದ ಹೆಸರು. ಅದು ಈ ಪ್ರಕಾರವಾಗಿರಬೇಕು. ಸಾಧಾರಣ ಗೇಣುದ್ದದ ಮೂರು ಮೂರು ದರ್ಭೆಯ ತುಂಡುಗಳನ್ನು ಒಟ್ಟಿಗೆ ತಿರುವಬೇಕು. ಹಾಗೆ ತಿರುವಿಟ್ಟ ಆ ಮೂರನ್ನು ಒಟ್ಟುಸೇರಿಸಿ ತಿರುವಿ ಹಗ್ಗದಂತೆ ಮಾಡಬೇಕು. ತುದಿಮುಟ್ಟುವಾಗ ಪುನಃ ಮೂರು ಮೂರು ದರ್ಭೆಗಳನ್ನು ತೆಗೆದುಕೊಂಡು ಸೇರಿಸಿ ತಿರುವುತ್ತ ಹಗ್ಗದಂತೆ ಹೊಸೆಯಬೇಕು. ಹೀಗೆ ಒಟ್ಟು ಮೂವತ್ತಾರು ದರ್ಭೆಗಳಿರಬೇಕು. ಹೀಗೆ ಮಾಡಿದಾಗ ಮೂರು ಕಡೆ ಸಂದುಗಳಿದ್ದ ತ್ರಿಃಸಂಧಾನ ರಜ್ಜು ಆಗುತ್ತದೆ. ಈ ರಜ್ಜುವಿನಿಂದ ಹದಿನೈದು ಸಮಿಧೆಗಳನ್ನು ಒಟ್ಟಿಗೆ ಇಟ್ಟು ಕಟ್ಟಬೇಕು. ಅದನ್ನು ಇಧ್ಮವೆಂದು ಕರೆಯುತ್ತಾರೆ.

**ಉತ್ತರಾಸ್ತೀರ್ಣೇಷು ದರ್ಭೇಷು ದಕ್ಷಿಣಸವ್ಯಪಾಣಿಭ್ಯಾಂ ಕ್ರಮೇಣ ಚರುಸ್ಥಾಲೀ ಪ್ರೋಕ್ಷಣ್ಯೌ ದರ್ವೀಸ್ರುವೌ ಪ್ರಣೀತಾಜ್ಯಪಾತ್ರೇ ಇಧ್ಮಾಬರ್ಹಿಷೀ ಶೂರ್ಪಕೃಷ್ಣಾಜಿನೇ ಉಲೂಖಲಮುಸಲೇ ಚೇತಿ ದ್ವೇ ದ್ವೇ ಉದಗಪವರ್ಗಂ ಪ್ರಾಕ್ಸಂಸ್ಥಂಚ ನ್ಯುಬ್ಜಾನ್ಯಾ ಸಾದಯೇತ್ ॥ ಆಜ್ಯಮಾತ್ರಹೋಮೇತು ಪ್ರೋಕ್ಷಣೀಸ್ರುವೌ ಪ್ರಣೀತಾಜ್ಯಪಾತ್ರೇ ಇಧ್ಮಾಬರ್ಹೀಚೇತ್ಯೇತಾವತಾಮೇವಾಸಾದನಂ ॥**

---

ಪ್ರಾದೇಶಪ್ರಮಾಣ ಉದ್ದವಿರುವ ಎಂಭತ್ತೆಂಟು ಅಥವಾ ಒಂದು ಮುಷ್ಟಿ ದರ್ಭೆಗಳನ್ನು ಒಟ್ಟುಸೇರಿಸಿ ದರ್ಭೆಗಳಿಂದ ಕಟ್ಟಿ ಬರ್ಹಿಯನ್ನು ಮಾಡಿಕೊಳ್ಳಬೇಕು. **(ಅಷ್ಟಾಶೀತಿಃ ಕುಶಾಃ ಬರ್ಹಿರಿಧ್ಮ: ಪಂಚದಶ ಸ್ಮೃತಃ) "ಸದ್ಯೋಯಕ್ಷ್ಯೇ..."** ಮರುದಿನ ಹೋಮಮಾಡುವುದಾದರೆ **"ಶ್ವೋ ಯಕ್ಷ್ಯೇ"** ಎಂದು ಹೇಳಬೇಕು. ಇದಾದ ಮೇಲೆ **"ಸಮಸ್ತವ್ಯಾಹೃತೀನಾಂ...ಸ್ವಾಹಾ ನಮಮ"** ಎಂದು ಆ ಸಮಿಧೆಗಳನ್ನು ಹೋಮಮಾಡಬೇಕು.

ಸ್ಥಂಡಿಲ ಅಥವಾ ಕುಂಡದಿಂದ ಎಂಟು ಅಂಗುಲ ದೂರದಲ್ಲಿ ಈಶಾನ್ಯ ದಿಕ್ಕಿನಿಂದ ತೊಡಗಿ ಪ್ರದಕ್ಷಿಣಾಕಾರವಾಗಿ ಮೂರು ಸಲ ನೀರು ಚಿಮುಕಿಸಿ ಕೈಯಿಂದ ಉಜ್ಜಿ ಸ್ವಚ್ಛ ಮಾಡಬೇಕು. ಆಮೇಲೆ ಹತ್ತು ಅಂಗುಲಿ ಹೊರವಲಯದಲ್ಲಿ ಪರಿಸ್ತರಣಗಳನ್ನು ಹಾಕಬೇಕು. ಪೂರ್ವ ಮತ್ತು ಪಶ್ಚಿಮದಲ್ಲಿ ಇಡುವ ದರ್ಭೆಗಳ ತುದಿಗಳು ಉತ್ತರಕ್ಕಿರಬೇಕು. ಉತ್ತರ ಮತ್ತು ದಕ್ಷಿಣಕ್ಕಿರುವ ದರ್ಭೆಗಳ ತುದಿಗಳು ಪೂರ್ವಕ್ಕಿರಬೇಕು. ಪೂರ್ವ ಮತ್ತು ಪಶ್ಚಿಮ ಪರಿಸ್ತರಣ ದರ್ಭೆಗಳ ಬುಡಗಳ ಮೇಲೆ ದಕ್ಷಿಣ ಪರಿಸ್ತರಣ ಇರಬೇಕು. ಇವುಗಳ ತುದಿಗಳ ಕೆಳಭಾಗದಲ್ಲಿ ಉತ್ತರ ಪರಿಸ್ತರಣ ಇರಬೇಕು. ಪರಿಸ್ತರಣ ಹಾಕುವ ದರ್ಭೆಗಳ ಸಂಖ್ಯೆಯು ಇಂತಿಷ್ಟೇ ಎಂಬ ನಿಯಮವಿಲ್ಲ. ಆದರೂ ಬದಿಯಲ್ಲಿ ಕಡಿಮೆ ಎಂದರೆ ನಾಲ್ಕು ನಾಲ್ಕರಂತೆ ಒಟ್ಟು ಹದಿನಾರು ದರ್ಭೆಗಳು ಇರಲೇಬೇಕು.

ಬಳಿಕ ಅಗ್ನಿಯ ದಕ್ಷಿಣದಿಕ್ಕಿನಲ್ಲಿ ಬ್ರಹ್ಮಾಸನಕ್ಕೂ ಉತ್ತರದಲ್ಲಿ ಪಾತ್ರೆಗಳನ್ನು ಇಡುವುದಕ್ಕೂ ಉದ್ದವಾಗಿರುವ ಕೆಲವು ದರ್ಭೆಗಳನ್ನು ಹರಡಿ ಇಡಬೇಕು. ಇಷ್ಟುಮಾಡಿ ಅಗ್ನಿಯ ಈಶಾನ್ಯದಿ ಕ್ಕಿನಿಂದ ಮೂರು ಸಲ ಸುತ್ತಲೂ ನೀರು ಚಿಮುಕಿಸಬೇಕು. ಉತ್ತರ ದಿಕ್ಕಿನಲ್ಲಿ ಹಾಸಿದ ದರ್ಭೆಗಳ ಮೇಲೆ ಕ್ರಮವಾಗಿ ಮೊದಲು ಬಲಗೈಯಿಂದ ಆಮೇಲೆ ಎಡ ಕೈಯಿಂದ **ಚರುಸ್ಥಾಲೀ ಪ್ರೋಕ್ಷಣೀ** ...ಯಿಂದ ತೊಡಗಿ **ಉಲೂಖಲ ಮುಸಲೇ**ಯ ವರೆಗೆ ಪಾತ್ರೆಗಳನ್ನು ಕೆಳಮುಖವಾಗಿ ಇಡಬೇಕು. ಕೇವಲ ಆಜ್ಯಮಾತ್ರದ ಹೋಮವಾದರೆ ದರ್ವೀ-ಸ್ರುವ; ಪ್ರಣೀತಾ-ಆಜ್ಯಪಾತ್ರ; ಇಧ್ಮಾ-ಬರ್ಹಿ ಮಾತ್ರವಿಟ್ಟರೆ ಸಾಕು.

**ಸಮಿಧೆಯನ್ನು ಹಿಡಿಯುವ ಕ್ರಮ:- "ಮೂಲ ಮಧ್ಯಮ ಮಧ್ಯೇನ ಸಮಿದ್ಧೋಮಸ್ಯ ಲಕ್ಷಣಂ"** ಸಮಿತ್ತುಗಳ ಮೂಲ ಮತ್ತು ಮಧ್ಯ ಇವೆರಡರ ಮಧ್ಯಭಾಗದಲ್ಲಿ ಹಿಡಿದು ಹೋಮಮಾಡಬೇಕು.

**"ತ್ರಿಭಿಶ್ಚೈವ ಚತುರ್ಭಿಶ್ಚ ಪಂಚಭಿಃ ಷಡ್ಭಿರಂಗುಲೈಃ ॥ ಸೇಚನಂ ಪರಿಧೀಂಶ್ಚೈವ ಸ್ತರಣಂ ಪೂಜನಂ ತಥಾ ॥** ಕುಂಡ ಅಥವಾ ಸ್ಥಂಡಿಲದ ಮೂರು ಅಂಗುಲಗಳಷ್ಟು ಹೊರಗೆ ಪರಿಷಿಂಚನ ಮಾಡಬೇಕು. ನಾಲ್ಕು ಅಂಗುಲ ಹೊರಭಾಗದಲ್ಲಿ ಯಜ್ಞದಲ್ಲಿ ಉಪಯೋಗಿಸುವ

ತತಃ ಪ್ರೋಕ್ಷಣೀಪಾತ್ರಮುತ್ತಾನಂ ಕೃತ್ವಾ ತತ್ರಾನಂತರ್ಗರ್ಭಿತಸಾಗ್ರ ಸಮಸ್ಥೂಲ ಪ್ರಾದೇಶಮಾತ್ರಕುಶದ್ವಯರೂಪೇ ಪವಿತ್ರೇ ನಿಧಾಯ ಶುದ್ಧಾಭಿರದ್ಭಿಃ ತತ್ಪಾತ್ರಂ ಪೂರಯಿತ್ವಾ ಗಂಧಪುಷ್ಪಾದಿ ಕ್ಷಿಪ್ತ್ವಾ ಹಸ್ತಯೋರಂಗುಷ್ಠೋಪಕನಿಷ್ಠಿಕಾಭ್ಯಾಂ ಉತ್ತಾನಾಭ್ಯಾಂ ಪಾಣಿಭ್ಯಾಂ ಉದಗಗ್ರೇ ಪೃಥಕ್ ಪವಿತ್ರೇ ಧೃತ್ವಾ ಅಪಸ್ತ್ರಿರುತ್ಪೂಯ ಪಾತ್ರಾಣ್ಯುತ್ತಾನಾನಿ ಕೃತ್ವಾ ಇಧ್ಮಂ ಚ ವಿಸ್ರಸ್ಯ ಸರ್ವಾಣಿ ಪಾತ್ರಾಣಿ ತ್ರಿಃ ಪ್ರೋಕ್ಷೇತ್ ॥ ತಾ ಆಪಃ ಕಿಂಚಿತ್ಕಮಂಡಲೌ ಕ್ಷಿಪೇದಿತ್ಯೇಕೇ ॥

ತತೋ ಬ್ರಹ್ಮಾ ಅಗ್ನಿಂ ಪರೀತ್ಯ ದಕ್ಷಿಣತಃ ಉದಙ್ಮುಖಃ ಸ್ಥಿತ್ವಾ ಆಸನಾರ್ಥದರ್ಭೇಷು ದಕ್ಷಿಣಭಾಗಸ್ಥಮೇಕಂ ದರ್ಭಮಂಗುಷ್ಠಾನಾಮಿಕಾಭ್ಯಾಂ ಗೃಹೀತ್ವಾ ನಿರಸ್ತಃ ಪರಾವಸುಃ ಇತಿ ನೈಋತ್ಯಾಂ ನಿರಸ್ಯ ಆಪಃ ಸ್ಪೃಷ್ಟ್ವಾ ॥ ಇದಮಹಮರ್ವಾವಸೋಃ ಸದನೇ ಸೀದಾಮಿ ॥ ಇತ್ಯುಕ್ತ್ವಾ ಉದಙ್ಮುಖ ಏವ

---

ಯಾವುದಾದರೂ ಒಂದು ಯಜ್ಞೀಯವೃಕ್ಷದ, ಬುಡದಲ್ಲಿ ಸಪುರವಾಗಿದ್ದು ತುದಿಯಲ್ಲಿ ಅಗಲವಿರುವ ಮೂವತ್ತಾರು ಅಂಗುಲ ಉದ್ದದ ಮೂರು ತುಂಡುಗಳನ್ನು ತೆಕ್ಕೊಂಡು ದಕ್ಷಿಣ, ಪಶ್ಚಿಮ ಮತ್ತು ಉತ್ತರ ದಿಕ್ಕುಗಳಲ್ಲಿ ಪರಿಧಿಯನ್ನು ಹಾಕಬೇಕು. ಪಶ್ಚಿಮದಲ್ಲಿ ಇಡುವ ತುಂಡಿನ ಅಗಲವಾದ ತುದಿಯು ಉತ್ತರಕ್ಕೂ ದಕ್ಷಿಣದ ಮತ್ತು ಉತ್ತರದ ತುಂಡಿನ ಆ ಭಾಗವು ಪೂರ್ವದ ಕಡೆಗೂ ಇರುವಂತೆ ಪರಿಧಿಯನ್ನು ಹಾಕಿ ಕೊಳ್ಳಬೇಕು. ಐದಂಗುಲಗಳಷ್ಟು ಹೊರಭಾಗದಲ್ಲಿ ಪರಿಸ್ತರಣಗಳನ್ನೂ ಆರಂಗುಲ ದೂರದಲ್ಲಿ ಅರ್ಚನೆಯನ್ನೂ ಮಾಡಬೇಕು. ಹೋಮಸಂಖ್ಯೆಯು ಹೆಚ್ಚಾಗಿದ್ದು ದೊಡ್ಡ ಹೋಮವಾದರೆ ಹತ್ತು ಅಂಗುಲ ಹೊರಗೆ ಪರಿಸ್ತರಣವಿರಬೇಕೆಂದು ಹೇಳಲಾಗಿದೆ. ಪರಿಸ್ತರಣ ಸುಟ್ಟುಹೋದರೆ ಪ್ರಾಯಶ್ಚಿತ್ತ ಮಾಡಬೇಕಾಗುವುದು.

ಆಮೇಲೆ ಪ್ರೋಕ್ಷಣೀಪಾತ್ರವನ್ನು ತೆಗೆದು ಅಂಗಾತ ಮಾಡಿಟ್ಟು ಅದರ ಮೇಲೆ (ಗರ್ಭವಿಲ್ಲದ) ಪ್ರಾದೇಶಪ್ರಮಾಣ ಉದ್ದವಿರುವ, ತುದಿಗಳುಳ್ಳ ಎರಡು ದರ್ಭೆಯ ತುಂಡುಗಳನ್ನು ಇಡಬೇಕು. ಅದರಲ್ಲಿ ಶುದ್ಧವಾದ ನೀರನ್ನು ತುಂಬಬೇಕು. ಗಂಧಾಕ್ಷತೆ ಪುಷ್ಪಗಳನ್ನು ಹಾಕಬೇಕು. ಬಳಿಕ ಉತ್ತಾನ ಹಸ್ತಗಳ ಅಂಗುಷ್ಠ ಮತ್ತು ಅನಾಮಿಕಾ ಬೆರಳುಗಳಿಂದ ಆ ಎರಡು ದರ್ಭೆಗಳನ್ನು ಬೇರೆ ಬೇರೆಯಾಗಿ ಉತ್ತರಕ್ಕೆ ತುದಿ ಇರುವಂತೆ ಹಿಡಿದು ಪಾತ್ರೆಯಲ್ಲಿರುವ ನೀರನ್ನು ಮೂರುಸಲ ಆಲೋಡನ ಮಾಡಬೇಕು. ಬಳಿಕ ಎಲ್ಲ ಪಾತ್ರೆಗಳನ್ನೂ ಅಂಗಾತವಾಗಿಟ್ಟು, ಇಧ್ಮವನ್ನೂ ಬಿಡಿಸಿಟ್ಟು ಎಲ್ಲವನ್ನೂ ಮೂರುಸಲ ಪ್ರೋಕ್ಷಿಸಬೇಕು. ಪ್ರೋಕ್ಷಣೀಪಾತ್ರೆಯ ಸ್ವಲ್ಪ ನೀರನ್ನು ಕಮಂಡಲುವಿನಲ್ಲಿ ಹಾಕಬೇಕೆಂದು ಕೆಲವರ ಅಭಿಪ್ರಾಯ.

ಬಳಿಕ ಬ್ರಹ್ಮನು ಅಗ್ನಿಗೆ ಪ್ರದಕ್ಷಿಣೆ ಬಂದು ದಕ್ಷಿಣ ದಿಕ್ಕಿನಲ್ಲಿ ಉತ್ತರಕ್ಕೆ ಮುಖಮಾಡಿ ನಿಂತು ಆಸನಕ್ಕಾಗಿ ಹಾಸಿದ ದರ್ಭೆಗಳಲ್ಲಿ ತೆಂಕು ದಿಕ್ಕಿಗಿರುವ ಒಂದು ದರ್ಭೆಯನ್ನು ಹೆಬ್ಬೆರಳು ಮತ್ತು ಅನಾಮಿಕೆಗಳಿಂದ ಹಿಡಿದು **"ನಿರಸ್ತಃ ಪರಾವಸುಃ"** ಎಂದು ಹೇಳಿ ನೈಋತ್ಯ ದಿಕ್ಕಿಗೆ ಎಸೆಯಬೇಕು. ನಂತರ ಕೈತೊಳೆದು **"ಇದಮಹ ... ಸೀದಾಮಿ"** ಎಂದು ಹೇಳಿ ಎಡತೊಡೆಯ

**ವಾಮೋರುಪರಿ ದಕ್ಷಿಣಪಾದಂ ಸಂಸ್ಥಾಪ್ಯ ಉಪವಿಶ್ಯ ಗಂಧಾಕ್ಷತಾದಿಭಿರರ್ಚಿತಃ ಸನ್ ಬ್ರಹ್ಮಾ ಅಂಜಲಿಕೃತೋ ಜಪೇತ್ ॥ ಓಂ ಬೃಹಸ್ಪತಿರ್ಬ್ರಹ್ಮಾ ಬ್ರಹ್ಮಸದನ ಆಶಿಷ್ಯತೇ ಬೃಹಸ್ಪತೇ ಯಜ್ಞಂ ಗೋಪಾಯ ॥ ಇತಿ ಜಪಿತ್ವಾ ॥ ತತೋ ಯಜಮಾನಃ ಪ್ರಣೀತಾಪಾತ್ರಮಗ್ನೇಃ ಪ್ರತ್ಯಙ್ ನಿಧಾಯ ತತ್ರ ಪ್ರಾಗಗ್ರೇ ಪವಿತ್ರೇ ನಿಧಾಯ ಉತ್ಪೂತಾಭಿರದ್ಭಿಃ ತತ್ಪಾತ್ರಂ ಪೂರಯಿತ್ವಾ ಗಂಧಪುಷ್ಪಾಕ್ಷತಾನ್ನಿಕ್ಷಿಪ್ಯ ಬ್ರಹ್ಮನ್ನಪಃ ಪ್ರಣೇಷ್ಯಾಮೀತಿ ಪೃಚ್ಛೇತ್ ॥ ತತೋ ಬ್ರಹ್ಮಾ ಉಪಾಂಶುಃ ಭೂರ್ಭುವಃ ಸ್ವಃ ಬೃಹಸ್ಪತಿಪ್ರಸೂತಃ ॥ ಉಚ್ಚೈಃ ಓಂ ಪ್ರಣಯ ಇತ್ಯನುಜಾನೀಯಾತ್ ॥ ಕರ್ತಾ ಪೂರ್ಣಪಾತ್ರಂ ಮುಖಸಮಮುದ್ಧೃತ್ಯ ಅಗ್ನೇರುತ್ತರತೋ ದರ್ಭೇಷು ನಿಧಾಯ ತೇ ಪವಿತ್ರೇ ಧೃತ್ವಾ ಅನ್ಯೈರ್ದರ್ಭೈರಾಚ್ಛಾದಯೇತ್ ॥**

**ತತಃ ಪ್ರತ್ಯಗಗ್ನೇಃ ಕುಶೇಷು ಶೂರ್ಪಂ ನಿಧಾಯ ತತ್ರ ಪ್ರಾಗಗ್ರೇ ಪವಿತ್ರೇ ನಿಧಾಯ (ಅಗ್ನಯೇ) ತ್ವಾ ಜುಷ್ಟಂ ನಿರ್ವಪಾಮಿ ಇತಿ ಮಂತ್ರಾ-**

---

ಮೇಲೆ ಬಲಪಾದವನ್ನಿಟ್ಟು ಉತ್ತರಕ್ಕೆ ಮುಖಮಾಡಿ ಕುಳಿತುಕೊಳ್ಳಬೇಕು. ಯಜಮಾನನು ಅವನನ್ನು ಗಂಧಪುಷ್ಪಾದಿಗಳಿಂದ ಅರ್ಚಿಸಿದ ಮೇಲೆ ಅವನು ಕೈಮೋಡಿಸಿ. "**ಓಂ ಬೃಹಸ್ಪತಿ... ಗೋಪಾಯ**'' ಎಂದು ಜಪಿಸಬೇಕು. ಯಜಮಾನನು ಪ್ರಣೀತಾ ಪಾತ್ರೆಯನ್ನು ಅಗ್ನಿಯ ಪಶ್ಚಿಮ ದಲ್ಲಿಟ್ಟು ಅದರ ಮೇಲೆ ಪೂರ್ವಕ್ಕೆ ತುದಿ ಇರುವಂತೆ ಎರಡು ದರ್ಭೆಗಳನ್ನಿಟ್ಟು, ಶುದ್ಧನೀರಿನಿಂದ ಆ ಪಾತ್ರೆಯನ್ನು ತುಂಬಿಸಿ, ಗಂಧಪುಷ್ಪಾಕ್ಷತೆಗಳನ್ನಿಟ್ಟು, "**ಬ್ರಹನ್...ಷ್ಯಾಮಿ**'' ಎಂದು ಕೇಳಿಕೊಳ್ಳಬೇಕು. ಬ್ರಹ್ಮನು ಮಂದಸ್ವರದಿಂದ "**ಭೂರ್ಭುವ... ಪ್ರಸೂತಃ**'' ಎಂದು ಹೇಳಿ ಕೊಂಡು ಮತ್ತೆ ಗಟ್ಟಿಯಾಗಿ "**ಓಂ ಪ್ರಣಯ**'' ಎಂದು ಹೇಳಬೇಕು. ಆಮೇಲೆ ಯಜಮಾನನು ಆ ಪಾತ್ರೆಯನ್ನು ತನ್ನ ಬಾಯಿಯ ವರೆಗೆ ಎತ್ತಿಹಿಡಿದು ಅಗ್ನಿಯ ಉತ್ತರದಲ್ಲಿರುವ ದರ್ಭೆಗಳ ಮೇಲಿಟ್ಟು ಅದರ ಮೇಲಿದ್ದ ಪವಿತ್ರಗಳನ್ನು ತೆಕ್ಕೊಂಡು ಬೇರೆ ದರ್ಭೆಗಳಿಂದ ಅದನ್ನು ಮುಚ್ಚಬೇಕು.

ಬ್ರಹ್ಮಾ ಅಂದರೆ ಯಜ್ಞಕರ್ಮವನ್ನು ಮಾಡಿಸುವ ಋತ್ವಿಜನು. ದಕ್ಷಿಣದಿಕ್ಕಿನಲ್ಲಿರುವ ಭೂತರಾಕ್ಷಸಾದಿಗಳಿಂದ ಯಜ್ಞರಕ್ಷಣೆಯನ್ನು ಮಾಡುವುದು ಬ್ರಹ್ಮನ ಕೆಲಸ. ಬ್ರಹ್ಮನು ಸಿಗದಿದ್ದರೆ, "**ಪಂಚಾಶದ್ಭಿರ್ಭವೇದ್ಬ್ರಹ್ಮಾ**'' ಐವತ್ತು ಸಾಗ್ರದರ್ಭೆಗಳಿಂದ ಮಾಡಿದ ಒಂದು ಸೂಡಿಯನ್ನು ಬ್ರಹ್ಮನ ಸ್ಥಾನದಲ್ಲಿ ಇಡಬಹುದು. ಯಜ್ಞೋಪವೀತ ಅಥವಾ ಕಮಂಡಲು ಇರಿಸಿದರೂ ಸಾಕು. "**ಯದಿ ಬ್ರಹ್ಮಾನ ಭವೇತ್ತದಾ ಸ್ವಯಮೇವ ತತ್ಪ್ರಣೀತಾಪಾತ್ರಂ ನಾಸಿಕಾಸಮೀಪಂ ನೀತ್ವಾ**'' ಬ್ರಹ್ಮನಿಲ್ಲದಿದ್ದರೆ ಯಜಮಾನನು ತಾನೇ ಪ್ರಣೀತಾಪಾತ್ರೆಯನ್ನು ಮೂಗಿನ ವರೆಗೆ ಎತ್ತಿಹಿಡಿದರೆ ಸಾಕು.

ಬಳಿಕ ಅಗ್ನಿಯ ಪಶ್ಚಿಮದಲ್ಲಿ ದರ್ಭೆಗಳ ಮೇಲೆ ಶೂರ್ಪವನ್ನಿಟ್ಟು ಅದರಲ್ಲಿ ಪೂರ್ವಕ್ಕೆ ತುದಿಮಾಡಿ ಎರಡು ದರ್ಭೆಗಳನ್ನು ಇಡಬೇಕು. "**ಅಗ್ನಯೇ ತ್ವಾ ...**'' ಎಂದು ಹೇಳುತ್ತ ನಾಲ್ಕು ಸಲ ನಾಲ್ಕು ಮುಷ್ಟಿ ಅಕ್ಕಿಯನ್ನು ಅದರಲ್ಲಿ ಹಾಕಬೇಕು. "**ಅಗ್ನೀಷೋಮಾಭ್ಯಾಂ ...**''

**ವೃತ್ವಾ ವ್ರೀಹೀಣಾಂ ಯವಾನಾಂ ವಾ ಚತುರಶ್ಚತುರೋ ಮುಷ್ಟೀನ್ನಿರುಪ್ಯ (ಅಗ್ನೀಷೋಮಾಭ್ಯಾಂ) ತ್ವಾ ಜುಷ್ಟಂ ನಿರ್ವಪಾಮೀತಿ ತಥೈವ ನಿರುಪ್ಯ ತೇ ಪವಿತ್ರೇ ನಿರುಪ್ತವ್ರೀಹೀಣಾಮುಪರಿ ನಿಧಾಯ ಉತ್ಪೂತಾಭಿರದ್ಭಿಃ (ಅಗ್ನಯೇ) ತ್ವಾ ಜುಷ್ಟಂ ಪ್ರೋಕ್ಷಾಮಿ ಇತಿ ನಿರ್ವಾಪಸಂಖ್ಯಯಾ ಪ್ರೋಕ್ಷೇತ್ ॥ ॥ ಏವಂ (ಅಗ್ನೀಷೋಮಾಭ್ಯಾಂ) ತ್ವಾ ಜುಷ್ಟಂ ಪ್ರೋಕ್ಷಾಮಿ ಇತಿ ತಥೈವ ಪ್ರೋಕ್ಷೇತ್ ॥ [ದರ್ಶೇ ತು ಅಗ್ನೀಷೋಮಸ್ಥಾನೇ ಇಂದ್ರಾಗ್ನಿಭ್ಯಾಂ ತ್ವೇತ್ಯಾದಿ ನಿರ್ವಾಪ-ಪ್ರೋಕ್ಷಣೇ ಚ ವಿಶೇಷಃ]**

**ಏವಂ ನಾಮಮಂತ್ರಕಹೋಮೇ ನಿರ್ವಾಪಃ ಪ್ರೋಕ್ಷಣಂ ಚ ಯಥಾ ಪ್ರಧಾನದೈವತಂ ದೇವತಾನಾಮಗ್ರಹಣೇನ ಕಾರ್ಯಂ ॥ ಸಮಂತ್ರಕ ಹೋಮೇ ತು ಶ್ರವಣಾಕರ್ಮಾದೌ ತೂಷ್ಣೀಂ ಚತುರಶ್ಚತುರೋ ಮುಷ್ಟೀನ್ನಿರ್ವ ಪೇತ್ ಪ್ರೋಕ್ಷೇಚ್ಚ ॥**

**ತತಃ ಪಾತ್ರಾಣಾಮುತ್ತರತಃ ಪ್ರಾಗ್ಗ್ರೀವಮಾಸ್ತೀರ್ಣೇ ಊರ್ಧ್ವ-ಲೋಮ್ನಿ ಕೃಷ್ಣಾಜಿನೇ ನಿಹಿತೇ ಉಲೂಖಲೇ ಮುಸಲೇನ ಪತ್ನ್ಯವಹತ್ಯ ಶೂರ್ಪೇಣ ತುಷಾದೀನ್ ಸಂಶೋಧ್ಯ ತ್ರಿಃಶುಕ್ಲೀ ಕುರ್ಯಾತ್ ॥ ತಾಂಸ್ತ್ರಿಃ ಪ್ರಕ್ಷಾಲಿತಾನ್ ಪೃಥಕ್ಪಾತ್ರೇ ಏಕಪಾತ್ರೇ ಅವಿದಗ್ಧಮನವಸ್ರಾವಿತಮಂತ-ರೂಷ್ಮಪಕ್ವಂ ಸುಕೃತಂ ಚರುಂ ಪಚೇತ್ ॥**

---

ಎಂದು ಹೇಳಿ ಅದೇ ರೀತಿ ನಾಲ್ಕು ಸಲ ಇಡಬೇಕು. ಬಳಿಕ ದರ್ಭೆಗಳನ್ನು ಅಕ್ಕಿಯ ಮೇಲೆ ಇಟ್ಟು, **"ಅಗ್ನಯೇ ... ಪ್ರೋಕ್ಷಾಮಿ" "ಅಗ್ನೀಷೋಮಾ ... ಪ್ರೋಕ್ಷಾಮಿ"** ಎಂದು ನೀರಿನಿಂದ ಪ್ರೋಕ್ಷಿಸಬೇಕು. (ನಾಲ್ಕು ಸಲ) ದರ್ಶನ ಹೋಮದಲ್ಲಿ **"ಇಂದ್ರಾಗ್ನಿಭ್ಯಾಂ ..."** ಎಂದು ಬದಲಿಸಿ ಹೇಳಬೇಕು. ಮೇಲೆ ಆವರಣದಲ್ಲಿ ಬರೆದ ದೇವತೆಯ ಸ್ಥಾನದಲ್ಲಿ ಬೇರೆ ಕರ್ಮಗಳಲ್ಲಾದರೆ ಆಯಾ ಕರ್ಮದ ಪ್ರಧಾನ ದೇವತೆಯ ಹೆಸರನ್ನು ಹೇಳಿ ನಿರ್ವಾಪ ಹಾಗೂ ಪ್ರೋಕ್ಷಣಗಳನ್ನು ಮಾಡಬೇಕು. ನಾಮಮಂತ್ರಕ ಹೋಮವಾದರೆ ನಿರ್ವಾಪ ಪ್ರೋಕ್ಷಣಗಳು ಮಂತ್ರಸಹಿತವಾಗಿಯೂ, ಸಮಂತ್ರಕ ಹೋಮವಾದರೆ, ಶ್ರಾವಣ ಇತ್ಯಾದಿ ಕರ್ಮಗಳಲ್ಲಿ ಮೌನವಾಗಿ ನಾಲ್ಕು ಸಲ ಮಾಡಬೇಕು.

ಆಮೇಲೆ ಪಾತ್ರೆಗಳ ಉತ್ತರದಲ್ಲಿ ರೋಮಗಳಿದ್ದ ಭಾಗವು ಮೇಲೆ ನಿಲ್ಲುವಂತೆ ಪೂರ್ವಕ್ಕೆ ತಲೆಮಾಡಿ ಹಾಸಿದ ಕೃಷ್ಣಾಜಿನದ ಮೇಲೆ ಉಲೂಖಲವನ್ನಿಟ್ಟು ಮುಸಲದಿಂದ ಪತ್ನಿಯು ಮೂರು ಬಾರಿ ಕುಟ್ಟಿ ಅಕ್ಕಿಯನ್ನು ತಯಾರಿಸಿ, ಅದನ್ನು ಶೂರ್ಪದಲ್ಲಿ ಹಾಕಿ ತೌಡು ಮುಂತಾದುವನ್ನು ತೆಗೆದು ಒಂದು ಅಥವಾ ಎರಡು ಪಾತ್ರೆಗಳಲ್ಲಿ ಸೀದುಹೋಗದಂತೆ ಜಾಗ್ರತೆಯಿಂದ ಹದವಾದ ಅನ್ನ ಬೇಯಿಸಬೇಕು.

ಇಲ್ಲಿ ನಾಲ್ಕು ನಾಲ್ಕು ಮುಷ್ಟಿ ಭತ್ತವನ್ನೇ ತೆಗೆದುಕೊಂಡು, ಕುಟ್ಟಿ ಅಕ್ಕಿಮಾಡಿ ಚರುವನ್ನು ಬೇಯಿಸುವುದು ವಿಹಿತವಾಗಿದ್ದರೂ ಸಮಯಾನುಕೂಲ್ಯಕ್ಕಾಗಿ ಅಕ್ಕಿಯನ್ನೇ ತೆಗೆದುಕೊಂಡು ಮಾಡುವುದು ವಾಡಿಕೆಗೆ ಬಂದಿದೆ.

**ತತಸ್ತೇ ಪವಿತ್ರೇ ಆಜ್ಯಪಾತ್ರೇ ನಿಧಾಯ ತತ್ಪಾತ್ರಂ ಪುರತಃ ಸಂಸ್ಥಾಪ್ಯ ತಸ್ಮಿನ್ನಾಜ್ಯಮಾಸಿಚ್ಯ ಅಗ್ನೇರುತ್ತರತಃ ಸ್ಥಿತಾಂಗಾರಾನ್ ಭಸ್ಮನಾ ಸಹಾಗ್ನೇರುದಕ್ ಪರಿಸ್ತರಣಾದ್ಬಹಿರ್ನಿರುಹ್ಯ ತೇಷ್ವಾಜ್ಯಪಾತ್ರಮಧಿಶ್ರಿತ್ಯ ಜ್ವಲತಾದರ್ಭೋಲ್ಮುಕೇನಾವ-ಜ್ವಲ್ಯ ಅಂಗುಷ್ಠಪರ್ವಮಾತ್ರಂ ಪ್ರಕ್ಷಾಲಿತಂ ದರ್ಭಾಗ್ರದ್ವಯಮಾಜ್ಯೇ ಪ್ರಕ್ಷಿಪ್ಯ ಪುನರ್ಜ್ವಲತಾ ತೇನೈವ ದರ್ಭೋಲ್ಮುಕೇನ ಚರುಣಾ ಸಹಾಜ್ಯಂ ತ್ರಿಃ ಪರ್ಯಗ್ನಿ ಕೃತ್ವಾ ತದುಲ್ಮುಕಮಪಾಸ್ಯ ಅಪಸ್ಸ್ಪೃಷ್ಟ್ವಾ ಆಜ್ಯಸ್ಥಾಲೀಂ ಭುವಿ ಕರ್ಷಯಿತ್ವಾ ಉದಗುದ್ವಾಸ್ಯ ಅಂಗಾರಾನ್ ಪ್ರತ್ಯೂಹ್ಯ ಅಪಸ್ಸ್ಪೃಷ್ಟ್ವಾ ತತ್ರಸ್ಥಮೇವಾಜ್ಯಂ ।**

**ಅಂಗುಷ್ಠೋಪಕನಿಷ್ಠಿಕಾಭ್ಯಾಂ ಪವಿತ್ರೇ ಗೃಹಿತ್ವಾ ॥ ಸವಿತುಷ್ಟ್ವಾ ಹಿರಣ್ಯಸ್ತೂಪಃ ಸವಿತಾಪುರ ಉಷ್ಣಿಕ್ ॥ ಆಜ್ಯಸ್ಯೋತ್ಪವನೇ ವಿನಿಯೋಗಃ ॥ ಓಂ ಸವಿತುಷ್ಟ್ವಾ ಪ್ರಸವಉತ್ಪುನಾಮ್ಯಚ್ಛಿದ್ರೇಣ ಪವಿತ್ರೇಣ ವಸೋಃ ಸೂರ್ಯಸ್ಯ ರಶ್ಮಿಭಿಃ ಇತಿ ಮಂತ್ರೇಣ ಏಕಶ್ರುತ್ಯೋಚ್ಚಾರಿತೇನ ಏಕವಾರಂ ದ್ವಿಸ್ತೂಷ್ಣೀಂ ಉತ್ತಾನ-ಪಾಣಿದ್ವಯಾಂಗುಷ್ಠೋಪಕನಿಷ್ಠಿಕಾಭ್ಯಾಂ ತಯೋರಸಂಸ್ಪೃಷ್ಟಗೃಹೀತಾಭ್ಯಾಂ ಉದಗ ಗ್ರಾಭ್ಯಾಂ ಪವಿತ್ರಾಭ್ಯಾಂ ಪ್ರಾಗುತ್ಪೂಯ ತೇ ಪವಿತ್ರೇ ಅದ್ಭಿಃ ಪ್ರೋಕ್ಷ್ಯ ಅಗ್ನೌ ಪ್ರಹರೇತ್ ॥ ತೂಷ್ಣೀಂ ಸ್ಕಂದಾಯ ಸ್ವಾಹಾ ಸ್ಕಂದಾಯೇದಂ ನಮಮ ಇತಿ ಮಂತ್ರೇಣೇತಿ ಕೇಚಿತ್ ॥**

---

ಆಮೇಲೆ ಆ ಪವಿತ್ರದ ದರ್ಭೆಗಳನ್ನು ಆಜ್ಯಪಾತ್ರದಲ್ಲಿಟ್ಟು ಆ ಪಾತ್ರೆಯನ್ನು ತನ್ನ ಮುಂಭಾಗದಲ್ಲಿಟ್ಟು, ಅದರಲ್ಲಿ ತುಪ್ಪವನ್ನು ಹೊಯ್ದು, ಅಗ್ನಿಯ ಉತ್ತರದಿಕ್ಕಿನಲ್ಲಿರುವ ಕೆಂಡಗಳನ್ನು ಭಸ್ಮಸಮೇತ ತೆಗೆದು ಪರಿಸ್ತರಣದ ಹೊರಗೆ ಉತ್ತರದಿಕ್ಕಿನಲ್ಲಿ ಹಾಕಿ, ಅವುಗಳ ಮೇಲೆ ಆಜ್ಯ ಪಾತ್ರೆಯನ್ನಿಟ್ಟು, ಒಂದು ದರ್ಭೆಯ ತುಂಡನ್ನು ಉರಿಸಿ ಅದಕ್ಕೆ ತೋರಿಸಬೇಕು. ಉಂಗುಷ್ಠದಷ್ಟು ಉದ್ದದ ಎರಡು ದರ್ಭೆಯ ತುಂಡುಗಳನ್ನು ಅದರಲ್ಲಿ ಹಾಕಬೇಕು. ಪುನಃ ಅದೇ ಮೊದಲಿನ ಉರಿಯುವ ದರ್ಭೆಯ ತುಂಡಿನಿಂದ ಚರುಪಾತ್ರೆಯ ಸಹಿತ ಆಜ್ಯಪಾತ್ರೆಗೆ ಮೂರು ಸಲ ಸುತ್ತು ತಿರುಗಿ ತೋರಿಸಬೇಕು. ಬಳಿಕ ಅದನ್ನು ದೂರಕ್ಕೆ ಎಸೆದು ಕೈ ತೊಳೆಯಬೇಕು. ತುಪ್ಪದ ಪಾತ್ರೆಯನ್ನು ಕೆಂಡಗಳಿಂದ ಕೆಳಗೆ ಇಳಿಸಬೇಕು. ಆ ಕೆಂಡಗಳನ್ನು ಬದಿಗೆ ಸರಿಸಿ ಕೈತೊಳೆಯಬೇಕು.

ಆಮೇಲೆ ಎರಡು ದರ್ಭೆಗಳನ್ನು ಉತ್ತರದಿಕ್ಕಿಗೆ ತುದಿಗಳಿರುವಂತೆ ತೆರೆದ ಎರಡು ಕೈಗಳ ಅಂಗುಷ್ಠ ಮತ್ತು ಅನಾಮಿಕಾ ಬೆರಳುಗಳಿಂದ ಒಂದಕ್ಕೊಂದು ತಾಗದಂತೆ ಹಿಡಿದು ಅವುಗಳ ಮಧ್ಯಭಾಗವನ್ನು ತುಪ್ಪದಲ್ಲಿ ಅದ್ದಿ, "**ಸವಿತುಷ್ಟ್ವಾ** ..." ಎಂಬ ಮಂತ್ರವನ್ನು ಒಂದು ಸಲ ಹೇಳಿ, ಮತ್ತೆರಡು ಸಲ ಮೌನವಾಗಿ ತುಪ್ಪವನ್ನು ಆಲೋಡಿಸಬೇಕು. ಆ ದರ್ಭೆಗಳನ್ನು ನೀರಿನಿಂದ ಪ್ರೋಕ್ಷಿಸಿ ಅಗ್ನಿಗೆ ಸಮರ್ಪಿಸಬೇಕು. "**ಸ್ಕಂದಾಯ ... ನಮಮ**" ಎಂದು ಹೇಳಿ ಅರ್ಪಿಸ ಬೇಕೆಂದು ಕೆಲವರ ಮತ ಇದೆ.

**ಅಥಾಗ್ನೇಃ ಪಶ್ಚಾತ್ಪರಿಸ್ತರಣಾದ್ಬಹಿರಾತ್ಮನೋಽಗ್ರತೋ ಭೂಮಿಂ ಪ್ರೋಕ್ಷ್ಯ ತತ್ರ ಬರ್ಹಿಃ ಸನ್ನಹನೀಂ ರಜ್ಜುಮುದಗಗ್ರಾಂ ಪ್ರಸಾರ್ಯ ತಸ್ಯಾಂ ಬರ್ಹಿಃ ಪ್ರಾಗಗ್ರಮುದಗಪವರ್ಗಮವಿರಲಮಾಸ್ತೀರ್ಯ ತಸ್ಮಿನ್ನಾಜ್ಯಪಾತ್ರಂ ನಿಧಾಯ ಸ್ರುವಾದಿ ಸಮ್ಮಾರ್ಜಯೇತ್ ॥**

**ತದ್ಯಥಾ ॥ ದಕ್ಷಿಣೇನ ಹಸ್ತೇನ ಸ್ರುಕ್ಸ್ರುವೌ ಗೃಹೀತ್ವಾ ಸವ್ಯೇನ ಕಾಂಶ್ಚಿದ್ದರ್ಭಾನಾದಾಯ ಸಹೈವಾಗ್ನೌ ಪ್ರತಾಪ್ಯ ಸ್ರುಚಂ ನಿಧಾಯ ಸ್ರುವಂ ವಾಮಹಸ್ತೇ ಗೃಹೀತ್ವಾ ದಕ್ಷಿಣಹಸ್ತೇನ ಸ್ರುವಸ್ಯ ಬಿಲಂ ದರ್ಭಾಗ್ರೈಃ ಪ್ರಾದಕ್ಷಿಣ್ಯೇನ ಪ್ರಾಗಾದಿಪ್ರಾಗಪವರ್ಗಂ ತ್ರಿಃ ಸಂಮೃಜ್ಯ ಅಧಸ್ತಾದ್ದರ್ಭಾಗ್ರೈರೇವ ಅಭ್ಯಾತ್ಮಂ ಬಿಲಪೃಷ್ಠಂ ತ್ರಿಃ ಸಂಮೃಜ್ಯ ತತೋ ದರ್ಭಾಣಾಂ ಮೂಲೈಃ ದಂಡಸ್ಯಾಧಸ್ತಾದ್ಬಿಲ-ಪೃಷ್ಠಾದಾರಭ್ಯ ಯಾವದುಪರಿಷ್ಟಾದ್ಬಿಲಂ ತಾವತ್ ತ್ರಿಃ ಸಂಮೃಜ್ಯ ಅದ್ಭಿಃ ಪ್ರೋಕ್ಷ್ಯಸ್ರುವಂ ನಿಷ್ಟಪ್ಯ ಆಜ್ಯಸ್ಥಾಲ್ಯಾ ಉತ್ತರತಃ ಸ್ರುಗಸಂಸ್ಪೃಷ್ಟಂ ನಿಧಾಯ ಉದಕಂ ಸ್ಪೃಷ್ಟ್ವಾ ತೈರೇವ ದರ್ಭೈರ್ಜುಹುಂ ಚೈವಮೇವ ಸಂಮೃಜ್ಯ ಸ್ರುವಾದುತ್ತರತೋ ನಿಧಾಯ ದರ್ಭಾನದ್ಭಿಃ ಕ್ಷಾಲಯಿತ್ವಾ ಅಗ್ನಾವನುಪ್ರಹರೇತ್ ॥**

**ತತಃ ಶೃತಂ ಚರುಂ ಸ್ರುವಗೃಹೀತೇನಾಜ್ಯೇನಾಭಿಘಾರ್ಯ ಉದಗುದ್ವಾಸ್ಯ ಅಗ್ನ್ಯಾಜ್ಯಯೋರ್ಮಧ್ಯೇನ ನೀತ್ವಾ ಆಜ್ಯಾದ್ದಕ್ಷಿಣತೋ ಬರ್ಹಿಷಿ ಸಾಂತರಮಾಸಾದ್ಯ ಪುನರಪ್ಯಭಿಘಾರ್ಯ ನ ವಾಭಿಘಾರ್ಯ ಹವಿಃ ಪೃಥಕ್ಕರಣಾಯ ಪಾತ್ರಾಂತರಂ ಚರ್ವಾಜ್ಯಯೋರ್ಮಧ್ಯೇ ನಿಧಾಯ ॥**

---

ಬಳಿಕ ಅಗ್ನಿಯ ಪಶ್ಚಿಮದಲ್ಲಿ ಪರಿಸ್ತರಣಗಳ ಹೊರಗೆ ತನ್ನ ಮುಂಭಾಗದಲ್ಲಿ ಭೂಮಿಯನ್ನು ಪ್ರೋಕ್ಷಿಸಿ ಅಲ್ಲಿ ಬರ್ಹಿಯನ್ನು ಕಟ್ಟಿದ ಹಗ್ಗವನ್ನು ಉತ್ತರಕ್ಕೆ ತುದಿ ಇರುವಂತೆ ಇಟ್ಟು ಅದರ ಮೇಲೆ ಬರ್ಹಿಯನ್ನು ಪೂರ್ವಕ್ಕೆ ತುದಿ ಇರುವಂತೆ ದಕ್ಷಿಣದಿಂದ ಉತ್ತರದ ಕಡೆಗೆ ಒತ್ತಾಗಿ ಹರಡಬೇಕು. ಅದರ ಮೇಲೆ ಆಜ್ಯಪಾತ್ರವನ್ನಿಟ್ಟು ಸ್ರುವಾದಿಗಳ ಸಂಮಾರ್ಜನ ಸಂಸ್ಕಾರ ಮಾಡಬೇಕು.

ಬಲಗೈಯಲ್ಲಿ ಸ್ರುಕ್ ಮತ್ತು ಸ್ರುವಗಳನ್ನೂ, ಎಡಗೈಯಲ್ಲಿ ಕೆಲವು ದರ್ಭೆಗಳನ್ನೂ ತೆಗೆದುಕೊಂಡು ಎರಡನ್ನೂ ಒಟ್ಟಿಗೆ ಅಗ್ನಿಯ ಹತ್ತಿರ ತೋರಿಸಿ ಕಾಯಿಸಬೇಕು. ಸ್ರುಕ್ಕನ್ನು ಕೆಳಗಿಟ್ಟು ಸ್ರುವವನ್ನು ಎಡಗೈಯಲ್ಲಿ ಹಿಡಿದು ಬಲಗೈಯಲ್ಲಿರುವ ದರ್ಭೆಗಳ ತುದಿಯಿಂದ ಅದರ ಮುಖವನ್ನು ಬಲಬದಿಯಿಂದ ಪೂರ್ವದಿಂದ ಪೂರ್ವದ ವರೆಗೆ ಮೂರು ಸಲ ಸಂಮಾರ್ಜನ ಮಾಡಬೇಕು. ದರ್ಭೆಗಳ ಬುಡದಿಂದ ಸ್ರುವದ ದಂಡದ ಕೆಳಭಾಗವನ್ನು ಅದರ ತೂತಿನಿಂದ ಪೂರ್ಣವಾಗಿ ಮೂರು ಸಲ ತಿಕ್ಕಬೇಕು ಆಮೇಲೆ ಅದಕ್ಕೆ ನೀರನ್ನು ಪ್ರೋಕ್ಷಿಸಿ ಬಿಸಿಮಾಡಿ ಆಜ್ಯಪಾತ್ರದ ಉತ್ತರದಲ್ಲಿ ಸ್ರುಕ್ಕಿಗೆ ತಾಗದಂತೆ ಇಡಬೇಕು. ಆ ದರ್ಭೆಗಳಿಂದ ಇದೇ ರೀತಿ ಸ್ರುಕ್ಕಿನ ಸಮ್ಮಾರ್ಜನೆಯನ್ನೂ ಮಾಡಿ ಅದನ್ನು ಸ್ರುವದ ಉತ್ತರದಲ್ಲಿಟ್ಟು ದರ್ಭೆಗಳನ್ನು ನೀರಿನಿಂದ ತೊಳೆದು ಅವುಗಳನ್ನು ಅಗ್ನಿಯಲ್ಲಿ ಅರ್ಪಿಸಬೇಕು.

**ಏಕಾದಶಾಂಗುಲಮಿತೇ ದೇಶೇ ಗಂಧಾಕ್ಷತಪುಷ್ಪೈಃ ಅಗ್ನಿಂ ಸಮಂತ್ರಮರ್ಚಯೇತ್ ॥ ವಿಶ್ವಾನಿನ ಇತಿ ತಿಸೃಣಾಂ ವಸುಶ್ರುತೋಽಗ್ನಿಸ್ತ್ರಿಷ್ಟುಪ್ ದ್ವಯೋರರ್ಚನೇ ಅಂತ್ಯಾಯಾ ಉಪಸ್ಥಾನೇ ವಿನಿಯೋಗಃ ॥ ಓಂ ವಿಶ್ವಾನಿನೋ ದುರ್ಗಹಾ ಜಾತವೇದಃ ॥ ಓಂ ಸಿಂಧುಂ ನನಾವಾ ದುರಿತಾತಿಪರ್ಷಿ । ಓಂ ಅಗ್ನೇ ಅತ್ರಿವನ್ನಮಸಾ ಗೃಣಾನಃ ॥ ಓಂ ಅಸ್ಮಾಕಂ ಬೋಧ್ಯವಿತಾತನೂನಾಂ ॥ ಓಂ ಯಸ್ತ್ವಾ ಹೃದಾಕೀರಿಣಾಮನ್ಯಮಾನಃ ॥ ಓಂ ಅಮರ್ತ್ಯಂ ಮರ್ತ್ಯೋಜೋಹವೀಮಿ ॥ ಓಂ ಜಾತವೇದೋ ಯಶೋ ಅಸ್ಮಾಸುಧೇಹಿ ॥ ಓಂ ಪ್ರಜಾಭಿರಗ್ನೇ ಅಮೃತತ್ವಮಶ್ಯಾಂ ॥ ಓಂ ಯಸ್ಮೈತ್ವಂ ಸುಕೃತೇ ಜಾತವೇದಉಲೋಕಮಗ್ನೇಕೃಣವಸ್ಯೋನಂ ॥ ಅಶ್ವಿನಂ ಸಪುತ್ರಿಣಂ ವೀರವಂತಂ ಗೋಮಂತಂ ರಯಿಂನಶತೇ ಸ್ವಸ್ತಿ ॥ ಸ್ಥಂಡಿಲಾದಷ್ಟದಿಕ್ಷು ಗಂಧಪುಷ್ಪಾದಿಭಿರಾಯತನಮಲಂಕೃತ್ಯ ॥ ಏಕಯೋಪಸ್ಥಾಯ ॥**

**ತತ ಆತ್ಮಾನಂ ಚಾಲಂಕೃತ್ಯ ಹಸ್ತಂ ಪ್ರಕ್ಷಾಲ್ಯ ಇಧ್ಮಬಂಧನರಜ್ಜುಮಿಧ್ಮಸ್ಥಾನೇ ನಿಧಾಯ ಪಾಣಿನೇಧ್ಮಮಾದಾಯ ಮೂಲಮಧ್ಯಾಗ್ರೇಷು ಸ್ರುವೇಣ ತ್ರಿರಭಿಘಾರ್ಯ ಮೂಲಮಧ್ಯಯೋರ್ಮಧ್ಯಭಾಗೇ ಗೃಹೀತ್ವಾ ॥**

---

ನಂತರ ಸ್ರುವದಿಂದ ಚರುವಿಗೆ ಅಭಿಘಾರ ಮಾಡಿ ಅದನ್ನು ಅಗ್ನಿ ಹಾಗೂ ಆಜ್ಯಗಳ ಮಧ್ಯದಲ್ಲಿ ಈಚೆಗೆ ತಂದು ಆಜ್ಯದ ದಕ್ಷಿಣಕ್ಕೆ ಬರ್ಹಿಯ ಮೇಲೆ ಇಟ್ಟು ಮತ್ತೊಮ್ಮೆ ಅಭಿಘಾರ ಮಾಡಬೇಕು [ಮಾಡದಿದ್ದರೂ ಆಗಬಹುದು]. ಹವಿಸ್ಸನ್ನು ಪಾಲುಮಾಡುವುದಕ್ಕೆ ಇನ್ನೊಂದು ಪಾತ್ರೆಯನ್ನು ಚರು ಮತ್ತು ಅಗ್ನಿಗಳ ಮಧ್ಯದಲ್ಲಿ ಇರಿಸಬೇಕು.

ಸ್ಥಂಡಿಲದಿಂದ ಹನ್ನೊಂದು ಅಂಗುಲ ದೂರದಲ್ಲಿ, ಪೂರ್ವದಿಕ್ಕಿನಿಂದ ತೊಡಗಿ, "**ವಿಶ್ವಾನಿನೋ ದುರ್ಗಹಾ...**" ಎಂಬ ಮಂತ್ರವನ್ನು ಹೇಳುತ್ತ ಒಂದೊಂದು ಚರಣದಿಂದ ಒಂದೊಂದು ದಿಕ್ಕಿನಲ್ಲಿ ಗಂಧ ಅಕ್ಷತೆ ಮತ್ತು ಪುಷ್ಪಗಳನ್ನು ಇಡುತ್ತ ಅಗ್ನಿಯ ಸುತ್ತಲೂ ಎಂಟು ದಿಕ್ಕುಗಳಲ್ಲಿಯೂ ಅರ್ಚನೆ ಮಾಡಬೇಕು. ಕೊನೆಗೆ "**ಯಸ್ಮೈತ್ವಂ...**" ಎಂಬ ಋಕ್ಕನ್ನು ಕೈ ಜೋಡಿಸುತ್ತ ಹೇಳಿ ಉಪಸ್ಥಾನ ಮಾಡಬೇಕು.

ಬಳಿಕ ತನ್ನ ಹಣೆಗೆ ತಿಲಕವನ್ನಿಟ್ಟು ತನ್ನನ್ನು ಅಲಂಕರಿಸಿ, ಕೈತೊಳೆದು, ಇಧ್ಮವನ್ನು ಕೈಯಲ್ಲಿ ತಕ್ಕೊಂಡು ಅದರ ಮೂಲ, ಮಧ್ಯ ಮತ್ತು ತುದಿಯಲ್ಲಿ ಮೂರು ಕಡೆ ಅಭಿಘಾರ ಮಾಡಬೇಕು. ಅದನ್ನು ಮೂಲ, ಮಧ್ಯಗಳ ಮಧ್ಯಭಾಗದಲ್ಲಿ ಕೈಯಿಂದ ಹಿಡಿದು, "**ಅಯಂತ ಇಧ್ಮ...**"

**ಅಯಂತೇ ವಾಮದೇವ್ಯೋ ಜಾತವೇದಾ ಅಗ್ನಿಸ್ತ್ರಿಷ್ಟುಪ್ ಇಧ್ಮಹವನೇ ವಿನಿಯೋಗಃ ॥ ಓಂ ಅಯಂತ ಇಧ್ಮ ಆತ್ಮಾಜಾತವೇದಸ್ತೇನೇಧ್ಯಸ್ವರ್ಧಸ್ವ-ಚೇದ್ಧವರ್ಧಯಚಾಸ್ಮಾನ್ಪ್ರಜಯಾಪಶುಭಿರ್ಬ್ರಹ್ಮವರ್ಚಸೇನಾನ್ನಾದ್ಯೇನ ಸಮೇಧಯ ಸ್ವಾಹಾ ॥ ಜಾತವೇದಸೇಗ್ನಯ ಇದಂ ನ ಮಮ ॥**

**ತತಃ ಸ್ರುವೇಣಾಜ್ಯಮಾದಾಯ ಅಗ್ನೇರಾಯತನಸ್ಯ ವಾಯವ್ಯಕೋಣ-ಮಾರಭ್ಯ ಆಗ್ನೇಯಕೋಣಪರ್ಯಂತಂ ಪ್ರಜಾಪತಯ ಇತಿ ಮನಸಾ ಸ್ಮರನ್ ಸ್ವಾಹೇತ್ಯುಚ್ಚಾರ್ಯ ನೈರಂತರ್ಯೇಣಾಜ್ಯಧಾರಾಂ ಅಗ್ನಾವಿಧ್ಮದಾರೂಪರಿಹುತ್ವಾ ॥ ಪುನರಾಜ್ಯಮಾದಾಯ ಅಗ್ನೇರಾಯತನಸ್ಯ ನೈಋತ್ಯಕೋಣತ ಐಶಾನೀಪರ್ಯಂತಂ ತಥೈವ ಹುತ್ವಾ ತ್ಯಕ್ತ್ವಾ ಚ ॥ ಸ್ರುವೇಣಾಜ್ಯಮಾದಾಯ ಅಗ್ನಯೇ ಸ್ವಾಹೇತಿ ಅಗ್ನೇರುತ್ತರ ಪಾರ್ಶ್ವೇ ಪೂರ್ವಭಾಗೇ ಹುತ್ವಾ ಪುನರಾಜ್ಯಂ ಸೋಮಾಯ ಸ್ವಾಹೇತಿ ಅಗ್ನಿ ದಕ್ಷಿಣಪಾರ್ಶ್ವೇ ತತ್ಸಮಪ್ರದೇಶೇ ಹುತ್ವಾ ॥**

**ಪೂರ್ವನಿಹಿತಪಾತ್ರೇ ಚರುಮುದ್ಧೃತ್ಯ ಪೃಥಕ್ಕೃತ್ಯ (ಇದಮಗ್ನಯೇ ಇದಮಗ್ನೀಷೋಮಾಭ್ಯಾಂ) ಇತಿ ಚರುಭಾಗದ್ವಯಂ ಉತ್ತರಸಂಸ್ಥಮಭಿಮೃಶ್ಯ ಅವದಾನಧರ್ಮೇಣ ಜುಹುಯಾತ್ ॥ ಏವಂ ನಾಮಮಂತ್ರಕ ಹೋಮೇ ಯಥಾದೈವತಂ ವಿಭಕ್ತಸ್ಯ ಚರೋರರಭಿಮರ್ಶಃ ॥ ಸಮಂತ್ರಕ ಹೋಮೇತು ನ ವಿಭಾಗೋ ನಾಭಿಮರ್ಶಶ್ಚ ॥**

**ಅಥಾವದಾನಧರ್ಮಃ ॥ ಸ್ರುವೇಣಸ್ರುಚ್ಯಾಜ್ಯಮುಪಸ್ತೀರ್ಯ ಪ್ರಥಮ ಪ್ರಧಾನದೇವತಾ ಚರುಭಾಗಮಧ್ಯಾದಂಗುಷ್ಠಪರ್ವಮಾತ್ರಂ ತಿರಶ್ಚೀನಾಭಿರಂ-**

---

ಎಂಬ ಮಂತ್ರವನ್ನು ಹೇಳಿ **"ಸ್ವಾಹಾ"** ಎಂದು ಅಗ್ನಿಗೆ ಅರ್ಪಿಸಬೇಕು. **"ಜಾತವೇದಸೇಗ್ನಯ..."** ಎಂದು ಹೇಳಬೇಕು.

ಬಳಿಕ ಸ್ರುವದಲ್ಲಿ ತುಪ್ಪವನ್ನು ತೆಗೆದುಕೊಂಡು ಸ್ಥಂಡಿಲದ ವಾಯವ್ಯಮೂಲೆಯಿಂದ ಆಗ್ನೇಯ ಮೂಲೆಯ ವರೆಗೆ **"ಪ್ರಜಾಪತಯೇ"** ಎಂದು ಮನಸ್ಸಿನಲ್ಲೇ ಹೇಳಿಕೊಂಡು **"ಸ್ವಾಹಾ"** ಎಂದು ಗಟ್ಟಿಯಾಗಿ ಹೇಳಿ ತುಪ್ಪವು ಧಾರಾಕಾರವಾಗಿ ಬೀಳುವಂತೆ ಅಗ್ನಿಯಲ್ಲಿ ಇಧ್ಮದ ಮೇಲೆ ಹೋಮಮಾಡಬೇಕು. ಮತ್ತೊಮ್ಮೆ ಹಾಗೆಯೇ ನೈಋತ್ಯದಿಂದ ಈಶಾನ್ಯ ಮೂಲೆಯ ವರೆಗೆ ಹೋಮಿಸಬೇಕು. ಪುನಃ ಸ್ರುವದಲ್ಲಿ ತುಪ್ಪವನ್ನು ತೆಗೆದುಕೊಂಡು **"ಅಗ್ನಯೇ ಸ್ವಾಹಾ"** ಎಂದು ಹೇಳಿ ಅಗ್ನಿಯ ಉತ್ತರದಲ್ಲಿ ಪೂರ್ವ ದಿಕ್ಕಿನಲ್ಲೂ **"ಸೋಮಾಯ ಸ್ವಾಹಾ"** ಎಂದು ದಕ್ಷಿಣದಲ್ಲೂ ಹೋಮಿಸಬೇಕು.

ಆಮೇಲೆ ಚರುಪಾತ್ರೆಯಲ್ಲಿರುವ ಚರುವನ್ನು ಹೊರತೆಗೆದು **"ಇದಮಗ್ನಯೇ" "ಇದ ಮಗ್ನೀಷೋಮಾಭ್ಯಾಂ"** ಎಂದು ದಕ್ಷಿಣ ಮತ್ತು ಉತ್ತರಕ್ಕೆ ಎರಡು ಭಾಗ ಮಾಡಬೇಕು. ಆಮೇಲೆ ಅವದಾನಕ್ರಮದಿಂದ ಅವನ್ನು ಹವನ ಮಾಡಬೇಕು. ಹೀಗೆ, ಕೇವಲ ನಾಮಮಂತ್ರದ ಹೋಮವಾದರೆ ಎಷ್ಟು ದೇವತೆಗಳೋ ಅಷ್ಟು ಭಾಗ ಮಾಡಿ ಸ್ಪರ್ಶಮಾಡಬೇಕು. ಸಮಂತ್ರಕ ಹೋಮವಾದರೆ ಸ್ಪರ್ಶವೂ ಬೇಡ ವಿಭಾಗವೂ ಬೇಡ.

**ಗುಷ್ಠ ಮಧ್ಯಮಾನಾಮಿಕಾಭಿರುದಗಗ್ರಾಭಿರ್ನಖಸ್ಪರ್ಶಮಕುರ್ವನ್ನವದಾಯ ದರ್ವ್ಯಾ ಮೋಪ್ಯ ಪಾತ್ರಸ್ಥಂ ಹವಿರಭಿಘಾರ್ಯ ದರ್ವೀಸ್ಥಮವತ್ತಂ ಚಾಭಿಘಾರ್ಯ ವಿಧೂಮಜ್ವಾಲಾಗ್ನೌ ॥**

**ಓಂ ಅಗ್ನಯೇ ಸ್ವಾಹೇತ್ಯಾಜ್ಯಭಾಗಯೋರ್ಮಧ್ಯದೇಶೇ ತತ್ಪ್ರತ್ಯಗ್ದೇಶೇ ವಾ ಆಚ್ಛಾದಯನ್ನಿವ ದರ್ವ್ಯಾ ಪಾರ್ಶ್ವೇನ ಹುತ್ವಾ ಅಗ್ನಯ ಇದಂ ನ ಮಮೇತಿ ತ್ಯಕ್ತ್ವಾ ॥ ಪುನಃ ಪೂರ್ವವದುತ್ತರಹವಿರ್ಭಾಗಾದವದಾಯ । ಓಂ**

---

**ಅವದಾನ ಕ್ರಮ:- "ಅವದಾನ ಧರ್ಮ"** ಈ ರೀತಿಯಾಗಿದೆ. ಸ್ರುವದಿಂದ ಸ್ರುಕ್ಕಿನಲ್ಲಿ ತುಪ್ಪ ಹಾಕಬೇಕು. ಮೊದಲು ಪ್ರಧಾನ ದೇವತೆಯ ಚರುಭಾಗವನ್ನು ಅದರ ನಡುವಿನಿಂದ ಅಂಗುಷ್ಠದ ಕಾಂಡದ ವರೆಗೆ ಬಗ್ಗಿಸಿದ ಉತ್ತರಕ್ಕೆ ತುದಿ ಇರುವ ಅಂಗುಷ್ಠ, ಅನಾಮಿಕೆ ಮತ್ತು ಮಧ್ಯಮಾಗಳಿಂದ (ಮೃಗೀಮುದ್ರೆಯಿಂದ) ಉಗುರಿನ ಸ್ಪರ್ಶವಾಗದಂತೆ ಚರುವನ್ನು ತೆಗೆದುಕೊಂಡು ಅದನ್ನು ದರ್ವಿಯಲ್ಲಿ ಹಾಕಬೇಕು. ಬಳಿಕ ಚರುವಿನಿಂದ ಪೂರ್ವಭಾಗವನ್ನು ಪೂರ್ವಕ್ಕೆ ತುದಿ ಇದ್ದ ಅಂಗುಷ್ಠ ಮಧ್ಯಮಾ ಅನಾಮಿಕೆಗಳಿಂದ ಅದೇ ರೀತಿ ತೆಗೆದು, ದರ್ವಿಯಲ್ಲಿ ಹಾಕಬೇಕು. ಆಮೇಲೆ ಪಾತ್ರೆಯಲ್ಲಿ ಉಳಿದ ಹಾಗೂ ದರ್ವಿಯ ಮೇಲಿರುವ ಚರುವನ್ನು ಅಭಿಘಾರ ಮಾಡಬೇಕು. **ಜಾಮದಗ್ನ್ಯಾ ವತ್ಸವಿದಾ ವಾರ್ಷ್ಟಿಷೇಣಾಸ್ತಥೈವ ಚ । ಭಾರ್ಗವಚ್ಯಾವನಾ ಔರ್ವಾಃ ಪಂಚಾವತ್ತಿನ ಈರಿತಾಃ ॥** ಈ ಗೋತ್ರದವರು ಪಂಚಾವತ್ತಿಗಳು.

**ಸ್ರುವವನ್ನು ಹಿಡಿಯುವ ಕ್ರಮ:- "ಕಠಿಣದ್ರವ್ಯ ಹೋಮೇತು ಮುಷ್ಟಿನಾ ಧಾರಣಂ ಸ್ರುಚೈಃ । ದ್ರವದ್ರವ್ಯಸ್ಯ ಹೋಮೇ ತು ಉತ್ತಾನಾಂಗುಲಿಭಿಃ ಸ್ಮೃತಂ " ॥** ಕಠಿಣದ್ರವ್ಯಗಳನ್ನು ಹೋಮಿಸುವುದಾದರೆ ಸ್ರುಕ್ ಸ್ರುವಗಳನ್ನು ಮುಷ್ಟಿಯಿಂದ ಗಟ್ಟಿಯಾಗಿ ಹಿಡಿಯಬೇಕು. ದ್ರವವಸ್ತುಗಳಾದರೆ ಅಂಗಾತನೆ ಚಾಚಿದ ಬೆರಳುಗಳಿಂದ ಹಿಡಿಯಬೇಕು.

**ಹೋಮಮುದ್ರೆಗಳು:- "ಹೋಮಮುದ್ರಾಸ್ತ್ರಯಃ ಪ್ರೋಕ್ತಾ ಮೃಗೀ ಹಂಸೀ ಚ ಸೂಕರೀ । ಸೂಕರೀ ಕರಸಂಕೋಚಂ ಹಂಸೀ ಮುಕ್ತಕನಿಷ್ಠಿಕಾ । ಕನಿಷ್ಠಿಕಾ ತರ್ಜನೀಮುಕ್ತಾ ತ್ರಯೋ ಮುದ್ರಾಃ ಪ್ರಕೀರ್ತಿತಾಃ ॥ ಶಾಂತಿಕೇ ಪೌಷ್ಟಿಕೇ ಕಾರ್ಯೇ ಮೃಗೀ ಹಂಸೀ ಪ್ರಶಸ್ಯತೇ । ವಶ್ಯೋಚ್ಚಾಟನಕಾರ್ಯೇಷು ಕುರ್ಕುಟೀ ಸೂಕರೀ ಭವೇತ್" ॥** ಹೋಮಮಾಡುವ ಮುದ್ರೆಗಳು ಮೂರು ವಿಧವಾಗಿವೆ. 1) **ಮೃಗೀಃ** ಕನಿಷ್ಠಿಕಾ ಮತ್ತು ತರ್ಜನಿಗಳನ್ನು ಬಿಟ್ಟು ಉಳಿದ ಬೆರಳುಗಳು. 2) **ಹಂಸೀಃ ಕನಿಷ್ಠಿಕಾ ಬಿಟ್ಟು ಉಳಿದ ಬೆರಳುಗಳು.** 3) **ಸೂಕರೀಃ** ಹಂದಿಯ ಬಾಯಿಯಂತೆ ಕೈಯನ್ನು ಚಿಕ್ಕದಾಗಿ ಮಾಡುವುದು. **ಕುರ್ಕುಟೀಃ** ಕೋಳಿಯ ಬಾಯಿಯಂತೆ. ಶಾಂತಿಕ ಪೌಷ್ಟಿಕ ಕಾರ್ಯಗಳಿಗೆ ಮೃಗೀ ಮುದ್ರೆ ಹಾಗೂ ಹಂಸೀ ಮುದ್ರೆಗಳನ್ನು ವಶ್ಯ ಉಚ್ಚಾಟನಾದಿ ಕಾರ್ಯಗಳಿಗೆ ಸೂಕರೀ ಕುರ್ಕುಟೀ ಮುದ್ರೆಗಳನ್ನೂ ಅನುಸರಿಸಬೇಕು.

**ಅಗ್ನೀಷೋಮಾಭ್ಯಾಂ ಸ್ವಾಹೇತಿ ಪೂರ್ವಾಹುತೇಃ ಪ್ರಾಗ್ಭಾಗೇ ಹುತ್ವಾ ಅಗ್ನೀಷೋಮಾಭ್ಯಾಮಿದಂ ನಮಮೇತಿ ತ್ಯಜೇತ್ ॥ ಪಂಚಾವತ್ತೀ ತು ದರ್ವ್ಯಾಮುಪಸ್ತೀರ್ಯ ಮಧ್ಯಾತ್ಪೂರ್ವಾರ್ಧಾತ್ ಪಶ್ಚಾರ್ಧಾಚ್ಚ ತ್ರಿರ್ಹವಿಷೋಽವದಾಯ ಅಭಿಘಾರ್ಯ ಜುಹುಯಾತ್ । ದರ್ಶೇತು ಅಗ್ನೀಷೋಮಸ್ಥಾನೇ ಇಂದ್ರಾಗ್ನಿಭ್ಯಾಂ ಸ್ವಾಹಾ ಇಂದ್ರಾಗ್ನಿಭ್ಯಾಮಿದಂ ನ ಮಮೇತಿ ವಿಶೇಷಃ ॥ ಪುನರ್ದರ್ವ್ಯಾಮುಪಸ್ತೀರ್ಯ ಪ್ರಥಮಹವಿರ್ಭಾಗಸ್ಯೋತ್ತರಾರ್ಧತಃ ಪೂರ್ವಾವದಾನತೋ ಭೂಯೋಽನೂಚೀನಾಭಿರಂಗುಲಿಭಿರವದಾಯ ದರ್ವ್ಯಾಮಾರೋಪ್ಯ ದ್ವಿತೀಯ ಹವಿರ್ಭಾಗಸ್ಯ ತಥೈವಾವದಾಯ ಪಾತ್ರಸ್ಥಮನಭಿಘಾರ್ಯ ಅವತ್ತಂ ತು ದ್ವಿರಭಿಘಾರ್ಯ ॥**

**ಯದಸ್ಯೇತಿ ಹಿರಣ್ಯಗರ್ಭೋಽಗ್ನಿಃ ಸ್ವಿಷ್ಟಕೃದತಿಧೃತಿಃ ಸ್ವಿಷ್ಟಕೃದ್ಧೋಮೇ ವಿನಿಯೋಗಃ ॥ ಓಂ ಯದಸ್ಯಕರ್ಮಣೋಽತ್ಯರೀರಿಚಂ ಯದ್ವಾನ್ಯೂನಮಿಹಾಕರಂ । ಅಗ್ನಿಷ್ಟ ತ್ಸ್ವಿಷ್ಟಕೃದ್ವಿದ್ವಾನ್ ಸರ್ವಂ ಸ್ವಿಷ್ಟಂ ಸುಹುತಂ ಕರೋತು ಮೇ ॥ ಅಗ್ನಯೇ ಸ್ವಿಷ್ಟಕೃತೇ ಸುಹುತಹುತೇ ಸರ್ವಪ್ರಾಯಶ್ಚಿತ್ತಾಹುತೀನಾಂ ಕಾಮಾನಾಂ ಸಮರ್ಧಯಿತ್ರೇ ಸರ್ವಾನ್ನಃ ಕಾಮಾನ್ ಸಮರ್ಧಯ ಸ್ವಾಹಾ ಇತ್ಯಗ್ನ್ಯೈಶಾನದೇಶೇ ಜುಹುಯಾತ್ ॥ ಸ್ವಿಷ್ಟಕೃತೇಽಗ್ನಯ ಇದಂ ನ ಮಮ ॥**

---

"**ಓಂ ಅಗ್ನಯೇ ಸ್ವಾಹಾ**" ಎಂದು ಹೇಳಿ ಅಗ್ನಿಯ ಮಧ್ಯಭಾಗದಲ್ಲಿ ಅಥವಾ ಪಶ್ಚಿಮ ಭಾಗದಲ್ಲಿ ಮುಷ್ಟಿಯಂತೆ ಮಾಡಿ ದರ್ವಿಯ ಪಾರ್ಶ್ವಭಾಗದಿಂದ ಹೋಮಮಾಡಿ "**ಅಗ್ನಯ ಇದಂ ನಮಮ**" ಎಂದು ಹೇಳಬೇಕು. ಪುನಃ ಮೊದಲಿನಂತೆ ಚರುವಿನ ಮುಂದಿನ ಭಾಗದಿಂದ ಚರುವನ್ನು ತೆಗೆದುಕೊಂಡು "**ಓಂ ಅಗ್ನೀಷೋಮಾಭ್ಯಾಂ ಸ್ವಾಹಾ**" "**ಅಗ್ನಿಷೋಮಾಭ್ಯಾಮಿದಂ**" ನ ಮಮ ಎಂದು ಹೋಮಮಾಡಬೇಕು. ಅಮಾವಾಸ್ಯೆಯ ದಿನ ಮಾಡುವ ಹೋಮವಾದರೆ "**ಇಂದ್ರಾಗ್ನಿಭ್ಯಾಂ ಸ್ವಾಹಾ**" "**ಇಂದ್ರಾಗ್ನಿಭ್ಯಾಮಿದಂ ನ ಮಮ**" ಎಂದು ಹೇಳಿ ಹೋಮಿಸಬೇಕು.

ಮತ್ತೊಮ್ಮೆ ದರ್ವಿಗೆ ಅಭಿಘಾರ ಮಾಡಿ ಮೊದಲ ಹವಿರ್ಭಾಗದ ಉತ್ತರಭಾಗದಿಂದ, ಈ ಮೊದಲು ಅವದಾನ ಕ್ರಮದಿಂದ ತೆಗೆದುಕೊಂಡಂತೆ, ಬೆರಳುಗಳನ್ನು ಇನ್ನಷ್ಟು ಬಗ್ಗಿಸಿ, ಚರುವನ್ನು ತೆಗೆದುಕೊಂಡು, ಅದನ್ನು ದರ್ವಿಯಲ್ಲಿ ಹಾಕಿ, ಅದೇ ರೀತಿಯಿಂದ ಎರಡನೆಯ ಹವಿರ್ಭಾಗದಿಂದಲೂ ತೆಗೆದುಕೊಂಡು, ಪಾತ್ರೆಯಲ್ಲಿ ಉಳಿದುದಕ್ಕೆ ಅಭಿಘಾರ ಮಾಡದೆ, ತೆಗೆದುಕೊಂಡದ್ದಕ್ಕೆ ಎರಡು ಸಲ ಅಭಿಘಾರ ಮಾಡಿ, "**ಯದಸ್ಯ ಕರ್ಮಣೋ...**" ಎಂಬ ಮಂತ್ರವನ್ನು ಹೇಳಿ ಅಗ್ನಿಯ ಈಶಾನ್ಯ ಮೂಲೆಯಲ್ಲಿ ಹೋಮಿಸಬೇಕು. "**ಸ್ವಿಷ್ಟಕೃತೇಽಗ್ನಯ ಇದಂ ನ ಮಮ**" ಎಂದು ಉಚ್ಚರಿಸಬೇಕು.

"**ಯತ್ರ ಪ್ರಜ್ವಲನಂ ತತ್ರ ಜಿಹ್ವಾ ಚೈವ ಪ್ರಕೀರ್ತಿತಾ । ಗಜವಾಜಿ ಪ್ರಣಾದೀತು ವಹ್ನಿಃ ಶುಭಫಲಪ್ರದಃ ॥**"

**ತತೋಽಗ್ನೇರುತ್ತರತಃಸ್ಥಿತಮಿಧ್ಮಬಂಧನರಜ್ಜುಂ ವಿಸೃಜ್ಯ "ರುದ್ರಾಯ ಸ್ವಾಹಾ ರುದ್ರಾಯ ಇದಂ ನ ಮಮ" ॥ ಅಪಉಪಸ್ಪೃಶ್ಯ ॥**

**ಸ್ರುವೇಣ ಪ್ರಾಯಶ್ಚಿತ್ತಾಜ್ಯಾಹುತೀಃ ಸಪ್ತ ಜುಹುಯಾತ್ ॥ ಅಯಾಶ್ಚೇತಿ ವಿಮದೋ ಯಾ ಅಗ್ನಿಃ ಪಂಕ್ತಿಃ ಪ್ರಾಯಶ್ಚಿತ್ತಾಜ್ಯಹೋಮೇ ವಿನಿಯೋಗಃ ॥ ಓಂ ಅಯಾಶ್ಚಾಗ್ನೇಸ್ಯನಭಿಶಸ್ತೀಶ್ಚಸತ್ಯಮಿತ್ವಮಯಾಅಸಿ । ಅಯಾಸಾವಯ-ಸಾಕೃತೋಽಯಾಸನ್‌ಹವ್ಯಮೂಹಿಷೇಯಾನೋಧೇಹಿಭೇಷಜಂ ಸ್ವಾಹಾ ॥ ಅಯಾಸೇಽಗ್ನಯ ಇದಂ ನ ಮಮ ॥ ೧ ॥ ಅತೋದೇವಾಃ ಕಾಣ್ವೋ ಮೇಧಾತಿಥಿರ್ದೇವಾ ಗಾಯತ್ರೀ । ಪ್ರಾಯಶ್ಚಿತ್ತಾಜ್ಯಹೋಮೇ ವಿನಿಯೋಗಃ ॥ ಓಂ ಅತೋದೇವಾಅವಂತುನೋಯತೋವಿಷ್ಣುರ್ವಿಚಕ್ರಮೇ । ಪೃಥಿವ್ಯಾಃ ಸಪ್ತಧಾಮಭಿಃ ಸ್ವಾಹಾ ॥ ದೇವೇಭ್ಯ ಇದಂ ನ ಮಮ ॥ ೨ ॥ ಇದಂ ವಿಷ್ಣುಃ ಕಾಣ್ವೋ ಮೇಧಾತಿಥಿರ್ವಿಷ್ಣುರ್ಗಾಯತ್ರೀ । ಪ್ರಾಯಶ್ಚಿತ್ತಾಜ್ಯಹೋಮೇ ವಿನಿಯೋಗಃ ॥ ಓಂ ಇದಂವಿಷ್ಣುರ್ವಿಚಕ್ರಮೇತ್ರೇಧಾನಿದಧೇ ಪದಂ । ಸಮೂಢಮಸ್ಯಪಾಂಸುರೇ ಸ್ವಾಹಾ ॥ ವಿಷ್ಣವ ಇದಂ ನ ಮಮ ॥ ೩ ॥ ವ್ಯಸ್ತಸಮಸ್ತವ್ಯಾಹೃತೀನಾಂ ವಿಶ್ವಾಮಿತ್ರಜಮದಗ್ನಿಭರದ್ವಾಜಪ್ರಜಾಪತಯ**

---

ಹೋಮಕುಂಡದಲ್ಲಿ ಎಲ್ಲಿ ಅಗ್ನಿಯ ಜ್ವಾಲೆಯು ಚೆನ್ನಾಗಿ ಏಳುತ್ತದೋ ಅದು ಅಗ್ನಿಯ ಜಿಹ್ವೆ (ನಾಲಿಗೆ) ಎಂದು ತಿಳಿದು ಅಲ್ಲಿಯೇ ಹೋಮಿಸಬೇಕು. ಆನೆ ಕುದುರೆಗಳಂತೆ ಶಬ್ದಿಸುವ ಅಗ್ನಿಯು ಶುಭಫಲವನ್ನು ಕೊಡುತ್ತಾನೆಂದು ತಿಳಿಯಬೇಕು.

ಆಮೇಲೆ ಉತ್ತರದಲ್ಲಿರುವ ಇಧ್ಮಬಂಧನರಜ್ಜುವನ್ನು (ಇಧ್ಮವನ್ನು ಕಟ್ಟಿದ ದರ್ಭೆಯ ಹಗ್ಗ ವನ್ನು) ಬಿಚ್ಚಿ **"ರುದ್ರಾಯ ಸ್ವಾಹಾ" "ರುದ್ರಾಯ ಇದಂ ನ ಮಮ"** ಎಂದು ಹೇಳಿ ಆಹುತಿ ಕೊಡಬೇಕು. ನೀರಿನಿಂದ ಕೈತೊಳೆಯಬೇಕು. ಆಮೇಲೆ **"ಅಯಾಶ್ಚಾಗ್ನೇ" "ಅತೋ ದೇವಾ" "ಇದಂ ವಿಷ್ಣು"** ಎಂಬ ಈ ಮೂರು ಮಂತ್ರಗಳನ್ನೂ **ಭೂಃ ಭುವಃ ಸ್ವಃ ಭೂರ್ಭುವಃ ಸ್ವಃ** ನಾಲ್ಕು ವ್ಯಾಹೃತಿಗಳನ್ನೂ ಹೇಳಿ ಏಳು ಪ್ರಾಯಶ್ಚಿತ್ತ ಆಹುತಿಗಳನ್ನು ತುಪ್ಪದಿಂದ ಕೊಡಬೇಕು.

ನಂತರ ಬ್ರಹ್ಮನು ಕರ್ತನಿಗೆ ಪ್ರದಕ್ಷಿಣೆಯಾಗಿ ಬಂದು ಅಗ್ನಿಯ ವಾಯವ್ಯ ದಿಕ್ಕಿನಲ್ಲಿ ನಿಂತು ಈ ಏಳು ಆಹುತಿಗಳನ್ನು ಕೊಡಬೇಕು. **"ನ ಮಮ"** ಎಂದು ಯಜಮಾನನೇ ಹೇಳಬೇಕು.

**ಋಷಯಃ ॥ ಅಗ್ನಿವಾಯುಸೂರ್ಯಪ್ರಜಾಪತಯೋ ದೇವತಾಃ । ಗಾಯತ್ರ್ಯುಷ್ಣಿ-ಗನುಷ್ಟುಬ್ಬೃಹತ್ಯಶ್ಛಂದಾಂಸಿ ॥ ಪ್ರಾಯಶ್ಚಿತ್ತಾಜ್ಯಹೋಮೇ ವಿನಿಯೋಗಃ ॥ ಓಂ ಭೂಃ ಸ್ವಾಹಾ ಅಗ್ನಯ ಇದಂ ನ ಮಮ ॥ ೪ ॥ ಓಂ ಭುವಃ ಸ್ವಾಹಾ ವಾಯವ ಇದಂ ನ ಮಮ ॥ ೫ ॥ ಓಂ ಸ್ವಃ ಸ್ವಾಹಾ ಸೂರ್ಯಾಯೇದಂ ನ ಮಮ ॥ ೬ ॥ ಓಂ ಭೂರ್ಭುವಃ ಸ್ವಃ ಸ್ವಾಹಾ ಪ್ರಜಾಪತಯ ಇದಂ ನ ಮಮ ॥**

**ತತೋ ಬ್ರಹ್ಮಾ ಕರ್ತಾರಂ ಪರೀತ್ಯಾಗ್ನೇರ್ವಾಯವ್ಯದೇಶೇ ತಿಷ್ಠನ್ನೇತಾ ಏವ ಸಪ್ತಾಜ್ಯಾಹುತೀರ್ಜುಹುಯಾತ್ ॥ ತ್ಯಾಗಂ ಯಜಮಾನೋಽತ್ರ ಕುರ್ಯಾತ್ ॥**

**ತತಸ್ತತ್ರಸ್ಥೋ ಬ್ರಹ್ಮೈವ ಮಂತ್ರವಿಪರ್ಯಾಸಾದಿ ನಿಯತನಿಮಿತ್ತೇ ಸತಿ ॥ ಅನಾಜ್ಞಾತಮಿತಿ ಮಂತ್ರದ್ವಯಸ್ಯ ಹಿರಣ್ಯಗರ್ಭೋಽಗ್ನಿರನುಷ್ಟುಪ್ । ಜ್ಞಾತಾಜ್ಞಾತದೋಷ ನಿಬರ್ಹಣಾರ್ಥಂ ಪ್ರಾಯಶ್ಚಿತ್ತಾಜ್ಯಹೋಮೇ ವಿನಿಯೋಗಃ ॥ ಓಂ ಅನಾಜ್ಞಾತಂ ಯದಾಜ್ಞಾತಂ ಯಜ್ಞಸ್ಯ ಕ್ರಿಯತೇ ಮಿಥು । ಅಗ್ನೇತದಸ್ಯಕಲ್ಪಯತ್ವಗ್ಂ ಹಿವೇತ್ಥಯಥಾತಥಗ್ಂ ಸ್ವಾಹಾ ॥ ಯಜಮಾನಃ ॥**

---

ಬ್ರಹ್ಮನು ತಾನು ಮೊದಲು ನಿಂತ ಸ್ಥಳದಲ್ಲೇ ನಿಂತುಕೊಂಡು **"ಅನಾಜ್ಞಾತಂ" "ಪುರುಷಸಮ್ಮಿತೋ" "ಯತ್ಪಾಕತ್ರಾ" "ಯದ್ವೋದೇವಾ"** ಇತ್ಯಾದಿ ಮಂತ್ರಗಳಿಂದ ಪ್ರಾಯಶ್ಚಿತ್ತಾಜ್ಯಾಹುತಿಗಳನ್ನು ಕೊಡಬೇಕು.

**ಪೂರ್ಣಾಹುತಿ:-** ಯಜಮಾನನು, **"ಸರ್ವಕರ್ಮಪ್ರಪೂರಣೀಂ ... ಹೋಷ್ಯಾಮಿ"** ಎಂದು ಸಂಕಲ್ಪಿಸಿ, ಸ್ರುವದಿಂದ ತುಪ್ಪವನ್ನು ತೆಗೆದು ಸ್ರುಚಿಯಲ್ಲಿ ತುಂಬಾ ತುಂಬಿಸಿ ಅದರಲ್ಲಿ ಸ್ರುವವನ್ನು ಮೇಲ್ಮುಖವಾಗಿಯೂ ಪುನಃ ಕೆಳಮುಖವಾಗಿಯೂ ಇಟ್ಟು ಸ್ರುವದ ತುದಿಗೆ ಗಂಧಪುಷ್ಪಾಕ್ಷತೆಗಳನ್ನಿಟ್ಟು ಎಡಗೈಯಿಂದ ಸ್ರುಕ್ ಸ್ರುವಗಳ ಬುಡವನ್ನು ಹಿಡಿದು, ಬಲಗೈಯಿಂದ ಶಂಖಮುದ್ರೆಯಲ್ಲಿ ಅದನ್ನು ಹಿಡಿದು, ಕಾಲುಗಳನ್ನು ಹೊಂದಿಸಿಟ್ಟು ನೆಟ್ಟಗೆ ನಿಂತು ಸ್ರುವದ ತುದಿಯನ್ನೇ ನೋಡುತ್ತ ಪ್ರಸನ್ನಚಿತ್ತನಾಗಿ **"ಸಮುದ್ರಾದೂರ್ಮಿ"** ಎಂಬ ಮಂತ್ರವನ್ನು ಹೇಳುತ್ತ ಭತ್ತದ ಕಾಳಿನಷ್ಟು ದಪ್ಪದ ತುಪ್ಪದ ಧಾರೆಯು ಸಂತತವಾಗಿ ಬೀಳುವಂತೆ ಹೋಮಿಸಬೇಕು. **"ವಿಜ್ಯೋತಿಷಾ"** ಎಂಬ ಮಂತ್ರದಿಂದ ಶೇಷಾಜ್ಯವನ್ನೂ ಹೋಮಿಸಿ, ಸಂಸ್ರಾವವನ್ನು ಕೊಡಬೇಕು.

ಅಗ್ನಯ ಇದಂ ನ ಮಮ ॥ ಓಂ ಪುರುಷಸಂಮಿತೋಯಜ್ಞೋಯಜ್ಞಃ ಪುರುಷ-ಸಂಮಿತಃ ॥ ಅಗ್ನೇತದಸ್ಯಕಲ್ಪಯತ್ವಗ್ಂ ಹಿವೇತ್ಥಯಥಾತಥಗ್ಂ ಸ್ವಾಹಾ ॥ ಅಗ್ನಯ ಇದಂ ನ ಮಮ ॥ ಯತ್ಪಾಕತ್ರೇತ್ಯಾಪ್ತ್ಯಸ್ತ್ರಿಷ್ಟುಪ್ ॥ ಪ್ರಾಯಶ್ಚಿತ್ತಾಜ್ಯ-ಹೋಮೇ ವಿನಿಯೋಗಃ ॥ ಓಂ ಯತ್ಪಾಕತ್ರಾಮನಸಾದೀನದಕ್ಷಾ ನ ಯಜ್ಞಸ್ಯ-ಮನ್ವತೇ ಮರ್ತ್ಯಾಸಃ । ಅಗ್ನಿಷ್ಟದ್ಧೋತಾಕ್ರತುವಿದ್ವಿಜಾನನ್ಯಜಿಷ್ಠೋ ದೇವಾಗ್ಂ ಋತುಶೋಯಜಾತಿಸ್ವಾಹಾ ॥ ಅಗ್ನಯ ಇದಂ ನ ಮಮ । ಯದ್ವೋ ದೇವಾ ಅಭಿತಪಾ ಮರುತಸ್ತ್ರಿಷ್ಟುಪ್ ॥ ಮಂತ್ರತಂತ್ರವಿಪರ್ಯಾಸಾದಿನಿಮಿತ್ತಕ-ಪ್ರಾಯಶ್ಚಿತ್ತಾಜ್ಯಹೋಮೇ ವಿನಿಯೋಗಃ ॥ ಓಂ ಯದ್ವೋ ದೇವಾ ಅತಿಪಾತಯಾನಿ ವಾಚಾ ಚ ಪ್ರಯೊತೀ ದೇವಹೇಳನಂ ॥ ಅರಾಯೋ ಅಸ್ಮಾಅಭಿದುಚ್ಛು-ನಾಯತೇನ್ಯತ್ರಾಸ್ಮನ್ಮರುತಸ್ತನ್ನಿಧೇತನ ಸ್ವಾಹಾ ॥ ಮರುದ್ಭ್ಯ ಇದಂ ನ ಮಮ ॥

ತತಃ ಸ್ಕನ್ನಭಿನ್ನಾದ್ಯನಿಯತನಿಮಿತ್ತೇ ಸತಿ ವಕ್ಷ್ಯಮಾಣಪ್ರಕಾರೇಣ ತತ್ತ್ರತಿ-ಪದೋಕ್ತಜಪಹೋಮಾನ್ ಕುರ್ಯಾತ್ ಬ್ರಹ್ಮಾ ॥ ಬ್ರಹ್ಮಣೋಽಭಾವೇ ಯಜ-ಮಾನ ಏವೈತಾನ್ ಪ್ರಾಯಶ್ಚಿತ್ತಾದೀನ್ ಕೃತ್ವಾ ಅನ್ಯಸ್ಮೈ ವರಂ ದದ್ಯಾತ್ ॥

ತತೋ ಯಜಮಾನಃ ಸರ್ವಕರ್ಮಪ್ರಪೂರಣೀಂ ಭದ್ರದ್ರವ್ಯದಾಂ ಪೂರ್ಣಾಹುತಿಮಾಜ್ಯೇನ ಹೋಷ್ಯಾಮಿ ಇತಿ ಸಂಕಲ್ಪ್ಯ ॥ ಸ್ರುವೇಣಾಜ್ಯಂ ಗೃಹೀತ್ವಾ ಸ್ರುಚಂ ಸಮಬಿಲಾಂ ಪೂರಯಿತ್ವಾ ತಸ್ಯಾಂ ಸ್ರುವಮೂರ್ಧ್ವಬಿಲಂ ನಿಧಾಯ ಪುನರಧೋಬಿಲಂ ನಿಕ್ಷಿಪ್ಯ ಸ್ರುವಾಗ್ರೇ ಕುಸುಮಾಕ್ಷತಾನ್ ನಿಧಾಯ ಸವ್ಯಪಾಣಿನಾ ಸ್ರುಕ್ಸ್ರುವಮೂಲೇ ಧೃತ್ವಾ ದಕ್ಷಿಣಪಾಣಿನಾ ಸ್ರುಕ್ಸ್ರುವಂ ಶಂಖಮುದ್ರಯಾ ಗೃಹೀತ್ವಾ ತಿಷ್ಠನ್ ಸಮಪಾದಋಜುಕಾಯಃ ಸ್ರುವಾಗ್ರ-ನ್ಯಸ್ತದೃಷ್ಟಿಃ ಪ್ರಸನ್ನಾತ್ಮಾ ॥ ಸಮುದ್ರಾದೂರ್ಮಿರಿತ್ಯೇಕಾದಶರ್ಚಸ್ಯ ಸೂಕ್ತಸ್ಯ ಗೌತಮೋ ವಾಮದೇವ ಆಪಸ್ತ್ರಿಷ್ಟುಪ್ ಅಂತ್ಯಾ ಜಗತೀ ಪೂರ್ಣಾಹುತೌ

ವಿನಿಯೋಗಃ ॥ "ಸಮುದ್ರಾದೂರ್ಮಿ ..." ಋಕ್ ೧೧ ॥ ಮಧುಮಂತಂತ ಊರ್ಮಿಂ ಸ್ವಾಹಾ ॥ ಇತಿ ಪಠನ್ ಯವಪರಿಮಿತಾಂ ಧಾರಾಂ ಸಂತತಾಂ ಸ್ರುಗಗ್ರೇಣ ಸಶೇಷಂ ಹುತ್ವಾ ಅದ್ಭ್ಯ ಇದಂ ನ ಮಮೇತಿ ತ್ಯಕ್ತ್ವಾ ॥ ವಿಜ್ಯೋ-ತಿಷೇತ್ಯಸ್ಯಜಾರೋವೃಶೋಗ್ನಿಸ್ತ್ರಿಷ್ಟುಪ್ ॥ ಪೂರ್ಣಾಹುತಿಶೇಷಾಜ್ಯಹೋಮೇ ವಿನಿಯೋಗಃ ॥ ಓಂ ವಿಜ್ಯೋತಿಷಾಬೃಹತಾಭಾತ್ಯಗ್ನಿರಾವಿರ್ವಿಶ್ವಾನಿಕೃಣುತೇಮ-ಹಿತ್ವಾ ॥ ಪ್ರಾದೇವೀರ್ಮಾಯಾಃ ಸಹತೇ ದುರೇವಾಃ ಶಿಶೀತೇ ಶೃಂಗೇ ರಕ್ಷಸೇ ವಿನಿಕ್ಷೇ ಸ್ವಾಹಾ ॥ ಇತ್ಯನೇನ ಚ ತಥೈವಾವಶೇಷಂ ಹುತ್ವಾ ಅಗ್ನಯ ಇದಂ ನ ಮಮೇತಿ ತ್ಯಕ್ತ್ವಾ ॥ ವಿಶ್ವೇಭ್ಯೋ ದೇವೇಭ್ಯಃ ಸ್ವಾಹೇತಿ ಸಂಸ್ರಾವಂ ಹುತ್ವಾ । ವಿಶ್ವೇಭ್ಯೋ ದೇವೇಭ್ಯ ಇದಂ ನ ಮಮೇತಿ ತ್ಯಜೇತ್ ॥

ತತಸ್ತಂದುಲಕಣಾನ್ ಸಮಿದ್ದರ್ಭಶಕಲಾನದ್ಭಿಃ ಪ್ರೋಕ್ಷ್ಯ ಅಗ್ನೌ ಪ್ರಹರೇತ್ ॥

ಅಥಾವಭೃಥಸ್ಥಾನೀಯಂ ಪೂರ್ಣಪಾತ್ರಜಲೇನ ಮಾರ್ಜನಂ ಕುರ್ಯಾತ್ ॥ ತದ್ಯಥಾ ॥ ಪೂರ್ವಾಸಾದಿತಂ ಪೂರ್ಣಪಾತ್ರಮಾಸ್ತೀರ್ಣೇ ಬರ್ಹಿಷಿ ದಕ್ಷಿಣಪಾಣಿನಾ ನಿಧಾಯ ತತ್ರ ಗಂಗಾದಿ ಪುಣ್ಯನದೀಃ ಸ್ಮರನ್ ದಕ್ಷಿಣ-ಪಾಣಿನಾ ಸ್ಪೃಶನ್ ॥ ಪೂರ್ಣಮಸಿ ಪೂರ್ಣಂ ಮೇ ಭೂಯಾಃ ॥ ಸುಪೂರ್ಣ-ಮಸಿ ಸುಪೂರ್ಣಂ ಮೇ ಭೂಯಾಃ ॥ ಸದಸಿ ಸನ್ಮೇ ಭೂಯಾಃ ॥ ಸರ್ವಮಸಿ ಸರ್ವಂ ಮೇ ಭೂಯಾಃ ॥ ಅಕ್ಷಿತಿರಸಿ ಮಾಮೇಕ್ಷೇಷ್ಠಾಃ ॥ ಇತಿ ಜಪಿತ್ವಾ ಕುಶಾಗ್ರೈಃ ಪ್ರಾಗಾದಿ ಪಂಚದಿಕ್ಷು ಜಲಂ ಮಂತ್ರೈರ್ಯಥಾಲಿಂಗಂ ಸಿಂಚೇತ್ ॥ ತೇ ಚ ಮಂತ್ರಾಃ ಪ್ರಾಚ್ಯಾಂ ದಿಶಿ ದೇವಾ ಋತ್ವಿಜೋ ಮಾರ್ಜಯಂತಾಂ ।

---

ಆ ಮೇಲೆ ಹೋಮಕುಂಡದ ಸುತ್ತಲೂ ಬಿದ್ದಿರುವ ಅಕ್ಕಿಕಾಳು, ಸಮಿಧೆ, ದರ್ಭೆ ಮುಂತಾದವುಗಳಿಗೆ ನೀರನ್ನು ಪ್ರೋಕ್ಷಿಸಿ, ಅವುಗಳನ್ನು ಅಗ್ನಿಯಲ್ಲಿ ಹಾಕಬೇಕು.

ಬಳಿಕ ಅವಭೃಥಸ್ನಾನಕ್ಕೋಸ್ಕರ ಪೂರ್ಣಪಾತ್ರೆಯ ನೀರಿನಿಂದ ಮಾರ್ಜನ ಮಾಡಬೇಕು. ಮೊದಲೇ ಇಟ್ಟಿದ್ದ ಪೂರ್ಣಪಾತ್ರೆಯನ್ನು ತನ್ನ ಮುಂಭಾಗದಲ್ಲಿ ಹರಡಿದ ಬರ್ಹಿಯ ಮೇಲೆ

**ದಕ್ಷಿಣಸ್ಯಾಂ ದಿಶಿ ಮಾಸಾಃ ಪಿತರೋ ಮಾರ್ಜಯಂತಾಂ ॥ ಅಪಉಪಸ್ಪೃಶ್ಯ ॥ ಪ್ರತೀಚ್ಯಾಂ ದಿಶಿ ಗೃಹಾಃ ಪಶವೋ ಮಾರ್ಜಯಂತಾಂ । ಉದೀಚ್ಯಾಂ ದಿಶ್ಯಾಪ ಓಷಧಿ ವನಸ್ಪತಯೋ ಮಾರ್ಜಯಂತಾಂ ॥ ಊರ್ಧ್ವಾಯಾಂ ದಿಶಿ ಯಜ್ಞಃ ಸಂವತ್ಸರಃ ಪ್ರಜಾಪತಿರ್ಮಾರ್ಜಯತಾಂ ॥ ಇತ್ಯೇಕಶ್ರುತ್ಯಾ ಪಠನ್ ಪ್ರತಿದಿಶಂ ಸಿಕ್ತ್ವಾ ಕುಶಾಗ್ರೈಃ ಸ್ವಶಿರಸಿ ಮಾರ್ಜಯೇತ್ ॥ ಆಪೋ ಅಸ್ಮಾನಿತ್ಯಸ್ಯ ದೇವಶ್ರವಾ ಆಪಸ್ತ್ರಿಷ್ಟುಪ್ ಮಾರ್ಜನೇ ವಿನಿಯೋಗಃ ॥ ಓಂ ಆಪೋ-ಅಸ್ಮಾನ್ಮಾತರಃ ಶುಂಧಯಂತು ಘೃತೇನ ನೋ ಘೃತಪ್ವಃ ಪುನಂತು ॥ ವಿಶ್ವಂ ಹಿರಿಪ್ರಂ ಪ್ರವಹಂತಿದೇವೀರುದಿದಾಭ್ಯಃ ಶುಚಿರಾಪೂತಏಮಿ ॥ ಇದಮಾಪಃ ಸಿಂಧುದ್ವೀಪ ಆಪೋಽನುಷ್ಟುಪ್ ಮಾರ್ಜನೇ ವಿನಿಯೋಗಃ । ಇದಮಾಪಃ ಪ್ರವಹತ ಯತ್ಕಿಂ ಚ ದುರಿತಂ ಮಯಿ ॥ ಯದ್ವಾಹಮಭಿದುದ್ರೋಹಯದ್ವಾಶೇಪ-ಉತಾನೃತಂ ॥ ಸುಮಿತ್ರ್ಯಾನ ಆಪ ಓಷಧಯಃ ಸಂತು ॥ ಇತ್ಯೇತೈಃ ಮಂತ್ರಾಂತೇ ಮಾರ್ಜನಂ ಕೃತ್ವಾ ॥ ದುರ್ಮಿತ್ರ್ಯಾಸ್ತಸ್ಮೈಸಂತು ಯೋಽಸ್ಮಾನ್ ದ್ವೇಷ್ಟಿ ಯಂ ಚ ವಯಂ ದ್ವಿಷ್ಮಸ್ತಂ ಹನ್ಮಿ ॥ ಇತಿ ನಿರ್ಋತಿದೇಶೇ ಕುಶಾಗ್ರೈರಪಃ ಸಿಂಚೇತ್ ॥**

---

ಇಡಬೇಕು. ಅದರ ಮೇಲೆ ಬಲಗೈಯನ್ನಿಟ್ಟು ಗಂಗಾ ಮೊದಲಾದ ಪುಣ್ಯನದಿಗಳ ಸಾನ್ನಿಧ್ಯವು ಇದರಲ್ಲಿದೆ ಎಂದು ಸ್ಮರಿಸುತ್ತ "**ಪೂರ್ಣಮಸಿ**" ಈ ಮಂತ್ರವನ್ನು ಜಪಿಸಬೇಕು. ದರ್ಭೆಗಳ ತುದಿಯಿಂದ, "**ಪ್ರಾಚ್ಯಾಂ ದಿಶಿ ...**" ಇತ್ಯಾದಿ ಒಂದೊಂದೇ ಮಂತ್ರವನ್ನು ಹೇಳುತ್ತ ಒಂದೊಂದು ದಿಕ್ಕಿಗೆ ನೀರನ್ನು ಸಿಂಪಡಿಸಬೇಕು. ದಕ್ಷಿಣ ದಿಕ್ಕಿಗೆ ಆದಮೇಲೆ ಕೈ ತೊಳೆಯಬೇಕು. "**ಆಪೋ ಅಸ್ಮಾನ್**" ಎಂಬ ಮಂತ್ರದಿಂದ ತನ್ನ ಮೇಲೆ ಮಾರ್ಜನ ಮಾಡಿಕೊಂಡು, "**ದುರ್ಮಿತ್ರ್ಯಾ**" ಎಂಬ ಮಂತ್ರವನ್ನು ಹೇಳಿ ನೈಋತ್ಯ ದಿಕ್ಕಿಗೆ ನೀರನ್ನು ಪ್ರೋಕ್ಷಿಸಬೇಕು.

ಬಳಿಕ ಬ್ರಹ್ಮನು ಯಜಮಾನನ ಪತ್ನಿಯ ಅಂಜಲಿಯಲ್ಲಿ ಪೂರ್ಣಪಾತ್ರೆಯಲ್ಲಿರುವ ನೀರನ್ನು, "**ಮಾಹಂ ಪ್ರಜಾಂ ...** " ಎಂಬ ಮಂತ್ರವನ್ನು ಅವಳಿಂದ ಹೇಳಿಸಿ ಅಥವಾ ತಾನೇ ಹೇಳುತ್ತ ಪಶ್ಚಿಮಕ್ಕೆ ಮುಖಮಾಡಿ ಸುರಿಯಬೇಕು. ಅಂಜಲಿಯಲ್ಲಿರುವ ನೀರನ್ನು ತನ್ನ ಯಜಮಾನನ ಮತ್ತು ಪತ್ನಿಯ ಮೇಲೆ ಪ್ರೋಕ್ಷಿಸಬೇಕು. ಅವಳು ಉಳಿದ ನೀರನ್ನು ಬರ್ಹಿಯ ಮೇಲೆ ಸುರಿಯಬೇಕು. ಅಥವಾ ಯಜಮಾನನೇ ತನ್ನ ಎಡಗೈಯ ಮೇಲೆ ಬರ್ಹಿಯನ್ನು ಇಟ್ಟು ಬಲಗೈಯಿಂದ ಪೂರ್ಣಪಾತ್ರೆಯಲ್ಲಿರುವ ನೀರನ್ನು "**ಮಾಹಂ ಪ್ರಜಾಂ**" ಎಂಬ ಮಂತ್ರದಿಂದ

ತತೋ ಬ್ರಹ್ಮಾ ಯಜಮಾನವಾಮಪಾರ್ಶ್ವಸ್ಥಿತ ಪತ್ನ್ಯಂಜಲೌ ಪೂರ್ಣ-ಪಾತ್ರಸ್ಥಂ ಜಲಂ ॥ ಓಂ ಮಾಹಂ ಪ್ರಜಾಂ ಪರಾಸಿಚಂ ಯಾನಃ ಸಯಾವರೀ-ಸ್ಥನ । ಸಮುದ್ರೇವೋ ನಿನಯಾನಿ ಸಂ ಪಾಥೋ ಅಪೀಥೇತಿ ಮಂತ್ರಂ ಪತ್ನ್ಯಾ ವಾಚಯನ್ ಸ್ವಯಂ ವಾ ಪಠನ್ ಪ್ರತ್ಯಙ್ಮುಖಂ ನಿಷಿಚ್ಯ ಅಂಜಲಿಸ್ಥ-ಜಲೈಃ ಪಾಪಾಪನೋದನಾರ್ಥಮಾತ್ಮಾನಂ ಯಜಮಾನಂ ಪತ್ನೀಂ ಚ ಪ್ರೋಕ್ಷೇತ್ ॥ ಪತ್ನೀ ತಜ್ಜಲಂ ಬರ್ಹಿಷಿ ನಿಷಿಂಚೇತ್ ॥ ಅಥವಾ ಯಜಮಾನ ಏವ ಸ್ವ ವಾಮಪಾಣಾವುತ್ತಾನೇ ಬರ್ಹಿರ್ನಿಧಾಯ ತತ್ರ ದಕ್ಷಿಣಪಾಣಿನಾ ಪೂರ್ಣಪಾತ್ರಮಾದಾಯ ಮಾಹಂ ಪ್ರಜಾಮಿತ್ಯನೇನ ತಜ್ಜಲಂ ಪ್ರತ್ಯಙ್ಮುಖಂ ನಿಷಿಚ್ಯ ತಾ ಆಪಃ ಸಮುದ್ರಂ ಗಚ್ಛಂತೀತಿ ಧ್ಯಾತ್ವಾ ಪಾಣಿಸ್ಥಜಲೈರಾತ್ಮಾನಂ ಪತ್ನೀಂ ಚ ಪ್ರೋಕ್ಷೇತ್ ॥

ತತಃ ಕರ್ತಾಗ್ನೇರ್ವಾಯವ್ಯದೇಶೇ ಸ್ಥಿತಃ ಸಂಸ್ಥಾಜಪೇನೋಪತಿಷ್ಠೇತ ॥ ತದ್ಯಥಾ ॥ ಅಗ್ನೇ ತ್ವಂ ನ ಇತಿ ಚತಸೃಣಾಂ ಗೌಪಾಯನಾ ಲೌಪಾಯನಾ ವಾಬಂಧುಃ ಸುಬಂಧುಃ ಶ್ರುತಬಂಧುರ್ವಿಪ್ರಬಂಧುಶ್ಚೈಕರ್ಚಾ ಋಷಯಃ ॥ ಅಗ್ನಿರ್ದೇವತಾ ॥ ದ್ವಿಪದಾ ವಿರಾಟ್ ಛಂದಃ ॥ ಅಗ್ನ್ಯುಪಸ್ಥಾನೇ ವಿನಿಯೋಗಃ ॥ ಓಂ ಅಗ್ನೇತ್ವಂ ನೋ ಅಂತಮಉತತ್ರಾತಾಶಿವೋಭವಾವರೂಥ್ಯಃ ವಸುರಗ್ನಿ-ರ್ವಸುಶ್ರವಾಅಚ್ಛಾನಕ್ಷಿದ್ಯುಮತ್ತಮಂರಯಿಂದಾಃ । ಸನೋಬೋಧಿಶ್ರುಧೀ-ಹವಮುರುಷ್ಯಾಣೋ ಅಘಾಯತಃ ಸಮಸ್ಮಾತ್ ॥ ತಂತ್ವಾಶೋಚಿಷ್ಠದೀದಿವಃ ಸುಮ್ನಾಯನೂನಮೀಮಹೇ ಸಖಿಭ್ಯಃ ॥ ಓಂ ಚ ಮೇ ಸ್ವರಶ್ಚ ಮೇ ಯಜ್ಞೋಪಚ-ತೇನಮಶ್ಚ ॥ ಯತ್ತೇ ನ್ಯೂನಂ ತಸ್ಮೈತ ಉಪ ಯತ್ತೇತಿರಿಕ್ತಂ ತಸ್ಮೈ ತೇ ನಮಃ ॥ ಅಗ್ನಯೇ ನಮಃ ಓಂ ಸ್ವಸ್ತಿ ॥ ಶ್ರದ್ಧಾಂ ಮೇಧಾಂ ಯಶಃ

---

ಸುರಿದು "ಈ ನೀರು ಸಮುದ್ರಕ್ಕೆ ಹೋಗುವುದೆಂದು" ಸ್ಮರಿಸಿ ಉಳಿದ ನೀರಿನಿಂದ ತನ್ನನ್ನೂ, ಪತ್ನಿಯನ್ನೂ ಪ್ರೋಕ್ಷಿಸಬೇಕು.

ಆಮೇಲೆ ಕರ್ತನು ಅಗ್ನಿಯ ವಾಯವ್ಯ ದಿಕ್ಕಿನಲ್ಲಿ ನಿಂತು ಉಪಸ್ಥಾನ ಮಾಡಬೇಕು.

**ಪ್ರಜ್ಞಾಂ ವಿದ್ಯಾಂ ಬುದ್ಧಿಂ ಶ್ರಿಯಂ ಬಲಂ ॥ ಆಯುಷ್ಯಂ ತೇಜ ಆರೋಗ್ಯಂ ದೇಹಿ ಮೇ ಹವ್ಯವಾಹನ ॥**

**ಮಾನಸ್ತೋಕ ಇತ್ಯಸ್ಯ ಕುತ್ಸೋ ರುದ್ರೋ ಜಗತೀ ॥ ವಿಭೂತಿಗ್ರಹಣೇ ವಿನಿಯೋಗಃ ॥ ಓಂ ಮಾನಸ್ತೋಕೇತನಯೇ ಮಾನ ಆಯೌ ಮಾನೋ ಗೋಷು ಮಾನೋ ಅಶ್ವೇಷು ರೀರಿಷಃ । ವೀರಾನ್ಮಾನೋ ರುದ್ರಭಾಮಿತೋವ-ಧೀರ್ಹವಿಷ್ಮಂತಃ ಸದಮಿತ್ವಾಹವಾಮಹೇ ॥ ಇತಿ ಸ್ರುವಬಿಲಪೃಷ್ಠೇನ ಐಶಾನೀಗತಾಂ ವಿಭೂತಿಂ ಗೃಹೀತ್ವಾ ॥ ಓಂ ತ್ರ್ಯಾಯುಷಂ ಜಮದಗ್ನೇರಿತಿ ಲಲಾಟೇ ॥ ಕಶ್ಯಪಸ್ಯ ತ್ರ್ಯಾಯುಷಮಿತಿ ಕಂಠೇ ॥ ಅಗಸ್ತ್ಯಸ್ಯ ತ್ರ್ಯಾಯುಷಮಿತಿ ನಾಭೌ ॥ ಯದ್ದೇವಾನಾಂ ತ್ರ್ಯಾಯುಷಮಿತಿ ದಕ್ಷಿಣಸ್ಕಂಧೇ ॥ ತನ್ನ ಅಸ್ತು ತ್ರ್ಯಾಯುಷಮಿತಿ ವಾಮಸ್ಕಂಧೇ ॥ ಸರ್ವಮಸ್ತು ಶತಾಯುಷಮಿತಿ ಶಿರಸಿ ॥ ಕೇಚಿತ್ತೂಪಸ್ಥಾನಾ-ತ್ಪೂರ್ವಂ ವಿಭೂತಿ ಧಾರಣಮಿತ್ಯಾಹುಃ ॥ ತತಃ ಪರಿಸ್ತರಣಾನಿ ಉತ್ತರೇ ವಿಸೃಜ್ಯ ಅಗ್ನಿಂ ಪರಿಸಮುಹ್ಯ ಪರಿಷಿಚ್ಯ "ವಿಶ್ವಾನಿನ" ಇತ್ಯರ್ಚಯಿತ್ವಾ ನತ್ವಾ ಚ ಪುಷ್ಪಾದಿಭಿರಲಂಕೃತ್ಯ ನೈವೇದ್ಯಂ ತಾಂಬೂಲಂ ಚ ನಿವೇದ್ಯ ॥ ಬ್ರಹ್ಮಣೇ ಯಥೋಕ್ತ ದಕ್ಷಿಣಾಂ ದಕ್ಷಿಣಾಭಾವೇ ಹುತಶೇಷಂ ಘೃತಾದಿ ಸಹಿರಣ್ಯಂ ದತ್ವಾ ಬ್ರಹ್ಮಾಭಾವೇ ಅನ್ಯಸ್ಮೈ**

---

"**ಮಾನಸ್ತೋಕ ...**" ಎಂಬ ಮಂತ್ರವನ್ನು ಹೇಳಿ ಸ್ರುವದ ತುದಿಯಲ್ಲಿ ಈಶಾನ್ಯ ದಿಕ್ಕಿನಿಂದ ವಿಭೂತಿಯನ್ನು ತೆಗೆದುಕೊಂಡು, "**ತ್ರ್ಯಾಯುಷಂ**" ಎಂದು ಮುಂತಾಗಿ ಕ್ರಮಪ್ರಕಾರ ಲಲಾಟ, ಕಂಠ, ನಾಭಿ, ಬಲಗೈಭುಜ, ಎಡಗೈಭುಜ ಮತ್ತು ತಲೆಯ ಮೇಲೆ ವಿಭೂತಿ ಧಾರಣ ಮಾಡಬೇಕು.

ಆಮೇಲೆ ಪರಿಸ್ತರಣಗಳನ್ನು ಉತ್ತರದಿಕ್ಕಿನಲ್ಲಿ ವಿಸರ್ಜಿಸಿ, ಅಗ್ನಿಯನ್ನು ಪರಿಸಮೂಹನ ಪರ್ಯುಕ್ಷಣಗಳಿಂದ ಸಂಸ್ಕರಿಸಿ, "**ವಿಶ್ವಾನಿನ**" ಎಂಬ ಮಂತ್ರದಿಂದ ಅರ್ಚಿಸಿ, ಅಲಂಕರಿಸಿ "**ಅಗ್ನಯೇ ನಮಃ**" ಎಂಬ ಮಂತ್ರವನ್ನು ಹೇಳುತ್ತ ಪೂಜೆ ಮಾಡಿ ನೈವೇದ್ಯ ತಾಂಬೂಲಾದಿಗಳನ್ನು ಅರ್ಪಿಸಿ ನಮಸ್ಕಾರ ಮಾಡಬೇಕು.

ಬ್ರಹ್ಮನಿಗೆ ವಿಹಿತವಾದ ದಕ್ಷಿಣೆಯನ್ನಿತ್ತು, ಬ್ರಹ್ಮನಿಲ್ಲವಾದರೆ ಯಾವನಾದರೊಬ್ಬ ಬ್ರಾಹ್ಮಣನಿಗೆ, ದಕ್ಷಿಣೆ ಇಲ್ಲವೆಂದಾದರೆ ಹೋಮಮಾಡಿ ಉಳಿದ ತುಪ್ಪವನ್ನು ಹಿರಣ್ಯಸಹಿತ

**ಬ್ರಾಹ್ಮಣಾಯ ದತ್ವಾ ಪಾತ್ರಾಣಿ ಪ್ರಕ್ಷಾಲ್ಯ ಪೂರ್ವಕ್ರಮೇಣ ದ್ವಂದ್ವಶ ಉತ್ಸೃಜ್ಯ ಯಸ್ಯಸ್ಮೃತ್ಯೇತಿ ಶ್ರೀವಿಷ್ಣುಂ ನತ್ವಾ ಕರ್ಮೇಶ್ವರಾರ್ಪಣಂ ಕೃತ್ವಾಚಾಮೇತ್ ॥ ಧೃತಪವಿತ್ರಗ್ರಂಥಿಂ ವಿಸೃಸ್ಯ ಶುದ್ಧದೇಶೇ ಕ್ಷಿಪೇತ್ ॥**

**॥ ಇತಿ ಸ್ಥಾಲೀಪಾಕಪ್ರಯೋಗಃ ॥**

---

ಕೊಟ್ಟು, ಪಾತ್ರಾದಿಗಳನ್ನು ಮೊದಲು ಇಟ್ಟ ಕ್ರಮದಲ್ಲೇ ಎರಡೆರಡಾಗಿ ತೊಳೆದು ಹಾಗೇ ಇಟ್ಟು, ವಿಷ್ಣುಸ್ಮರಣೆ ಮಾಡಿ, ಕರ್ಮವನ್ನು ಈಶ್ವರಾರ್ಪಣೆ ಮಾಡಿ, ಪವಿತ್ರವನ್ನು ವಿಸರ್ಜಿಸ ಬೇಕು.

॥ ಸ್ಥಾಲೀಪಾಕಪ್ರಯೋಗ ಸಮಾಪ್ತ ॥

# ೨೦

# ॥ ಗೃಹ್ಯಾಗ್ನೇಃ ಪುನಃ ಸಂಧಾನಂ ॥

॥ ಶ್ರೀಃ ॥ ಪತ್ನ್ಯಾ ಸಹ ಕೃತಸ್ನಾನಾದಿಃ ಕೃತನಿತ್ಯಕ್ರಿಯೋ ದೇಶಕಾಲೌ ಸಂಕೀರ್ತ್ಯ, ಮಮ ಗೃಹ್ಯಾಗ್ನಿವಿಚ್ಛೇದದಿನಾದಾರಭ್ಯ ಏತಾವಂತಂ ಕಾಲಂ ಗೃಹ್ಯಾಗ್ನಿವಿಚ್ಛೇದಜನಿತ ದೋಷಪರಿಹಾರದ್ವಾರಾ ಶ್ರೀಪರಮೇಶ್ವರಪ್ರೀತ್ಯರ್ಥಂ, ಗೃಹ್ಯಾಗ್ನಿವಿಚ್ಛೇದದಿನಾದಾರಭ್ಯ ಏತಾವದಬ್ದಪರ್ಯಂತಂ ಪ್ರತ್ಯಬ್ದಮೇಕೈಕ- ಕೃಚ್ಛ್ರಂ ಯಥಾಶಕ್ತಿ ತತ್ಪ್ರತ್ಯಾಮ್ನಾಯ ಗೋನಿಷ್ಕ್ರಯೀಭೂತರಜತನಿಷ್ಕ- ನಿಷ್ಕಾರ್ಧಂ ನಿಷ್ಕಪಾದನಿಷ್ಕಪಾದಾರ್ಧಾನ್ಯತಮದ್ರವ್ಯದಾನೇನಾಹಮಾಚರಿಷ್ಯೇ ॥ ತಥಾ ಏತಾವದ್ದಿನೇಷು ಗೃಹ್ಯಾಗ್ನಿವಿಚ್ಛೇದೇನ ಲುಪ್ತಸಾಯಂಪ್ರಾತರೌಪಾಸ[illegible] ಹೋಮದ್ರವ್ಯಂ ತಥಾ ಲುಪ್ತದರ್ಶಪೌರ್ಣಮಾಸಸ್ಥಾಲೀಪಾಕಾದಿ ಕರ್ಮ[illegible] ಪರ್ಯಾಪ್ತವ್ರೀಹ್ಯಾಜ್ಯದ್ರವ್ಯಂ ತನ್ನಿಷ್ಕ್ರಯಂ ವಾ ದಾತುಮಹಮುತ್ಸೃಜ್ಯೇ ॥ ಇತಿ ಸಂಕಲ್ಪ್ಯ ಕೃತ್ವಾ ಪುನಃ ದೇಶಕಾಲೌ ಸ್ಮೃತ್ವಾ ವಿಚ್ಛಿನ್ನಸ್ಯ ಗೃಹ್ಯಾಗ್ನೇಃ ಪ[illegible]ಃ ಸಂಧಾನಂ ಕರಿಷ್ಯ ಇತಿ ಸಂಕಲ್ಪ್ಯ ಸ್ಥಂಡಿಲೋಪಲೇಪನೋಲ್ಲೇಖನಾಭ್ಯು[illegible] ದ್ವಿಜನಾಮಾಗ್ನಿ ಪ್ರತಿಷ್ಠಾಪನಾನಿ ಕೃತ್ವಾನ್ವಾಧಾನಂ ಕುರ್ಯಾತ್ ॥

ಸಮಿದ್ದ್ವಯಮಾದಾಯ ಪುನಃಸಂಧಾನಹೋಮೇ ದೇವತಾಪರಿಗ್ರಹಾ[illegible]- ಮನ್ವಾಧಾನಂ ಕರಿಷ್ಯೇ ॥ ಅಸ್ಮಿನ್ನನ್ವಾಹಿತೇಗ್ನೌ ಜಾತವೇದಸಮಗ್ನಿಮಿಧ್ಮೇನ

---

**ಪುನಃಸಂಧಾನ:-** ಪತ್ನಿಯೊಂದಿಗೆ ಸ್ನಾನ ನಿತ್ಯಕರ್ಮಾದಿಗಳನ್ನು ಮಾಡಿ, ದೇಶಕಾಲ[illegible] ಗಳನ್ನು ಸ್ಮರಿಸಿ **"ಮಮ"** ಎಂಬಲ್ಲಿಂದ ಪ್ರಾರಂಭಿಸಿ, **"ಪುನಃ ಸಂಧಾನಂ ಕರಿಷ್ಯೇ"** ಎಂ[illegible]ಲ್ಲಿ ವರೇಗೆ ಉಚ್ಚರಿಸಿ ಸಂಕಲ್ಪ ಮಾಡಬೇಕು. ಗೃಹ್ಯಾಗ್ನಿವಿಚ್ಛೇದವಾದ ದಿನದಿಂದ ಮೊದಲ್ಗೊಂ[illegible] ಇಂದಿನ ವರೆಗೆ, ಅಂತಹ ವಿಚ್ಛೇದದಿಂದ ಉಂಟಾದ ದೋಷ ಪರಿಹಾರವಾಗುವುದರ ಮೂಲ ಶ್ರೀ ಪರಮೇಶ್ವರಪ್ರೀತ್ಯರ್ಥವಾಗಿ ಆ ದಿನದಿಂದ ಆರಂಭಿಸಿ, ಈ ವರ್ಷದ ವರೆಗೆ ವರ್ಷ ವೊಂದರ ಒಂದೊಂದು ಕೃಚ್ಛ್ರದಂತೆ, ಅಥವಾ ಅದಕ್ಕೆ ಬದಲಾಗಿ ಯಥಾಶಕ್ತಿ ಗೋನಿಷ್ಕ್ರಯ ರೂಪದಲ್ಲಿ ಒಂದೊಂದು ಬೆಳ್ಳಿಯ ನಾಣ್ಯ, ಅದರ ಅರ್ಧ ಅಥವಾ ಕಾಲಂಶ ಇಲ್ಲವೇ ಅದರ ಅರ್ಧದಷ್ಟನ್ನಾದರೂ ದಾನಮಾಡುವೆನೆಂದು ನೀರುಬಿಡಬೇಕು. ಅಂತೆಯೇ ಇಷ್ಟು ಸಮಯದ ವರೇಗೆ ಲೋಪವಾದ ಸಾಯಂಪ್ರಾತರೌಪಾಸನಹೋಮಗಳು, ದರ್ಶಪೌರ್ಣಮಾಸೀಹೋಮ ಗಳು, ಅವುಗಳಲ್ಲಿ ಉಪಯೋಗಿಸಲ್ಪಡಬೇಕಾದ ಭತ್ತ, ತುಪ್ಪ ಮುಂತಾದ ದ್ರವ್ಯಗಳನ್ನು ಅಥವಾ ಅದರ ಕ್ರಯವನ್ನು ಕೊಡುವೆನೆಂದು ನೀರುಬಿಡಬೇಕು. ಹೀಗೆ ಸಂಕಲ್ಪಿಸಿ ಅದನ್ನು ಮಾಡಿ, ಮತ್ತೊಮ್ಮೆ ದೇಶಕಾಲಗಳನ್ನು ಸ್ಮರಿಸಿ ಸ್ಥಂಡಿಲವನ್ನು ನಿರ್ಮಾಣಮಾಡಿ, ಉಪಲೇಪನ ಅಭ್ಯುಕ್ಷಣ, ಮುಂತಾದವುಗಳನ್ನು ಪೂರಯಿಸಿ **'ದ್ವಿಜ'** ಎಂಬ ಅಗ್ನಿಯನ್ನು ಪ್ರತಿಷ್ಠಾಪಿಸಿ ಅನ್ವಾಧಾನವನ್ನು ಮಾಡುವುದು.

ಪ್ರಜಾಪತಿಂ ಪ್ರಜಾಪತಿಂ ಜಾಘಾರದೇವತೇ ಆಜ್ಯೇನ, ಅತ್ರ ಪ್ರಧಾನಂ ತ್ರಿರಗ್ನಿಂ ಪವಮಾನಂ ಸಕೃದಗ್ನಿಂ ಪ್ರಜಾಪತಿಂ ಚಾಜ್ಯೇನ ಅರ್ಯಮಾಗ್ನಿಂ ವರುಣಾಗ್ನಿಂ ಪೂಷಾಗ್ನಿಂ ಪ್ರಜಾಪತಿಂ ಚ ಲಾಜದ್ರವ್ಯೇಣ ಸೂರ್ಯಾಸಾವಿತ್ರೀಂ ಚತುರ್ವಾರ-ಮಾಜ್ಯದ್ರವ್ಯೇಣ ।

ಶೇಷೇಣ ಸ್ವಿಷ್ಟಕೃತಮಿತ್ಯಾದಿ ಪರಿಸಮೂಹನಾದಿ ಕೃತ್ವಾ ॥ ಪಾತ್ರಾ-ಸಾದನೇ ವಿಶೇಷಃ ॥ ಪ್ರೋಕ್ಷಣೀಂ ಸ್ರುವಂ ಪ್ರಣೀತಾಮಾಜ್ಯಪಾತ್ರಂ ಲಾಜ-ಶೂರ್ಪಂ ಇಧ್ಮಂ ಬರ್ಹಿಶ್ಚ ದಧಿಪ್ರಾಶನಪಕ್ಷೇ ದಧಿ ಚಾಸಾದಯೇತ್ ॥ ಆಜ್ಯ-ಸಂಸ್ಕಾರಾದಿ ಕೃತ್ವಾ ॥ ತತ್ರಾಜ್ಯೇನ ಸಹ ಲಾಜಾನಾಮಪಿ ಪರ್ಯಗ್ನಿಕರಣಂ ॥ ಆಜ್ಯೋತ್ಪವನಮಾತ್ರೇ ಕೃತೇ ಲಾಜಾನಾಂ ತ್ರಿಃ ಪ್ರೋಕ್ಷಣಂ ॥ ಸ್ರುವಸಂಮಾರ್ಜನಾದಿ ಪತ್ನ್ಯನ್ವಾರಬ್ಧ ಇಧ್ಮಾಧಾನಾದ್ಯಾಘಾರಾಂತಂ ಕುರ್ಯಾನ್ನ ಚಕ್ಷುಷೀ ॥

ಅಗ್ನ ಆಯೂಂಷೀತಿ ತಿಸೃಣಾಂ ಶತಂ ವೈಖಾನಸಾ ಋಷಯಃ । ಅಗ್ನಿಃ ಪವಮಾನೋ ದೇವತಾ । ಗಾಯತ್ರೀ ಛಂದಃ । ಪುನಃಸಂಧಾನ-ಪ್ರಧಾನಾಜ್ಯಹೋಮೇ ವಿನಿಯೋಗಃ ॥ ಓಂ ಅಗ್ನ ಆಯೂಂಷಿಪವಸಆಸು-ವೋರ್ಜಮಿಷಂ ಚನಃ । ಆರೇಬಾಧಸ್ವದುಚ್ಛುನಾಂ ಸ್ವಾಹಾ ॥ ಅಗ್ನಯೇ ಪವಮಾನಾಯ ಇದಂ ನ ಮಮ ॥ ಓಂ ಅಗ್ನಿರ್ಋಷಿಃ ಪವಮಾನಃ ಪಾಂಚಜನ್ಯಃ ಪುರೋಹಿತಃ ॥ ತಮೀಮಹೇಮಹಾಗಯಂ ಸ್ವಾಹಾ ॥ ಅಗ್ನಯೇ ... ॥ ಓಂ ಅಗ್ನೇಪವಸ್ವಸ್ವಪಾ ಅಸ್ಮೇವರ್ಚಃ ಸುವೀರ್ಯಂ ॥ ದಧದ್ರಯಿಂಮಯಿ-

---

ಎರಡು ಸಮಿಧೆಗಳನ್ನು ತೆಗೆದುಕೊಂಡು ಅನ್ವಾಧಾನ ಮಾಡುವುದು. ಆಮೇಲೆ ಸ್ಥಾಲೀಪಾಕದಲ್ಲಿ ಹೇಳಿದಂತೆ ಪಾತ್ರಾಸಾದನದ ವರೆಗಿನ ಕರ್ಮಗಳನ್ನು ಮಾಡಬೇಕು. ಪಾತ್ರಾಸಾದನದಲ್ಲಿ ಮಾತ್ರ ವಿಶೇಷವಿದೆ, ಪ್ರೋಕ್ಷಣೀ ಸ್ರುವ, ಪ್ರಣೀತಾ ಆಜ್ಯಪಾತ್ರ, ಹೊದಳಿನ ಮೊರ, ಇಧ್ಮಾ ಬರ್ಹಿ, ಧಧಿಪ್ರಾಶನವಿದ್ದರೆ ಮೊಸರು ಇವಿಷ್ಟನ್ನು ಇಡಬೇಕು. ಆಜ್ಯಸಂಸ್ಕಾರದ ವರೇಗೆ ಸ್ಥಾಲೀಪಾಕದಲ್ಲಿ ಹೇಳಿದಂತೆ, ಇಧ್ಮಾಧಾನ ಆಘಾರಪರ್ಯಂತ ಮಾಡಿ, ಚಕ್ಷುಷಿ ಹೋಮಮಾಡದೆ ಮುಂದೆ **"ಅಗ್ನ ಆಯೂಂಷಿ"** ಮುಂತಾಗಿ ಮಂತ್ರಗಳನ್ನು ಹೇಳಿ ಆಹುತಿ ಕೊಡಬೇಕು.

ಪೋಷಂ ಸ್ವಾಹಾ ॥ ಅಗ್ನಯೇ ... ॥ ತ್ವಮರ್ಯಮಾ ವಸುಶ್ರುತೋಗ್ನಿಸ್ತ್ರಿ-ಷ್ಟುಪ್ ॥ ಪುನಃಸಂಧಾನಪ್ರಧಾನಾಜ್ಯಹೋಮೇ ವಿನಿಯೋಗಃ ॥ ಓಂ ತ್ವಮರ್ಯಮಾ ಭವಸಿ ಯತ್ಕನೀನಾಂ ನಾಮಸ್ವಧಾವನ್ಗುಹ್ಯಂ ಬಿಭರ್ಷಿ ॥ ಅಂಜಂತಿ ಮಿತ್ರಂ ಸುಧಿತಂ ನ ಗೋಭಿರ್ಯದ್ದಂಪತೀ ಸಮನಸಾ ಕೃಣೋಷಿ ಸ್ವಾಹಾ ॥ ಅಗ್ನಯ ಇದಂ ನ ಮಮ ॥ ಪ್ರಜಾಪತೇ ಹಿರಣ್ಯಗರ್ಭಃ ಪ್ರಜಾಪತಿಸ್ತ್ರಿಷ್ಟುಪ್ ॥ ಪುನಃಸಂಧಾನಪ್ರಧಾನಾ... ॥ ಓಂ ಪ್ರಜಾಪತೇನ ... ॥ ಪ್ರಜಾಪತಯ ... ॥ ಅಥ ಪತ್ನ್ಯಾಃ ಪ್ರಕ್ಷಾಲಿತೇಂಜಲೌ ಪತಿರಾಜ್ಯೇನೋಪಸ್ತೀರ್ಯ ದ್ವಿರ್ಲಾಜಾನೋಪ್ಯ ಪಂಚಾವತ್ತೀ ತು ತ್ರಿರೋಪ್ಯ ಶೂರ್ಪಸ್ಥಾನಭಿಘಾರ್ಯ ಅಂಜಲಿಸ್ಥಾನಪ್ಯಭಿಘಾರ್ಯ ಸ್ವಯಮುಪವಿಷ್ಟ ಏವ ತಿಷ್ಠಂತ್ಯಾ ಅಂಜಲಿಂ ಸ್ವಕರಾಭ್ಯಾಂ ಧೃತ್ವಾ ॥ ಅರ್ಯಮಣಂ ವರುಣಂ ಪೂಷಣಮಿತಿ ತಿಸೃಣಾಂ ವಾಮದೇವೋಽರ್ಯಮಾಗ್ನಿರ್ವರುಣಾಗ್ನಿಃ-ಪೂಷಾಗ್ನಿರನುಷ್ಟುಪ್ ॥ ಗೃಹ್ಯಾಗ್ನಿ ಪುನಃಸಂಧಾನಲಾಜಹೋಮೇ ವಿನಿಯೋಗಃ ॥ ಓಂ ಅರ್ಯಮಣಂ ನು ದೇವಂ ಕನ್ಯಾ ಅಗ್ನಿಮಯಕ್ಷತ ॥ ಸ ಇಮಾಂ ದೇವೋ ಅರ್ಯಮಾ । ಪ್ರೇತೋಮುಂಚಾತುನಾಮುತಸ್ವಾಹಾ ಇತಿ ಪಠಿತಮಂತ್ರಾಂತೇ ಅಂಜಲಿಮವಿಚ್ಛಿಂದಂತೀ ಅಂಗುಲ್ಯಗ್ರೈರಂಗುಲಿವಾಮಪಾರ್ಶ್ವೇನ ವಾ ಪತ್ನೀ

---

ಆಮೇಲೆ ಪತಿಯು ಪತ್ನಿಯ ತೊಳೆದ ಬೊಗಸೆಗೆ ತುಪ್ಪ ಸುರಿದು ಅದರಲ್ಲಿ ಎರಡು ಸಲ ಹೊದಲನ್ನು ಹಾಕಬೇಕು. ಪಂಚಪ್ರವರದವನಾದರೆ ಮೂರು ಸಲ ಹಾಕಬೇಕು. ಮೊರದಲ್ಲಿದ್ದ ಹೊದಲಿಗೂ ಬೊಗಸೆಯಲ್ಲಿದ್ದ ಹೊದಲಿಗೂ ಅಭಿಘಾರ ಮಾಡಿ, ನಿಂತುಕೊಂಡಿದ್ದ ಪತ್ನಿಯ ಅಂಜಲಿಯನ್ನು ತಾನು ಕುಳಿತಲ್ಲಿಂದಲೇ ತನ್ನ ಕೈಗಳಿಂದ ಹಿಡಿದು, "**ಅರ್ಯಮಣಂ ನು**" ಮುಂತಾಗಿ ಮೂರು ಮಂತ್ರಗಳನ್ನು ಹೇಳಿ ಮೂರು ಸಲ ಬೊಗಸೆಯ ಬೆರಳುಗಳ ತುದಿಯಿಂದ ಅಥವಾ ಬೆರಳುಗಳ ಎಡಬದಿಯಿಂದ ಬೀಳುವಂತೆ ಹೊದಲನ್ನು ಹೋಮಮಾಡಬೇಕು. "**ಸ್ವಾಹಾ**" ಎಂದು ಹೇಳಿದ ಮೇಲೆ "**ಅರ್ಯಮ್ಣೇಗ್ನಯ ಇದಂ ನ ಮಮ ವರುಣಾಯಾಗ್ನಯ...**" ಹಾಗೂ "**ಪೂಷ್ಣೇಗ್ನಯ ಇದಂ ನ ಮಮ**" ಎಂದು ಹೇಳಬೇಕು. ಆಮೇಲೆ ಮೊರದಲ್ಲಿ ಉಳಿದ ಹೊದಲನ್ನು ಪೂರ್ಣವಾಗಿ ಅದರ ತುದಿಯಿಂದ ಬೀಳುವಂತೆ ಮನಸ್ಸಿನಲ್ಲಿ ಪ್ರಜಾಪತಿಯನ್ನು ಧ್ಯಾನಿಸುತ್ತ ಹೋಮಿಸಿ "**ಪ್ರಜಾಪತಯ ಇದಂ ನ ಮಮ**" ಎಂದು ಹೇಳಬೇಕು.

ಜುಹುಯಾತ್ ॥ ಅರ್ಯಮ್ಣೇಗ್ನಯ ಇದಂ ನ ಮಮ ॥ ಏವಮಗ್ರೇಪಿ ॥ ಓಂ ವರುಣಂನು ದೇವಂ ಕನ್ಯಾ ಅಗ್ನಿಮಯಕ್ಷತ ॥ ಸ ಇಮಾಂ ದೇವೋ ವರುಣಃ ॥ ಪ್ರೇತೋ ಮುಂಚಾತು ನಾಮುತ ಸ್ವಾಹಾ ॥ ವರುಣಾಗ್ನಯ ಇದಂ ನ ಮಮ ॥ ಓಂ ಪೂಷಣಂ ನು ದೇವಂ ಕನ್ಯಾ ಅಗ್ನಿಮಯಕ್ಷತ ॥ ಸ ಇಮಾಂ ದೇವಃ ಪೂಷಾ । ಪ್ರೇತೋ ಮುಂಚಾತು ನಾ ಮುತ ಸ್ವಾಹಾ ॥ ಪೂಷ್ಣೇ-ಗ್ನಯ ಇದಂ ನ ಮಮ ॥ ತತಃ ಶೂರ್ಪಕೋಣೇನಾವಶಿಷ್ಟಾನ್ ಸರ್ವಾನ್ ಲಾಜಾನ್ ಪತಿಃ ಪತ್ನೀ ವಾಽ ಭ್ರಾತ್ರಂ ಪ್ರಜಾಪತಿಂ ಧ್ಯಾಯನ್ ಜುಹುಯಾತ್ ॥ ಪ್ರಜಾಪತಯ ಇದಂ ನ ಮಮ ॥ ಲಾಜಾನಾಂ ಸ್ವಿಷ್ಟಕೃನ್ನಾಸ್ತಿ ॥

ತಿಷ್ಠನ್ ಹೋಮೇ ಕೃತೇ ಉಪವಿಶ್ಯಾಜ್ಯಂ ಪತಿರ್ಜುಹುಯಾತ್ ॥ ಆನಃ ಪ್ರಜಾಮಿತಿ ಚತಸೃಣಾಂ ಸೂರ್ಯಾಸಾವಿತ್ರೀ ಸೂಯಾ ಸಾವಿತ್ರೀ । ಆದ್ಯಾ ಜಗತೀ ದ್ವಿತೀಯಾ ತ್ರಿಷ್ಟುಬಂತ್ಯೇ ದ್ವೇ ಅನುಷ್ಟುಭೌ ಅಗ್ನಿಪುನಃಸಂಧಾನಾಜ್ಯ-ಹೋಮೇ ವಿನಿಯೋಗಃ ॥ ಓಂ ಆನಃ ಪ್ರಜಾಂ ಜನಯತು ಪ್ರಜಾಪತಿರಾಜ-ರಸಾಯಸಮನಕ್ತ್ವರ್ಯಮಾ ॥ ಅದುರ್ಮಂಗಲೀಃ ಪತಿ ಲೋಕಮಾವಿಶಶಂ-ನೋಭವದ್ವಿಪದೇ ಶಂ ಚತುಷ್ಪದೇ ಸ್ವಾಹಾ ॥ ಸೂರ್ಯಾಸಾವಿತ್ರ್ಯಾ ಇದಂ ನ ಮಮ ॥ ಏವಮಗ್ರೇಪಿತ್ಯಾಗಃ ॥ ಓಂ ಅಘೋರಚಕ್ಷುರಪತಿಘ್ನ್ಯೇಧಿಶಿವಾ. ಪಶುಭ್ಯಃ ಸುಮನಾಃ ಸುವರ್ಚಾಃ ॥ ವೀರಸೂರ್ದೇವಕಾಮಾಸ್ಯೋನಾಶಂನೋ-ಭವದ್ವಿಪದೇಶಂ ಚತುಷ್ಪದೇ ಸ್ವಾಹಾ ॥ ಓಂ ಇಮಾಂತ್ವಮಿಂದ್ರಮೀಢ್ವಃ ಸುಪುತ್ರಾಂ ಸುಭಗಾಂ ಕೃಣು ॥ ದಶಾಸ್ಯಾಂ ಪುತ್ರಾನಾಧೇಹಿಪತಿಮೇಕಾದಶಂ ಕೃಧಿ ಸ್ವಾಹಾ ॥ ಓಂ ಸಮ್ರಾಜ್ಞೀಶ್ವಶುರೇ ಭವ ಸಮ್ರಾಜ್ಞೀಶ್ವಶ್ರ್ವಾಂ ಭವ । ನನಾಂದರಿ ಸಮ್ರಾಜ್ಞೀ ಭವ ಸಮ್ರಾಜ್ಞೀ ಅಧಿದೇವೃಷುಸ್ವಾಹಾ ॥ ಸಮಂ-ಜಂತ್ವಿತ್ಯಸ್ಯ ಸೂರ್ಯಾಸಾವಿತ್ರೀ ಸೂರ್ಯಾಸಾವಿತ್ರ್ಯನುಷ್ಟುಪ್ ॥ ದಧಿಪ್ರಾಶನೇ ಆಜ್ಯಶೇಷೇಣ ಹೃದಯಾಂಜನೇ ವಾ ವಿನಿಯೋಗಃ ॥ ಓಂ ಸಮಂಜಂತು ವಿಶ್ವೇ-ದೇವಾಃ ಸಮಾಪ್ತೋ ಹೃದಯಾನಿ ನೌ ॥ ಸಂಮಾತರಿಶ್ವಾ ಸಂಧಾತಾಸಮುದೇ-

**ಷ್ಯೇದಧಾತು ನೌ ॥ ಏತೇನ ಸ್ವಯಂ ದಧಿ ಪ್ರಾಶ್ನೀಯಾತ್ ॥ ಆಜ್ಯಶೇಷೇಣ ಹೃದಯಾಂಜನಂ ವಾ ಕುರ್ಯಾತ್ ॥ ಪತ್ನ್ಯೈಚ ದಧಿ ಪ್ರಯಚ್ಛೇತ್ ॥ ಸಾ ಚ ತೂಷ್ಣೀಂ ಪ್ರಾಶ್ನೀಯಾತ್ ॥ ಸ್ವಹೃದಯಾಂಜನಪಕ್ಷೇ ಪತ್ನ್ಯಾ ಅಪಿ ತೂಷ್ಣೀಂ ಹೃದಯಾಂಜನಂ ॥ ಅಥಾಜ್ಯೇನ ಯದಸ್ಯಕರ್ಮಣ ಇತಿ ಸ್ವಿಷ್ಟಕೃತಂ ಹುತ್ವಾ ಇಧ್ಮ ಸನ್ನಹನಾದಿ ಕರ್ಮಶೇಷಂ ಸಮಾಪಯೇತ್ ॥ ಅತ್ರ ಕಾರಿಕಾ ॥ ಉಪಲೇಪಾದಿಕಂ ಕುರ್ಯಾಧಾಘಾರಾಂತಂ ವಿವಾಹವತ್ । ವಿವಾಹಾಜ್ಯಾ-ಹುತೀರ್ಹುತ್ವಾ ಲಾಜಹೋಮೋ ಭವೇದಿಹ ॥ ಗೃಹಪ್ರವೇಶನೀಯಾಶ್ಚಹುತ್ವಾ-ಸ್ಯಾದ್ಧೃದಯಾಂಜನಂ । ಪರಿಣೀತ್ಯಾದಿನಾಸ್ತ್ಯತ್ರಲಾಜಾನಾವಪತಿಸ್ವಯಂ ॥**

**॥ ಇತಿ ಗೃಹ್ಯಾಗ್ನೇಃ ಪುನಃ ಸಂಧಾನಂ ॥**

---

---

ಎಮ್ಮನಿಂತು ಹೋಮ ಮಾಡಿದ ಮೇಲೆ ಕುಳಿತು **"ಆನಃ ಪ್ರಜಾಂ"** ಇತ್ಯಾದಿ ನಾಲ್ಕು ಮಂತ್ರಗಳಿಂದ ಪತಿಯು ಆಜ್ಯಹೋಮವನ್ನು ಮಾಡಬೇಕು. **"ಸಮಂಜಂತು"** ಎಂಬ ಮಂತ್ರವನ್ನು ಹೇಳಿ ಸ್ವತಃ ಮೊಸರನ್ನು ಕುಡಿಯಬೇಕು ಅಥವಾ ಉಳಿದ ತುಪ್ಪದಿಂದ ಹೃದಯಾಂಜನ ಮಾಡಬೇಕು. ಪತ್ನಿಯು ಮೌನವಾಗಿ ಮೊಸರನ್ನು ಪ್ರಾಶನಮಾಡಬೇಕು. ತನಗೂ ಪತ್ನಿಗೂ ಆಜ್ಯದಿಂದ ಹೃದಯಾಂಜನ ಮಾಡಬೇಕು. ಆಮೇಲೆ **"ಯದಸ್ಯ ಕರ್ಮಣಃ"** ಎಂದು ಮೊದಲಾಗಿ ಸ್ವಿಷ್ಟಕೃತ್ ಹೋಮ, ಇಧ್ಮಬಂಧನರಜ್ಜು ಹೋಮ ಇತ್ಯಾದಿ ಸ್ಥಾಲೀಪಾಕದಲ್ಲಿ ಹೇಳಿದ ಎಲ್ಲ ಕರ್ಮಗಳನ್ನೂ ಮಾಡಿ ಹೋಮಕಾರ್ಯವನ್ನು ಮುಗಿಸಬೇಕು.

---

# ॥ ಅಥ ಭುವನೇಶ್ವರೀ ಶಾಂತಿಃ ॥

॥ ಶ್ರೀಃ ॥ ರಜೋದರ್ಶನಾನಂತರಂ ಪಂಚಮಾದಿದಿನೇ ಚಂದ್ರತಾರಾದ್ಯಾನುಕೂಲ್ಯೇ ಶುಚಿದೇಶೇ ಸುಸ್ನಾತಯಾ ಪತ್ನ್ಯಾಯುತಃ ಪತಿಃ ಪ್ರಾಙ್ಮುಖಃ ಉಪವಿಶ್ಯಾಚಮ್ಯ ಪ್ರಾಣಾನಾಯಮ್ಯ ದೇಶಕಾಲೌ ಸ್ಮೃತ್ವಾ, ಮಮ ಪತ್ನ್ಯಾಃ ಪ್ರಥಮರಜೋದರ್ಶನೇ ಅಮುಕದುಷ್ಟಮಾಸಾದಿಸೂಚಿತಸಕಲಾರಿಷ್ಟನಿರಸನ-ದ್ವಾರಾ ಶ್ರೀಪರಮೇಶ್ವರಪ್ರೀತ್ಯರ್ಥಂ ಸಗ್ರಹಮಖಾಂ ಶೌನಕೋಕ್ತಾಂ ಶಾಂತಿಂ ಕರಿಷ್ಯೇ ಇತಿ ಸಂಕಲ್ಪ್ಯ, ಗಣೇಶಪೂಜನ ಪುಣ್ಯಾಹವಾಚನಮಾತೃಕಾಪೂಜನ-ನಾಂದೀಶ್ರಾದ್ಧಾನಿ ಕೃತ್ವಾ, ಶಾಂತಂ ದಾಂತಂ ಕುಟುಂಬಿನಂ ಮಂತ್ರತಂತ್ರಜ್ಞ-ಮಾಚಾರ್ಯಂ ಬ್ರಹ್ಮಾಣಂ ಜಪಹೋಮಾರ್ಥಮಷ್ಟೌ ಷಟ್‌ಚತುರೋ ವಾ ಋತ್ವಿಜೋ ವೃತ್ವಾ ಗಂಧಾದಿನಾ ಪೂಜಯೇತ್ ॥

ತತ ಆಚಾರ್ಯ ಆಚಮ್ಯ ಪ್ರಾಣಾನಾಯಮ್ಯ ಕಾಲ ದೇಶಾದ್ಯುಚ್ಚಾರ್ಯ ಯಜಮಾನಾನುಜ್ಞಯಾ ಆಚಾರ್ಯಕರ್ಮ ಕರಿಷ್ಯ ಇತಿ ಸಂಕಲ್ಪ್ಯ ಯದತ್ರೇತಿ-ಗೌರಸರ್ಷಪವಿಕಿರಣಾದ್ಯಾಚಾರ್ಯಕರ್ಮ ಕೃತ್ವಾ ॥ ತತೋ ಗೃಹೈಶಾನದೇಶೇ-ಶುಚೌ ಓಂ ಮಹೀದ್ಯೌರಿತಿ ಭೂಮಿಂ ಸ್ಪೃಷ್ಟ್ವಾ ತದ್ದಕ್ಷಿಣೋತ್ತರಯೋಶ್ಚ ತಥೈವ ಭೂಮಿಂ ಸ್ಪೃಷ್ಟ್ವಾ ಓಷಧಯಃ ಸಂವದಂತ ಇತಿ ದ್ರೋಣಪ್ರಮಾಣ-ವ್ರೀಹಿಭಿರ್ಮಧ್ಯೇ ತದ್ದಕ್ಷಿಣೋತ್ತರತಶ್ಚ ಸ್ಪೃಷ್ಟದೇಶೇ ಮಂತ್ರಾವೃತ್ತ್ಯಾ ರಾಶಿ-ತ್ರಯಂ ಕೃತ್ವಾ ತೇನೈವ ಕ್ರಮೇಣ ರಾಶಿತ್ರಯೇ ನವಮಕಾಲಕಮಭಗ್ನಂ ಕುಂಭತ್ರಯಮಾಕಲಶೇಷ್ವಿತಿ ಮಂತ್ರಾವೃತ್ತ್ಯಾ ಸ್ಥಾಪಯೇತ್ ॥

---

**ಭುವನೇಶ್ವರೀಶಾಂತಿಃ-** ಪತ್ನಿಯಲ್ಲಿ ರಜೋದರ್ಶನವಾದ ಐದನೆಯ ದಿನದ ನಂತರ ಚಂದ್ರತಾರಾನುಕೂಲವಿರುವ ಸುಮುಹೂರ್ತದಲ್ಲಿ ಶುದ್ಧಸ್ನಾತಳಾದ ಪತ್ನಿಯೊಡನೆ ಪತಿಯು ಪೂರ್ವಮುಖವಾಗಿ ಕುಳಿತು, ಆಚಮನ ಪ್ರಾಣಾಯಾಮ ದೇಶಕಾಲ ಸ್ಮರಣ ಇತ್ಯಾದಿಗಳನ್ನು ಮಾಡಿ **"ಮಮ.... ಶಾಂತಿಂ ಕರಿಷ್ಯೇ"** ಎಂದು ಸಂಕಲ್ಪ ಮಾಡಬೇಕು. ಆಮೇಲೆ ಗಣಪತಿ ಪೂಜನ, ಪುಣ್ಯಾಹವಾಚನ, ಮಾತೃಕಾಪೂಜನ, ನಾಂದೀ ಶ್ರಾದ್ಧಗಳನ್ನು ಮಾಡಿ, ಗುಣಸಂಪನ್ನನೂ, ಮಂತ್ರತಂತ್ರಜ್ಞನೂ ಆದ ಆಚಾರ್ಯನನ್ನೂ, ಬ್ರಹ್ಮನನ್ನೂ ಜಪ, ಹೋಮ ಮುಂತಾದವುಗಳಿಗೆ ಎಂಟು, ಆರು ಅಥವಾ ನಾಲ್ಕು ಮಂದಿ ಋತ್ವಿಜರನ್ನೂ ವರಣಮಾಡಬೇಕು. ಅವರನ್ನು ಗಂಧಾಕ್ಷತಾದಿಗಳಿಂದ ಪೂಜಿಸಬೇಕು. ಆಚಾರ್ಯನು ಆಚಮನ ಪ್ರಾಣಾಯಾಮಗಳನ್ನು ಮಾಡಿ **"ಯಜಮಾನಾ..... ಕರಿಷ್ಯೇ"** ಎಂದು ಸಂಕಲ್ಪಿಸಿ, **"ಯದತ್ರ"** ಎಂಬ ಮಂತ್ರದಿಂದ ಬಿಳಿಸಾಸಿವೆ ಗಳನ್ನು ಚೆಲ್ಲಿ ಆಚಾರ್ಯಕರ್ಮವನ್ನು ಮಾಡಬೇಕು. ಬಳಿಕ ಮನೆಯ ಈಶಾನ್ಯ ದಿಕ್ಕಿನಲ್ಲಿ

**ತತಃ ಪ್ರಸುವಆಪ ಇತಿ ನವರ್ಚಸ್ಯ ಸೂಕ್ತಸ್ಯ ಸಿಂಧುಕ್ಷಿತ್ ಪ್ರೈಯ-ಮೇಧೋನದ್ಯೋ ಜಗತೀ ॥ ಕಲಶೇಷೂದಕಪೂರಣೇ ವಿನಿಯೋಗಃ ॥ ಓಂ ಪ್ರಸುವ ಆಪೋಮಹಿಮಾನಮುತ್ತಮಂ ಕಾರುರ್ವೋಚಾತಿಸದನೇ ವಿವಸ್ವತಃ ॥ ಪ್ರಸಪ್ತಸಪ್ತತ್ರೇಧಾಹಿಚಕ್ರಮುಃ ಪ್ರಸೃತ್ವರೀಣಾಮತಿಸಿಂಧುರೋಜಸಾ ॥ ಪ್ರತೇ-ರದದ್ವರುಣೋಯಾತವೇಪಥಃ ಸಿಂಧೋಯದ್ವಾಜಾಂಅಭ್ಯದ್ರವಸ್ತ್ವಂ ॥ ಭೂಮ್ಯಾ ಅಧಿಪ್ರವತಾಯಾಸಿಸಾನುನಾಂಯುದೇಷಾಮಗ್ರಂ ಜಗತಾಮಿರಜ್ಯಸಿ ॥ ದಿವಿಸ್ವನೋಯತತೇಭೂಮ್ಯೋಪರ್ಯನಂತಂಶುಷ್ಮ ಮುದಿಯರ್ತಿ ಭಾನುನಾ ॥ ಅಭ್ರಾದಿವಪ್ರಸ್ತನಯಂತಿವೃಷ್ಟಯಃ ಸಿಂಧುರ್ಯದೇತಿವೃಷಭೋನರೋರುವತ್ ॥ ಅಭಿತ್ವಾಸಿಂಧೋಶಿಶುಮಿನ್ನಮಾತರೋವಾಶ್ರಾಅರ್ಷಂತಿಪಯಸೇವಧೇನವಃ ॥ ರಾಜೇವಯುಧ್ವಾನಯಸಿತ್ವಮಿತ್ಸಿಚೌಯದಾಸಾಮಗ್ರಂಪ್ರವತಾಮಿನಕ್ಷಸಿ ॥ ಇಮಂ ಮೇ ಗಂಗೇ ಯಮುನೇ ಸರಸ್ವತಿಶುತುದ್ರಿಸ್ತೋಮಂ ಸ ಚ ತಾಪರುಷ್ಣ್ಯಾ ॥ ಅಸಿಕ್ನ್ಯಾಮರುದ್ವೃಧೇವಿತಸ್ತಯಾರ್ಜೀಕೀಯೇ ಶೃಣುಹ್ಯಾಸುಷೋಮಯಾ ॥ ೧ ॥ ತೃಷ್ಟಾಮಯಾಪ್ರಥಮಂ ಯಾತವೇಸಜೂಃ ಸುಸರ್ತ್ವಾರಸಯಾಶ್ವೇತ್ಯಾತ್ಯಾ ॥ ತ್ವಂ ಸಿಂಧೋಕುಭಯಾಗೋಮತೀಂಕ್ರುಮುಂಮೇಹತ್ನ್ವಾಸರಥಂಯಾಭಿರೀಯಸೇ ॥ ಋಜೀತ್ಯೇನೀರುಶತೀಮಹಿತ್ವಾಪರಿಜ್ರಯಾಂಸಿ ಭರತೇರಜಾಂಸಿ ॥**

---

**"ಮಹೀದ್ಯೌ"** ಎಂಬ ಮಂತ್ರದಿಂದ ಭೂಮಿಯನ್ನು ಮುಟ್ಟಿ, ಮುಟ್ಟಿದ ಸ್ಥಳದ ದಕ್ಷಿಣೋತ್ತರ ಭಾಗಗಳಲ್ಲಿ ಹಾಗೆಯೇ ಸ್ಪರ್ಶಿಸಿ, **"ಓಷಧಯಃ"** ಎಂಬ ಮಂತ್ರದಿಂದ ಕುಡುತೆ ಅಕ್ಕಿಯ ಮೂರು ರಾಶಿಗಳನ್ನು ಮೊದಲಿನ ಕ್ರಮದಂತೆ ಮಾಡಿ ಅವುಗಳ ಮೇಲೆ **"ಆ ಕಲಶೇಷು"** ಎಂಬ ಮಂತ್ರದಿಂದ ಹೊಸತಾದ, ಒಡೆಯದ ಮೂರು ಕಲಶಗಳನ್ನು ಸ್ಥಾಪಿಸಬೇಕು.

**"ಪ್ರಸುವ ಆಪಃ"** ಎಂಬಲ್ಲಿಂದ **"...ಆಶಿಮಿದಾ ಭವಂತು"** ಎಂಬಲ್ಲಿ ವರೆಗೆ ಮಂತ್ರಗಳನ್ನು ಹೇಳಿ ಕಲಶಗಳಲ್ಲಿ ನೀರನ್ನು ತುಂಬಿಸಬೇಕು. **"ಗಂಧದ್ವಾರಾಂ" "ಯಾ ಓಷಧೀ" "ಓಷಧಯಃ ಸಂ."** ಎಂಬ ಮಂತ್ರಗಳಿಂದ ಕ್ರಮವಾಗಿ ಗಂಧ, ಓಷಧಿಗಳು ಮತ್ತು ಅಕ್ಷತೆಗಳನ್ನು ಹಾಕಬೇಕು.

ಅದಬ್ಧಾಸಿಂಧುರಪಸಾಮಪಸ್ತಮಾಶ್ವಾನಚಿತ್ರಾವಪುಷೀದರ್ಶತಾ ॥ ಸ್ವಶ್ವಾಸಿಂಧುಃ ಸುರಥಾಃ ಸುವಾಸಾಃ ಹಿರಣ್ಯಯಿಸುಕೃತಾವಾಜಿನೀವತೀ ॥ ಊರ್ಣಾವತೀಯುವತಿಃ ಸೀಲ ಮಾವತ್ಯುತಾಧಿವಸ್ತೇಸುಭಗಾಮಧುವೃಧಂ ॥ ಸುಖಂ ರಥಂ ಯುಯುಜೇ ಸಿಂಧುರಶ್ವಿನಂ ತೇನವಾಜಂ ಸನಿಷದಸ್ಮಿನ್ನಾಜೌ ॥ ಮಹಾನ್ಹ್ಯಸ್ಯಮಹಿಮಾಪನಸ್ಯತೇಽದಬ್ಧಸ್ಯಸ್ವಯಶಸೋವಿರಪ್ಶಿನಃ ॥

ಯಾಃ ಪ್ರವತ ಇತ್ಯಸ್ಯ ವಾಸಿಷ್ಠೋ ನದ್ಯಃ ಶಕ್ವರೀ ॥ ಅಭಿಮಂತ್ರಣೇ ವಿನಿಯೋಗಃ ॥ ಓಂ ಯಾಃ ಪ್ರವತೋನಿವತಉದ್ವತಉದನ್ವತೀರನುದಕಾಶ್ಚಯಾಃ ॥ ತಾ ಅಸ್ಮಭ್ಯಂ ಪಯಸಾಪಿನ್ವಮಾನಾಃ ಶಿವಾದೇವೀರಶಿಪದಾಭವಂತುಸರ್ವಾನದ್ಯೋ ಅಶಿಮಿದಾಭವಂತು ॥ ಇತ್ಯುದಕೇನಾಪೂರ್ಯ ॥ ಗಂಧದ್ವಾರಾಮಿತಿ ತ್ರಿಷ್ವಪಿ ಗಂಧಂ ಪ್ರಕ್ಷಿಪ್ಯ ॥ ಓಂ ಯಾ ಓಷಧೀಃ ಪೂರ್ವಾಜಾತಾದೇವೇಭ್ಯಸ್ತ್ರಿಯುಗಂ ಪುರಾ ॥ ಮನ್ಯೈನುಬಭ್ರೂಣಾಮಹಂಶತಂಧಾಮಾನಿಸಪ್ತಚ ॥ ಇತಿ ಸರ್ವೌ-ಷಧೀಃ ॥ ಓಷಧಯಃ ಸಂ. ಇತಿ ಯವಾನ್ ಕ್ಷಿಪೇತ್ ॥

ತತೋ ಮಧ್ಯಕುಂಭೇ ಯವವ್ರೀಹಿತಿಲಮಾಷಕಂಗುಶ್ಯಾಮಾಕಮು-ದ್ಗಾನ್ ಕ್ಷಿಪ್ತ್ವಾ ॥ ಗಾಯತ್ರ್ಯೋದುಂಬರಕುಶದೂರ್ವಾರಕ್ತೋತ್ಪಲಚಂಪಕ-ಬಿಲ್ವವಿಷ್ಣುಕ್ರಾಂತಾತುಲಸೀಬರ್ಹಿಷಶಂಖಪುಷ್ಪೀಶತಾವರ್ಯಶ್ವಗಂಧಾನಿರ್ಗುಂ-ಡೀರಕ್ತಪೀತಸರ್ಷಪಾಪಾಮಾರ್ಗಪಲಾಶಪನಸಜೀವಕಪ್ರಿಯಂಗುಗೋಧೂಮ-ವ್ರೀಹ್ಯಶ್ವತ್ಥದಧಿದುಗ್ಧಘೃತಪದ್ಮಪತ್ರನೀಲೋತ್ಪಲಸಿತರಕ್ತಪೀತಕುರಂಟಕಗುಂಜಾವಚಾ-ಭದ್ರಮುಸ್ತಕಾಖ್ಯಾನಿ ದ್ವಾತ್ರಿಂಶದೌಷಧಾನಿ ಸರ್ವಾಣಿ ಯಥಾಸಂಭವಂ ವಾ ಕ್ಷಿಪೇತ್ ॥

---

ಬಳಿಕ ಮಧ್ಯದ ಕಲಶದಲ್ಲಿ ಯವ, ಅಕ್ಕಿ, ಎಳ್ಳು, ಉದ್ದು, ಕಂಗು, ಶ್ಯಾಮಾಕ, ಹೆಸರುಗಳನ್ನು ಹಾಕಿ ಗಾಯತ್ರೀ ಮಂತ್ರದಿಂದ ಔದುಂಬರ, ದರ್ಭೆ, ದೂರ್ವೆ, ಕೆಂಪುಕಮಲ, ಚಂಪಕ, ಬಿಲ್ವ, ವಿಷ್ಣುಕ್ರಾಂತ, ತುಲಸೀ, ಬರ್ಹಿ, ಬಿಳಿಯ ವಿಷ್ಣುಕ್ರಾಂತ, ಶತಾವರೀ, ಅಶ್ವಗಂಧಾ, ನಿರ್ಗುಂಡೀ, ಕೆಂಪು ಹಳದಿ ಸಾಸಿವೆ, ಅಪಾಮಾರ್ಗ, ಪಲಾಶ, ಹಲಸು, ಜೀವಕ, ಪ್ರಿಯಂಗು,

ತತಸ್ತ್ರಿಷು ಕಲಶೇಷು ಕಾಂಡಾತ್ಕಾಂಡಾದಿತಿ ದೂರ್ವಾಃ । ಅಶ್ವತ್ಥೇವೋ ಇತಿ ಅಶ್ವತ್ಥೋದುಂಬರಪ್ಲಕ್ಷಚೂತನ್ಯಗ್ರೋಧಪಂಚಪಲ್ಲವಾನ್ ॥ ಸ್ಯೋನಾ-ಪೃಥಿವೀತಿ ಗಜಾಶ್ವಸ್ಥಾನರಥ್ಯಾವಲ್ಮೀಕಸಂಗಮಹ್ರದಗೋಷ್ಠಸ್ಥಾ ಮೃದಃ ಕ್ಷಿಪ್ತ್ವಾ ॥ ಯಾಃ ಫಲಿನೀರಿತಿ ಪೂಗೀಫಲಾನಿ ॥ ಸಹಿರತ್ನಾನೀತಿ ಕನಕಕುಲಿಶನೀಲಪದ್ಮರಾಗ-ಮೌಕ್ತಿಕಾನಿ ಪಂಚರತ್ನಾನಿ ॥ ಹಿರಣ್ಯರೂಪ ಇತಿ ಹಿರಣ್ಯಂ ಚ ಕ್ಷಿಪೇತ್ ॥ ಯುವಾ ಸುವಾಸಾ ಇತಿ ಸೂತ್ರೇಣ ವಾಸಸಾ ಚ ಕಲಶಕಂಠಾನ್ವೇಷ್ಟಯಿತ್ವಾ ಗಂಧಾಕ್ಷತಪುಷ್ಪಮಾಲಾಭಿಃ ಕಲಶಾನ್ ಭೂಷಯೇತ್ ॥

ತತಃ ಕಲಶತ್ರಯೋಪರಿ ತೇನೈವ ಕ್ರಮೇಣ ಸೌವರ್ಣಂ ರಾಜತಂ ಕಾಂಸ್ಯಮಯಂ ವೈಣವಂ ಮೃಣ್ಮಯಂ ವಾ ಯವಾದಿಪೂರಿತಂ ಪಾತ್ರತ್ರಯಂ ಪೂರ್ಣಾದರ್ವೀತಿ ನಿಧಾಯ ತದುಪರಿ ಶ್ವೇತಂ ವಸ್ತ್ರತ್ರಯಂ ನ್ಯಸ್ಯ ತತ್ರ ಚಂದನಾದಿನಾ ಅಷ್ಟದಲಾನಿ ಕುರ್ಯಾತ್ ॥

ಭುವನೇಶ್ವರ್ಯಾದಿಪ್ರತಿಮಾತ್ರಯಸ್ಯ ಆದಾವಗ್ನ್ಯುತ್ತಾರಣಂ ಕೃತ್ವಾ ಯಥಾ ಕ್ರಮಂ ಸ್ಥಾಪನಂ ಕುರ್ಯಾತ್ ॥ ತತ್ರ ಮಧ್ಯಮೇ ॥ ಗಾಯತ್ರ್ಯಾ ವಿಶ್ವಾಮಿತ್ರೋ ಭುವನೇಶ್ವರೀ ಗಾಯತ್ರೀ ಭುವನೇಶ್ವರ್ಯಾವಾಹನಾದೌ ವಿನಿಯೋಗಃ ॥ ಓಂ

---

ಗೋಧಿ, ಭತ್ತ, ಅಶ್ವತ್ಥ, ಮೊಸರು, ಹಾಲು, ತುಪ್ಪ, ಪದ್ಮಪತ್ರ, ನೀಲಕಮಲ, ಬಿಳಿ ಕೆಂಪು ಹಳದಿ ಕುರಂಜಕ ಗುಂಜಾ, ವೇಬಂಡ, ಭದ್ರಮುಸ್ತಕಾ -ಎಂಬ ಮೂವತ್ತೆರಡು ಔಷಧಗಳನ್ನು ಅಥವಾ ದೊರಕಿದಷ್ಟನ್ನು ಹಾಕಬೇಕು. ಆಮೇಲೆ ಮೂರೂ ಕಲಶಗಳಲ್ಲಿ **"ಕಾಂಡಾತ್ಕಾಂಡಾ"** ದೂರ್ವೆ, **"ಅಶ್ವತ್ಥೇವೋ"** ಅಶ್ವತ್ಥ, ಔದುಂಬರ, ಪಿಂಪರೀ, ಮಾವು, ಆಲ - ಈ ಐದು ಪಲ್ಲವ, **"ಸ್ಯೋನಾಪೃಥಿವೀ"** ಆನೆ, ಕುದುರೆ ಇರುವ ಸ್ಥಳ, ಹುತ್ತ, ಸಂಗಮ, ಮಡು, ಹಟ್ಟಿಗಳಿಂದ ತೆಗೆದ ಮಣ್ಣು, **"ಯಾಃಫಲಿನೀ"** ಅಡಿಕೆ, **"ಸಹಿರತ್ನಾನಿ"** ಬಂಗಾರ, ವಜ್ರ, ನೀಲ, ಪದ್ಮರಾಗ, ಮುತ್ತು, **"ಹಿರಣ್ಯರೂಪ"** ಚಿನ್ನ, **"ಯುವಾ ಸುವಾಸಾ"** ಕಲಶಗಳ ಕಂಠಕ್ಕೆ ನೂಲು ಅಥವಾ ಬಟ್ಟೆ, ಇವುಗಳನ್ನು ಹಾಕಿ ಅಲಂಕರಿಸಬೇಕು. ಮೂರು ಕಲಶಗಳ ಮೇಲೆ ಸ್ಥಾಪಿಸಿದ ಕ್ರಮದಂತೆ, ಚಿನ್ನ, ಬೆಳ್ಳಿ ಮತ್ತು ಕಂಚಿನ; ತಾಮ್ರ, ಬೆತ್ತ ಅಥವಾ ಮಣ್ಣಿನ ಮೂರು ಪಾತ್ರೆಗಳನ್ನು ಅಕ್ಕಿ ಹಾಕಿ ಇಡಬೇಕು. ಅವುಗಳ ಮೇಲೆ ವಸ್ತ್ರ ಹೊದಿಸಿ ಗಂಧಾದಿಗಳಿಂದ ಅಷ್ಟದಳವನ್ನು ಮಾಡಬೇಕು.

ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ॥ ಧಿಯೋ ಯೋ ನಃ ಪ್ರಚೋದಯಾತ್ ॥ ಭುವನೇಶ್ವರೀಮಾವಾಹಯಾಮೀತಿ ಯಥಾಶಕ್ತಿ ಸುವರ್ಣ-ನಿರ್ಮಿತಾಂ ಭುವನೇಶ್ವರೀಪ್ರತಿಮಾಂ ಸ್ಥಾಪಯೇತ್ ॥ ತದ್ದಕ್ಷಿಣಕುಂಭೋಪರಿ ವಸ್ತ್ರೇ ॥ ಇಂದ್ರಾಣೀಮಾಸ್ವಿತ್ಯಸ್ಯ ವೃಷಾಕಪಿರಿಂದ್ರಾಣೀ ಪಂಕ್ತಿಃ ಇಂದ್ರಾಣ್ಯಾವಾಹನಾದೌ ವಿನಿಯೋಗಃ ॥ ಓಂ ಇಂದ್ರಾಣೀಮಾಸುನಾರಿಷುಸುಭಗಾಮಹಮಶ್ರವಂ ॥ ನಹ್ಯಸ್ಯಾ ಅಪರಂಚನಜರಸಾಮರತೇಪತಿರ್ವಿಶ್ವಸ್ಮಾದಿಂದ್ರ ಉತ್ತರಃ ॥ ಇಂದ್ರಾಣೀಮಾವಾಹ-ಯಾಮೀತಿ ತಥೈವ ಸೌವರ್ಣೀಂ ಇಂದ್ರಾಣೀಪ್ರತಿಮಾಂ ಸಂಸ್ಥಾಪಯೇತ್ ॥ ಉತ್ತರಕಲಶೋಪರಿ ॥ ಇಂದ್ರ ತ್ವಾ ವಿಶ್ವಾಮಿತ್ರ ಇಂದ್ರೋ ಗಾಯತ್ರೀ ॥ ಇಂದ್ರಾವಾಹನೇ ವಿನಿಯೋಗಃ ॥ ಓಂ ಇಂದ್ರತ್ವಾವೃಷಭಂ ವಯಂ ಸುತೇ ಸೋಮೇ ಹವಾಮಹೇ ॥ ಸಪಾಹಿಮಧ್ವೋ ಅಂಧಸಃ ॥ ಇಂದ್ರಮಾವಾಹಯಾಮೀತಿ ಸೌವರ್ಣೀಮಿಂದ್ರ ಪ್ರತಿಮಾಂ ಸಂಸ್ಥಾಪಯೇತ್ ॥ ತತ ಉಕ್ತಮಂತ್ರೈರುಕ್ತಕ್ರಮೇಣ ದೇವತಾತ್ರಯಸ್ಯ ಕಾಂಡಾನುಸಮಯೇನ ಪದಾರ್ಥಾನುಸಮಯೇನ ವಾ ಷೋಡಶೋಪಚಾರೈಃ ಪೂಜಾಂ ಕುರ್ಯಾತ್ ॥

ತತೋ ಮಧ್ಯಕುಂಭೇ ಆಚಾರ್ಯೋಽಷ್ಟಸಹಸ್ರಮಷ್ಟಶತಕಂ ವಾ ಗಾಯತ್ರೀ ಜಪ್ತ್ವಾ ಶ್ರೀಸೂಕ್ತಂ ಜಪೇತ್ ॥ ತತ ಏಕಃ ಋತ್ವಿಕ್ ದಕ್ಷಿಣಕುಂಭೇ ರುದ್ರಸೂಕ್ತಾನಿ ಜಪೇತ್ ॥ ಯಥಾ ॥

---

ಭುವನೇಶ್ವರೀ, ಇಂದ್ರಾಣೀ ಮತ್ತು ಇಂದ್ರ ಈ ಮೂರು ಸುವರ್ಣಪ್ರತಿಮೆಗಳಿಗೆ ಅಗ್ನ್ಯುತ್ತಾರಣ ಹಾಗೂ ಪ್ರಾಣಪ್ರತಿಷ್ಠೆಯನ್ನು (ಗ್ರಹಯಜ್ಞದಲ್ಲಿ ಹೇಳಿದ ಕ್ರಮದಂತೆ) ಮಾಡಿ ಮಧ್ಯದಲ್ಲಿರುವ ಕಲಶದ ಮೇಲೆ ಗಾಯತ್ರೀಮಂತ್ರದಿಂದ ಭುವನೇಶ್ವರಿಯನ್ನೂ **"ಇಂದ್ರಾಣೀಮಾಸು"** ಎಂಬ ಮಂತ್ರದಿಂದ ದಕ್ಷಿಣ ಕಲಶದ ಮೇಲೆ ಇಂದ್ರಾಣಿಯನ್ನೂ, **"ಇಂದ್ರ ತ್ವಾ ವೃಷಭಂ"** ಎಂಬ ಮಂತ್ರದಿಂದ ಉತ್ತರ ಕಲಶದ ಮೇಲೆ ಇಂದ್ರನನ್ನೂ ಆವಾಹಿಸಬೇಕು. ಆಮೇಲೆ ಮೇಲೆ ಹೇಳಿದ ಮೂರು ದೇವತೆಗಳ ಬೇರೆ ಬೇರೆ ಮೂರು ಮಂತ್ರಗಳಿಂದ ಸ್ಥಾಪನೆಮಾಡಿದ ಕ್ರಮದಂತೆ ಒಂದೊಂದು ದೇವತೆಗೆ

**ಕದ್ರುದ್ರಾಯೇತಿ ನವರ್ಚಸ್ಯ ಸೂಕ್ತಸ್ಯ ಘೌರಃ ಕಣ್ವೋ ರುದ್ರೋ ಗಾಯತ್ರೀ ಅಂತ್ಯಾನುಷ್ಟುಪ್ ತೃತೀಯಾಮೈತ್ರಾವರುಣೀ ಜಪೇ ವಿನಿಯೋಗಃ ॥ ಓಂ ಕದ್ರುದ್ರಾಯಪ್ರಚೇತಸೇಮೀಳ್ಹುಷ್ಟಮಾಯತವ್ಯಸೇ ॥ ವೋಚೇಮಶಂತಮಂಹೃದೇ ॥ ಯಥಾನೋ ಅದಿತಿಃ ಕರತ್ಪಶ್ವೇನೃಭ್ಯೋಯಥಾಗವೇ ॥ ಯಥಾ-ತೋಕಾಯರುದ್ರಿಯಂ ॥ ಯಥಾ ನೋ ಮಿತ್ರೋವರುಣೋ ಯಥಾರುದ್ರಶ್ಚಿ-ಕೇತತಿ ॥ ಯಥಾವಿಶ್ವೇಸಜೋಷಸಃ ॥ ಗಾಥಪತಿಂ ಮೇಧಪತಿಂ ರುದ್ರಂ ಜಲಾಷಭೇಷಜಂ ॥ ತಚ್ಛಂ ಯೋಃ ಸುಮ್ನಮೀಮಹೇ ॥ ಯಃ ಶುಕ್ರ ಇವಸೂರ್ಯೋಹಿರಣ್ಯಮಿವರೋಚತೇ ॥ ಶ್ರೇಷ್ಠೋ ದೇವಾನಾಂ ವಸುಃ ॥ ೧ ॥ ಶಂ ನಃ ಕರತ್ಯರ್ವತೇಸುಗಂ ಮೇಷಾಯಮೇಷ್ಯೇ ॥ ನೃಭ್ಯೋನಾರಿಭ್ಯೋಗವೇ ॥ ಅಸ್ಮೇಸೋಮಶ್ರಿಯಮಧಿನಿಧೇಹಿಶತಸ್ಯನೃಣಾಂ ॥ ಮಹಿಶ್ರವಸ್ತುವಿನೃಮ್ಣಂ ॥ ಮಾನಃ ಸೋಮಪರಿಬಾಧೋಮಾರಾತಯೋಜುಹುರಂತ ॥ ಆನ ಇಂದೋ ವಾಜೇಭಜ ॥ ಯಾಸ್ತೇ ಪ್ರಜಾ ಅಮೃತಸ್ಯ ಪರಸ್ಮಿನ್ ಧಾಮನ್ನೃತಸ್ಯ ॥ ಮೂರ್ಧಾನಾಭಾಸೋಮವೇನ ಆಭೂಷಂತೀ ಸೋಮವೇದಃ ॥ ೨ ॥**

**ಇಮಾರುದ್ರಾಯತವಸ ಇತ್ಯೇಕಾದಶರ್ಚಸ್ಯ ಸೂಕ್ತಸ್ಯ ಕುತ್ಸೋ ರುದ್ರ ಆದ್ಯಾನವಜಗತ್ಯೋಂತೇ ದ್ವೇ ತ್ರಿಷ್ಟುಭೌ ಜಪೇ ವಿನಿಯೋಗಃ ॥ ಓಂ ಇಮಾ-ರುದ್ರಾಯ...... ॥ ಆತೇ ಪಿತರಿತಿ ಪಂಚದಶರ್ಚಸ್ಯ ಸೂಕ್ತಸ್ಯ ಗೃತ್ಸಮದೋ ರುದ್ರಸ್ತ್ರಿಷ್ಟುಪ್ ಜಪೇ ವಿನಿಯೋಗಃ ॥ ಓಂ ಆತೇಪಿತ... ॥ ಇಮಾರುದ್ರಾಯ**

---

ಪ್ರತ್ಯೇಕ ಪ್ರತ್ಯೇಕವಾಗಿ, ಸಂಗ್ರಹಿಸಿದ ಪೂಜಾದ್ರವ್ಯಗಳಿಗೆ ಅನುಸಾರವಾಗಿ ಷೋಡಶೋಪಚಾರ ಪೂಜೆಯನ್ನು ಮಾಡಬೇಕು.

ಆಮೇಲೆ ಆಚಾರ್ಯನು ಮಧ್ಯದ ಕಲಶದಲ್ಲಿ ಎಂಟುಸಾವಿರ ಅಥವಾ ಎಂಟು ನೂರು ಗಾಯತ್ರೀಜಪಮಾಡಿ ಶ್ರೀಸೂಕ್ತವನ್ನು ಜಪಿಸಬೇಕು. ಬಳಿಕ **"ಕದ್ರುದ್ರಾಯ" "ಇಮಾರುದ್ರಾಯ" "ಆತೇಪಿತರಿ" "ಇಮಾರುದ್ರಾಯ ಸ್ಥಿರಧನ್ವನೇ"** ಮುಂತಾದ ಸೂಕ್ತಗಳನ್ನು ಜಪಿಸಬೇಕು. [ಇಲ್ಲಿ ಪೂರ್ತಿಯಾಗಿ ಕೊಡದಿರುವ ಸೂಕ್ತಗಳನ್ನು ಬೇರೆಡೆಯಲ್ಲಿ ಕೊಡಲಾಗಿದೆ.]

ಸ್ಥಿರಧನ್ವನ ಇತಿ ಚತಸೃಣಾಂ ವಸಿಷ್ಠೋರುದ್ರಸ್ತಿಸ್ರೋ ಜಗತ್ಯೋಂತ್ಯಾ ತ್ರಿಷ್ಟುಪ್ ॥ ಜಪೇ ವಿನಿಯೋಗಃ ॥ ಓಂ ಇಮಾರುದ್ರಾಯಸ್ಥಿರ ಧನ್ವನೇಗಿರಃ-ಕ್ಷಿಪ್ರೇಷವೇದೇವಾಯಸ್ವಧಾಮ್ನೇ ॥ ಅಷಾಹ್ಲಾಯಸಹಮಾನಾಯವೇಧಸೇತಿಗ್ಮಾಯು-ಧಾಯಭರತಾಶೃಣೋತುನಃ ॥ ಸಹಿಕ್ಷಯೇಣ ಕ್ಷಮ್ಯಸ್ಯಜನ್ಮನಃ ಸಾಮ್ರಾಜ್ಯೇನದಿ-ವ್ಯಸ್ಯಚೇತತಿ ॥ ಅವಂನವಂತೀರುಪನೋದುರಶ್ಚರಾನಮಿಾವೋರುದ್ರಜಾಸುನೋ-ಭವ ॥ ಯಾತೇದಿದ್ಯುದವಸೃಷ್ಟಾದಿವಸ್ಪರಿಕ್ಷ್ಮಯಾಚರತಿಪರಿಸಾವೃಣಕ್ತುನಃ ॥

ಸಹಸ್ರಂತೇಸ್ವಪಿವಾತಭೇಷಜಾಮಾನಸ್ತೋಕೇಷುತನಯೇಷು ರೀರಿಷಃ ॥ ಮಾನೋವಧೀರುದ್ರಮಾಪರಾದಾಮಾತೇ ಭೂಮಪ್ರಸಿತೌ ಹೀಳಿತಸ್ಯ ॥ ಆ ನೋ ಭಜಬರ್ಹಿಷಿ ಜೀವಶಂಸೇ ಯೂಯಂ ಪಾತಸ್ವಸ್ತಿಭಿಃ ಸದಾನಃ ॥ ೧ ॥ ಆವೋ ರಾಜಾನಂ ವಾಮದೇವೋ ರುದ್ರಸ್ತ್ರಿಷ್ಟುಪ್ ಜಪೇ ವಿನಿಯೋಗಃ ॥ ಓಂ ಆವೋರಾಜಾನಮಧ್ವರಸ್ಯರುದ್ರಂ ಹೋತಾರಂ ಸತ್ಯಜಂರೋದಸ್ಯೋಃ ॥ ಅಗ್ನಿಂ ಪುರಾತನಯಿತ್ನೋರಚಿತ್ತಾದ್ಧಿರಣ್ಯರೂಪಮವಸೇಕೃಣುಧ್ವಂ ॥ ತಮುಷ್ಟು-ಹಿಭೌಮೋತ್ರೀರುದ್ರಸ್ತ್ರಿಷ್ಟುಪ್ ॥ ಜಪೇ ವಿನಿಯೋಗಃ ॥ ಓಂ ತಮುಷ್ಟುಹಿಯಃ ಸ್ವಿಷುಃ ಸುಧನ್ವಾಯೋವಿಶ್ವಸ್ಯಕ್ಷಯತಿಭೇಷಜಸ್ಯ ॥ ಯಕ್ಷ್ವಾಮಹೇಸೌಮನ-ಸಾಯ ರುದ್ರಂ ನಮೋಭಿರ್ದೇವಮಸುರಂ ದುವಸ್ಯ ॥ ಭುವನಸ್ಯಪಿತರಂ

---

ಇನ್ನೊಬ್ಬ ಋತ್ವಿಜನು ಉತ್ತರದಲ್ಲಿರುವ ಕಲಶದಲ್ಲಿ ಹನ್ನೊಂದು ಆವೃತ್ತಿ ರುದ್ರಾಧ್ಯಾಯವನ್ನು ಜಪಿಸಬೇಕು. **"ನಮಕಾನುವಾಕ"** **"ಶಂ ನ ಇಂದ್ರಾಗ್ನೀ ಸೂಕ್ತ"**ವನ್ನೂ ಜಪಿಸಬೇಕು. ನಂತರ ಕಲಶಗಳ ಪಶ್ಚಿಮಭಾಗದಲ್ಲಿ ಸ್ಥಾಲೀಪಾಕದಲ್ಲಿ ಹೇಳಿದಂತೆ ಸ್ಥಂಡಿಲ ಸಂಸ್ಕಾರಾದಿಗಳನ್ನು ಮಾಡಿ **"ವರದ"** ಅಗ್ನಿಯನ್ನು ಪ್ರತಿಷ್ಠಾಪಿಸಬೇಕು. ಅವರ ಈಶಾನ್ಯದಿಕ್ಕಿನಲ್ಲಿ **'ಗೃಹಯಜ್ಞ'**ದಲ್ಲಿ ಹೇಳಿದಂತೆ ಆಯಾ ಮಂತ್ರಗಳಿಂದ ನವಗ್ರಹಗಳನ್ನು ಆವಾಹಿಸಿ, ಷೋಡಶೋಪಚಾರಗಳಿಂದ ಪೂಜಿಸಿ, ಅದರ ಈಶಾನ್ಯದಲ್ಲಿ ಕಲಶವನ್ನಿಟ್ಟು ಅದರಲ್ಲಿ ವರುಣನನ್ನು ಆವಾಹಿಸಿ ಅಗ್ನಿಯ ಬಳಿಗೆ ಬಂದು ಅನ್ವಾಧಾನವನ್ನು ಈ ಪ್ರಕಾರ ಮಾಡಬೇಕು.

ಮೃಡಶ್ಚಾರುದ್ರಸ್ತ್ರಿಷ್ಟುಪ್ ॥ ಜಪೇ ವಿನಿಯೋಗಃ ॥ ಓಂ ಭುವನಸ್ಯಪಿತರಂ ಗೀರ್ಭಿರಾಭೀರುದ್ರಂ ದಿವಾವರ್ಧಯಾರುದ್ರಮಕ್ತೌ ॥ ಬೃಹಂತಮೃಷ್ವಮಜರಂ ಸುಷುಮ್ನಮೃಧಗ್ಘುವೇಮಕವಿನೇಷಿತಾಸಃ ॥ ತ್ರ್ಯಂಬಕಂ ಮೈತ್ರಾವರುಣಿರ್ವ-ಸಿಷ್ಠೋರುದ್ರೋಽನುಷ್ಟುಪ್ ॥ ಜಪೇ ವಿನಿಯೋಗಃ ॥ ಓಂ ತ್ರ್ಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಂ ॥ ಉರ್ವಾರುಕಮಿವಬಂಧನಾನ್ ಮೃತ್ಯೋರ್ಮುಕ್ಷೀಯಮಾಮೃತಾತ್ ॥

ಅಥನ್ಯಋತ್ವಿಗುತ್ತರಕುಂಭೇ ಏಕಾದಶಾವೃತ್ತಿಭೀ ರುದ್ರಂ ನ್ಯಾಸರ್ಷ್ಯಾದಿ-ಸ್ಮರಣಪೂರ್ವಕಂ ಜಪ್ತ್ವಾ ॥ ನಮಕಾನುವಾಕಾನಾಮಗ್ನೀರುದ್ರೋ ಮಹಾ-ವಿರಾಟ್ ॥ ಜಪೇ ವಿನಿಯೋಗಃ ॥ ಶಂ ನ ಇಂದ್ರಾಗ್ನೀ ಇತಿ ಸೂಕ್ತಂ ಜಪೇತ್ ॥ ಶಂ ನ ಇಂದ್ರಾಗ್ನೀತಿ ಪಂಚದಶರ್ಚಸ್ಯ ಸೂಕ್ತಸ್ಯ ವಸಿಷ್ಠೋ ವಿಶ್ವೇದೇವಾಸ್ತ್ರಿಷ್ಟುಪ್ ॥ ಜಪೇ ವಿನಿಯೋಗಃ ॥

ತತಃ ಕುಂಭಪಶ್ಚಿಮದೇಶೇ ಸ್ಥಂಡಿಲೇ ವರದನಾಮಾನಮಗ್ನಿಂ ಪ್ರತಿ-ಷ್ಠಾಪ್ಯ ತದೀಶಾನ್ಯಾಂ ವೇದ್ಯಾದೌ ನವಗ್ರಹಾದೀನ್ ತತ್ತನ್ಮಂತ್ರೈರಾವಾಹ್ಯ ಷೋಡಶೋಪಚಾರೈಃ ಸಂಪೂಜ್ಯ ತದೀಶಾನ್ಯಾಂ ಪ್ರಾಗ್ವತ್ ಕುಂಭಂ ಸಂಸ್ಥಾಪ್ಯ ತತ್ರ ವರುಣಮಾವಾಹ್ಯ ಅಗ್ನಿಸಮೀಪಮೇತ್ಯಾನ್ವಾಧಾನಂ ಕುರ್ಯಾತ್ ॥ ತದ್ಯಥಾ ॥

ಕ್ರಿಯಾಮಾಣೇ ಸಗ್ರಹಮಖದುಷ್ಟರಜೋದರ್ಶನಶಾಂತಿಹೋಮೇ ದೇವತಾ-ಪರಿಗ್ರಹಾರ್ಥಮನ್ವಾಧಾನಂ ಕರಿಷ್ಯೇ ॥ ಅಸ್ಮಿನ್ನನ್ವಾಹಿತೇಗ್ನಾವಿತ್ಯಾದಿ ಚಕ್ಷುಷೀ ಆಜ್ಯೇನೇತ್ಯಂತಮುಕ್ತ್ವಾ ನವಗ್ರಹಾನ್ ಪ್ರತ್ಯೇಕಮಮುಕಸಂಖ್ಯಾಭಿಃ ಸಮಿತ್ತಿ-ಲಾಜ್ಯಾಹುತಿಭಿಃ ॥ ಅಧಿದೇವತಾ ಪ್ರತ್ಯಧಿದೇವತಾಶ್ಚ ಪ್ರತ್ಯೇಕಮಮುಕ-

---

ಅನ್ವಾಧಾನ:- **"ಕ್ರಿಯಮಾಣೇ... ಅನ್ವಾಧಾನಂ ಕರಿಷ್ಯೇ"** ಎಂದು ಸಂಕಲ್ಪಿಸಿ **"ಅಸ್ಮಿನ್ನನ್ವಾಹಿತೇಗ್ನೌ"** ಎಂಬಲ್ಲಿಂದ **"ಚಕ್ಷುಷೀ ಆಜ್ಯೇನ"** ಎಂಬಲ್ಲಿ ವರೆಗೆ ಸ್ಥಾಲೀಪಾಕದಲ್ಲಿ ಹೇಳಿದಂತೆ ಉಚ್ಚರಿಸಿ; ನವಗ್ರಹಗಳಲ್ಲಿ ಪ್ರತಿಯೊಂದಕ್ಕೂ **"ಅಮುಕ"** ಎಂಬಲ್ಲಿ ೧೦೮, ೨೮, ಅಥವಾ ೮ ಸಂಖ್ಯೆಯ ಸಮಿಧೆ ಎಳ್ಳು ಮತ್ತು ತುಪ್ಪದ ಆಹುತಿಗಳು ಎಂದು ಹೇಳಿಕೊಳ್ಳಬೇಕು. ಅಂತೆಯೇ ಅಧಿದೇವತೆ ಪ್ರತ್ಯಧಿದೇವತೆಗಳಿಗೆ 8 ಅಥವಾ 4 ಸಮಿಧೆ, ಎಳ್ಳು ಮತ್ತು ತುಪ್ಪದ

**ಸಂಖ್ಯಾಭಿಃ ಸಮಿತ್ತಿಲಾಜ್ಯಾಹುತಿಭಿಃ ॥ ಕ್ರತುಸಾದ್ಗುಣ್ಯದೇವತಾಃ ಕ್ರತುಸಂರಕ್ಷಕ-ದೇವತಾಶ್ಚ ಅಮುಕಸಂಖ್ಯಾತಾಭಿಃ ಸಮಿತ್ತಿಲಾಜ್ಯಾಹುತಿಭಿಃ ॥ ಭುವನೇ-ಶ್ವರೀಂ ಪ್ರತಿದ್ರವ್ಯಂ ಅಮುಕಸಂಖ್ಯಾಭಿಃ ದೂರ್ವಾತಿಲ ಮಿಶ್ರ ಗೋಧೂಮ-ಪಾಯಸಾಜ್ಯಾಹುತಿಭಿರಿಂದ್ರಾಣೀಮಿಂದ್ರಂ ಚ ಪ್ರತ್ಯೇಕಂ ಅಮುಕ ಸಂಖ್ಯಾಭಿ-ರ್ದೂರ್ವಾತಿಲಮಿಶ್ರಗೋಧೂಮಪಾಯಸಾಜ್ಯಾಹುತಿಭಿಃ ॥ ಶೇಷೇಣ ಸ್ವಿಷ್ಟಕೃತ-ಮಿತ್ಯಾದಿ ಸದ್ಯೋ ಯಕ್ಷ್ಯ ಇತ್ಯುಕ್ತ್ವಾ ॥ ತತಃ ಪರಿಸಮೂಹನಪರಿಸ್ತರಣಾದಿ ಪೂರ್ಣಪಾತ್ರನಿಧಾನಾಂತಂ ಕೃತ್ವಾ ಭುವನೇಶ್ವರೀಂದ್ರಾಣೀಂದ್ರೇಭ್ಯೋಮುಷ್ಟೀನ್ನಿರುಪ್ಯ ಆಹುತಿಬಹುತ್ವಾಚ್ಚಾನಿರುಪ್ಯ ವಾ ಗೋದುಗ್ಧೇ ಪಾಯಸಂ ಶ್ರಪಯಿತ್ವಾಜ್ಯಸಂಸ್ಕಾರಾ-ದ್ಯಾಜ್ಯಭಾಗಾಂತಂ ಕುರ್ಯಾತ್ ॥**

**ತತೋ ಯಜಮಾನೋ ದಕ್ಷಿಣತ ಉಪವಿಶ್ಯ ಅಂಗಪ್ರಧಾನದೇವತಾ ಉದ್ದಿಶ್ಯ ಏತಾಭ್ಯ ಇದಂ ನ ಮಮ ಇತಿ ತ್ಯಜೇತ್ ॥**

**ತತಃ ಸರ್ತ್ವಿಗಾಚಾರ್ಯಃ ನವಗ್ರಹೇಭ್ಯೋಽಷ್ಟಶತಾಷ್ಟಾವಿಂಶತ್ಯಷ್ಟಾನ್ಯತಮ-ಸಂಖ್ಯಾಕಾ ಘೃತಾಕ್ತಾ ಅರ್ಕಾದಿಸಮಿಧಃ ತಿಲಾಜ್ಯಾಹುತೀಶ್ಚ ಹುತ್ವಾಧಿದೇವತಾ ಪ್ರತ್ಯಧಿದೇವತಾ ವಿನಾಯಕಾದಿಪಂಚಲೋಕಪಾಲೇಭ್ಯಸ್ತನ್ನ್ಯೂನಸಂಖ್ಯಯಾ ಜುಹು-ಯಾತ್ ॥ ಗ್ರಹಾಣಾಂ ಯದಾಷ್ಟೌ ತದಾನ್ಯೇಭ್ಯಶ್ಚತಸ್ರ ಇತಿ ಸಂಪ್ರದಾಯಃ ॥ ತತೋ ಭುವನೇಶ್ವರ್ಯೈ ಗಾಯತ್ರ್ಯಾ ದಧಿಮಧುಘೃತಾಕ್ತಾಭಿಸ್ತಿಸೃಭಿಃ ದೂರ್ವಾಭಿ-ರೇಕಾಹುತಿರಿತ್ಯೇವಮಷ್ಟಸಹಸ್ರಮಷ್ಟಶತಂ ವಾ ದೂರ್ವಾಹುತೀರ್ಘೃತಾಕ್ತತಿಲಮಿ-ಶ್ರಗೋಧೂಮಾಹುತೀಃ ಪಾಯಸಾಹುತೀಶ್ಚ ಜುಹುಯಾತ್ ॥ ಏವಮಿಂದ್ರಾ-ಣೀಂದ್ರಯೋಃ ಪ್ರಾಗುಕ್ತ ಮಂತ್ರಾಭ್ಯಾಂ ಕ್ರಮೇಣ ತದೇವ ಹವಿಃ ಚತುಷ್ಟಯಂ**

---

ಆಹುತಿಗಳು. ಹಾಗೆಯೇ ಕ್ರತುಸಾದ್ಗುಣ್ಯ ದೇವತೆ ಮತ್ತು ಕ್ರತುಸಂರಕ್ಷಕದೇವತೆಗಳಿಗೆ 4 ಅಥವಾ 2 ಅವೇ ಆಹುತಿಗಳು. ಭುವನೇಶ್ವರೀದೇವಿಗೆ ಪ್ರತಿಯೊಂದು ದ್ರವ್ಯದ 1008, 108 ಅಥವಾ 28 ಆಹುತಿಗಳು, ದ್ರವ್ಯಗಳು 1) ದೂರ್ವೆ, 2) ಎಳ್ಳು ಮಿಶ್ರಮಾಡಿದ ಗೋಧಿ, 3) ಪಾಯಸ, 4) ಆಜ್ಯ, ಇಂದ್ರಾಣೀ ಮತ್ತು ಇಂದ್ರರನ್ನು ಉದ್ದೇಶಿಸಿ, 108, 28 ಅಥವಾ 8 ಮೊದಲು ಹೇಳಿದ ಆಹುತಿಗಳು. "**ಶೇಷೇಣಸ್ವಿಷ್ಟಕೃತ...ಸದ್ಯೋ ಯಕ್ಷ್ಯೇ**" ಎಂದು ಹೇಳಿ ಪರಿಸಮೂಹನ ಪರಿಸ್ತರಣ ಮುಂತಾಗಿ ಸ್ಥಾಲೀಪಾಕದಲ್ಲಿ ಹೇಳಿದಂತೆ ಪೂರ್ಣಪಾತ್ರೆಯನ್ನಿಡುವಲ್ಲಿವರೆಗಿನ ಕರ್ಮಗಳನ್ನು ಮಾಡಬೇಕು. ಭುವನೇಶ್ವರೀ ಆದಿಯಾಗಿ 4 ದೇವತೆಗಳನ್ನು ಮನಸ್ಸಿನಲ್ಲಿ ಧ್ಯಾನಿಸಿ ಅವರಿಗೆಂದು 4-4 ಮುಷ್ಟಿ ಅಕ್ಕಿಯನ್ನು ತೆಗೆದಿಟ್ಟು ದನದ ಹಾಲಿನಲ್ಲಿ ಬೇಯಿಸಿ ಪಾಯಸಮಾಡಬೇಕು. ಆಜ್ಯಸಂಸ್ಕಾರವನ್ನೂ ಮಾಡಿದ ಬಳಿಕ ಯಜಮಾನನು ದಕ್ಷಿಣದಲ್ಲಿ ಕುಳಿತು "**ಏತಾಭ್ಯ ಇದಂ ನ ಮಮ**" ಎಂದು ಹೇಳಬೇಕು.

**ಪ್ರತ್ಯೇಕಮಷ್ಟಶತಸಂಖ್ಯಂ ಭುವನೇಶ್ವರ್ಯಾ ಅಷ್ಟ ಸಹಸ್ರಪಕ್ಷೇ ಜುಹುಯಾತ್ ॥ ತಸ್ಯಾ ಅಷ್ಟಶತಪಕ್ಷೇತು ತಯೋರಷ್ಟಾವಿಂಶತಿರಿತಿ ಸಂಪ್ರದಾಯಃ ॥**

**ತತಃ ಸ್ವಿಷ್ಟಕೃದಾದಿ ಪ್ರಾಯಶ್ಚಿತ್ತಹೋಮಾಂತಂ ಕೃತ್ವಾ ॥**

**ಯಜಮಾನಃ ಇಂದ್ರಾದಿದಿಕ್ಪಾಲೇಭ್ಯೋ ನವಗ್ರಹೇಭ್ಯೋ ಭುವನೇಶ್ವರೀ-ದ್ರಾಣೀಂದ್ರೇಭ್ಯಶ್ಚ ಕ್ಷೇತ್ರಪಾಲಾಯ ಚ ಸದೀಪಾನ್ ಮಾಷಭಕ್ತಬಲೀಂಸ್ತತ್ತ-ನ್ಮಂತ್ರೈರ್ದತ್ವಾ ॥**

**ಅಗ್ನೇರಂತಿಕಮಾಗತ್ಯ ಪೂರ್ಣಾಹುತೀಂ ಸಮುದ್ರಾದೂರ್ಮಿರಿತಿತ್ಯ-ಚೇನ ಜುಹುಯಾತ್ ॥ ತತಃ ಪ್ರಣೀತಾವಿಮೋಕಂ ಕೃತ್ವಾ ಭುವನೇಶ್ವ-ರ್ಯಾದಿ ಕಲಶೋದಕಂ ಗೃಹಕಲಶೋದಕಂ ಚ ಪಾತ್ರಾಂತರೇ ಗೃಹೀತ್ವಾ ತೇನ ತತ್ಸ್ಥಪಂಚಪಲ್ಲವೈಃ ಸಕುಶದೂರ್ವೈಃ ಧೃತನವವಸ್ತ್ರಂ ಯಜಮಾನಂ ಧೃತನ ವವಸ್ತ್ರಕಂಚುಕೀಂ ಚ ತದ್ವಾಮಸ್ಥಾಂ ಋತುಮತೀಂ ಪತ್ನೀಂ ಪತ್ವಿಗುದಙ್ಮುಖ ಆಚಾರ್ಯೋ ಅಭಿಷಿಂಚೇದೇಭಿರ್ಮಂತ್ರೈಃ ॥**

---

ಆಮೇಲೆ ಋತ್ವಿಜರ ಸಹಿತ ಆಚಾರ್ಯನು ನವಗ್ರಹಗಳಿಗೆ ಎಂಟುನೂರು, ಇಪ್ಪತ್ತೆಂಟು ಅಥವಾ ಎಂಟು ಸಂಖ್ಯೆಯ, ತುಪ್ಪದಲ್ಲಿ ತೋಯ್ದಿದ ಎಕ್ಕೆ ಸಮಿಧೆ; ಎಳ್ಳು ಮತ್ತು ತುಪ್ಪದ ಆಹುತಿಗಳನ್ನು ಕೊಟ್ಟು ಅಧಿದೇವತೆ, ಪ್ರತ್ಯಧಿದೇವತೆಗಳಿಗೆ, ವಿನಾಯಕನೇ ಮುಂತಾಗಿ ಐದು ಲೋಕಪಾಲರಿಗೆ ಮೊದಲಿನ ಸಂಖ್ಯೆಗಿಂತ ಕಡಿಮೆ ಸಂಖ್ಯೆಯಿಂದ ಹೋಮಿಸಬೇಕು. ಗ್ರಹಗಳಿಗೆ ಎಂಟೆಂಟು ಆಹುತಿಗಳಾದರೆ ಇತರರಿಗೆ ನಾಲ್ಕು ಆಹುತಿಗಳನ್ನು ಕೊಡುವುದು ಸಂಪ್ರದಾಯ ವಾಗಿದೆ. ಗ್ರಹಗಳನ್ನು ಆವಾಹಿಸಿದ ಮಂತ್ರಗಳಿಂದಲೇ ಆಹುತಿಗಳನ್ನೂ ಕೊಡಬೇಕು. ಬಳಿಕ ಭುವನೇಶ್ವರಿಯನ್ನು ಉದ್ದೇಶಿಸಿ ಗಾಯತ್ರೀಮಂತ್ರದಿಂದ ಮೊಸರು, ಜೇನು ಹಾಗೂ ತುಪ್ಪದಿಂದ ತೋಯಿಸಿದ ಮೂರು ಮೂರು ದೂರ್ವೆಗಳ ಒಂದೊಂದು ಕಟ್ಟಿನ ಒಂದೊಂದು ಆಹುತಿಯಂತೆ ಎಂಟುಸಾವಿರ ಅಥವಾ ಎಂಟುನೂರು, ಹಾಗೆಯೇ ಎಳ್ಳು ಬೆರಸಿದ ಗೋಧಿಯ ಮತ್ತು ಪಾಯಸದ ಆಹುತಿಗಳನ್ನೂ ಕೊಡಬೇಕು. ಹಾಗೆಯೇ ಇಂದ್ರಾಣೀ ಮತ್ತು ಇಂದ್ರರಿಗೂ ಮೊದಲು ಹೇಳಿದ ಮಂತ್ರಗಳಿಂದ ಅದೇ ನಾಲ್ಕು ಬಗೆಯ ಹವಿಸ್ಸಿನ ಎಂಟುನೂರು ಆಹುತಿಗಳನ್ನು ಕೊಡಬೇಕು. ಭುವನೇಶ್ವರಿಗೆ ಎಂಟ್ನೂರು ಆಹುತಿಗಳಾದರೆ ಇವರಿಗೆ ಇಪ್ಪತ್ತೆಂಟು ಆಹುತಿಗಳನ್ನು ಕೊಡುವ ಸಂಪ್ರದಾಯವಿದೆ.

ಇದಾದ ಮೇಲೆ ಸ್ಥಾಲೀಪಾಕದಲ್ಲಿ ಹೇಳಿದಂತೆ **"ಯದಸ್ಯೇತಿ"** ಎಂಬಲ್ಲಿಂದ **"ತ್ಯಜೇತ್"** ಎಂಬಲ್ಲಿ ವರೆಗೆ ಸ್ವಿಷ್ಟಕೃತ್ ಹೋಮ, ಪ್ರಾಯಶ್ಚಿತ್ತಾಹುತಿ ಮುಂತಾದವುಗಳನ್ನು ಮಾಡಬೇಕು.

ಬಳಿಕ ಗ್ರಹಯಜ್ಞದಲ್ಲಿ **"ಅಥ ಬಲಿದಾನಂ"** ಎಂಬ ಶೀರ್ಷಿಕೆಯಲ್ಲಿ ವಿವರಿಸಿದ ಪ್ರಕಾರ ಯಜಮಾನನು ಇಂದ್ರಾದಿ ದಿಕ್ಪಾಲರು, ನವಗ್ರಹಗಳು ಹಾಗೂ ಕ್ಷೇತ್ರಪಾಲರುಗಳಿಗೆ ದೀಪಗಳ ಸಮೇತ ಉದ್ದು ಸೇರಿಸಿದ ಅನ್ನವನ್ನು ಬಲಿಕೊಡಬೇಕು. ಆದರೆ ನವಗ್ರಹಗಳ ಬಲಿ ಆದ

**ಆಪೋಹಿಷ್ಠೇತಿ ನವರ್ಚಸ್ಯ ಸಿಂಧುದ್ವೀಪ ಆಪೋ ಗಾಯತ್ರೀ ಪಂಚಮೀ ವರ್ಧಮಾನಾ ಸಪ್ತಮೀ ಪ್ರತಿಷ್ಠಾ ಅಂತ್ಯೇ ದ್ವೇ ಅನುಷ್ಟುಭೌ ಅಭಿಷೇಕೇ ವಿನಿಯೋಗಃ ॥ ಓಂ ಆಪೋಹಿಷ್ಠಾ ... ॥ ೯ ॥ ಯ ಏಕ-ದ್ವಿದಯತ ಇತಿ ಗೋತಮೋ ರಾಹೂಗಣಇಂದ್ರ ಉಷ್ಣಿಕ್ ॥ ಯ ಏಕಇದ್ವಿದ-ಯತೇವಸುಮರ್ತಾಯದಾಶುಷೇ ॥ ಈಶಾನೋ ಅಪ್ರತಿಷ್ಕುತಇಂದ್ರೋಅಂಗ ॥ ತ್ರಿಭಿಷ್ಟ್ವಂ ದೇವೇತಿ ಸಪ್ತರ್ಚಸ್ಯ ವಸಿಷ್ಠ ಆದ್ಯಾನಾಂ ತ್ರಯಾಣಾಮಗ್ನಿಸ್ತತಃ ಚತುರ್ಣಾಂ ವಿಶ್ವೇದೇವಾ ಆದ್ಯಾ ಗಾಯತ್ರೀ । ದ್ವಿತೀಯಾನುಷ್ಟುಪ್ । ತತ-ಸ್ತಿಸ್ರೋ ಗಾಯತ್ರ್ಯಃ । ಅಂತ್ಯೇ ದ್ವೇ ಅನುಷ್ಟುಭೌ ॥ ಓಂ ತ್ರಿಭಿಷ್ಟ್ವಂ ದೇವ ಸವಿ... ॥ ಉಭಯಂ ಶೃಣವಚ್ಚನೇತಿ ಪ್ರಗಾಥೋ ಭರ್ಗ ಇಂದ್ರೋ ಬೃಹತೀ ॥ ಉಭಯಂ ಶೃಣವಚ್ಚನಇಂದ್ರೋಅರ್ವಾಗಿದಂವಚಃ ॥ ಸತ್ರಾಚ್ಯಾಮ ಘವಾಸೋಮಪೀತಯೇಧಿಯಾಶವಿಷ್ಠಆಗಮತ್ ॥ ಸ್ವಸ್ತಿದಾವಿಶೋ ಭರದ್ವಾಜಃ-ಶಾಸ ಇಂದ್ರೋನುಷ್ಟುಪ್ ॥ ಸ್ವಸ್ತಿದಾವಿಶಸ್ಪತಿಃ ವೃತ್ರಹಾವಿಮೃಧೋವಶೀ ॥ ವೃಷೇಂದ್ರಃ ಪುರ ಏತುನಃ ಸೋಮಪಾಅಭಯಂಕರಃ ॥ ತ್ರ್ಯಂಬಕಂ**

---

ನಂತರ ಕ್ಷೇತ್ರಪಾಲರ ಬಲಿಗೆ ಮೊದಲು ಭುವನೇಶ್ವರೀ, ಇಂದ್ರಾಣೀ ಹಾಗೂ ಇಂದ್ರರಿಗೆ ಬಲಿಗಳನ್ನು ಸಮರ್ಪಿಸಬೇಕು. ಆಯಾ ದೇವತೆಯ ಮಂತ್ರವನ್ನೇ ಬಲಿಕಾರ್ಯದಲ್ಲೂ ಉಪಯೋಗಿಸಿಕೊಳ್ಳಬೇಕು.

ಆಮೇಲೆ ಯಜಮಾನನು ಅಗ್ನಿಯ ಬಳಿಗೆ ಬಂದು, ಸ್ಥಾಲೀಪಾಕದಲ್ಲಿ ಹೇಳಿದಂತೆ **"ಸಮುದ್ರಾದೂರ್ಮಿ"** ಇತ್ಯಾದಿ ಮಂತ್ರಗಳಿಂದ ಪೂರ್ಣಾಹುತಿಯನ್ನು ಕೊಡಬೇಕು. ಇಷ್ಟಾದ ಮೇಲೆ ಸ್ಥಾಲೀಪಾಕದಲ್ಲಿ **"ತತಸ್ತಂಡುಲ"** ಎಂಬಲ್ಲಿಂದ **"ಪ್ರೋಕ್ಷೇತ್"** ಎಂಬಲ್ಲಿವರೆಗೆ ಹೇಳಿದ ಕ್ರಮದಿಂದ ಪ್ರಣೀತಾವಿಮೋಕ ಮಾಡಬೇಕು.

ಆಮೇಲೆ ಭುವನೇಶ್ವರೀ ಮೊದಲಾದ ಕಲಶಗಳಲ್ಲಿರುವ ಹಾಗೂ ನವಗ್ರಹಕಲಶಗಳಲ್ಲಿರುವ ನೀರನ್ನು ಬೇರೆ ಪಾತ್ರೆಯಲ್ಲಿ ತೆಗೆದುಕೊಂಡು, ಅವುಗಳಲ್ಲಿದ್ದ ಪಂಚಪಲ್ಲವಗಳು ಹಾಗೂ ದರ್ಭೆ ಮತ್ತು ದೂರ್ವೆಗಳನ್ನು ಸೇರಿಸಿ, ಹೊಸಬಟ್ಟೆ ಧರಿಸಿದ ಯಾಜಮಾನ ಮತ್ತು ಹೊಸ ಸೀರೆ ಕುಪ್ಪಸಗಳನ್ನು ಧರಿಸಿದ ಋತುಮತೀ ಪತ್ನಿಯು ಅವನ ಎಡಭಾಗದಲ್ಲಿ ಕುಳಿತಂತೆ ಋತ್ವಿಜರ ಸಹಿತ ಆಚಾರ್ಯನು ಈ ಮುಂದಿನ ಮಂತ್ರಗಳಿಂದ ಅಭಿಷೇಕ ಮಾಡಬೇಕು.

ವಸಿಷ್ಠೋರುದ್ರೋಽನುಷ್ಟುಪ್ ॥ ತ್ರ್ಯಂಬಕಂ... ॥ ಜಾತವೇದಸೇ ಕಶ್ಯಪೋ ಜಾತವೇದಾ ಅಗ್ನಿಸ್ತ್ರಿಷ್ಟುಪ್ ॥ ಓಂ ಜಾತವೇದಸೇ... ॥ ಸಮುದ್ರಜ್ಯೇಷ್ಠಾ ಇತಿ ಚತಸೃಣಾಂ ವಸಿಷ್ಠ ಆಪಸ್ತ್ರಿಷ್ಟುಪ್ ॥ ಓಂ ಸಮುದ್ರಜ್ಯೇಷ್ಠಾಃ ॥ ತ್ರಾಯಂತಾಮಿತಿ ತಿಸೃಣಾಂ ಸಪ್ತರ್ಷಯ ಆಪೋಽನುಷ್ಟುಪ್ ॥ ತ್ರಾಯಂತಾಮಿಹ... ॥ ಇಮಾ ಆಪ ಇತಿ ತಿಸೃಣಾಂ ಐತರೇಯ ಆಪೋನುಷ್ಟುಪ್ ಜಗತ್ಯನುಷ್ಟುಭಃ ॥ ಇಮಾ ಆಪಃ ..... ॥ ದೇವಸ್ಯತ್ವೇತ್ಯಸ್ಯೈತರೇಯಃ ಸವಿತಾಶ್ವಿನೌ ಪೂಷಾ ಚ ಯಜುಃ ॥ ಅಭಿಷೇಕೇ ವಿನಿಯೋಗಃ ॥ ಓಂ ದೇವಸ್ಯತ್ವಾಸವಿತುಃ ಪ್ರಸವೇಽಶ್ವಿನೋರ್ಬಾಹುಭ್ಯಾಂ ಪೂಷ್ಣೋ ಹಸ್ತಾಭ್ಯಾಮಗ್ನೇಸ್ತೇಜಸಾಸೂರ್ಯಸ್ಯವರ್ಚಸೇಂದ್ರಸ್ಯೇಂದ್ರಿಯೇಣಾಭಿಷಿಂಚಾಮಿ ॥ ತಮೀಶಾನಂ ಗೋತಮ ಈಶಾನೋ ಜಗತೀ ॥ ತಮೀಶಾನಂ ಜಗತಃ ... ॥ ತ್ವಮಗ್ನೇರುದ್ರೋಽಗ್ನ್ಯತ್ಸಮದೋಽಗ್ನಿರ್ಜಗತೀ ॥ ತ್ವಮಗ್ನೇರುದ್ರೋ ಅಸುರೋ ಮಹೋದಿವಸ್ತ್ವಂಶರ್ಧೋಮಾರುತಂಪೃಕ್ಷಈಶಿಷೇ ॥ ತ್ವಂ ವಾತೈರರುಣೈರ್ಯಾಸಿಶಂಗಯಸ್ತ್ವಂ ಪೂಷಾ ವಿಧತಃ ಪಾಸಿನುತ್ಮನಾ ॥ ತಮುಷ್ಟುಹಿಂಭೌಮಾತ್ರೀರುದ್ರಸ್ತ್ರಿಷ್ಟುಪ್ ॥ ತಮುಷ್ಟುಹಿ... ॥ ಭುವನಸ್ಯಪಿತರಮ್ಯಜಿಶ್ವಾರುದ್ರಸ್ತ್ರಿಷ್ಟುಪ್ ॥ ಭುವನಸ್ಯಪಿತರಂ...... ॥ ಯಾತೇರುದ್ರೇತಿ ಕಶ್ಯಪೋರುದ್ರಃ ಸ್ವರಾಡನುಷ್ಟುಪ್ ॥ ಯಾತೇರುದ್ರಶಿವಾತನೂರಘೋರಾಪಾಪಕಾಶಿನೀ ॥ ತಯಾನಸ್ತನುವಾಶಂತಮಯಾಗಿರಿಶಂತಾಭಿಚಾಕಶೀಹಿ ॥ ಯಜ್ಜಾಗ್ರತ ಇತಿ ಷಣ್ಣಾಂ ಶಿವಸಂಕಲ್ಪಮಂತ್ರಾಣಾಂ ಪ್ರಜಾಪತಿರ್ಮನಸ್ತ್ರಿಷ್ಟುಪ್ ॥ ಯಜ್ಜಾಗ್ರತೋದೂರಮುದೈತುದೈವಂತದುಸುಪ್ತಸ್ಯ ತಥೈವೈತಿ ॥ ದೂರಂಗಮಂ ಜ್ಯೋತಿಷಾಂ ಜ್ಯೋತಿ-

---

ಮೇಲೆ ಅಪೂರ್ಣವಾಗಿ ಬರೆದ ಮಂತ್ರಗಳಲ್ಲಿ ಕೆಲವನ್ನು ಈ ಮೊದಲು ಬೇರೆಬೇರೆ ಸ್ಥಳಗಳಲ್ಲಿ ಬರೆಯಲಾಗಿದೆ. ಅಲ್ಲಿ ಅವುಗಳನ್ನು ನೋಡಿಕೊಳ್ಳಬೇಕು. ಮಂತ್ರಾನು ಕ್ರಮಣಿಕೆಯನ್ನು ನೋಡಿ ಸುಲಭವಾಗಿ ಕಂಡುಹಿಡಿಯಬಹುದು.

**ರೇಕಂ ತನ್ಮೇ ಮನಃ ಶಿವಸಂಕಲ್ಪಮಸ್ತು ॥ ಯೇನಕರ್ಮಾಣ್ಯಪಸೋಮನೀ-ಷಿಣೋ ಯಜ್ಞೇ ಕೃಣ್ವಂತಿ ವಿದಥೇಷು ಧೀರಾಃ ಯದಪೂರ್ವಂಯಕ್ಷ-ಮಂತಃ ಪ್ರಜಾನಾಂ ತನ್ಮೇ...... ॥ ಯತ್ಪ್ರಜ್ಞಾನಮುತಚೇತೋಧೃತಿಶ್ಚಯ-ಜ್ಯೋತಿರಂತರಮೃತಂ ಪ್ರಜಾಸು ॥ ಯಸ್ಮಾನ್ನಋತೇಕಿಂಚ ನ ಕರ್ಮ-ಕ್ರಿಯತೇ ತನ್ಮೇ.... ॥ ಯೇನೇದಂ ಭೂತಂ ಭುವನಂ ಭವಿಷ್ಯ ತ್ಪರಿ ಗೃಹೀತ ಮಮೃತೇನ ಸರ್ವಂ ॥ ಯೇನಯಜ್ಞಸ್ತಾಯತೇ ಸಪ್ತಹೋತಾ ತನ್ಮೇ...... ॥ ಯಸ್ಮಿನ್ ಋಚಃ ಸಾಮಯಜೂಗ್‌ಂಷಿ ಯಸ್ಮಿನ್ ಪ್ರತಿಷ್ಠಿತಾ-ರಥನಾಭಾವಿವಾರಾಃ ॥ ಯಸ್ಮಿಗ್‌ಂ ಶ್ಚಿತ್ತಗ್‌ಂ ಸರ್ವಮೋತಂ ಪ್ರಜಾನಾಂ ತನ್ಮೇ .... ॥ ಸುಷಾರಥಿರಶ್ವಾನಿವಯನ್ಮನುಷ್ಯಾನ್ನೇನೀಯತೇಽಭೀಶುಭಿರ್ವಾಜಿನ ಇವ ॥ ಹೃತ್ಪ್ರತಿಷ್ಠಂಯದಜಿರಂ ಯವಿಷ್ಠಂ ತನ್ಮೇ... ॥ ಇಂದ್ರತ್ವಾ ವೃಷಭಂ ವಯಮಿತಿ ಪಂಚಾನಾಂ ವಿಶ್ವಾಮಿತ್ರಇಂದ್ರೋಗಾಯತ್ರೀ ॥ ಇಂದ್ರತ್ವಾ ವೃಷಭಂ ವಯಂ ಸುತೇ ಸೋಮೇ ಹವಾಮಹೇ ॥ ಸಪಾಹಿಮಧ್ವೋ ಅಂಧಸಃ ॥**

---

ಮೇಲೆ ಹೇಳಿದ ಮಂತ್ರಗಳಿಂದ ಅಭಿಷೇಕ ಮಾಡಿದ ಮೇಲೆ "**ಸುರಾಸ್ತ್ವಾ....**" ಮುಂತಾದ ಪೌರಾಣಿಕ ಮಂತ್ರಗಳಿಂದ ಅಭಿಷೇಕ ಮಾಡಬೇಕು. ಬಳಿಕ ಕಲಶಗಳಲ್ಲಿದ್ದ ನೀರು ಹಾಗೂ ಬೇರೆ ನೀರಿನಿಂದ ಶುದ್ಧವಾಗಿ ಸ್ನಾನಮಾಡಿ ದಂಪತಿಗಳು ಶುಭ್ರವಸ್ತ್ರಗಳನ್ನು ಧರಿಸಿ ಪತ್ನಿಯು ಬಲಭಾಗದಲ್ಲಿರುವಂತೆ ಅಗ್ನಿಯ ಬಳಿಯಲ್ಲಿ ಕುಳಿತುಕೊಳ್ಳಬೇಕು. ಕಳಚಿದ ಬಟ್ಟೆಗಳನ್ನು ಆಚಾರ್ಯನಿಗೆ ಕೊಡಬೇಕು. "**ತತಃ ಕರ್ತಾಗ್ನೇಃ**" ಎಂಬಲ್ಲಿಂದ ಸ್ಥಾಲೀ ಪಾಕದಲ್ಲಿ ಹೇಳಿದಂತೆ ವಿಭೂತಿಧಾರಣ ವರೆಗಿನ ಕರ್ಮಗಳನ್ನು ಮಾಡಿ ಯಜಮಾನನು ಆಚಾರ್ಯ ಮೊದಲಾದವರನ್ನು ಗಂಧ, ಪುಷ್ಪ, ವಸ್ತ್ರ, ಅಲಂಕಾರಾದಿಗಳಿಂದ ಪೂಜಿಸಿ ಆಚಾರ್ಯನಿಗೆ ಗೋಸಹಿತ ದಕ್ಷಿಣೆಯನ್ನೂ ಮಿಕ್ಕವರಿಗೆ ಕೈತುಂಬಾ ದಕ್ಷಿಣೆಯನ್ನೂ ಕೊಡಬೇಕು. ಆಮೇಲೆ ಗ್ರಹಪೀಠದೇವತೆಗಳಿಗೂ, ಭುವನೇಶ್ವರೀ ದೇವತೆಗಳಿಗೂ ಪಂಚೋಪಚಾರಗಳಿಂದ ಉತ್ತರಪೂಜೆ ಮಾಡಿ "**ಯಾಂತು ದೇವಗಣಾ ...**" ಎಂದು ಹೇಳಿ ವಿಸರ್ಜಿಸಬೇಕು. ಆಚಾರ್ಯನ ಕೈಯಲ್ಲಿ ಅಗ್ನಿಯನ್ನು ಒಪ್ಪಿಸಿ, ಪೂಜಿಸಿ, "**ಗಚ್ಛ ಗಚ್ಛ**" ಎಂದು ವಿಸರ್ಜಿಸಬೇಕು. ಮಹಾಶಾಂತಿ ಮಂತ್ರಗಳನ್ನು ಬೇರೆ ಕಡೆ ಕೊಡಲಾಗಿದೆ. ಆಮೇಲೆ ನವಗ್ರಹಗಳ ಪ್ರೀತ್ಯರ್ಥವಾಗಿ ಮೂರು, ಹಾಗೂ ಭುವನೇಶ್ವರ್ಯಾದಿ ದೇವತೆಗಳ ಪ್ರೀತ್ಯರ್ಥ ತಲಾ ಮೂರರಂತೆ ಬ್ರಾಹ್ಮಣರಿಗೆ ಭೋಜನ ಕೊಟ್ಟು ತಾನೂ ಮಿತ್ರರೊಂದಿಗೆ ಉಣ್ಣಬೇಕು.

ಇಂದ್ರಕ್ರತುವಿದಂ ಸುತಂ ಸೋಮಂ ಹರ್ಯಪುರುಷ್ಟುತ ॥ ಪಿಬಾವೃಷಸ್ವತಾತೃಪಿಂ ॥ ಇಂದ್ರಪ್ರಣೋಧಿತಾವಾನಂ ಯಜ್ಞಂ ವಿಶ್ವೇಭಿರ್ದೇವೇಭಿಃ ॥ ತಿರಃ ಸ್ತವಾನವಿಶ್ಪತೇ ಇಂದ್ರಸೋಮಾಃಸುತಾ ಇಮೇ ತವಪ್ರಯಂತಿಸತ್ಪತೇ ॥ ಕ್ಷಯಂ ಚಂದ್ರಾಸಇಂದವಃ ॥ ದಧಿಷ್ವಾಜಠರೇಸುತಂ ಸೋಮಮಿಂದ್ರವರೇಣ್ಯಂ ॥ ತವದ್ಯುಕ್ಷಾಸಇಂದವಃ ॥

"ತತಃ ಸುರಾಸ್ತ್ವಾಮಭಿಷಿಂಚಂತು" ಇತ್ಯಾದಿ ಪೌರಾಣೈರ್ಮಂತ್ರೈರಭಿಷಿಂಚೇತ್ ॥ ತತಃ ಕಲಶೋದಕೇನಾನ್ಯೇನಚೋದಕೇನ ಸುಸ್ನಾತೌ ದಂಪತೀ ಶುಕ್ಲವಾಸೋಗಂಧಮಾಲ್ಯಾದಿ ಧೃತ್ವೋಪವಿಶೇತಾಂ ॥ ತತ್ರಪತ್ನೀ ದಕ್ಷಿಣತಃ ॥ ತ್ಯಕ್ತವಾಸಾಂಸ್ಯಾಚಾರ್ಯಸ್ಯ ॥

ತತೋ ಯಜಮಾನೋ ಅಗ್ನಿಂ ಸಂಪೂಜ್ಯ ವಿಭೂತಿಂ ಧೃತ್ವಾ ಆಚಾರ್ಯಾದೀನ್ ಗಂಧಪುಷ್ಪವಸ್ತ್ರಾಲಂಕಾರಾದಿಭಿರ್ಯಥಾಶಕ್ತಿ ಪೂಜಯಿತ್ವಾ ಆಚಾರ್ಯಾಯ ಧೇನುಂ ದಕ್ಷಿಣಾಂ ಚ ದದ್ಯಾತ್ ॥ ತತೋ ಅನ್ಯೇಭ್ಯ ಋತ್ವಿಗ್ಭ್ಯೋಽನ್ಯೇಭ್ಯಶ್ಚ ಬ್ರಾಹ್ಮಣೇಭ್ಯೋ ಭೂಯಸೀಂ ದಕ್ಷಿಣಾಂ ದದ್ಯಾತ್ ॥ ತತೋ ಗ್ರಹಪೀಠದೇವತಾನಾಂ ಭುವನೇಶ್ವರ್ಯಾದೀನಾಂ ಚೋತ್ತರಪೂಜಾಂ ಪಂಚೋಪಚಾರೈಃ ಕೃತ್ವಾ ಕ್ಷಮಾಪ್ಯ "ಯಾಂತು ದೇವಗಣಾ" ಇತಿ ವಿಸೃಜ್ಯ ಆಚಾರ್ಯಹಸ್ತೇ ಪ್ರತಿಪಾದ್ಯಾಗ್ನಿಂ ಸಂಪೂಜ್ಯ ಗಚ್ಛ ಗಚ್ಛ ಸುರಶ್ರೇಷ್ಠೇತಿ ವಿಸರ್ಜಯೇತ್ ॥ ತತೋ ಬ್ರಾಹ್ಮಣಾ ಮಹಾಶಾಂತಿಂ ಪಠೇಯುಃ ॥ ಸಾ ಯಥಾ ॥ ಆ ನೋ ಭದ್ರಾ ಇತಿ ದಶಾನಾಂ ಗೋತಮೋರಾಹೂಗಣೋ ವಿಶ್ವೇದೇವಾ ಆದ್ಯಾಃ ಪಂಚ ಸಪ್ತಮೀ ಜಗತ್ಯಃ ಷಷ್ಠೀ ವಿರಾಟ್ಸ್ಥಾನಾ ಚ ಅಷ್ಟಮಾದ್ಯಾಸ್ತಿಸ್ರಃ ತ್ರಿಷ್ಟುಭಃ ॥ ಸ್ವಸ್ತಿ ನೋ ಮಿಮೀತಾಮಿತಿ ಪಂಚಾನಾಂ ಸ್ವಸ್ತ್ಯಾತ್ರೇಯೋ ವಿಶ್ವೇದೇವಾ ಆದ್ಯಾಸ್ತಿಸ್ರಸ್ತ್ರಿಷ್ಟುಭಃ ತತೋ ದ್ವೇನುಷ್ಟುಭೌ ॥ ಶಂ ನ ಇಂದ್ರಾಗ್ನೀರಿತಿ ಪಂಚದಶಾನಾಂ ವಸಿಷ್ಠೋ ವಿಶ್ವೇದೇವಾಸ್ತ್ರಿಷ್ಟುಪ್ ॥

ಶಂವತೀರಿತಿ ಪಂಚಾನಾಂ ವಸಿಷ್ಠೋ ವಿಶ್ವೇದೇವಾಸ್ತ್ರಿಷ್ಟುಪ್ ॥ ತ್ಯಮೂಷ್ವಿತಿ ತಿಸೃಣಾಂ ತಾರ್ಕ್ಷ್ಯೋಽರಿಷ್ಟನೇಮಿಸ್ತಾರ್ಕ್ಷ್ಯಸ್ತ್ರಿಷ್ಟುಪ್ ॥ ತಚ್ಛಂಯೋಃಶಂಯುಃ ವಿಶ್ವೇದೇವಾಃ ಶಕ್ವರೀ ॥ ಸರ್ವೇಷಾಂ ಶಾಂತಿಪಾಠೇ ವಿನಿಯೋಗಃ ॥ ಓಂ ಆನೋ ಭದ್ರಾಃ ॥ ೧೦ ॥ ಓಂ ಸ್ವಸ್ತಿನೋ ॥ ೫ ॥ ಓಂ ಶಂ ನ ಇಂದ್ರಾಗ್ನೀ ॥ ೧೫ ॥ ಓಂ ತ್ಯಮೂಷುವಾಜಿನಂ ॥ ೩ ॥ ಓಂ ತಚ್ಛಂ ಯೋ ರಾವೃಣೀ ॥ ೧ ॥ ತತೋ ಯಜಮಾನೋ ನವಗ್ರಹಪ್ರೀತ್ಯರ್ಥಂ ತ್ರೀನ್ ಭುವನೇಶ್ವರೀಂದ್ರಾಣೀಂದ್ರಪ್ರೀತಯೇ ಚ ಪ್ರತ್ಯೇಕಂ ತ್ರೀಂಸ್ತ್ರೀನ್ ಬ್ರಾಹ್ಮಣಾನ್ ಭೋಜಯಿತ್ವಾ ಸಂಕಲ್ಪ್ಯ ವಾ ವಿಪ್ರಾಶಿಷೋ ಗೃಹೀತ್ವಾ ಸುಹೃದ್ಯುಕ್ತೋ ಭುಂಜೀತ ॥

॥ ಇತಿ ಭುವನೇಶ್ವರೀ ಶಾಂತಿಃ ॥

# ಗರ್ಭಾಧಾನಾದಿ ಸಂಸ್ಕಾರಾಣಾಂ ನಿರ್ಣಯಃ

## ॥ ಸತ್ಸಂತತಿ ಜನಕವಿಧಾನಂ ॥

ತತೋ ವಿಧಾನಂ ಪುತ್ರೀಯಮುಪಾಧ್ಯಾಯಃ ಸಮಾಚರೇತ್ ।
ಕರ್ಮಾಂತೇ ಚ ಕ್ರಮಂ ಹ್ಯೇನಮಾರಭೇತ ವಿಚಕ್ಷಣಃ ॥ ೧ ॥

ಪ್ರಜನಾರ್ಥಂ ಮಹಾಭಾಗಾಃ ಪೂಜಾರ್ಹಾ ಗೃಹದೀಪ್ತಯಃ ।
ಸ್ತ್ರಿಯಃ ಶ್ರಿಯಶ್ಚ ಗೇಹೇಷು ನ ವಿಶೇಷೋಸ್ತಿ ಕಶ್ಚನ ॥ ೨ ॥

ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ ।
ಯತ್ರೈತಾಸ್ತು ನ ಪೂಜ್ಯಂತೇ ಸರ್ವಾಸ್ತತ್ರಾಫಲಾಃ ಕ್ರಿಯಾಃ ॥ ೩ ॥

ಸಂತುಷ್ಟೋ ಭಾರ್ಯಯಾ ಭರ್ತಾ ಭರ್ತ್ರಾ ಭಾರ್ಯಾ ತಥೈವ ಚ ।
ಯಸ್ಮಿನ್ನೇವ ಕುಲೇ ನಿತ್ಯಂ ಕಲ್ಯಾಣಂ ತತ್ರ ವೈ ಧ್ರುವಂ ॥ ೪ ॥

ಯದಿ ಹಿ ಸ್ತ್ರೀ ನ ರೋಚೇತ ಪುಮಾಂಸಂ ನ ಪ್ರಮೋದಯೇತ್ ।
ಅಪ್ರಮೋದಾತ್ ಪುನಃ ಪುಂಸಃ ಪ್ರಜನಂ ನ ಪ್ರವರ್ತತೇ ॥ ೫ ॥ ಮನುಃ ॥

ಪಾಪಕರ್ಮಕೃತಂ ಕಿಂಚಿದ್ಯದಿ ತಸ್ಮಿನ್ನ ದೃಶ್ಯತೇ ।
ನೃಪತೇ ತಸ್ಯ ಪುತ್ರೇಷು ಪೌತ್ರೇಷ್ವಪಿ ಚ ನಪ್ತೃಷು ॥ ೬ ॥

ಆಹಾರಾಚಾರಚೇಷ್ಟಾಭಿರ್ಯಾದೃಶೀಭಿಃ ಸಮನ್ವಿತೌ ।
ಸ್ತ್ರೀಪುಂಸೌ ಸಮುಪೇಯಾತಾಂ ತಯೋಃ ಪುತ್ರೋಽಪಿ ತಾದೃಶಃ ॥ ೭ ॥

ತತೋಽಪರಾಹ್ಣೇ ಪುಮಾನ್ ಮಾಸಂ ಬ್ರಹ್ಮಚಾರೀ ಸರ್ಪಿಃ ಸ್ನಿಗ್ಧಃ ಸರ್ಪಿಃ ಕ್ಷೀರಾಭ್ಯಾಂ ಶಾಲ್ಯೋದನಂ ಭುಕ್ತ್ವಾ ಮಾಸಂ ಬ್ರಹ್ಮಚಾರಿಣೀಂ ತೈಲಸ್ನಿಗ್ಧಾಂ ತೈಲಮಾಷೋತ್ತರಾಹಾರಾಂ ನಾರೀಮುಪೇಯಾದ್ರಾತ್ರೌ ಸಾಮಾದಿಭಿರ್ವಿಶ್ವಾಸ್ಯ ವಿಕಲ್ಪ್ಯೇಯಂ ಚತುರ್ಥ್ಯಾಂ ಷಷ್ಠ್ಯಾಂ ಅಷ್ಟಮ್ಯಾಂ ದ್ವಾದಶ್ಯಾಂ ಚೋಪೇಯಾದಿತಿ ಪುತ್ರಕಾಮಃ ॥ ಸುಶ್ರುತಃ ॥

ಸತ್ಸಂತಾನ ಪ್ರಾಪ್ತಿಯಾಗಲು ಕೈಗೊಳ್ಳಬೇಕಾದ ವಿಧಾನಗಳು:- ಬುದ್ಧಿವಂತ ನಾದವನು ಸತ್ಸಂತಾನವನ್ನು ಪಡೆಯಲು ಪುತ್ರೇಷ್ಟಿಯನ್ನು ಮಾಡಬೇಕು. ಆ ಕರ್ಮವನ್ನು ಪೂರಯಿಸಿದ ಬಳಿಕ ಕೆಲವು ವಿಧಾನಗಳನ್ನು ಅನುಸರಿಸಬೇಕು. ॥ ೧ ॥ ಮನೆಯಲ್ಲಿ ಜ್ಯೋತಿಗಳಂತೆ ಬೆಳಗುತ್ತಿರುವ ಉತ್ತಮ ಸ್ತ್ರೀಯರೇ ಒಳ್ಳೆಯ ಸಂತತಿಗೆ ಪ್ರಧಾನ ಕಾರಣರಾಗಿದ್ದಾರೆ.

ಸ್ತ್ರೀ ಎಂದರೆ ಸಾಕ್ಷಾತ್ ಲಕ್ಷ್ಮೀಸ್ವರೂಪಳಾಗಿದ್ದಾಳೆ. ಶ್ರೀ ಮತ್ತು ಸ್ತ್ರೀ ಇವರಲ್ಲಿ ಯಾವ ಭೇದವೂ ಇಲ್ಲ ॥ ೨ ॥ ಯಾವ ಮನೆಯಲ್ಲಿ ಅಥವಾ ದೇಶದಲ್ಲಿ ಸ್ತ್ರೀಯರನ್ನು ಗೌರವ ಹಾಗೂ ಆದರದಿಂದ ಕಾಣಲಾಗುತ್ತದೋ ಅಲ್ಲಿ ದೇವತೆಗಳೂ ಸಂತೋಷಪಡುತ್ತಾರೆ. ಎಲ್ಲಿ ಸ್ತ್ರೀಯರನ್ನು ನೀಚದೃಷ್ಟಿಯಿಂದ ನೋಡಿ ಅವಹೇಳನ ಮಾಡಲಾಗುತ್ತದೋ ಅಲ್ಲಿ ನಡೆಸಿದ ಯಾವ ಕರ್ಮವೂ ಫಲಕಾರಿಯಾಗುವುದಿಲ್ಲ. ॥ ೩ ॥ ಪತ್ನಿಯಿಂದ ಪತಿಯೂ ಪತಿಯಿಂದ ಪತ್ನಿಯೂ ಪರಸ್ಪರ ಪ್ರೀತ್ಯನುರಾಗಗಳಿಂದ ಯಾವ ಮನೆಯಲ್ಲಿ ಸಂತೃಪ್ತರಾಗಿರುತ್ತಾರೋ ಆ ಮನೆಯು ಯಾವಾಗಲೂ ಮಂಗಲಕರವಾಗಿರುತ್ತದೆ. ॥ ೪ ॥ ಹೆಂಡತಿಯು ಗಂಡನಿಗೆ ಪ್ರಿಯಳಾಗಿ ಇಲ್ಲದಿದ್ದರೆ, ಅಸಂತುಷ್ಟನಾದ ಅವನಿಂದ ಎಂದಿಗೂ ಸತ್ಸಂತಾನಪ್ರಾಪ್ತಿಯಾಗಲಾರದು. ॥ ೫ ॥ ಪತಿಪತ್ನಿಯರು ದುಷ್ಕರ್ಮಗಳನ್ನು ಮಾಡದವರೂ, ಸದಾಚಾರಸಂಪನ್ನರೂ ಆಗಿರಬೇಕು. ಪರಸ್ಪರ ಜಗಳಾಡು ವವರೂ, ಪಾಪಕರ್ಮಗಳನ್ನು ಮಾಡುವವರೂ ಆಗಿದ್ದರೆ ಅಂತಹ ದೋಷಗಳು ಪರಂಪರೆ ಯಿಂದ ಹಲವು ತಲೆಮಾರುಗಳ ವರೆಗೆ ಅವರ ಸಂತತಿಗೂ ಹಾನಿಯನ್ನುಂಟುಮಾಡುತ್ತವೆ. ॥ ೬ ॥ ಆಹಾರ, ಆಚಾರ, ವಿಚಾರ ಇತ್ಯಾದಿಗಳಲ್ಲಿ ದಂಪತಿಗಳು ಯಾವ ಕ್ರಮಗಳನ್ನು ಅನುಸರಿಸುತ್ತಾರೋ ಅವೇ ಕ್ರಮಗಳು, ಸ್ವಭಾವಗಳು ಅವರ ಮಕ್ಕಳಿಗೂ ಬರುತ್ತವೆ. ॥ ೭ ॥

ಪುತ್ರೇಷ್ಟಿಯನ್ನು ಮಾಡಿದ ಮೇಲೆ ಪುರುಷನು ಒಂದು ತಿಂಗಳ ಕಾಲ ಬ್ರಹ್ಮಚಾರಿ ಯಾಗಿದ್ದು, ಮೈಗೆ ತುಪ್ಪವನ್ನು ಲೇಪಿಸಿಕೊಳ್ಳಬೇಕು. ಹಾಗೂ ತುಪ್ಪ, ಹಾಲು ಮುಂತಾದುವು ಗಳಿಂದ ಕೂಡಿದ ಪೌಷ್ಟಿಕ, ಸಾತ್ವಿಕ ಆಹಾರವನ್ನು ಸ್ವೀಕರಿಸುತ್ತಿರಬೇಕು. ಅಂತೆಯೇ ಸ್ತ್ರೀಯೂ ಬ್ರಹ್ಮಚಾರಿಣಿಯಾಗಿದ್ದು ಮೈಗೆ ಎಳ್ಳೆಣ್ಣೆಯನ್ನು ತಿಕ್ಕಿ ಹಚ್ಚಿಕೊಂಡು, ಎಳ್ಳೆಣ್ಣೆ ಮತ್ತು ಉದ್ದಿನ ಪದಾರ್ಥಗಳಿಂದ ಕೂಡಿದ ಆಹಾರವನ್ನು ಸ್ವೀಕರಿಸುತ್ತಿರಬೇಕು. ನಂತರ ಹೆಂಗುಸು ರಜಸ್ವಲೆಯಾದ ಮೇಲೆ ೪-೬-೮-೧೦-೧೨ ಇವುಗಳಲ್ಲಿ ಯಾವುದಾದರೊಂದು ಶುಭದಿನದಲ್ಲಿ ಪುರುಷನು ಆಕೆಯೊಡನೆ ಸಂಭೋಗ ನಡೆಸಬೇಕು. ಪ್ರೀತಿಯ ಮಾತುಗಳಿಂದ ಆಕೆಯನ್ನು ರಮಿಸಿ, ಸಂತೋಷಗೊಳಿಸಿ ಅನುರಾಗದಿಂದ ಋತುದಾನ ಮಾಡಿದರೆ ಅದರಿಂದ ಒಳ್ಳೆಯ ಗುಣಗಳುಳ್ಳ ಸತ್ಪುತ್ರನು ಜನಿಸುತ್ತಾನೆ.

ಮೂಗಿನ ಬಲರಂಧ್ರದಲ್ಲಿ ಶ್ವಾಸ ಸಂಚಾರವಾಗುತ್ತಿರುವಾಗ ಸ್ತ್ರೀಸಂಗಮಾಡಿದರೆ ಗಂಡು ಸಂತಾನವೂ, ಎಡರಂಧ್ರದಲ್ಲಿ ಶ್ವಾಸೋಚ್ಛ್ವಾಸ ನಡೆವಾಗ ಮಾಡಿದರೆ ಹೆಣ್ಣು ಸಂತಾನವೂ ಜನಿಸುವುದು. ಎರಡೂ ರಂಧ್ರಗಳಲ್ಲಿ ಶ್ವಾಸಗತಿ ಇರುವಾಗ ಸಂಭೋಗಮಾಡಿದರೆ ನಪುಂಸಕ ಸಂತತಿಯು ಹುಟ್ಟುತ್ತದೆ. ಆದ್ದರಿಂದ ದಂಪತಿಗಳು ತಮಗೆ ಬೇಕಾದ ಸಂತಾನವನ್ನು ಪಡೆಯಲು ಈ ವಿಷಯವನ್ನು ನೆನಪಿನಲ್ಲಿಟ್ಟು ಆಯಾ ಶ್ವಾಸಗತಿ ಇರುವಾಗ ಸಂಭೋಗಮಾಡಬೇಕು. ಬಲಮಗ್ಗುಲಿಗೆ ಮಲಗಿದಾಗ ಎಡರಂಧ್ರದಲ್ಲೂ, ಎಡಮಗ್ಗುಲಿಗೆ ಮಲಗಿದಾಗ ಬಲರಂಧ್ರದಲ್ಲೂ ಶ್ವಾಸಗತಿಯು ನಡೆಯುತ್ತದೆ. ಋತುಸ್ನಾತೆಯಾದ ಪತ್ನಿಯು ಸೂರ್ಯದರ್ಶನ ಮಾಡಿ "ಸೂರ್ಯನಂತೆ ತೇಜಸ್ವಿಯಾದ ಕುಮಾರನು ತನಗೆ ಜನಿಸಲಿ" ಎಂದು ಪ್ರಬಲವಾಗಿ ಇಚ್ಛಿಸಬೇಕು. ಅಂತಹ ಪ್ರಬಲವಾದ ಮಾನಸಿಕ ಇಚ್ಛೆ ಇದ್ದರೆ ಅದೇ ಫಲಪ್ರಾಪ್ತಿಯಾಗುತ್ತದೆ. ಗರ್ಭಾಧಾನಕ್ಕೆ ಉದ್ಯುಕ್ತರಾದಾಗ ಪತಿಪತ್ನಿಯರಿಬ್ಬರೂ ಆರೋಗ್ಯದೃಢಕಾಯರಾಗಿರಬೇಕು.

ಉತ್ತಮ ಆಹಾರ ವ್ಯವಹಾರಗಳಿಂದ ಸುಪುಷ್ಟರಾಗಿರಬೇಕು. ಪರಸ್ಪರ ಅನುರಾಗ ಪ್ರೀತಿ ವಿಶ್ವಾಸ ಗಳಿದ್ದವರಾಗಿರಬೇಕು.

## ॥ ಗರ್ಭಪಾತಲಕ್ಷಣಾನಿ ॥

**ದೋಷಾಭಿಘಾತೈರ್ಗರ್ಭಿಣ್ಯಾ ಯೋ ಯೋ ಭಾಗಃ ಪ್ರಪೀಡ್ಯತೇ ॥**
**ಸ ಸ ಭಾಗಃ ಶಿಶೋಸ್ತಸ್ಯ ಗರ್ಭಸ್ಥಸ್ಯ ಪ್ರಪೀಡ್ಯತೇ ॥ ಸುಶ್ರುತಃ ॥**

**ಗರ್ಭಪಾತದ ಕಾರಣಗಳು:-** ಆಘಾತ, ಅಪಘಾತ, ಆಹಾರದೋಷ ಇತ್ಯಾದಿಗಳಿಂದ ಗರ್ಭಿಣಿಯ ಯಾವ ಯಾವ ಅಂಗಕ್ಕೆ ಹಾನಿಯಾಗುವುದೋ ಗರ್ಭದಲ್ಲಿರುವ ಶಿಶುವಿನ ಆ ಅಂಗಕ್ಕೆ ಊನವುಂಟಾಗುತ್ತದೆ. ಆದರಿಂದ ಗರ್ಭಪಾತವಾಗುವ ಸಂಭವವೂ ಇದೆ. ಅದೇ ರೀತಿ ಗರ್ಭಿಣಿಯು ಕಠಿಣಶ್ರಮದ ಕೆಲಸಗಳನ್ನು ಮಾಡುವುದು, ಮಲಮೂತ್ರ ವಿಸರ್ಜನೆಯನ್ನು ತಡೆಹಿಡಿಯುವುದು, ಗುಡ್ಡಗಳನ್ನು ಏರುವುದು, ಭಯಂಕರವಾದ ಶಬ್ದಗಳನ್ನು ಕೇಳುವುದು, ಮನಸ್ಸಿಗೆ ಆಘಾತವನ್ನುಂಟುಮಾಡುವ ದುರ್ವಾರ್ತೆಗಳನ್ನು ಕೇಳುವುದು, ಕೋಪ, ಅಸೂಯೆ ಮುಂತಾದ ದುರ್ಭಾವನೆಗಳು ಮನಸ್ಸಿನಲ್ಲಿ ಉಂಟಾಗುವುದು-ಇವುಗಳಿಂದಲೂ ಗರ್ಭಕ್ಕೆ ಬಾಧೆ ಉಂಟಾಗಿ ಗರ್ಭಪಾತವಾಗುವ ಸಂಭವವಿದೆ. ಮೂರನೆಯ ತಿಂಗಳಲ್ಲಿ ಬಹಳ ಎಚ್ಚರಿಕೆ ಯಿಂದ ಸಂಭೋಗವನ್ನು ತಪ್ಪಿಸಲೇಬೇಕು. ಮೊದಲ ಮೂರು ತಿಂಗಳಲ್ಲಿ ಗರ್ಭಪಾತವಾಗುವ ಭಯ ಹೆಚ್ಚಾಗಿರುತ್ತದೆ. ನಾಲ್ಕನೆಯ ಅಥವಾ ಐದನೆಯ ತಿಂಗಳ ನಂತರ ಮೈಥುನವನ್ನು ಸಂಪೂರ್ಣವಾಗಿ ತ್ಯಜಿಸಬೇಕು. ಅನಾರೋಗ್ಯವನ್ನುಂಟುಮಾಡುವ ಅಯೋಗ್ಯ ಆಹಾರವನ್ನು ಗರ್ಭಿಣಿಯು ಸೇವಿಸಿದರೆ ಅದರಿಂದ ಗರ್ಭದ ಮೇಲೆ ಕೆಟ್ಟ ಪರಿಣಾಮ ಉಂಟಾಗಿ, ಮುಂದೆ ಶಿಶುವಿನ ಆರೋಗ್ಯಕ್ಕೆ ಹಾನಿಯಾಗಬಹುದು. ಆದ್ದರಿಂದ ಗರ್ಭಿಣೀಸ್ತ್ರೀಯು ಸಾತ್ವಿಕ ಹಾಗೂ ಪೌಷ್ಟಿಕ ಆಹಾರವನ್ನೇ ನಿಯಮಿತವಾಗಿ ಸ್ವೀಕರಿಸಬೇಕು. ಯಾವಾಗಲೂ ಪ್ರಸನ್ನಚಿತ್ತಳಾಗಿರಬೇಕು. ದೈವಭಕ್ತಿ, ಸದಾಚಾರ, ಪರೋಪಕಾರ, ವಾತ್ಸಲ್ಯ, ದಯೆ ಮುಂತಾದ ಸದ್ಭಾವಗಳನ್ನೇ ಯಾವಾಗಲೂ ಮನಸ್ಸಿನಲ್ಲಿ ಚಿಂತಿಸುತ್ತಿರಬೇಕು. ಇದರಿಂದ ಗರ್ಭಸ್ಥ ಶಿಶುವಿನ ಮೇಲೆ ಸತ್ಪರಿಣಾಮ ಉಂಟಾಗುತ್ತದೆ.

## ॥ ವಂಧ್ಯಾತ್ವನಿವಾರಣಂ ॥

**ಹಂತಿ ವೈ ಬಾಲಕಂ ಸುಪ್ತಂ ತ್ವಸಂಜಾತಂ ಚ ಮೂಲಕಂ ॥**
**ತೇನ ಸಾ ಜಾಯತೇ ವಂಧ್ಯಾ ಮೃತವತ್ಸಾ ಚ ನಾರಕೀ ॥**
**ತತ್ಪಾತಕವಿನಾಶಾಯ ತಥಾ ಕಾರ್ಯಂ ಪ್ರಯತ್ನತಃ ।**
**ಸೌವರ್ಣಂ ಬಾಲಕಂ ಕೃತ್ವಾ ದದ್ಯಾದ್ದೋಲಾಸಮನ್ವಿತಂ ॥**
**ಅನಡ್ವಾಹಂ ತತೋ ದದ್ಯಾತ್ ವಸ್ತ್ರದ್ವಯಸಮನ್ವಿತಂ ॥**
**ತತ್ಪಾತಕವಿನಿರ್ಮುಕ್ತಾ ಪಶ್ಚಾದ್ಭವತಿ ಪುತ್ರಿಣೀ ॥**

ಮಲಗಿ ನಿದ್ದೆಮಾಡುತ್ತಿರುವ ಮಗುವನ್ನು ಕೊಂದವಳು, ಗರ್ಭನಾಶ ಮಾಡುವವಳು ಬಂಜೆಯಾಗುತ್ತಾಳೆ ಮಾತ್ರವಲ್ಲ ಅವಳಿಗೆ ಹುಟ್ಟಿದ ಮಕ್ಕಳು ಸಾಯುತ್ತಾರೆ. ಆ ಪಾತಕ ಪರಿಹಾರವಾಗಬೇಕಾದರೆ ಚಿನ್ನದ ಶಿಶುವನ್ನು ತೊಟ್ಟಿಲುಸಹಿತ ದಾನಮಾಡಬೇಕು. ವಸ್ತ್ರಸಹಿತ ಎರಡು ಎತ್ತುಗಳನ್ನೂ ದಾನಮಾಡಬೇಕು. ಅದರಿಂದ ಬಂಜೆತನವು ದೂರವಾಗಿ ಆಕೆಯು ಪುತ್ರವತಿಯಾಗುತ್ತಾಳೆ.

## ॥ ಅನಪತ್ಯತ್ವ ನಿವಾರಣಂ ॥

**ವಿಪ್ರರತ್ನಾಪಹಾರೀ ಚ ಸೋನಪತ್ಯಃ ಪ್ರಜಾಯತೇ ।**
**ತೇನ ಕಾರ್ಯಂ ವಿಶುದ್ಧ್ಯರ್ಥಂ ಮಹಾರುದ್ರಜಪಾದಿಕಂ ॥**
**ಆದಿಪದಾತ್ ಬ್ರಾಹ್ಮಣೋದ್ವಾಹನಂ, ಹರಿವಂಶಶ್ರವಣಂ ॥**
**ಮೃತವತ್ಸಾದಿತಃ ಸರ್ವೋ ವಿಧಿರತ್ರ ವಿಧೀಯತೇ ॥**
**ದಶಾಂಶಹೋಮಃ ಕರ್ತವ್ಯಃ ಪಾಲಾಶೇನ ಯಥಾವಿಧಿ ॥**
**ದಶಾಂಶೋ ಮಹಾರುದ್ರಸ್ಯ ॥**

ಬ್ರಾಹ್ಮಣರ ಹಾಗೂ ಸದಾಚಾರಸಂಪನ್ನರಾದ ಸಜ್ಜನರ ದ್ರವ್ಯಾಪಹಾರ ಮಾಡಿದವನಿಗೆ ಪುತ್ರಸಂತಾನವಾಗುವುದಿಲ್ಲ. ಆ ದೋಷ ಪರಿಹಾರವಾಗಬೇಕಾದರೆ ಮಹಾರುದ್ರ ಜಪ ಮಾಡಬೇಕು. ಅಥವಾ ಬ್ರಾಹ್ಮಣನೊಬ್ಬನಿಗೆ ವಿವಾಹಮಾಡಬೇಕು. "ಹರಿವಂಶ" ಪುರಾಣಶ್ರವಣ ಮಾಡಬೇಕು. ಬಂಜೆತನವನ್ನು ಹೋಗಲಾಡಿಸುವ ವಿಧಿಗಳನ್ನೂ ಮಾಡಬೇಕು. ಮಹಾರುದ್ರಜಪದ ಹತ್ತನೇ ಒಂದಂಶದಷ್ಟು ಪಲಾಶಸಮಿತ್ತುಗಳಿಂದ ಯಥಾವಿಧಿ ಹೋಮ ಮಾಡಬೇಕು.

## ॥ ಮೃತಪುತ್ರತ್ವ ನಿವಾರಣಂ ॥

**ಬಾಲಘಾತೀ ಚ ಪುರುಷೋ ಮೃತವತ್ಸಃ ಪ್ರಜಾಯತೇ ।**
**ಮಹಾರುದ್ರಜಪಂ ಚೈವ ಕಾರಯೇಚ್ಚ ಯಥಾವಿಧಿ ॥**
**ಜುಹುಯಾಚ್ಚ ದಶಾಂಶೇನ ದೂರ್ವಾಮಾಜ್ಯಪರಿಪ್ಲುತಾಂ ॥**

ಮಕ್ಕಳನ್ನು ಕೊಂದ ಪುರುಷನ ಸಂತತಿಯು ಹುಟ್ಟಿದೊಡನೆಯೇ ಸಾಯುತ್ತದೆ. ಮಹಾರುದ್ರಜಪ ಹಾಗೂ ಅದರ ದಶಾಂಶದಷ್ಟು ತುಪ್ಪದಲ್ಲಿ ತೋಯಿಸಿದ ದೂರ್ವೆಗಳ ಹೋಮದಿಂದ ಆ ದೋಷವನ್ನು ಪರಿಹರಿಸಬಹುದು.

## ॥ ಸರ್ವರ್ತುಸಾಧಾರಣ ನಿಯಮಾಃ ॥

ತಿರಾತ್ರಮಸ್ಪೃಶ್ಯಾ ಭೂತ್ವಾ ಅಭ್ಯಂಗಾಂಜನಸ್ನಾನದಿವಾಸ್ವಾಪಾಗ್ನಿಸ್ಪರ್ಶ-ದಂತಧಾವನಸೂರ್ಯಾದ್ಯವಲೋಕನ ಭೂಮೌ ರೇಖಾಕರಣಂ ಚ ವರ್ಜ-ಯೇದಧಃ ಶಯೀತ ಅಂಜಲಿನಾ ತಾಮ್ರಲೋಹಪಾತ್ರೇಣ ವಾ ಜಲಂ ನ ಪಿಬೇತ್ । ಯಾ ಖರ್ವಪಾತ್ರೇಣ ಜಲಂ ಪಿಬತಿ ತಸ್ಯಾಃ ಖರ್ವಃ ಪುತ್ರಃ ನಖನಿಕೃಂತನೇ ಕುನಖೀಪುತ್ರಃ ಪರ್ಣೇನ ಪಾನೇ ಉನ್ಮತ್ತ ಇತಿ । ದ್ವಿತೀಯಾದಿಷು ಋತುಷು ಪ್ರವಾಸಗಂಧಮಾಲ್ಯಾದಿಧಾರಣತಾಂಬೂಲಗೋರಸಭಕ್ಷಣಪೀಠಾದ್ಯಾ-ರೋಹಣಂ ವರ್ಜಯೇತ್। ಮೃಣ್ಮಯೇ ಆಯಸೇ ಭೂಮೌ ವಾ ಭುಂಜೀತ। ಗ್ರಹಣಾದಿನಿಮಿತ್ತಕಸ್ನಾನಪ್ರಾಪ್ತೌ ನೋದಕೇ ಮಜ್ಜನರೂಪಂ ಸ್ನಾನಂ ಕಿಂ ತು ಪಾತ್ರಾಂತರಿತಜಲೇನ ಸ್ನಾತ್ವಾ ನ ವಸ್ತ್ರಪೀಡನಂ ಕುರ್ಯಾನ್ನಾನ್ಯದ್ವಾಸಶ್ಚ ಧಾರಯೇತ್ । ಏವಂ ಮೃತಾಶೌಚಾದಿ ನಿಮಿತ್ತಕಸ್ನಾನ ಪ್ರಾಪ್ತಾವಪಿ ॥

ಏವಂ ತ್ರಿದಿನಂ ಸ್ಥಿತ್ವಾ ಚತುರ್ಥೇಽಹನಿ ಶುದ್ಧ್ಯಂತೇ । ಶುಭೇ ದಿನೇ ದುಷ್ಟರಜೋದರ್ಶನಪ್ರಯುಕ್ತಾಂ ಶೌನಕೋಕ್ತಾಂ ಭುವನೇಶ್ವರೀಶಾಂತಿಂ ವಿಧಾಯ ಗರ್ಭಾಧಾನಂ ಕಾರ್ಯಂ । ತತ್ರ ಪ್ರಥಮಋತುಗಮನಂ ಗರ್ಭಾಧಾನಂ ಕೃತ್ವಾ ಗೃಹ್ಯಾಗ್ನೌ ಕಾರ್ಯಂ । ಔಪಾಸನಾಗ್ನಿವಿಚ್ಛೇದೇ ಪ್ರಾಯಶ್ಚಿತ್ತಪೂರ್ವಕಂ ಪುನಃ ಸಂಧಾನವಿಧಿನಾಗ್ನಿಮುತ್ಪಾದ್ಯ ತತ್ರ ಕಾರ್ಯಂ ॥

---

**ಸಾರ್ವಕಾಲಿಕ ರಜೋದರ್ಶನದ ಸಾಧಾರಣ ನಿಯಮ:-** ಮೂರು ರಾತ್ರಿಗಳು ಕಳೆಯುವ ವರೆಗೆ ಯಾರನ್ನೂ ಮುಟ್ಟಕೂಡದು: ಅಭ್ಯಂಗಸ್ನಾನ, ಕಾಡಿಗೆ, ಸ್ನಾನ, ಹಗಲು ನಿದ್ದೆ, ಅಗ್ನಿಸ್ಪರ್ಶ, ಹಲ್ಲುತಿಕ್ಕುವುದು, ಸೂರ್ಯ ಮೊದಲಾದವುಗಳ ದರ್ಶನ, ನೆಲದ ಮೇಲೆ ಗೆರೆ ಎಳೆಯುವುದು-ಇತ್ಯಾದಿಗಳನ್ನು ವರ್ಜಿಸಬೇಕು. ಬೊಗಸೆಯಿಂದ, ತಾಮ್ರ ಅಥವಾ ಕಬ್ಬಿಣದ ಪಾತ್ರೆಯಿಂದ ನೀರು ಕುಡಿಯಬಾರದು. ಸಣ್ಣ ಪಾತ್ರೆಯಿಂದ ನೀರು ಕುಡಿದವಳಿಗೆ ಗಿಡ್ಡ ಮಗನಾಗುತ್ತಾನೆ. ಉಗುರು ತೆಗೆದರೆ ಕೆಟ್ಟ ಉಗುರುಗಳುಳ್ಳ ಮಗನಾಗುತ್ತಾನೆ. ಎಲೆಯಿಂದ ನೀರು ಮೊದಲಾದ ಪಾನೀಯಗಳನ್ನು ಕುಡಿದರೆ ಉನ್ಮತ್ತ ಮಗನಾಗುತ್ತಾನೆ. ಎರಡನೆಯ ಸಲ ಮೂರನೆಯ ಸಲ ಇತ್ಯಾದಿ ಋತುವಾದಾಗ ಪ್ರವಾಸ, ಗಂಧ ಹೂಮುಡಿಯುವುದು, ತಾಂಬೂಲ ಗೋರಸಭಕ್ಷಣ, ಮಣೆ ಆಸನ ಇತ್ಯಾದಿಗಳ ಮೇಲೆ ಕುಳಿತುಕೊಳ್ಳುವುದು-ಇವುಗಳನ್ನು ವರ್ಜಿಸಬೇಕು. ಮಣ್ಣಿನ ಅಥವಾ ಕಬ್ಬಿಣದ ಪಾತ್ರೆಯಲ್ಲಿ ನೆಲದ ಮೇಲೆ ಕುಳಿತು ಊಟ ಮಾಡಬೇಕು. ಗ್ರಹಣ, ಆಶೌಚ ಇತ್ಯಾದಿಗಳಿಂದ ಸ್ನಾನ ಮಾಡಬೇಕಾಗಿ ಬಂದರೆ, ನೀರಿನಲ್ಲಿ ಮುಳುಗಿ ಸ್ನಾನಮಾಡಬಾರದು. ಬೇರೆ ಪಾತ್ರೆಯಲ್ಲಿ ನೀರು ತುಂಬಿಸಿ ಸ್ನಾನ ಮಾಡಿ ಬಟ್ಟೆಯನ್ನು ಹಿಂಡಿಕೊಳ್ಳದೆ ಅದೇ ಬಟ್ಟೆಯನ್ನು ಧರಿಸಬೇಕು. ಬೇರೆ ಬಟ್ಟೆ ಧರಿಸಕೂಡದು.

ಈ ರೀತಿ ಮೂರು ದಿನಗಳಿದ್ದು ನಾಲ್ಕನೆಯ ದಿನ ಶುದ್ಧವಾದ ನಂತರ ಶುಭದಿನದಲ್ಲಿ ಮುಷ್ಪ ರಜೋದರ್ಶನಕ್ಕಾಗಿ ಶೌನಕೋಕ್ತ ಭುವನೇಶ್ವರೀ ಶಾಂತಿಯನ್ನು ಮಾಡಿ ಗರ್ಭಾಧಾನ ಮಾಡಬೇಕು. ಮೊದಲನೆಯ ಋತುಕಾಲದಲ್ಲಿ ಗೃಹ್ಯಾಗ್ನಿಯ ಮೇಲೆ ಗರ್ಭಾಧಾನ ಹೋಮಮಾಡಿ ಗಮನ ಮಾಡಬೇಕು. ಅಗ್ನಿಯು ನಾಶವಾಗಿದ್ದರೆ ಪುನಃಸಂಧಾನವಿಧಿಯಿಂದ ಪುನಃ ಅಗ್ನಿಯನ್ನು ಉತ್ಪಾದಿಸಿ ಆ ಅಗ್ನಿಯ ಮೇಲೆ ಗರ್ಭಾಧಾನಹೋಮ ಮಾಡಬೇಕು.

**ಗರ್ಭಾಧಾನಾಂಗಹೋಮಾಕರಣೇ ಪ್ರಾಯಶ್ಚಿತ್ತಮಾಹ ಪಾರಿಜಾತೇ ಆಶ್ವಲಾಯನಃ- ಗರ್ಭಾಧಾನಸ್ಯಾಕರಣಾತ್ತಸ್ಯಾಂ ಜಾತಸ್ತು ದುಷ್ಯತಿ । ಕೃತ್ವಾ ತು ಗಾಂ ದ್ವಿಜೇ ದತ್ವಾ ಕುರ್ಯಾತ್ಪುಂಸವನಂ ಪತಿಃ ॥**

**ಋತುಕಾಲಸ್ತು ಆರ್ತವದರ್ಶನಾತ್ ಷೋಡಶರಾತ್ರಂ ಜ್ಞೇಯಃ ಅತ್ರ ಮನುಃ ॥ ಋತುಃ ಸ್ವಾಭಾವಿಕಃ ಸ್ತ್ರೀಣಾಂ ರಾತ್ರಯಃ ಷೋಡಶಃ ಸ್ಮೃತಾಃ । ತಾಸಾಮಾದ್ಯಾಃ ಚತಸ್ರಸ್ತು ನಿಂದಿತೈಕಾದಶೀ ಸ್ಮೃತಾ । ತ್ರಯೋದಶೀ ಚ ಶೇಷಾಃ ಸ್ಯುಃ ಪ್ರಶಸ್ತಾ ದಶರಾತ್ರಯಃ ॥ ಅತ್ರ ಚತುರ್ಥದಿವಸೋ ನಿಷೇಧೇಽಪಿ ಕೈಶ್ಚಿದಗೃಹೀತೋಽಪಿ ವರ್ತತೇ । ತಥಾ ಚ ಮಹಾಭಾರತೋಕ್ತಿಃ- ಸ್ನಾತಾಂ ಚತುರ್ಥದಿವಸೇ ರಾತ್ರೌ ಗಚ್ಛೇದ್ವಿಚಕ್ಷಣಃ ॥ ತಥಾ ಮದನರತ್ನೇ ದೇವಲೋಕ್ತಿಃ- ತಸ್ಮಾತ್ ತ್ರಿರಾತ್ರಂ ಚಾಂಡಾಲೀಂ ಪುಷ್ಪಿತಾಂ ಪರಿವರ್ಜಯೇತ್ ॥ ಅತ್ರಿಸಂಹಿತಾ ಚ ಪ್ರಥಮೇಽಹನಿ ಚಾಂಡಾಲೀ ದ್ವಿತೀಯೇ ಬ್ರಹ್ಮಘಾತಕೀ । ತೃತೀಯೇ ರಜಕೀ ಪ್ರೋಕ್ತಾ ಚತುರ್ಥೇಽಹನಿ ಶುಧ್ಯತಿ ॥ ಅತ್ರ ಯದ್ಯಪಿ ಚತುರ್ಥದಿವಸೋ ಗೃಹೀತಸ್ತಥಾಪಿ ಸರ್ವಥಾ ರಜೋ ನಿವೃತ್ತೌ ಜ್ಞೇಯಃ । ಅವಶಿಷ್ಟದಿನೇಷು ಪುತ್ರಾರ್ಥಿನಾಸಮದಿನೇಷು ಕನ್ಯಾರ್ಥಿನಾ ವಿಷಮದಿನೇಷು ಗಮನಂ ಕಾರ್ಯಂ ॥ ತಥಾ ಹೇಮಾದ್ರೌ ಶಂಖೋಕ್ತಿಃ ಯುಗ್ಮಾಸು ಪುತ್ರಾ ಜಾಯಂತೇ ಸ್ತ್ರಿಯೋಽಯುಗ್ಮಾಸು ರಾತ್ರಿಷು ॥**

ಗರ್ಭಾಧಾನಸಂಸ್ಕಾರ ಆಗದೆ ಸ್ತ್ರೀಯು ಗರ್ಭಿಣಿಯಾದರೆ ಆಶ್ವಲಾಯನರು ಈ ರೀತಿ ಪ್ರಾಯಶ್ಚಿತ್ತವನ್ನು ಹೇಳಿದ್ದಾರೆ. ಗರ್ಭಾಧಾನ ಮಾಡದೆ ಜನಿಸಿದ ಸಂತತಿಯು ದೋಷಯುಕ್ತವಾಗುತ್ತದೆ. ಅದಕ್ಕಾಗಿ ಒಂದು ಗೋದಾನ ಮಾಡಿ, ಧರಿಸಿದ ಗರ್ಭಕ್ಕೆ ಪತಿಯು ಪುಂಸವನ ಸಂಸ್ಕಾರವನ್ನು ಮಾಡಬೇಕು.

ಗರ್ಭಾಧಾನವನ್ನು ಋತುಕಾಲದಲ್ಲಿ ಮಾಡಬೇಕು. ರಜೋದರ್ಶನವಾದಂದಿನಿಂದ ಹದಿನಾರು ದಿನಗಳ ವರೆಗೆ ಋತುಕಾಲವೆನಿಸುವುದು. ಈ ವಿಚಾರದಲ್ಲಿ ಮನುವಿನ ಅಭಿಪ್ರಾಯ ಹೀಗಿದೆ. ರಜೋದರ್ಶನವಾದಂದಿನಿಂದ 16 ದಿನಗಳು ಸ್ತ್ರೀಯರಿಗೆ ಋತುಕಾಲವೆನಿಸುವುದು.

ಇವುಗಳಲ್ಲಿ ಮೊದಲ ನಾಲ್ಕು ಮತ್ತು ಹನ್ನೊಂದು ಹದಿಮೂರನೆಯ ರಾತ್ರಿಗಳನ್ನು ವರ್ಜಿಸಬೇಕು. ಉಳಿದ ಹತ್ತು ರಾತ್ರಿಗಳು ಆ ಸಂಸ್ಕಾರಕ್ಕೆ ಪ್ರಶಸ್ತವಾಗಿವೆ. ಮನುವಿನ ಅಭಿಪ್ರಾಯದಲ್ಲಿ ನಾಲ್ಕನೆಯ ರಾತ್ರಿಯು ವರ್ಜ್ಯವಾಗಿದ್ದರೂ ಇತರ ಹಲವರು ಆ ರಾತ್ರಿಯನ್ನು ಅಂಗೀಕರಿಸಿದ್ದಾರೆ. ಮಹಾಭಾರತದಲ್ಲಿ ನಾಲ್ಕನೆಯ ದಿನ ಸ್ನಾನ ಮಾಡಿದ ನಂತರ ಸ್ತ್ರೀಸಮಾಗಮ ಮಾಡಬೇಕೆಂದು ಹೇಳಿದೆ. ಮದನರತ್ನದಲ್ಲಿ ದೇವಲರ ವಚನವೂ ಅತ್ರಿಸಂಹಿತೆಯೂ ಹೀಗೆ ಅನುಕೂಲಾಭಿಪ್ರಾಯವನ್ನೇ ಕೊಡುತ್ತವೆ. ಮೂರು ದಿನಗಳ ವರೆಗೆ ಋತುಮತಿಯು ಚಾಂಡಾಲೀ ಎನಿಸಿ ವರ್ಜ್ಯವಾಗುತ್ತಾಳೆ. ಮೊದಲ ದಿನ ಚಾಂಡಾಲೀ ಎಂದೂ, ಎರಡನೆಯ ಮತ್ತು ಮೂರನೆಯ ದಿನ ಅನುಕ್ರಮವಾಗಿ ಬ್ರಹ್ಮಘಾತಕೀ, ರಜಕೀ, ಎಂದೂ ಹೇಳಲ್ಪಟ್ಟು ಅವಳು ವರ್ಜ್ಯವೆನಿಸುತ್ತಾಳೆ. ನಾಲ್ಕನೆಯ ದಿನ ಶುದ್ಧಳಾಗುತ್ತಾಳೆ. ನಿಷಿದ್ಧರಾತ್ರಿಗಳನ್ನು ಬಿಟ್ಟು ಉಳಿದ ರಾತ್ರಿಗಳಲ್ಲಿ ಗಂಡುಸಂತತಿಯನ್ನು ಬಯಸುವವನು 4, 6, 8, 10, 12, 14, 16 ಈ ಸಮರಾತ್ರಿಗಳಲ್ಲೂ ಹೆಣ್ಣು ಸಂತತಿಯನ್ನು ಬಯಸುವವನು 5, 7, 9, 11, 13, 15 ಈ ವಿಷಮ ರಾತ್ರಿಗಳಲ್ಲೂ ಸ್ತ್ರೀಸಂಗ ಮಾಡಬೇಕು. ಇದು ಹೇಮಾದ್ರಿಯಲ್ಲಿ ಶಂಖನು ಹೇಳಿದ ಅಭಿಪ್ರಾಯವಾಗಿದೆ.

ಶಿವರಹಸ್ಯೇ:-

**ದಿವಾ ಜನ್ಮದಿನೇ ಚೈವ ನ ಕುರ್ಯಾನ್ಮೈಥುನಂ ವ್ರತೀ । ಶ್ರಾದ್ಧಂ ದತ್ವಾ ಚ ಭುಕ್ತ್ವಾ ಚ ಶ್ರೇಯೋರ್ಥೀ ನ ಚ ಪರ್ವಸು ॥ ಏವಂ ಅಷ್ಟಮೀ ಚತುರ್ದಶೀ ಜನ್ಮನಕ್ಷತ್ರ ಸಂಧ್ಯಾಕಾಲೇಷು ಸ್ತ್ರೀಗಮನಂ ನ ಕಾರ್ಯಂ । ದ್ವೇಷಾದಿನಾ ಋತಾವಗಮನೇ ದೋಷಮಾಹ ಪರಾಶರಃ- ಋತುಸ್ನಾತಾಂ ತು ಯೋ ಭಾರ್ಯಾಂ ಸನ್ನಿಧೌ ನೋಪಗಚ್ಛತಿ । ಘೋರಾಯಾಂ ಭ್ರೂಣಹತ್ಯಾಯಾಂ ಪಚ್ಯತೇ ನಾತ್ರ ಸಂಶಯಃ ॥ ಋತುಕಾಲೇ ನಿಷಿದ್ಧದಿನಪ್ರಾಪ್ತಿಶ್ಚೇತ್ ಉತ್ತರರಾತ್ರೌ ಗಮನಂ ಕಾರ್ಯಂ । ರೋಗಾದಿನಾ ಗಮನಾಭಾವೇ ಅದೋಷಃ । ಯತ್ತು ಮಿತಾಕ್ಷರಾಕಾರೇಣೋಕ್ತಂ ಋತೌ ಶ್ರಾದ್ಧದಿನೇಪಿ ಗಚ್ಛತೋ ನ ದೋಷ ಇತಿ ತತ್ತು ಷೋಡಶ ದಿನೇಷು ತದಿತರಕಾಲಾಸಂಭವವಿಷಯಂ ॥ ಪ್ರಾಗ್ರಜೋದರ್ಶನಾತ್ಪತ್ನೀಂ ನೇಯಾದ್ಗತ್ವಾ ಪತತ್ಯಧಃ । ವ್ಯರ್ಥೀಕಾರೇಣ ಶುಕ್ರಸ್ಯ ಬ್ರಹ್ಮಹತ್ಯಾಮವಾಪ್ನುಯಾತ್ ॥**

---

**ಶಿವರಹಸ್ಯದಲ್ಲಿ:-** ಇಹಪರಲೋಕಗಳಲ್ಲಿ ಶ್ರೇಯಸ್ಸನ್ನು ಬಯಸುವವನು ಹಗಲು, ಜನ್ಮದಿನ, ಶ್ರಾದ್ಧಮಾಡಿದ ಹಾಗೂ ಶ್ರಾದ್ಧಭೋಜನ ಮಾಡಿದ ದಿನ, ಪರ್ವದಿನ, ಹುಣ್ಣಿಮೆ, ಅಮಾವಾಸ್ಯೆ, ವ್ಯತೀಪಾತ, ಉಪವಾಸವಿದ್ದ ದಿನ, ಅಷ್ಟಮೀ, ಚತುರ್ದಶೀ, ಜನ್ಮನಕ್ಷತ್ರ, ಸಂಧ್ಯಾಕಾಲ- ಮುಂತಾದವುಗಳಲ್ಲಿ ಸ್ತ್ರೀಸಂಗ ಮಾಡಬಾರದು. ದ್ವೇಷ ಮುಂತಾದ ಕಾರಣಗಳಿಂದ

# ಗರ್ಭಾಧಾನಮುಹೂರ್ತ ನಿರ್ಣಯಃ:-

**ತತ್ರ ಅಸ್ತಾದಿವಿಚಾರಃ- ಗರ್ಭಾಧಾನಾದಿ ಸಂಸ್ಕಾರೇ ತಥಾನ್ನಪ್ರಾಶನೇ ಶಿಶೋಃ । ನ ತತ್ರ ಗುರುಶುಕ್ರಾಸ್ತಮಲಮಾಸಾದಿದೂಷಣಂ ॥ ಇದಂ ಪ್ರಥಮ ಋತೌ ಗರ್ಭಾಧಾನಕರಣೇ । ಅನ್ಯಥಾ ದೋಷೋಸ್ತ್ಯೇವ । ಉಕ್ತಂ ಚ ವಸಿಷ್ಠೇನ- ಅತೀತಕಾಲಾನ್ಯಖಿಲಾನಿ ಯಾನಿ ಕಾರ್ಯಾಣಿ ಸೌಮ್ಯಾಯನಗೇ ದಿನೇಶೇ । ಗುರೌ ಭೃಗೌ ವಾಪ್ಯಥ ದೃಶ್ಯಮಾನೇ ತದುಕ್ತ ಪಂಚಾಂಗದಿನೇಪ್ಯಖಂಡೇ ॥ ಗರ್ಭಾಧಾನ ಸಂಸ್ಕಾರತಿಥಯಃ- ಷಷ್ಠ್ಯಷ್ಟಮೀ ಪಂಚದಶೀ ಚತುರ್ಥೀ ಚತುರ್ದಶೀ ತಿಥ್ಯುಭಯತ್ರ ಹಿತ್ವಾ । ಶೇಷಾಃ ಶುಭಾಃ ಸ್ಯುಸ್ತಿಥಯೋ ನಿಷೇಕೇ ವಾರಾ ಶಶಾಂಕಾರ್ಯಸಿತೇಂದುಜಾನಾಂ ॥ ನಕ್ಷತ್ರಾಣಿಃ- ಸ್ವಾತೌ ಹಸ್ತೇನುರಾಧಾಯಾಂ ರೋಹಿಣ್ಯಾಂ ವಾಶ್ರವತ್ರಯೇ । ತ್ರ್ಯುತ್ತರೇ ಮೃಗಶೀರ್ಷೇ ಚ ಗರ್ಭಾಧಾನಂ ಶುಭಾವಹಂ ॥ ಚಿತ್ರಾಪುನರ್ವಸೌ ಪುಷ್ಯೇ ಅಶ್ವಿನ್ಯಾ ಮಧ್ಯಮಂ ಸ್ಮೃತಂ । ಜನ್ಮರ್ಕ್ಷಂ ಭರಣೀ ಮೂಲೇ ವರ್ಜಯೇತ್ ರೇವತೀಂ ಮಘಾಂ ॥ ಯಸ್ಮಿನ್ ಋಕ್ಷೇ ಭವೇದ್ಗರ್ಭಃ ತಸ್ಮಾದ್ವ್ಯದ್ದಶಮಂ ಭವೇತ್ । ತತ್ರಾಪತ್ಯಂ ಪ್ರಜಾಯೇತ ತಸ್ಮಾದೇತತ್ರಯಂ ತ್ಯಜೇತ್ ॥ ಸಂಸ್ಕಾರಕೌಸ್ತುಭೇ ಜ್ಯೇಷ್ಠಾಪಿ ವರ್ಜ್ಯಾಸ್ತಿ ॥**

---

ಋತುಕಾಲದಲ್ಲಿ ಸ್ತ್ರೀಸಂಗ ಮಾಡದಿದ್ದರೆ ದೋಷವಿದೆ ಎಂದು ಹೇಳಿದ್ದಾರೆ. ಈ ಕುರಿತು ಪರಾಶರಸ್ಮೃತಿಯಲ್ಲಿ ಹೀಗೆಂದು ಹೇಳಲಾಗಿದೆ. ಋತುಮತಿಯಾದ ಪತ್ನಿಯು ಸಮೀಪವಿದ್ದು ಅವಳೊಡನೆ ಸಂಭೋಗಮಾಡದಿದ್ದರೆ ಭ್ರೂಣಹತ್ಯಾ ದೋಷ ಬರುತ್ತದೆ. ಋತುಕಾಲದಲ್ಲಿ ನಿಷಿದ್ಧದಿನ ಬಂದರೆ ಮುಂದಿನ ರಾತ್ರಿಯಲ್ಲಿ ಸಂಗಮಾಡಬೇಕು. ಪತ್ನಿಯು ರೋಗಿ, ಪ್ರವಾಸಿ ಅಥವಾ ದುರಾಚಾರಿಣಿಯಾಗಿದ್ದರೆ, ಋತುಕಾಲದಲ್ಲಿ ಸಂಗ ಮಾಡದಿದ್ದರೂ ದೋಷವಿಲ್ಲ. ಋತುಕಾಲವಾಗಿದ್ದರೆ ಶ್ರಾದ್ಧದ ದಿನವಾದರೂ ಪತ್ನೀಸಂಗ ಮಾಡಿದರೆ ದೋಷವಿಲ್ಲವೆಂದು ಮಿತಾಕ್ಷರದಲ್ಲಿ ಹೇಳಲ್ಪಟ್ಟಿದೆ. ಆದರೆ ಈ ಮಾತು ಋತುಕಾಲದ ಹದಿನಾರು ದಿನಗಳಲ್ಲಿ ಆ ಒಂದು ದಿನ ಬಿಟ್ಟು ಉಳಿದ ದಿನಗಳಲ್ಲಿ ಅಸಂಭವವೆಂದಾದರೆ ಮಾತ್ರ ಎಂದು ಅಂಗೀಕರಿಸಬೇಕು. ಋತುಮತಿಯಾಗುವ ಮೊದಲು ಪತ್ನೀಸಂಗಮ ಮಾಡಿದರೆ ದೋಷವಿದೆ ಎಂದು ಹೇಳಲಾಗಿದೆ.

ಋತುಕಾಲದ ರಾತ್ರಿಗಳನ್ನು ಬಿಟ್ಟು ಉಳಿದ ರಾತ್ರಿ ಅಥವಾ ಹಗಲು, ಅಂತೆಯೇ ನಿಷಿದ್ಧ ಕಾಲಗಳಲ್ಲಿ ಋತುದಾನ ಮಾಡಿದರೆ ಗರ್ಭ ಉಳಿಯುವುದಿಲ್ಲ. ಒಂದು ವೇಳೆ ಗರ್ಭ ನಿಂತು ಸಂತಾನೋತ್ಪತ್ತಿಯಾದರೂ ಅಂತಹ ಸಂತಾನವು ದುರ್ಬಲ, ರೋಗಿ, ಮಂದಮತಿ, ಅಲ್ಪಾಯುಷಿ, ನಪುಂಸಕ ಇತ್ಯಾದಿಯಾಗಿರುತ್ತದೆ. ಆದ್ದರಿಂದ ಅಯೋಗ್ಯದಿನಗಳಲ್ಲಿ

**ಗರ್ಭಾಧಾನಗ್ರಹಬಲವಿಚಾರಃ- ಕೇಂದ್ರ ತ್ರಿಕೋಣಗೈಃ ೧-೪-೭-೧೦-೯-೫- ಸೌಮ್ಯೈಃ ಶಶಾಂಕೇ ಸಬಲಸ್ಥಿತೇ । ತ್ರಿಲಾಭಾರಿಗತೈಃ ಪಾಪೈಃ ೩-೧೧-೬-ಗರ್ಭಾಧಾನಂ ಸುತಪ್ರದಂ ॥**

---

ಅಯೋಗ್ಯಕಾಲದಲ್ಲಿ ವೀರ್ಯಹಾನಿ ಮಾಡಿಕೊಂಡು ತಮ್ಮ ಜೀವಿತವನ್ನು ಕೆಡಿಸಿಕೊಳ್ಳಬಾರದು. ಅಂತೆಯೇ ದುರ್ಬಲ ಸಂತಾನವನ್ನೂ ಉಂಟುಮಾಡಬಾರದು.

**ಗರ್ಭಾಧಾನಮುಹೂರ್ತನಿರ್ಣಯ:-** ಗರ್ಭಾಧಾನದಿಂದ ಅನ್ನಪ್ರಾಶನದವರೆಗಿನ ಸಂಸ್ಕಾರಗಳಿಗೆ ಅಧಿಕಮಾಸ, ಕ್ಷಯಮಾಸ, ಗುರು ಶುಕ್ರ ಅಸ್ತ ಇತ್ಯಾದಿ ದೋಷಗಳಿಲ್ಲ.

ಇದು ಮೊದಲಿನ ಋತುಕಾಲಕ್ಕೆ ಮಾತ್ರ ಅನ್ವಯಿಸುವ ವಿಷಯವಾಗಿದೆ. ಇತರ ಸಂದರ್ಭಗಳಲ್ಲಿ ದೋಷವಿದ್ದೇ ಇದೆ. ಈ ವಿಷಯದಲ್ಲಿ ವಸಿಷ್ಠರ ಅಭಿಪ್ರಾಯ ಹೀಗಿದೆ:- ವಿಹಿತಕಾಲದಲ್ಲಿ ಮಾಡದೆ ಕಾಲಾತೀತವಾದ ಸಂಸ್ಕಾರವನ್ನು ದಕ್ಷಿಣಾಯನ, ಗುರು ಶುಕ್ರರ ಅಸ್ತಮಾನಕಾಲ ಇತ್ಯಾದಿಗಳಿರುವ ಸಮಯದಲ್ಲಿ ಮಾಡದೆ, ಯಾವ ಸಂಸ್ಕಾರಕ್ಕೆ ಯಾವ ತಿಥಿ ನಕ್ಷತ್ರಾದಿಗಳು ಯೋಗ್ಯವೆಂದು ಹೇಳಲಾಗಿದೆಯೋ ಆ ದಿನಗಳಲ್ಲಿಯೇ ಮಾಡಬೇಕು. ಗರ್ಭಾಧಾನ ಸಂಸ್ಕಾರಕ್ಕೆ – ಷಷ್ಠೀ, ಅಷ್ಟಮೀ, ಪೂರ್ಣಿಮಾ, ಅಮಾವಾಸ್ಯಾ, ಚತುರ್ಥೀ, ಚತುರ್ದಶೀ ಇವುಗಳನ್ನು ಬಿಟ್ಟು ಉಳಿದ ತಿಥಿಗಳೂ; ಸೋಮ, ಗುರು, ಶುಕ್ರ, ಬುಧವಾರಗಳೂ; ಸ್ವಾತೀ, ಹಸ್ತಾ, ಅನುರಾಧಾ, ರೋಹಿಣೀ, ಶ್ರವಣಾ, ಧನಿಷ್ಠಾ, ಶತತಾರೆ ಮೂರು ಉತ್ತರಾ ಈ ನಕ್ಷತ್ರಗಳೂ ಶುಭವಾಗಿವೆ. ಚಿತ್ರಾ, ಪುನರ್ವಸು, ಪುಷ್ಯ, ಅಶ್ವಿನೀ-ಈ ನಕ್ಷತ್ರಗಳು ಮಧ್ಯಮ. ಜನ್ಮನಕ್ಷತ್ರ ಭರಣೀ, ಮೂಲಾ, ರೇವತೀ, ಮಘಾ ಇವುಗಳು ವರ್ಜ್ಯಗಳು. ಯಾವ ನಕ್ಷತ್ರದಲ್ಲಿ ಗರ್ಭಧಾರಣೆ ಆಗುತ್ತದೋ ಆ ನಕ್ಷತ್ರದಿಂದ ಹತ್ತನೆಯ ನಕ್ಷತ್ರದಲ್ಲಿ ಸಂತಾನೋತ್ಪತ್ತಿಯಾಗುತ್ತದೆ. ಆದ್ದರಿಂದ ಈ ಮೂರು ನಕ್ಷತ್ರಗಳು ವರ್ಜ್ಯವೆನಿಸಿವೆ. ಕೌಸ್ತುಭದಲ್ಲಿ ಜ್ಯೇಷ್ಠಾ ನಕ್ಷತ್ರವೂ ವರ್ಜ್ಯವೆಂದು ಹೇಳಲಾಗಿದೆ.

**ಗರ್ಭಾಧಾನಕ್ಕೆ ಗ್ರಹಬಲ:-** ಗರ್ಭಾಧಾನ ಮಾಡುವ ಲಗ್ನದ ಕೇಂದ್ರಸ್ಥಾನದಲ್ಲಿ ಅಂದರೆ ೧-೪-೭-೧೦ ಹಾಗೆಯೇ ತ್ರಿಕೋಣದಲ್ಲಿ ಅಂದರೆ ೯-೫ ಸ್ಥಾನಗಳಲ್ಲಿ ಶುಕ್ರ, ಗುರು, ಮತ್ತು ಬುಧ ಗ್ರಹಗಳಿರಬೇಕು. ಚಂದ್ರಬಲ ಹಾಗೂ ಪಾಪಗ್ರಹಗಳಾದ ಮಂಗಳ, ರವಿ, ಶನಿ ಮತ್ತು ರಾಹು ಇವುಗಳು ೩-೧೧-೬ನೆಯ ಸ್ಥಾನದಲ್ಲಿದ್ದಾಗ ಗರ್ಭಾಧಾನ ಮಾಡಿದರೆ ಸತ್ಸಂತಾನ ಪ್ರಾಪ್ತಿಯಾಗುತ್ತದೆ.

## ॥ ವಂಧ್ಯಾಯಾಃ ಪುತ್ರವತೀಕರಣಂ ॥

**ಮೂಲಂ ಶಿಖಾಯಾಃ ಖಲು ಲಕ್ಷಣಾಯಾಃ ಋತೌ**
**ನಿಪೀಯಂ ತ್ರಿದಿನಂ ಪಯೋಭಿಃ ॥**
**ಕ್ಷೀರಾನ್ನಚರ್ಯಾ ನಿಯಮೇನ ಭುಂಕ್ತೇ ಪುತ್ರಂ ಪ್ರಸೂತೇ**
**ವನಿತಾ ಚ ಚಿತ್ರಂ ॥ ವಂಧ್ಯಾತಂತ್ರಂ ॥**

ಸಂಸ್ಕೃತದಲ್ಲಿ 'ಗರ್ಭದಾ' ಎಂಬ ಹೆಸರಿರುವ ಬಿಳಿಯ ರಿಂಗಣಿಯ ಬೇರು ಮತ್ತು ಎಲೆಗಳನ್ನು ಬಿಳಿ ದನದ ಹಾಲಿನಲ್ಲಿ ಕುಟ್ಟಿ ಕಲಸಿ, ಋತುಮತಿಯಾದ ಸ್ತ್ರೀಯು 3 ದಿನಗಳಲ್ಲಿ ಕೆಲವು ತಿಂಗಳ ಕಾಲ ಸೇವಿಸಿದರೆ ಆಕೆಯು ಗರ್ಭಿಣಿಯಾಗುತ್ತಾಳೆ. ಈ ವನಸ್ಪತಿಯು ಗರ್ಭರಕ್ಷಣೆಮಾಡುವ ಶಕ್ತಿ ಉಳ್ಳದ್ದಾಗಿದೆ.

## ॥ ಗರ್ಭಿಣೀ ಧರ್ಮಾಃ ॥

**ಗರ್ಭಿಣೀ ಕುಂಜರಾಶ್ವಾದಿ ಶೈಲ ಹರ್ಮ್ಯಾಧಿರೋಹಣಂ ।**
**ವ್ಯಾಯಾಮಂ ಶೀಘ್ರಗಮನಂ ಶಕಟಾರೋಹಣಂ ತ್ಯಜೇತ್ ॥**
**ನ ಭಸ್ಮಾದಾವುಪವಿಶೇತ್ ಮುಸಲೋಲೂಖಲಾದಿಷು ।**
**ತ್ಯಜೇಜ್ಜಲಾವಗಾಹಂ ಚ ಶೂನ್ಯಂ ಸದ್ಮತರೋಸ್ತಲಂ ॥**
**ಕಲಹಂ ಗಾತ್ರಭಂಗಂ ಚ ತೀಕ್ಷ್ಣೋಷ್ಣಾದಿಭಕ್ಷಣಂ ।**
**ಸಂಧ್ಯಾಯಾಮತಿಶೀತಾಮ್ಲಂ ಗುರ್ವಾಹಾರಂ ಪರಿತ್ಯಜೇತ್ ॥**
**ವ್ಯವಾಯಶೋಕಾಸೃಜಮೋಕ್ಷಂ ದಿವಾಸ್ವಾಪನಿಶಿಸ್ಥಿತಿಃ ॥**
**ಭಸ್ಮಾಂಗಾರನಖೈರ್ಭೂಮಿಲೇಖನಂ ಶಯನಂ ಸದಾ ॥**
**ತ್ಯಜೇದಮಂಗಲಂ ವಾಕ್ಯಂ ನ ಚ ಹಾಸ್ಯಾಧಿಕಾ ಭವೇತ್ ।**
**ಪ್ರಶಸ್ತಮಂತ್ರಲಿಖನಾಚ್ಛಸ್ತಮಾಲ್ಯಾನುಲೇಪನಾತ್ ।**
**ವಿಶುದ್ಧಗೇಹವಸನಾದ್ದಾನೈಃ ಶ್ವಶ್ರ್ವಾದಿಪೂಜನೈಃ ।**
**ಹರಿದ್ರಾಕುಂಕುಮಂ ಚೈವ ಸಿಂದೂರಂ ಕಜ್ಜಲಂ ತಥಾ ॥**
**ಕೇಶಸಂಸ್ಕಾರತಾಂಬೂಲಂ ಮಾಂಗಲ್ಯಾಭರಣಂ ಶುಭಂ ॥**
**ಯಾತ್ರಾಂ ವಿವರ್ಜಯೇನ್ನಿತ್ಯಮಾಷಷ್ಠಾತ್ತು ವಿಶೇಷತಃ ॥**

**ಗರ್ಭಿಣಿಯು ಅನುಸರಿಸಬೇಕಾದ ನಿಯಮಗಳು:-** ಗರ್ಭಿಣಿಯಾದ ಸ್ತ್ರೀಯು ಆನೆ, ಕುದರೆ, ಪರ್ವತ, ಮಾಳಿಗೆ ಇತ್ಯಾದಿಗಳನ್ನು ಹತ್ತಬಾರದು. ಮಿತಿಮೀರಿದ ವ್ಯಾಯಾಮ, ಓಡುವುದು, ಗಾಡಿಯಲ್ಲಿ ಕುಳಿತು ಪ್ರಯಾಣಮಾಡುವುದು ಮುಂತಾದವುಗಳನ್ನು ಬಿಡಬೇಕು. ಬೂದಿ ಇರುವ ಸ್ಥಳ, ಒನಕೆ, ಒರಳು ಇವುಗಳ ಮೇಲೆ ಕುಳಿತುಕೊಳ್ಳಬಾರದು. ನೀರಿನಲ್ಲಿ ಮುಳುಗಿ ಸ್ನಾನಮಾಡಬಾರದು, ಜನವಸತಿಯಿಲ್ಲದ ಮನೆಯಲ್ಲಿ, ಮರದ ತಳದಲ್ಲಿ ಕುಳಿತು

ಕೊಳ್ಳಬಾರದು. ಜಗಳಾಡುವುದು, ಮೈಮುರಿದು ಕೆಲಸ ಮಾಡುವುದು, ಅತ್ಯಂತ ಖಾರ ಹಾಗೂ ಬಿಸಿಯಾದ ಆಹಾರ ಪಾನೀಯಗಳನ್ನು ಸೇವಿಸುವುದು, ಸಂಧ್ಯಾಕಾಲಗಳಲ್ಲಿ ಆಹಾರವನ್ನು ತೆಕ್ಕೊಳ್ಳುವುದು, ಅತಿಶೀತ, ತುಂಬ ಹುಳಿ, ಹಾಗೂ ಗಟ್ಟಿಯಾದ ಪದಾರ್ಥಗಳನ್ನು ತಿನ್ನುವುದು ಮುಂತಾದುವುಗಳನ್ನು ಬಿಡಬೇಕು. ಸಂಭೋಗವನ್ನು ವರ್ಜಿಸಬೇಕು. ಬಹಳ ದುಃಖಿಸಬಾರದು. ರಕ್ತಸ್ರಾವ ಆಗದಂತೆ ಎಚ್ಚರವಹಿಸಬೇಕು. ಹಗಲು ನಿದ್ರೆ, ರಾತ್ರಿ ಜಾಗರಣೆ ಇವೆರಡೂ ಕೂಡದು. ಬೂದಿ, ಕೇಶ, ಉಗುರು ಮುಂತಾದವುಗಳಿಂದ ನೆಲದ ಮೇಲೆ ಬರೆಯಬಾರದು. ಯಾವಾಗಲೂ ನಿದ್ದೆಮಾಡುತ್ತಿರಬಾರದು. ಅಮಂಗಲಕರವಾದ ಕೆಟ್ಟಮಾತುಗಳನ್ನು ಆಡಬಾರದು. ಹೆಚ್ಚು ನಗಾಡಬಾರದು. ಒಳ್ಳೆಯ ಮಂತ್ರಾದಿಗಳನ್ನು ಬರೆಯುವುದು, ಸುಗಂಧವುಳ್ಳ ಹೂಮಾಲೆ ಗಂಧ ಮುಂತಾದವುಗಳನ್ನು ಮೂಸಿನೋಡುವುದು, ಶುಚಿಯಾಗಿರುವ ಮನೆಯಲ್ಲಿ ವಾಸಿಸುವುದು, ದಾನಧರ್ಮಗಳನ್ನು ಮಾಡುವುದು, ಅತ್ತೆ-ಮಾವಂದಿರ ಸೇವೆಮಾಡುವುದು, ಮುಂತಾದ ಒಳ್ಳೆಯ ಕೆಲಸಗಳನ್ನು ಮಾಡುತ್ತಿರಬೇಕು. ಅರಸಿನ, ಕುಂಕುಮ, ಸಿಂದೂರ, ಕಾಡಿಗೆ ಮತ್ತು ಎಣ್ಣೆಹಾಕಿ ಸ್ನಾನಮಾಡುವುದು, ಹೆರಳುಹಾಕಿಕೊಳ್ಳುವುದು, ತಾಂಬೂಲಸೇವನೆ, ಸೌಭಾಗ್ಯಲಕ್ಷಣವುಳ್ಳ ಆಭರಣಗಳನ್ನು ತೊಡುವುದು ಇತ್ಯಾದಿ ಕೆಲಸಗಳು ಶುಭಪ್ರದವಾಗಿರುತ್ತವೆ. ಆರನೆಯ ತಿಂಗಳು ಕಳೆದ ಮೇಲೆ ನಿತ್ಯಪ್ರಯಾಣವನ್ನು ಸಂಪೂರ್ಣವಾಗಿ ವರ್ಜಿಸಬೇಕು.

## ॥ ಗರ್ಭಿಣೀಪತಿಧರ್ಮಾಃ ॥

**ಗರ್ಭಿಣೀವಾಂಛಿತಂ ದ್ರವ್ಯಂ ತಸ್ಯೈ ದದ್ಯಾತ್ ಯಥೋಚಿತಂ ।**
**ದೌಹೃದಸ್ಯಾಪ್ರದಾನೇನ ಗರ್ಭೋದೋಷಮವಾಪ್ನುಯಾತ್ ॥**
**ವೈರೂಪ್ಯಂ ಮರಣಂ ವಾಪಿ ತಸ್ಮಾತ್ಕಾರ್ಯಂ ಪ್ರಿಯಂ ಸ್ತ್ರಿಯಃ ।**
**ಸಿಂಧುಸ್ನಾನಂ ದ್ರುಮಚ್ಛೇದಂ ವಪನಂ ಪ್ರೇತವಾಹನಂ ॥**
**ವಿದೇಶಗಮನಂ ಚೈವ ನ ಕುರ್ಯಾದ್ಗರ್ಭಿಣೀಪತಿಃ ।**
**ವಪನಂ ಮೈಥುನಂ ತೀರ್ಥಶ್ರಾದ್ಧಭೋಜನಮೇವ ಚ ॥**
**ವರ್ಜಯೇತ್ ಸಪ್ತಮಾನ್ಮಾಸಾತ್ ನಾವ ಆರೋಹಣಂ ತಥಾ ।**
**ಯುದ್ಧಾದಿ ವಾಸ್ತುಕರಣಂ ನಖಕೇಶವಿಕರ್ತನಂ ।**
**ಚೌಲಂ ಶವಾನುಗಮನಂ ವಿವಾಹಂ ಚ ವಿವರ್ಜಯೇತ್ ।**
**ಮಂಡನಂ ಪಿಂಡದಾನಂ ಚ ಪ್ರೇತಕರ್ಮ ಚ ಸರ್ವಶಃ ॥**
**ನ ಜೀವತ್ಪಿತೃಕಃ ಕುಯಾದ್ಗರ್ಭಿಣೀಪತಿರೇವ ಚ ॥**

**ಗರ್ಭಿಣಿಯ ಪತಿಯು ಅನುಸರಿಸಬೇಕಾದ ನಿಯಮಗಳು:-** ಗರ್ಭಿಣಿಗೆ ಉಂಟಾಗುವ ಬಯಕೆಗಳನ್ನು ತಿಳಿದು ಅವುಗಳನ್ನು ಸರಿಯಾಗಿ ಆಯಾ ಕಾಲಕ್ಕೆ ಒದಗಿಸಿ ಪೂರಯಿಸಬೇಕು. ಗರ್ಭಿಣಿಯ ಬಯಕೆಗಳನ್ನು ಈಡೇರಿಸದಿದ್ದರೆ, ಹುಟ್ಟುವ ಮಗುವಿಗೆ ಅಂಗವೈಕಲ್ಯವುಂಟಾಗಬಹುದು ಅಥವಾ ಗರ್ಭವೇ ನಾಶವಾದರೂ ಆಗಬಹುದು. ಸಮುದ್ರ ಸ್ನಾನ, ಮರಕಡಿಯು

ವುದು, ಕ್ಷೌರ, ಹೆಣ ಹೊರುವುದು, ಪರದೇಶ ಯಾತ್ರೆ ಮುಂತಾದುವುಗಳನ್ನು ಗರ್ಭಿಣೀಪತಿಯು ವರ್ಜಿಸಬೇಕು. ಕ್ಷೌರ, ಮೈಥುನ, ತೀರ್ಥಯಾತ್ರೆ, ಶ್ರಾದ್ಧಭೋಜನ, ನೌಕಾಯಾನ ಇತ್ಯಾದಿಗಳನ್ನು ತ್ಯಜಿಸಬೇಕು. ಏಳನೆಯ ತಿಂಗಳಾದ ಮೇಲೆ ಯುದ್ಧ, ಮನೆಕಟ್ಟುವುದು, ಉಗುರು, ಕೂದಲು ಮುಂತಾದುವುಗಳನ್ನು ಕತ್ತರಿಸುವುದು, ಪ್ರೇತದ ಸಂಗಡ ಹೋಗುವುದು, ಪಿಂಡದಾನ, ಪ್ರೇತಕ್ರಿಯೆ ಮುಂತಾದವುಗಳನ್ನೂ ಮಾಡಕೂಡದು.

## ॥ ಸುಖಪ್ರಸವೋಪಾಯಃ ॥

ಪಾರಸ್ಕರ ಗೃಹ್ಯಸೂತ್ರ ಕಾ.೧. ಕ.೧೬. ಸೂತ್ರ ೧. ಸೋಷ್ಯಂತೀಮದ್ಭಿರಭ್ಯುಕ್ಷತಿ ... ॥ ಪ್ರಸವಪ್ರತಿಬಂಧೇ ಋಗ್ವಿಧಾನೇ ವಿಜಿಹೀಷ್ವೇತಿ ಸೂಕ್ತಂ ಜಪೇತ್ । ಏತೇನ ಮಾರ್ಜಯೇತ್ ಅಭಿಮಂತ್ರಿತಂ ಜಲಂ ವಾ ಪಾಯಯೇತ್ ॥ ತೇನ ಸುಖಪ್ರಸವಃ ॥

ವಿಜಿಷ್ವೇತಿ ಸೂಕ್ತಸ್ಯ ಸಪ್ತವಧ್ರಿರಾತ್ರೇಯಃ ಅಶ್ವಿನೌ ಅನುಷ್ಟುಪ್ ॥ ಸುಖಪ್ರಸೂತ್ಯೈ ವಿನಿಯೋಗಃ ॥ ಓಂ ವಿಜಿಹೀಷ್ವ ವನಸ್ಪತೇ ಯೋನಿಃ ಸೂಷ್ಯಂತ್ಯಾ ಇವ ॥ ಶ್ರುತಂ ಮೇ ಆಶಿನಾಹವಂ ಸಪ್ತಂಧ್ರಿಂ ಚ ಮುಂಚತಂ ॥ ೧ ॥ ಭೀತಾಯ ನಾಧಮಾನಾಯ ಋಷಯೇ ಸಪ್ತವಧ್ರಯೇ ॥ ಮಾಯಾಭಿರಾಶ್ವಿನಾ ಯುವಂ ವೃಕ್ಷಂ ಸಂಚವಿಜಾಚಥಃ ॥ ೨ ॥ ಯಥಾವಾತಃ ಪುಷ್ಕರಿಣೀಂ ಸಮಿಂಗಯತಿ ಸರ್ವತಃ ॥ ಏವಾ ತೇ ಗರ್ಭೇ ಯಜತು ನಿರೈತು ದಶಮಾಸ್ಯಃ ॥ ೩ ॥ ಯಥಾವಾತೋ ಯಥಾವನಂ ಯಥಾ ಸಮುದ್ರ ಏಜತಿ ॥ ಏವಾ ತ್ವಂ ದಶಮಾಸ್ಯಃ ಸಹಾವೇಹಿ ಜರಾಯುಣಾ ॥ ೪ ॥ ದಶಮಾಸಾನ್ ಛಶಯಾನಃ ಕುಮಾರೋ ಅಧಿ ಮಾತರಿ ॥ ನಿರೈತು ಜೀವೋ ಜೀವಂತ್ಯಾ ಅಧಿ ॥ ೫ ॥

ಸುಖಪ್ರಸಮಂತ್ರಸ್ತು ॥ ಹಿಮವತ್ಯುತ್ತರೇ ಪಾರ್ಶ್ವೇ ಸುರಥಾ ನಾಮ ಯಕ್ಷಿಣೀ । ತಸ್ಯಾಃ ಸ್ಮರಣಮಾತ್ರೇಣ ವಿಶಲ್ಯಾ ಗರ್ಭಿಣೀ ಭವೇತ್ ॥ ಓಂ ಕ್ಷೀಂ ಸ್ವಾಹಾ ॥ ಇತಿ ಮಂತ್ರೇಣ ದೂರ್ವಾಂಕುರೇಣ ತಿಲತೈಲಶತಂ ಸಹಸ್ರಂ ವಾ ಅಭಿಮಂತ್ರ್ಯ ಕಿಂಚಿತ್ಪಾಯಯೇತ್ ॥ ಕಿಂಚಿನ್ನಾತ್ರಸ್ಯ ಗರ್ಭಲೇಪಶ್ಚ ॥ ಸಮ್ಯಕ್ ಲೇಪೇ ಶೀಘ್ರಸುಖಪ್ರಸವಃ ॥ ವಂಶನಿಂಬಯೋಃ ತ್ವಕ್ ತುಲಸೀಮೂಲಂ ಕಪಿತ್ಥಪತ್ರಂ ಕರವೀರಬೀಜಂ ಚ ಸಮಭಾಗಂ ಮಹಿಷೀದುಗ್ಧೇನ ಪೇಷಯಿತ್ವಾ ತೇನ ಸತೈಲೇನೇ ಯೋನಿಲೇಪೇ ಸದ್ಯಃ ಪ್ರಸವಃ ॥

ಸೂತಿಕಾಗೃಹಂ ನೈಋತೇ ಕಾರ್ಯಮಿತಿ ವಸಿಷ್ಠೋಕ್ತಿಃ ॥ ದಶಾಹಂ ಸೂತಿಕಾಗಾರಮಾಯುಧೈಶ್ಚ ವಿಶೇಷತಃ । ವಹ್ನಿನಾತಿಂದುಕಾಲಾತ್ಯೈಃ ಪೂರ್ಣ

**ಕುಂಭೈಃ ಪ್ರದೀಪಕೈಃ । ಮುಸಲೇನ ತಥಾ ವಾರಿವರ್ಣಕೈಶ್ಚಿತ್ರಿತೇನ ಚೇತಿ ವಿಷ್ಣುಧರ್ಮೇ ॥**

**ಸುಖಪ್ರಸವೋಪಾಯ:-** ಗರ್ಭಿಣಿಗೆ ಪ್ರಸವವೇದನೆ ಪ್ರಾರಂಭವಾಗಿ ಹೆರಿಗೆ ಕಷ್ಟವಾದರೆ, ಪತಿಯು ಸ್ನಾನಮಾಡಿ ಪವಿತ್ರ ಸ್ಥಳದಲ್ಲಿ ಕುಳಿತು ತಟ್ಟೆಯಲ್ಲಿ ನೀರುಹಾಕಿ ಅದರಲ್ಲಿ ದರ್ಭೆಗಳನ್ನಿಟ್ಟು **"ವಿಜಿಹೀಷ್ವ"** ಎಂಬ ಸೂಕ್ತವನ್ನು ಜಪಿಸಿ ದರ್ಭೆಗಳಿಂದ ಆ ನೀರನ್ನು ಗರ್ಭಿಣಿಯ ಮೇಲೆ ಪ್ರೋಕ್ಷಿಸಬೇಕು. ಅಥವಾ **"ಹಿಮವತ್ಯುತ್ತರೇ ... ಸ್ವಾಹಾ"** ಈ ಮಂತ್ರದಿಂದ ದೂರ್ವೆಯಿಂದ ಎಳ್ಳೆಣ್ಣೆಯನ್ನು ನೂರು ಅಥವಾ ಸಾವಿರಸಲ ಅಭಿಮಂತ್ರಿಸಿ ಆ ಎಣ್ಣೆಯನ್ನು ಸ್ವಲ್ಪ ಗರ್ಭಿಣಿಗೆ ಕುಡಿಸಬೇಕು. ಸ್ವಲ್ಪ ಗರ್ಭಕ್ಕೆ ಲೇಪಿಸಬೇಕು. ಅಂತೆಯೇ ಬಿದಿರು ಮತ್ತು ಬೇವಿನ ತೊಗಟೆ, ತುಳಸಿಯ ಬೇರು, ಬೆಳವಲ ಗಿಡದ ಎಲೆ, ಕಣಗಿಲದ ಬೀಜ ಇವನ್ನು ಸಮತೂಕದಷ್ಟು ಎಮ್ಮೆಯ ಹಾಲಿನಲ್ಲಿ ಅರೆದು ಎಳ್ಳೆಣ್ಣೆಯನ್ನು ಕಲಸಿ ಯೋನಿಗೆ ಲೇಪಿಸಬೇಕು. ಈ ಉಪಾಯಗಳಿಂದ ಸುಖಪ್ರಸವ ವಾಗುತ್ತದೆ. ಪ್ರಸೂತಿಗೃಹ ನೈರುತ್ಯದಿಕ್ಕಿಗೆ ಇರಬೇಕು. ಅದರಲ್ಲಿ ಶಸ್ತ್ರ, ಅಗ್ನಿ, ಉರಿಯುವ ಕಟ್ಟಿಗೆ, ನೀರು ತುಂಬಿದ ಕೊಡ, ಒನಕೆ, ನೀರು ಇತ್ಯಾದಿಗಳು ಇರಬೇಕು. ರಂಗೋಲಿಯನ್ನೂ ಹಾಕಿರಬೇಕು.

## ॥ ಪುಂಸವನಾನವಲೋಭನಸೀಮಂತೋನ್ನಯನ ಸಂಸ್ಕಾರಾಣಾಂ ನಿರ್ಣಯಃ ॥

**ಪುಂಸವನಂ:- ಪುಮಾನ್ ಸೂಯತೇ ಯಸ್ಮಾತ್ ಇತಿ ಪುಂಸವನಂ ॥ ತಚ್ಚ ವ್ಯಕ್ತೇ ಗರ್ಭೇ ದ್ವಿತೀಯೇ ಚತುರ್ಥೇ ಷಷ್ಠೇ ಅಷ್ಟಮೇ ವಾ ಮಾಸೇ ಸೀಮಂತೇನ ಸಹ ವಾ ಕಾರ್ಯಂ ॥**

**ಮೂಲಾದಿತ್ರಿತಯೇ ಕರೇ ಶ್ರವಣಕೇ ಭಾದ್ರದ್ವಯಾದ್ರಾತ್ರಯೇ**
**ರೇವತ್ಯಾಂ ಮೃಗಪಂಚಕೇ ದಿನಕರಾರೇಜ್ಯೇಷ್ವರಿಕ್ತಾತಿಥೌ ।**
**ನೇತ್ರೇಮಾಸ್ಯಥವಾಗ್ನಿಮಾಸಿ ಧನುಷಿ ಸ್ತ್ರೀಮೀನಯೋಶ್ಚಸ್ಥಿರೇ**
**ಲಗ್ನೇ ಪುಂಸವನೇ ತಥೈವ ಶುಭದಂ ಸೀಮಂತಕರ್ಮಾಷ್ಟಮೇ ॥**

**ಪುಂಸವನೋಕ್ತಾನ್ಯೇವತಂತ್ರೇ ॥ ಆಪೂರ್ಯಮಾಣಪಕ್ಷೇ ಯದಾ ಪುಂಸಾ ನಕ್ಷತ್ರೇಣ ಚಂದ್ರಮಾ ಯುಕ್ತಃ ಸ್ಯಾತ್ ॥ ಅತ್ರ ನಿಯತಕಾಲತ್ವಾತ್ ಗುರು ಶುಕ್ರಾಸ್ತಬಾಲ್ಯವಾರ್ಧಕ್ಯಮಲಮಾಸಾದಿಷ್ವಪಿ ನ ದೋಷಃ ॥**

**ಪುಂಸವನ ಅನವಲೋಭನ ಸೀಮಂತೋನ್ನಯನ ಸಂಸ್ಕಾರಗಳ ನಿರ್ಣಯ.**

**ಪುಂಸವನ:-** ಪುಮಾನ್ ಅಂದರೆ ವೀರ್ಯವಾನ್, ಬಲವಾನ್ ಸಂತತಿ ಯಾವ ಸಂಸ್ಕಾರದಿಂದ ಉಂಟಾಗುತ್ತದೋ ಅದು ಪುಂಸವನ. ಗರ್ಭದ ಸ್ಪಷ್ಟಜ್ಞಾನವಾದ ನಂತರ ಎರಡು, ನಾಲ್ಕು, ಆರು, ಎಂಟನೆಯ ತಿಂಗಳಲ್ಲಿ ಅಥವಾ ಸೀಮಂತೋನ್ನಯನ ಸಂಸ್ಕಾರದ ಜತೆಗೆ ಈ ಸಂಸ್ಕಾರವನ್ನು ಮಾಡಬೇಕು. ನಕ್ಷತ್ರಗಳಲ್ಲಿ ಮೂಲಾ, ಹಸ್ತಾ, ಶ್ರವಣಾ, ಪೂರ್ವಾಭಾದ್ರಾ, ಉತ್ತರಾಭಾದ್ರಾ, ಪುನರ್ವಸು, ಪುಷ್ಯ, ಮೃಗಶಿರಾ, ಅಶ್ವಿನೀ, ಪೂರ್ವಾಷಾಢಾ, ಉತ್ತರಾಷಾಢಾ, ಆದ್ರ್ರಾ, ಸ್ವಾತಿ, ಅನುರಾಧಾ, ಭರಣಿ, ಕೃತ್ತಿಕಾ, ರೋಹಿಣೀ; ವಾರಗಳಲ್ಲಿ ರವಿ, ಮಂಗಳ, ಗುರು; ತಿಥಿಗಳಲ್ಲಿ ೪, ೮, ೧೪, ೩೦ ಈ ರಿಕ್ತತಿಥಿಗಳನ್ನು ಬಿಟ್ಟು ಉಳಿದ ತಿಥಿಗಳಲ್ಲಿ ಮತ್ತು ಗರ್ಭಧಾರಣಾನಂತರ ಎರಡನೆಯ ಅಥವಾ ಮೂರನೆಯ ತಿಂಗಳು ಧನು, ಕನ್ಯಾ, ಮೀನಮಾಸಗಳು ಹಾಗೂ ಸ್ಥಿರಲಗ್ನ ಪುಂಸವನಕ್ಕೆ ಯೋಗ್ಯವಾದವು. ಇವೇ ತಿಥಿ, ವಾರ, ನಕ್ಷತ್ರಗಳು ಅನವಲೋಭನ ಸೀಮಂತೋನ್ನಯನ ಸಂಸ್ಕಾರಗಳಿಗೂ ಯೋಗ್ಯವಾಗಿವೆ. ಈ ಸಂಸ್ಕಾರಗಳಿಗೆ ವಿಶೇಷವಾಗಿ ಶುಕ್ಲಪಕ್ಷವಿದ್ದು ಚಂದ್ರನು ಪುರುಷನಕ್ಷತ್ರಗಳಲ್ಲಿ (ಕೃಷ್ಣಪಂಚಮಿ ವರೆಗೆ) ಇರಬೇಕು. ಸ್ತ್ರೀಸಂಜ್ಞಕ ನಕ್ಷತ್ರಗಳಲ್ಲಿ ಜಲವನ್ನು ಹೆಚ್ಚಾಗಿ ಉಂಟುಮಾಡುವ ಶಕ್ತಿಯೂ ಪುರುಷಸಂಜ್ಞಕ ನಕ್ಷತ್ರಗಳಲ್ಲಿ ಸೂರ್ಯನಂತೆ ತೇಜಸ್ಸನ್ನು ಉಂಟುಮಾಡುವ ಶಕ್ತಿಯೂ ಇರುತ್ತದೆ. ಈ ಸಂಸ್ಕಾರಗಳನ್ನು ನಿಯತಕಾಲದಲ್ಲೇ ಮಾಡಬೇಕಾದ್ದರಿಂದ ಇವುಗಳಿಗೆ ಗುರು, ಶುಕ್ರಾಸ್ತ, ಬಾಲ್ಯ, ವಾರ್ಧಕ್ಯ, ಮಲಮಾಸ ಮೊದಲಾದ ದೋಷಗಳಿಲ್ಲ.

**ಅನವಲೋಭನಂ:- ನ ಅವಲೋಭನಂ ಅನವಲೋಭನಂ ॥ ಗರ್ಭಸಂಸ್ಕಾರತ್ವಾತ್ ಪುಂಸವನಾನವಲೋಭನಯೋಸ್ತು ಪ್ರಥಮಗರ್ಭೇ ಅನುಷ್ಠಾನೇಽಪಿ ಪ್ರತಿ ಗರ್ಭಂ ಕಾರ್ಯೇ ॥ ಪುಂಸವನೇ ಪತಿಃ ಕರ್ತಾ ॥ ತದಭಾವೇ ದೇವರಾದಿಃ ॥ ಅನವಲೋಭನಸಂಸ್ಕಾರಃ ಬಹ್ವೃಚಾನಾಮೇವ ವರ್ತತೇ ನಾನ್ಯೇಷಾಂ ॥**

**ಸೀಮಂತೋನ್ನಯನಂ:- ಸೀಮಂತಸ್ಯ ಉನ್ನಯನಂ, ಉದ್ಭಾವನಂ ಇತಿ ಸೀಮಂತೋನ್ನಯನಂ ॥ ಪಂಚ ಸಂಧಯಃ ಶಿರಸಿ ವಿಭಕ್ತಾಃ ಸೀಮಂತಾಃ ತತ್ರಾಘಾತೇನೋನ್ಮಾದಭಯಚೇಷ್ಟಾನಾಶೈರ್ಮರಣಂ ॥ ಯಾದೃಶಂ ಭಜತೇ ಹಿ ಸ್ತ್ರೀ ಸುತಂ ಸೂತೇ ತಥಾವಿಧಂ । ತಸ್ಮಾತ್ಪ್ರಜಾವಿಶುದ್ಧ್ಯರ್ಥಂ ಸ್ತ್ರಿಯಂ ರಕ್ಷೇತ್ಪ್ರಯತ್ನತಃ ॥ ಮನುಃ ॥**

**ಏತಚ್ಚತುರ್ಥೇ ಅಷ್ಟಮೇ ಷಷ್ಠೇ ಪಂಚಮೇ ಮಾಸಿ ವಾ ವಿಹಿತಂ ॥ ನವಮೇ ಮಾಸಿ ವಾ ಕುರ್ಯಾತ್ ॥ ಯಾವದ್ಗರ್ಭವಿಮೋಚನಂ ಸ್ತ್ರೀ ಯದ್ಯಕೃತಸೀಮಂತಾ ಪ್ರಸೂಯೇತ ಕದಾಚನ ॥ ಗೃಹೀತಪುತ್ರಾ ವಿಧಿವತ್ಸಾ ತಂ ಸಂಸ್ಕಾರಮರ್ಹತಿ ॥**

ತಲೆಯ ಮೇಲಿರುವ ಪಂಚಸಂಧಿಗೆ "**ಸೀಮಂತ**" ಎಂದು ಹೆಸರು ಅದರ ಉನ್ನಯನ ಅಂದರೆ ವೃದ್ಧೀಕರಣ ಅಥವಾ ರಕ್ಷಣಾ ಈ ಸಂಸ್ಕಾರದ ಪ್ರಧಾನ ಉದ್ದೇಶ. ಸೀಮಂತವು

**ಯೋಪರಿ ಕನ್ಯಾತ್ರಯೋಪರಿ ಕನ್ಯಾಪುತ್ರಜಾತಶ್ಚೇತ್ತದಾ ಯಥೋಕ್ತಾಂ ಶಾಂತಿಂ ಭುವನೇಶ್ವರೀಶಾಂತಿವತ್ ಕೃತ್ವಾ ತದಾ ಪುತ್ರಮುಖಂ ನಿರೀಕ್ಷೇತ ಆದೌ ನ ನಿರೀಕ್ಷೇತ ॥**

**ಜನನಶಾಂತಿ ವಿಚಾರ:-** ಜನ್ಮಕಾಲದಲ್ಲಿ ಭದ್ರಾ, ವೈಧೃತಿ, ವ್ಯತೀಪಾತ, ಚಂದ್ರ ಸೂರ್ಯಗ್ರಹಣ, ಸಂಕ್ರಾಂತಿ, ಅಮಾವಾಸ್ಯೆ ಮೊದಲನೆಯ ಪ್ರಹರ ಹಾಗೂ ಕೊನೆಯ ಎರಡು ಪ್ರಹರ, ದರ್ಶ, ಶ್ರಾದ್ಧದಿವಸ, ವೃದ್ಧಿದಿವಸ, ದಿನಕ್ಷಯ, ಯಮಘಂಟಾಯೋಗ, ದಗ್ಧಯೋಗ, ಮೃತ್ಯುಯೋಗ, ವಿಷ್ಕಂಭ ಮತ್ತು ವಜ್ರ ಇವುಗಳ ಮೊದಲನೆಯ ೩/೩ ಘಳಿಗೆಗಳು, ಗಂಡ ಹಾಗೂ ಅತಿಗಂಡ ಇವುಗಳ ೬/೬ ಘಳಿಗೆಗಳು, ಪರಿಘದ ಅರ್ಧ, ಶೂಲದ ೫ ಘಳಿಗೆಗಳು, ವ್ಯಾಘಾತದ ೯ ಘಳಿಗೆಗಳು, ಚತುರ್ಥಿಯ ೮, ಷಷ್ಠಿಯ ೯, ಅಷ್ಟಮಿಯ ೧೪, ದ್ವಾದಶಿಯ ೧೦, ಚತುರ್ದಶಿಯ ೫ ಘಳಿಗೆಗಳು, ತಂದೆ ಹಾಗೂ ಅಣ್ಣ ಇವರ ಜನ್ಮಮಾಸ, ನಕ್ಷತ್ರ ಹಾಗೂ ತಿಥಿ ಇವುಗಳಲ್ಲಿ ಜನ್ಮವಾಗಿದ್ದರೆ; ಅಶ್ವಿನೀ ಮಘಾ ಇವುಗಳ ಮೊದಲನೆಯ ೨/೨ ಘಳಿಗೆಗಳು, ರೇವತಿಯ ಕೊನೆಯ ೨ ಘಳಿಗೆಗಳು, ಚಿತ್ರಾ ನಕ್ಷತ್ರದ ಮೂರನೆಯ ಪಾದ, ಉತ್ತರಾದ ಮೊದಲನೆಯ ಪಾದ, ವಿಶಾಖಾದ ನಾಲ್ಕನೆಯ ಚರಮ, ಜ್ಯೇಷ್ಠಾ, ಆಶ್ಲೇಷಾ, ಮೂಲಾ, ಕೃಷ್ಣ ಚತುರ್ದಶೀ ತಿಥಿಗಂಡಾಂತ (ಪಂಚಮೀ, ಷಷ್ಠೀ, ದಶಮೀ, ಏಕಾದಶೀ, ಪೂರ್ಣಿಮಾ ಅಥವಾ ಅಮಾವಾಸ್ಯಾ ಪ್ರತಿಪದಾತಿಥಿಯ ಸಂಧಿಯ ೨ ಘಳಿಗೆಗಳು) ಲಗ್ನಗಂಡಾಂತ (ಕರ್ಕ, ಸಿಂಹ, ವೃಶ್ಚಿಕ, ಧನು, ಮೀನ, ಮೇಷ ಈ ಲಗ್ನದ ಸಂಧಿಯ ಒಂದು ಘಳಿಗೆ) ವಿಷಘಳಿಗೆ, ಅವಳಿಜವಳಿ ಜನನ, ಮೂರು ಗಂಡು ಮಕ್ಕಳಾದ ಮೇಲೆ ನಾಲ್ಕನೆಯದು ಹೆಣ್ಣಾಗುವುದು, ಮೂರು ಹೆಣ್ಣುಮಕ್ಕಳಾದ ಮೇಲೆ ನಾಲ್ಕನೆಯದು ಗಂಡಾಗುವುದು, ಹಲ್ಲುಸಹಿತ ಹುಟ್ಟುವುದು. ವಿಪರೀತ ಉತ್ಪತ್ತಿ, ಈ ರೀತಿ ಜನ್ಮವಾಗಿದ್ದರೆ ಆಯಾ ಯೋಗದ ಬಗ್ಗೆ ಧರ್ಮಸಿಂಧುವಿನಲ್ಲಿ ಹೇಳಿದಂತೆ ಯಥಾವಿಧಿ ಹನ್ನೊಂದನೆಯ ಅಥವಾ ಹನ್ನೆರಡನೆಯ ದಿನ ಶಾಂತಿಮಾಡಿದ ಮೇಲೆ ಪುತ್ರಮುಖದರ್ಶನ ಮಾಡಬೇಕು; ಮೊದಲು ಕೂಡದು.

## ॥ ಕನ್ಯಾಸಂಸ್ಕಾರವಿಚಾರಃ ॥

**ಕುಮಾರ್ಯಾ ಅಪಿ ಜಾತಕರ್ಮಾದಿಸಂಸ್ಕಾರಾಃ ಚೌಲಾಂತಾಃ ಸರ್ವೇ ಅಮಂತ್ರಕಂ ಕಾರ್ಯಾಃ ॥ ವಿವಾಹಸ್ತು ಸಮಂತ್ರಕಃ ॥ ಅತಃ ಕನ್ಯಾಯಾಃ ಜಾತಕರ್ಮಾದಿ ಸಂಸ್ಕಾರಲೋಪೇ ತತ್ತತ್ಕಾಲೇ ವಿವಾಹಕಾಲೇ ವಾ ಪ್ರಾಯಶ್ಚಿತ್ತಂ ಕೃತ್ವಾ ವಿವಾಹಃ ಕಾರ್ಯಃ ॥**

ಕನ್ಯೆಯ ಸಂಸ್ಕಾರವಿಚಾರ:- ಹೆಣ್ಣುಮಕ್ಕಳಿಗೂ ಜಾತಕರ್ಮದಿಂದ ಮೊದಲ್ಗೊಂಡು ಚೌಲದ ವರೆಗೆ ಎಲ್ಲ ಸಂಸ್ಕಾರಗಳನ್ನೂ ಮಂತ್ರರಹಿತವಾಗಿ ಮಾಡಬೇಕು. ವಿವಾಹಸಂಸ್ಕಾರವನ್ನು ಮಾತ್ರ ಮಂತ್ರಸಹಿತ ಮಾಡಬೇಕು. ಈ ಸಂಸ್ಕಾರಗಳನ್ನು ಸಕಾಲದಲ್ಲಿ ಮಾಡದಿದ್ದರೆ, ಮುಂದೆ ಯಾವುದೇ ಸಂಸ್ಕಾರ ಮಾಡುವಾಗ, ಅಥವಾ ವಿವಾಹ ಕಾಲದಲ್ಲಿ ಪೂರ್ವಸಂಸ್ಕಾರಗಳ ಪ್ರಾಯಶ್ಚಿತ್ತ ಮಾಡಬೇಕು.

## ॥ ನಾಮಕರಣಸಂಸ್ಕಾರನಿರ್ಣಯಃ ॥

**ಆಶ್ವಲಾಯನಗೃಹ್ಯಸೂತ್ರೇ ಅ. ೧. ಖಂ. ೧೫-ನಾಮಚಾಸ್ಮೈದದ್ಯುಃ ॥ "ಘೋಷವದಾದ್ಯಂತರಸ್ತಮಭಿನಿಷ್ಠಾನಾಂತಂ ದ್ವ್ಯಕ್ಷರಂ ಚತುರಕ್ಷರಂ ವಾ ಯುಗ್ಮಾನೀತ್ಯೇವ ಪುಂಸಾಂ ॥ ಅಯುಜಾನಿ ಸ್ತ್ರೀಣಾಂ ॥**

**ಜನ್ಮತ ಏಕಾದಶೇ ದ್ವಾದಶೇ ವಾ ಯಥಾಚಾರಂ ನಿಯತದಿನೇ ವಾ ನಾಮಕರಣಂ ಕಾರ್ಯಂ ॥ ನಿಯತಕಾಲೇಪಿ ವಿಷ್ಟಿವೈಧೃತಿವ್ಯತೀಪಾತಗ್ರಹಣ-ಸಂಕ್ರಾತ್ಯಮಾವಾಸ್ಯಾ ಶ್ರಾದ್ಧದಿನೇಷು ನ ಕಾರ್ಯಂ ॥ ನಿಯತಕಾಲೇ ಕ್ರಿಯ-ಮಾಣೇ ಗುರುಶುಕ್ರಾಸ್ತಬಾಲ್ಯವಾರ್ಧಕ ವಕ್ರಾತಿಚಾರಮಲಮಾಸಾದಿ ನಿಷೇಧೋ-ನಾಸ್ತಿ ॥ ನಿಯತಕಾಲಾತಿಕ್ರಮೇತು ಜ್ಯೋತಿಃಶಾಸ್ತ್ರೋಕ್ತಶುಭೇ ಕಾಲೇ ಕಾರ್ಯಂ ॥ ಸರ್ವಥಾತ್ರ ಪೂರ್ವಾಹ್ಣಃ ಪ್ರಶಸ್ತಃ ॥**

**ಪುಷ್ಯಾರ್ಕತ್ರಯಮೈತ್ರಭೇಷು ಮೃಗಭೇಜ್ಯೇಷ್ಠಾಧನಿಷ್ಠೋತ್ತರಾ-**

**ದಿತ್ಯಾಖ್ಯೇಷು ಚ ನಾಮಕರ್ಮ ಶುಭದೇ ಯೋಗೇ ಪ್ರಶಸ್ತೇ ತಿಥೌ ॥
ಅಹ್ನಿದ್ವಾದಶಕೇ ತಥಾನ್ಯದಿವಸೇ ಶಸ್ತಂ ತಥೈಕಾದಶೇ
ಗೋಸಿಂಹಾಲಿಘಟೇಷು ಹ್ಯರ್ಕ ಬುಧಯೋರ್ಜೀವೇ ಶಶಾಂಕೇಷು ಚ ॥**

**ನಾಮಕರಣಸಂಸ್ಕಾರನಿರ್ಣಯಃ-** ವೈಯಕ್ತಿಕ ಪರಿಚಯಕ್ಕೋಸ್ಕರ ಮಗುವಿಗೆ ಗಂಭೀರವೂ, ಸುಂದರವೂ, ಉಚ್ಚಾರಸುಲಭವೂ ಆದ ಹೆಸರನ್ನಿಡಬೇಕು. ಹೆಸರಿನ ಪ್ರಭಾವದಿಂದ ಅದಕ್ಕೆ ಮುಂದೆ ಬುದ್ಧಿ, ಶಾರೀರಬಲ, ವಿದ್ಯೆ, ಸದ್ಗುಣ, ಸದಾಚಾರ ಇತ್ಯಾದಿಗಳು ಲಭಿಸಬೇಕು. ಅದಕ್ಕಾಗಿಯೇ ಭಗವಂತನನ್ನು ಧ್ಯಾನಿಸಿ ವಿಧಿಪ್ರಕಾರ ಹೆಸರಿಡುವ ಸಂಸ್ಕಾರಕ್ಕೆ "ನಾಮಕರಣ" ಎಂದು ಹೇಳುತ್ತಾರೆ. ಹೆಸರನ್ನಿಡುವ ಸಾಮಾನ್ಯ ನಿಯಮ ಈ ಪ್ರಕಾರವಾಗಿದೆ. ಹೆಸರಿನ ಆರಂಭದ ಅಕ್ಷರವು ಮೃದುವರ್ಣವಾಗಿರಬೇಕು. ಯ ರ ಲ ವ ಈ ವರ್ಣಗಳಲ್ಲಿ ಯಾವುದಾದರೊಂದು ಮಧ್ಯದ ಅಕ್ಷರವಾಗಿರಬೇಕು. ಕೊನೆಯ ಅಕ್ಷರವು ದೀರ್ಘ ಅಥವಾ ವಿಸರ್ಗದಿಂದ ಕೂಡಿರಬೇಕು. ಗಂಡುಮಕ್ಕಳಿಗೆ ಎರಡು ನಾಲ್ಕು ಮುಂತಾಗಿ ಯುಗ್ಮ ಅಕ್ಷರಗಳಿರುವ ಹೆಸರುಗಳೂ, ಹೆಣ್ಣುಮಕ್ಕಳಿಗೆ ಅಯುಗ್ಮ ಅಕ್ಷರಗಳುಳ್ಳ ಹೆಸರುಗಳೂ ಪ್ರಶಸ್ತವಾಗಿವೆ. ಆರಂಭದ ಅಕ್ಷರವು ಒತ್ತಕ್ಷರವಾಗಿರುವುದು ಒಳ್ಳೆಯದಲ್ಲ. ಯಾವುದಾದರೂ ವಸ್ತು ಅಥವಾ ಪಶುಪಕ್ಷಿಗಳ ಹೆಸರನ್ನು ಸ್ತ್ರೀಯರಿಗೆ ಇಡಬಾರದು.

ಹುಟ್ಟಿದ ೧೧, ೧೨, ೧೦೧ನೆಯ ದಿನ ಅಥವಾ ಎರಡನೆಯ ವರ್ಷದ ಮೊದಲ ದಿನ ನಾಮಕರಣಮಾಡಬೇಕು. ಅದೇ ದಿನ ಭದ್ರಾ, ವೈಧೃತೀ ವ್ಯತೀಪಾತ, ಗ್ರಹಣ, ಸಂಕ್ರಾಂತಿ, ಅಮಾವಾಸ್ಯೆ, ಶ್ರಾದ್ಧದಿನ ಮುಂತಾದ ಯಾವುದಾದರೂ ದೋಷವಿದ್ದರೆ ಕೂಡದು. ಆದರೆ

ಅಧಿಕಮಾಸ, ಗುರುಶುಕ್ರಮೌಢ್ಯ ಇತ್ಯಾದಿಗಳಲ್ಲಿ ನಾಮಕರಣಕ್ಕೆ ದೋಷವಿಲ್ಲ. ನಿಯತವಾದ ದಿನವಲ್ಲಿ ಸಾಧ್ಯವಾಗದಿದ್ದರೆ ಜೋಯಿಸರಲ್ಲಿ ಒಳ್ಳೇ ಮುಹೂರ್ತವನ್ನು ತಿಳಿದು ಮಾಡಬೇಕು. ನಾಮಕರಣ ಸಂಸ್ಕಾರಕ್ಕೆ ಪ್ರಾತಃಕಾಲ ಒಳ್ಳೇದು. ಪುಷ್ಯ, ಹಸ್ತಾ, ಚಿತ್ರಾ, ಸ್ವಾತಿ, ಅನುರಾಧಾ, ಮೃಗಶಿರಾ, ಜ್ಯೇಷ್ಠಾ ಮೂರು ಉತ್ತರಾ, ಈ ನಕ್ಷತ್ರಗಳೂ ವೃಷಭ, ಸಿಂಹ, ಕುಂಭ, ವೃಶ್ಚಿಕ ಈ ಲಗ್ನಗಳೂ ನಾಮಕರಣಕ್ಕೆ ಪ್ರಶಸ್ತವಾಗಿವೆ. ರಿಕ್ತ ತಿಥಿಗಳನ್ನೂ ದುಷ್ಟಯೋಗಗಳನ್ನೂ ವರ್ಜಿಸಬೇಕು.

## ॥ ಆಂದೋಲಾರೋಹಣಂ ॥

**ಆಂದೋಲಾಶಯನೇ ಪುಂಸೋ ದ್ವಾದಶೋ ದಿವಸಃ ಶುಭಃ ।**
**ತ್ರಯೋದಶಸ್ತು ಕನ್ಯಾಯಾಃ ನ ನಕ್ಷತ್ರವಿಚಾರಣಾ ॥**
**ಅನ್ಯಸ್ಮಿನ್ ದಿವಸೇ ಚೇತ್ಸ್ಯಾಚ್ಛುಭಕಾಲಂ ವಿಚಾರಯೇತ್ ।**

**ಯಥಾಚಾರಂ ಕುಲದೇವತಾದಿ ಪೂಜಾಂ ವಿಧಾಯ ತತಃ ಅಲಂಕೃತಂ ಶಿಶುಂ ಹರಿದ್ರಾದಿನಾಲಂಕೃತೇ ಪರ್ಯಂಕೇ ಮಾತ್ರಾದ್ಯಾಃ ಸೌಭಾಗ್ಯಯುಕ್ತಾಃ ಸ್ತ್ರಿಯಃ ಯೋಗಶಾಯಿನಂ ಹರಿಂ ಸ್ಮರಂತ್ಯಃ ಗೀತವಾದ್ಯಾದಿಸಮಕಾಲೇ ಪ್ರಾಕ್‌ಶಿರಸಂ ನ್ಯಸೇಯುಃ ॥ ಸ್ವಸ್ಯ ಆಚಾರಪ್ರಾಪ್ತಂ ಚ ಅನ್ಯದಪಿ ಕಾರ್ಯಂ ॥ ಸ್ತ್ರೀಣಾಂ ಸೌಭಾಗ್ಯದ್ರವ್ಯಾಣಿ ದೇಯಾನಿ ॥**

**ಮಗುವನ್ನು ತೊಟ್ಟಿಲಿನಲ್ಲಿ ಇಡುವುದು:-** ಗಂಡುಮಗುವಿಗೆ ಹನ್ನೆರಡನೆಯ ದಿನವೂ, ಹೆಣ್ಣುಮಗುವಿಗೆ ಹದಿಮೂರನೆಯ ದಿನವೂ ಯೋಗ್ಯವಾಗಿದೆ. ಆ ದಿನದ ನಕ್ಷತ್ರವನ್ನು ಪರಿಗಣಿಸಬೇಕಾಗಿಲ್ಲ. ಶುಭಕಾಲವನ್ನು ನೋಡಿಕೊಂಡರೆ ಸಾಕು. ಕುಲಾಚಾರದಂತೆ ಕುಲದೇವತಾ ಪೂಜೆಯನ್ನು ಮಾಡಿ ಶೃಂಗರಿಸಿದ ಮಗುವನ್ನು ಹರಿದ್ರಾದಿಗಳಿಂದ ಅಲಂಕರಿಸಿದ ತೊಟ್ಟಿಲಿನಲ್ಲಿ, ಯೋಗಶಾಯಿಯಾದ ವಿಷ್ಣುವನ್ನು ಧ್ಯಾನಿಸುತ್ತ ತಾಯಿಯೇ ಮುಂತಾಗಿ ಸುಮಂಗಲೆಯರು ಮಲಗಿಸಬೇಕು. ಸ್ತ್ರೀಯರಿಗೆ ಮಂಗಲದ್ರವ್ಯಗಳನ್ನು ಕೊಡಬೇಕು.

## ॥ ಕರ್ಣವೇಧಸಂಸ್ಕಾರ ॥

**ಸುಶ್ರುತಸೂತ್ರಸ್ಥಾನೇ ೧೬ ಅಧ್ಯಾಯೇ - ರಕ್ಷಾಭೂಷಣನಿಮಿತ್ತಂ**
**ಬಾಲಸ್ಯ ಕರ್ಣೌ ವಿಧ್ಯೇತ್ ॥ ಜ್ಯೋತಿರ್ನಿಬಂಧೇ-**
**ಮಾಸೇ ಷಷ್ಠೇ ಸಪ್ತಮೇ ವಾಪ್ಯಷ್ಟಮೇ ಮಾಸಿ ವತ್ಸರೇ ।**
**ಕರ್ಣವೇಧಂ ಪ್ರಶಂಸಂತಿ ಪುಷ್ಟ್ಯಾಯುಃ ಶ್ರೀವಿವರ್ಧಯೇ ॥**

**ವೇಧ್ಯೌ ಕರ್ಣೌ ಶುಭೇ ವಾರೇ ಜಯಾಪೂರ್ಣಾತಿಥಿಷ್ವಪಿ ।**
**ಕರ್ಣವೇಧಃ ಶಿಶೋಃ ಪ್ರೋಕ್ತಃ ಪುನರ್ವಸುಧನಿಷ್ಠಯೋಃ ॥**
**ಮೃಗಪುಷ್ಯಾಶ್ವಿನೀಹಸ್ತ ಶ್ರವಣೇಷೂತ್ತರಾತ್ರಯೇ ॥**
**ಶುಕ್ಲಪಕ್ಷಃ ಶುಭಃ ಪ್ರೋಕ್ತೋ ಜನ್ಮಮಾಸೋ ನಿಷೇಧಿತಃ ॥**
**ಭದ್ರಾಯಾಂ ವಿಷ್ಣುಶಯನೇ ಕರ್ಣವೇಧೋ ವಿವರ್ಜಯೇತ್ ।**
**ದಶಮೇ ದ್ವಾದಶೇ ವಾಹ್ನಿ ಷೋಡಶೇ ಕರ್ಣವೇಧನಂ ॥**

**ಜ್ಯೋತಿಃ ಶಾಸ್ತ್ರೋಕ್ತ ಶುಭೇ ದಿನೇ ವಿಷ್ಣುರುದ್ರಬ್ರಹ್ಮಸೂರ್ಯಚಂದ್ರದಿಕ್ಪಾಲ ನಾಸತ್ಯಸರಸ್ವತೀ ಗೋಬ್ರಾಹ್ಮಣ ಗುರುಪೂಜಾಂ ಕೃತ್ವಾ ಅಲಕ್ತಕರಸಾಂಕಿತಂ ಕರ್ಣಂ ಪುಂಸಃ ಪೂರ್ವಂ ದಕ್ಷಿಣಂ ವಿಧ್ಯೇತ್ ಪಶ್ಚಾದ್ವಾಮಂ ॥**

**ಸ್ತ್ರೀಣಾಂ ಪೂರ್ವಂ ವಾಮಂ ॥**
**ಸೌವರ್ಣೀ ರಾಜಪುತ್ರಸ್ಯ ರಾಜತೀ ವಿಪ್ರವೈಶ್ಯಯೋಃ ।**
**ಶೂದ್ರಸ್ಯ ಚಾಯಸೀ ಸೂಚೀ ಬಾಲಕಾಷ್ಟಾಂಗುಲಾ ಮತಾ ॥**
**ಕರ್ಣರಂಧ್ರೇ ರವೇಶ್ಛಾಯಾ ಪ್ರವಿಶೇದ್ವರ್ಧಯೇತ್ತಥಾ ।**
**ಅನ್ಯಥಾ ದರ್ಶನೇ ತಸ್ಯ ಪೂರ್ವಪುಣ್ಯವಿನಾಶನಂ ॥**

**ಕಿವಿಚುಚ್ಚುವುದು:-** ಸುಶ್ರುತ ಸೂತ್ರದಲ್ಲಿ "ಮಗುವಿನ ರಕ್ಷಣೆ ಹಾಗೂ ಭೂಷಣವನ್ನು ತೊಡುವುದಕ್ಕಾಗಿ ಕಿವಿಗಳನ್ನು ಚುಚ್ಚಬೇಕು" ಎಂದು ಹೇಳಲಾಗಿದೆ. ಜ್ಯೋತಿರ್ನಿಬಂಧದಲ್ಲಿ-ಪುಷ್ಟಿ, ಆಯುಸ್ಸು ಮತ್ತು ಸಂಪತ್ತು ವೃದ್ಧಿಯಾಗುವುದಕ್ಕೋಸ್ಕರ ಆರನೆಯ, ಏಳನೆಯ ಅಥವಾ ಎಂಟನೆಯ ತಿಂಗಳಲ್ಲಿ ಇಲ್ಲವೇ ವರ್ಷ ಕಳೆದಾಗ ಶುಭವಾರದಲ್ಲಿ ತೃತೀಯಾ, ಅಷ್ಟಮೀ, ತ್ರಯೋದಶೀ, ಪಂಚಮೀ, ದಶಮೀ, ಪೂರ್ಣಿಮಾ ಮುಂತಾದ ತಿಥಿಗಳಲ್ಲಿ, ಪುನರ್ವಸು, ಧನಿಷ್ಠಾ, ಮೃಗಶಿರಾ, ಪುಷ್ಯಾ, ಅಶ್ವಿನೀ, ಹಸ್ತಾ, ಶ್ರವಣಾ, ಉತ್ತರಾ ಈ ನಕ್ಷತ್ರಗಳಲ್ಲಿ ಶುಕ್ಲಪಕ್ಷದಲ್ಲಿ ಕಿವಿಚುಚ್ಚುವ ಸಂಸ್ಕಾರವನ್ನು ಮಾಡಬೇಕು. ಜನ್ಮಮಾಸ, ಭದ್ರಾ, ಚಾತುರ್ಮಾಸ ಇವುಗಳನ್ನು ವರ್ಜಿಸಬೇಕು. ಜನ್ಮದಿನದಿಂದ ಹತ್ತನೆಯ, ಹನ್ನೆರಡನೆಯ ಅಥವಾ ಹದಿನಾರನೆಯ ದಿನ ಕರ್ಣವೇಧವನ್ನು ಮಾಡುವುದು ಒಳ್ಳೆಯದು. ಜ್ಯೋತಿಃಶಾಸ್ತ್ರದಲ್ಲಿ ಹೇಳಿದ ಒಳ್ಳೆಯ ದಿನ ವಿಷ್ಣು, ರುದ್ರ, ಬ್ರಹ್ಮಾ, ಸೂರ್ಯ, ಚಂದ್ರ, ದಿಕ್ಪಾಲ, ಅಶ್ವಿನೀದೇವತೆಗಳು, ಸರಸ್ವತಿ, ಗೋವು, ಬ್ರಾಹ್ಮಣ, ಗುರು ಮುಂತಾದವರನ್ನು ಪೂಜಿಸಿ, ಚುಚ್ಚುವ ಸ್ಥಾನವನ್ನು ಅರಗಿನ ರಸದಿಂದ ಗುರುತಿಸಿ ಗಂಡು ಮಗುವಿನ ಬಲಕಿವಿಯನ್ನೂ, ಹೆಣ್ಣುಮಗುವಿನ ಎಡಕಿವಿಯನ್ನೂ ಮೊದಲು ಚುಚ್ಚಬೇಕು. ಕ್ಷತ್ರಿಯರಿಗೆ ಚಿನ್ನ, ಬ್ರಾಹ್ಮಣ, ವೈಶ್ಯರಿಗೆ ಬೆಳ್ಳಿ, ಶೂದ್ರರಿಗೆ ಕಬ್ಬಿಣದ ಸೂಜಿಯನ್ನು ಉಪಯೋಗಿಸಬೇಕು. ಕರ್ಣರಂಧ್ರವು ಸೂರ್ಯಕಿರಣವು ಹಾದುಹೋಗುವಷ್ಟಿರಬೇಕು.

## ॥ ಅನ್ನಪ್ರಾಶನಸಂಸ್ಕಾರನಿರ್ಣಯಃ ॥

**ಆಶ್ವಲಾಯನಗೃಹ್ಯಸೂತ್ರೇ ಅ. ೧. ಖಂ. ೧೬. ಸೂ. ೧-೪-೫:- ಷಷ್ಠೇ ಮಾಸ್ಯನ್ನಪ್ರಾಶನಂ ॥ ಘೃತೌದನಂ ತೇಜಸ್ಕಾಮಃ ॥ ದಧಿಮಧುಘೃತಮಿಶ್ರಿತಮನ್ನಂ**

**ಪ್ರಾಶಯೇತ್ ॥ ಸುಶ್ರುತೇ ಶಾರೀರಸ್ಥಾನೇ ಅ. ೧೧. ಸೂ ೬೪. ಷಣ್ಮಾಸಂಚೈನಮನ್ನಂ ಪ್ರಾಶಯೇತ್ ಲಘು ಹಿತಂ ಚ ॥ ನಿತ್ಯಮವರೋಧತಾಸ್ಯಾತ್ಕೃತರಕ್ಷ ಉಪಸರ್ಗಭಯಾತ್ ॥ ಪ್ರಯತ್ನತಶ್ಚ ಗ್ರಹೋಪಸರ್ಗೇಭ್ಯೋ ರಕ್ಷ್ಯಾ ಬಾಲಾ ಭವಂತಿ ॥ ಷಷ್ಠೇ ಅಷ್ಟಮೇ ದಶಮೇ ದ್ವಾದಶೇ ವಾ ಮಾಸೇ ಪೂರ್ಣೇ ವತ್ಸರೇ ವಾ ಪುಂಸೋಽನ್ನಪ್ರಾಶನಂ ಪಂಚಮ ಸಪ್ತಮ ನವಮ ಮಾಸೇಷು ಸ್ತ್ರೀಣಾಂ ॥ ದ್ವಿತೀಯಾ ಚ ತೃತೀಯಾ ಚ ಪಂಚಮೀ ಸಪ್ತಮೀ ತಥಾ ॥ ತ್ರಯೋದಶೀ ಚ ದಶಮೀ ಪ್ರಾಶನೇ ತಿಥಯಃ ಶುಭಾಃ ॥ ಬುಧಶುಕ್ರಗುರುವಾಸರಾಃ ಶುಭಾಃ ॥ ರವಿಚಂದ್ರವಾರೌ ಕ್ವಚಿತ್ ॥ ಅಶ್ವಿನೀರೋಹಿಣೀಮೃಗಪುನರ್ವಸು ಪುಷ್ಯೋತ್ತರಾತ್ರಯಹಸ್ತಚಿತ್ರಾಸ್ವಾತ್ಯನುರಾಧಾಶ್ರವಣಧನಿಷ್ಠಾ ಶತತಾರಕಾ ರೇವತ್ಯಃ ಶುಭಾಃ ॥ ಜನ್ಮನಕ್ಷತ್ರಂ ಶುಭಮಿತಿ ಕೇಚಿತ್ ॥ ಭದ್ರಾವೈಧೃತಿವ್ಯತೀಪಾತಗಂಡವಜ್ರಶೂಲಪರಿಘಾಃ ವರ್ಜ್ಯಾಃ ॥**

**ಅನ್ನಪ್ರಾಶನಸಂಸ್ಕಾರನಿರ್ಣಯಃ**:- ಆರನೆಯ ತಿಂಗಳಲ್ಲಿ ಅನ್ನಪ್ರಾಶನ ಮಾಡಬೇಕು. ಚೆನ್ನಾಗಿ ಪುಷ್ಟಿಯಾಗಿ ಬೆಳೆದ ಮಗುವಿಗೆ ಆರನೆಯ ತಿಂಗಳಲ್ಲಿ ಅನ್ನವು ಜೀರ್ಣವಾಗುವಷ್ಟು ಪಚನಶಕ್ತಿ ಬರುತ್ತದೆ. ಮಗುವು ದುರ್ಬಲವಾಗಿದ್ದರೆ ಎಂಟು ಅಥವಾ ಒಂಭತ್ತನೆಯ ತಿಂಗಳಲ್ಲಿ ಅನ್ನಪ್ರಾಶನ ಮಾಡಬಹುದು.

ಆರನೆಯ, ಎಂಟನೆಯ, ಹತ್ತನೆಯ ಹನ್ನೆರಡನೆಯ ತಿಂಗಳಲ್ಲಿ ಅಥವಾ ಒಂದು ವರ್ಷ ಪೂರ್ಣವಾದ ಮೇಲೆ ಗಂಡುಮಗುವಿಗೂ, ಏಳನೆಯ ಒಂಭತ್ತನೆಯ ತಿಂಗಳಲ್ಲಿ ಹೆಣ್ಣು ಮಗುವಿಗೂ ಅನ್ನಪ್ರಾಶನ ಮಾಡಬಹುದು. ಬಿದಿಗೆ, ತದಿಗೆ ಪಂಚಮೀ, ಸಪ್ತಮೀ, ದಶಮೀ, ತ್ರಯೋದಶೀ, ತಿಥಿಗಳೂ, ಬುಧ, ಗುರು, ಶುಕ್ರವಾರಗಳೂ ಅನ್ನಪ್ರಾಶನಕ್ಕೆ ಶುಭವಾಗಿವೆ. ರವಿ-ಸೋಮವಾರಗಳೂ ಆಗಬಹುದೆಂದು ಕೆಲವರ ಅಭಿಪ್ರಾಯವಿದೆ. ಅಶ್ವಿನೀ, ರೋಹಿಣೀ ಮೃಗಶಿರಾ, ಪುನರ್ವಸು, ಪುಷ್ಯ ಮೂರು ಉತ್ತರಾ ನಕ್ಷತ್ರಗಳು, ಹಸ್ತಾ, ಚಿತ್ರಾ, ಸ್ವಾತಿ, ಅನುರಾಧಾ, ಶ್ರವಣಾ, ಧನಿಷ್ಠಾ, ಶತಭಿಷಾ ಮತ್ತು ರೇವತೀ ನಕ್ಷತ್ರಗಳೂ ಶುಭ, ಜನ್ಮನಕ್ಷತ್ರವೂ ಒಳ್ಳೆಯದೆಂದು ಕೆಲವರು ಹೇಳುತ್ತಾರೆ. ಭದ್ರಾ, ವೈಧೃತೀ, ವ್ಯತೀಪಾತ, ಗಂಡ, ಅತಿಗಂಡ, ವಜ್ರ, ಶೂಲ, ಪರಿಘ ಈ ಯೋಗಗಳನ್ನು ಬಿಡಬೇಕು.

## ॥ ಅಕ್ಷರಾರಂಭನಿರ್ಣಯಃ ॥

**ಪಂಚಮೇ ವರ್ಷೇ ಅಕ್ಷರಲೇಖನಾರಂಭ ಉತ್ತರಾಯಣೇ ಕಾರ್ಯಃ ॥ ಅತ್ರ ಕುಂಭಸ್ಥಃ ಸೂರ್ಯೋ ವರ್ಜ್ಯಃ ॥ ಶುಕ್ಲಪಕ್ಷಃ ಶುಭಃ ಪ್ರೋಕ್ತಃ ಕೃಷ್ಣೇಶ್ಚಾಂತ್ಯತ್ರಿಕಂ ವಿನಾ ॥ ದ್ವಿತೀಯಾ ತೃತೀಯಾ ಪಂಚಮೀದಶಮ್ಯೇಕಾದಶೀ-ದ್ವಾದಶೀತ್ರಯೋದಶ್ಯಃ ಶ್ರೇಷ್ಠಾಃ ॥ ಅಶ್ವಿನೀಮೃಗಾರ್ದ್ರಾಪುನರ್ವಸುಪುಷ್ಯಹಸ್ತ-**

**ಚಿತ್ರಾಸ್ವಾತ್ಯನುರಾಧಾ ಶ್ರವಣಧನಿಷ್ಠಾಶತತಾರಕಾರೇವತ್ಯೋ ಭೌಮಶನಿಭಿನ್ನವಾರಾಶ್ಚ ಶುಭಾಃ ॥**

**ಅಕ್ಷರಾರಂಭಕಾಲನಿರ್ಣಯಃ-** ಐದನೆಯ ವರ್ಷವಲ್ಲಿ, ಉತ್ತರಾಯಣವಲ್ಲಿ ಅಕ್ಷರಲೇಖನಾರಂಭ ಮಾಡಬೇಕು. ಕುಂಭರಾಶಿಯಲ್ಲಿ ಸೂರ್ಯನಿರುವ ಕಾಲವನ್ನು ವರ್ಜಿಸಬೇಕು. ಶುಕ್ಲಪಕ್ಷ ಒಳ್ಳೆಯದು. ಕೃಷ್ಣಪಕ್ಷದ ಕೊನೆಯ ಮೂರು ತಿಥಿಗಳನ್ನು ಸಂಪೂರ್ಣ ಬಿಡಬೇಕು. ಬಿದಿಗೆ, ತದಿಗೆ, ಪಂಚಮೀ, ದಶಮೀ, ಏಕಾದಶೀ, ದ್ವಾದಶೀ, ತ್ರಯೋದಶೀ ತಿಥಿಗಳೂ, ಅಶ್ವಿನೀ, ಮೃಗಶಿರಾ, ಆರ್ದ್ರಾ, ಪುನರ್ವಸು, ಪುಷ್ಯ, ಹಸ್ತಾ, ಚಿತ್ರಾ, ಸ್ವಾತಿ, ಅನುರಾಧಾ, ಶ್ರವಣಾ, ಧನಿಷ್ಠಾ, ಶತಭಿಷಾ, ರೇವತೀ ನಕ್ಷತ್ರಗಳೂ, ಕುಜ ಮತ್ತು ಶನಿ ಈ ಎರಡು ವಾರಗಳನ್ನು ಬಿಟ್ಟು ಉಳಿದ ಎಲ್ಲ ವಾರಗಳೂ ಅಕ್ಷರಲೇಖನಾರಂಭಕ್ಕೆ ಉತ್ತಮವಾಗಿವೆ.

## ॥ ಚೌಲಸಂಸ್ಕಾರನಿರ್ಣಯಃ ॥

**ಜನ್ಮತೋ ಗರ್ಭತೋವಾಬ್ದೇ ಪ್ರಥಮೇಥ ದ್ವಿತೀಯಕೇ ।**
**ತೃತೀಯೇ ಪಂಚಮೇ ವಾಪಿ ಚೌಲಕರ್ಮಪ್ರಶಸ್ಯತೇ ॥**
**ಯದ್ವಾ ಸಹೋಪನೀತ್ಯಾತ್ರ ಕುಲಾಚಾರಾದ್ವ್ಯವಸ್ಥಿತಿಃ ॥**

**ಉದಗಯನೇ ಶುಕ್ಲಪಕ್ಷೇ ಗುರುಶುಕ್ರಯೋರ್ಬಾಲ್ಯವಾರ್ಧಕಾಸ್ತಮಯಾಭಾವೇ ಅಕ್ಷಯೇ ಅನಧಿಕೇ ಚ ಮಾಸಿ ಜ್ಯೋತಿಃಶಾಸ್ತ್ರೋಕ್ತಪ್ರಶಸ್ತತಿಥಿವಾರಲಗ್ನೇಷು ಶುಭೇ ಮುಹೂರ್ತೇ ದಿವೈವ ನ ತು ರಾತ್ರೌ ಕಾರ್ಯಂ ॥ ಇದಂ ಕರ್ಮ ಲೌಕಿಕಾಗ್ನೌ-ತಸ್ಯ ಸಭ್ಯ ಇತಿ ನಾಮ ॥ ಯದಿ ಗರ್ಭಾಧಾನಾದಿಸಂಸ್ಕಾರಲೋಪಃ ತದಾ ಪ್ರಾಯಶ್ಚಿತ್ತಂ ಕೃತ್ವಾ ಕಾಲಾತ್ಯಯನಿಮಿತ್ತಂ ಪ್ರಾಯಶ್ಚಿತ್ತಹೋಮಂ ಚ ಕೃತ್ವಾ ಚೌಲಹೋಮಃ ಕಾರ್ಯಃ ॥ ತದಾಹ ಭಗವಾನ್ ॥**
**ಆರಭ್ಯಾಧಾನಮಾಚೌಲಾತ್ಕಾಲೇತೀತೇ ತು ಕರ್ಮಣಾಂ ।**
**ವ್ಯಾಹೃತ್ಯಾಜ್ಯಂ ಸುಸಂಸ್ಕೃತ್ಯ ಹುತ್ವಾ ಕರ್ಮ ಯಥಾಕ್ರಮಂ ॥ ಕಾರ್ಯಮಿತಿ ಶೇಷಃ ॥**

**ಜಾತಕರ್ಮಾದಿ ಸಂಸ್ಕಾರಾಃ ಸ್ವಕಾಲೇ ನ ಭವಂತಿ ಚೇತ್ ।**
**ಚೌಲಾದರ್ವಾಕ್ ಪ್ರಕುರ್ವೀತ ಪ್ರಾಯಶ್ಚಿತ್ತಾದನಂತರಂ ॥**
**ಶಿಶೋರ್ಮಾತರಿ ಗರ್ಭಿಣ್ಯಾಂ ಚೂಡಾಕರ್ಮ ನ ಕಾರಯೇತ್ ॥**
**ಪಂಚಮಾಬ್ದಾತ್ ಪ್ರಾಗೂರ್ಧ್ವಂತು ಗರ್ಭಿಣ್ಯಾಮಪಿ ಕಾರಯೇತ್ ॥**
**ಸಹೋಪನೀತ್ಯಾ ಕುರ್ಯಾಚ್ಚೇತ್ ತದಾ ದೋಷೋ ನ ವಿದ್ಯತೇ ॥ ಮನುಃ ॥**

**ಅತ್ರ ಶಿಖಾನಿರ್ಣಯಃ । ಮಧ್ಯೇ ಮುಖ್ಯಾ ಏಕಾ ಶಿಖಾ ಅನ್ಯಾಶ್ಚ ಪಾರ್ಶ್ವಾದಿಭಾಗೇಷ್ವಿತಿ ಯಥಾ ಕುಲಾಚಾರಂ ಪ್ರವರಸಂಖ್ಯಯಾ ಶಿಖಾಶ್ಚೂಡಾ-**

**ಸಮಯೇ ಕಾರ್ಯಾಃ ॥ ಉಪನಯನಕಾಲೇ ಮಧ್ಯಶಿಖೇತರಶಿಖಾನಾಂ ವಪನಂ ಕೃತ್ವಾ ಮಧ್ಯಭಾಗೇ ಏವ ಉಪಯನಯನೋತ್ತರಂ ಶಿಖಾ ಧಾರ್ಯಾ ॥**

**ಚೌಲಸಂಸ್ಕಾರನಿರ್ಣಯ:-** ಜನ್ಮದಿಂದ ಅಥವಾ ಗರ್ಭದಿಂದ ಮೊದಲನೆಯ, ಎರಡನೆಯ, ಮೂರನೆಯ ಅಥವಾ ಐದನೆಯ ವರ್ಷದಲ್ಲಿ ಚೌಲಸಂಸ್ಕಾರ ಮಾಡಬೇಕು. ಉಪನಯನ ಕಾಲದಲ್ಲಿ ಜತೆಯಾಗಿಯೂ ಮಾಡಬಹುದು. ಉತ್ತರಾಯಣದಲ್ಲಿ, ಶುಕ್ಲಪಕ್ಷದಲ್ಲಿ ಗುರುಶುಕ್ರರಿಗೆ ಬಾಲ್ಯ ವೃದ್ಧಾಪ್ಯ ಅಸ್ತ ಇಲ್ಲದಿರುವಾಗ, ಕ್ಷಯಮಾಸ ಅಧಿಕಮಾಸಗಳನ್ನು ಬಿಟ್ಟು ಜ್ಯೋತಿಃಶಾಸ್ತ್ರದಲ್ಲಿ ಹೇಳಿದ ಶುಭಮುಹೂರ್ತದಲ್ಲಿ ಹಗಲು ಚೌಲಕರ್ಮವನ್ನು ಮಾಡಬೇಕು. ರಾತ್ರಿಯಲ್ಲಿ ಮಾಡಬಾರದು. "ಸಭ್ಯ" ಹೆಸರಿನ ಅಗ್ನಿಯನ್ನು ಪ್ರತಿಷ್ಠಾಪಿಸಬೇಕು. ಗರ್ಭಾಧಾನಾದಿ ಪೂರ್ವಸಂಸ್ಕಾರಗಳು ಲೋಪವಾಗಿದ್ದರೆ ಪ್ರಾಯಶ್ಚಿತ್ತ ಹೋಮಾದಿಗಳನ್ನು ಮಾಡಬೇಕು. ಸಂಸ್ಕಾರ್ಯನ ವಯಸ್ಸು ಐದು ವರ್ಷಗಳಿಗಿಂತ ಕಡಿಮೆಯಾಗಿದ್ದರೆ ತಾಯಿಯು ಗರ್ಭಿಣಿಯಾಗಿದ್ದಾಗ ಈ ಸಂಸ್ಕಾರ ಮಾಡಬಾರದು. ಐದು ವರ್ಷ ಕಳೆದಿದ್ದರೆ, ತಾಯಿಯು ಗರ್ಭಿಣಿಯಾಗಿದ್ದರೂ ಚೌಲವನ್ನು ಮಾಡಬಹುದು.

**ಶಿಖೆಯನ್ನು ಇಡುವ ಕ್ರಮ:-** ಚೌಲ ಮಾಡುವಾಗ ತಲೆಯ ಮಧ್ಯಭಾಗದಲ್ಲಿ ಒಂದು ಚಂಡಿಕೆಯನ್ನಿಟ್ಟು, ಅದರ ಪಾರ್ಶ್ವಗಳಲ್ಲಿ ಕುಲಾಚಾರವನ್ನು ಹೊಂದಿಕೊಂಡು, ಪ್ರವರಸಂಖ್ಯೆಯಲ್ಲಿ ಅಂದರೆ ೩ ಪ್ರವರಗಳಾದರೆ, ೩. ೫ ಪ್ರವರಗಳಾದರೆ ೫ ಶಿಖೆಗಳನ್ನಿಡಬೇಕು. ಉಪನಯನ ಕಾಲದಲ್ಲಿ ಮಧ್ಯದ ಒಂದು ಶಿಖೆಯನ್ನು ಮಾತ್ರ ಉಳಿಸಿ ಉಳಿದವುಗಳನ್ನು ತೆಗೆಯಬೇಕು.

## ॥ ಉಪನಯನಸಂಸ್ಕಾರವಿಚಾರಃ ನಿರ್ಣಯಶ್ಚ ॥

**ಉಪನಯನಂ ನಾಮ ಆಚಾರ್ಯಸಮೀಪನಯನಾಂಗಕೋ ಗಾಯತ್ರ್ಯು-ಪದೇಶ ಪ್ರಧಾನಕಃ ಕರ್ಮವಿಶೇಷಃ ಉಪನಯನಪದಸ್ಯ ಯೋಗರೂಢತ್ವಾತ್ ॥**

**ಕುಮಾರಸ್ಯೋಪನಯನಂ ಶ್ರುತಾಭಿಜನವೃತ್ತವಾನ್ ।**
**ತಪಸಾಧೂತ ನಿಃಶೇಷ ಪಾಪ್ಮಾ ಕುರ್ಯಾದ್ದ್ವಿಜೋತ್ತಮಃ ॥ ಶೌನಕಃ ॥**
**ಯಾವತ್ ಪ್ರಭೃತಿ ವಾಮಾಂಸೇ ಬ್ರಹ್ಮಸೂತ್ರಂ ದ್ವಿಜಸ್ಯ ತತ್ ।**
**ಗುರುಃ ಪ್ರತಿಷ್ಠಾಪಯತಿ ಕಾಲೇ ಪ್ರಭೃತಿ ಸಂಯತಃ ॥**
**ತಾವತ್ ಪ್ರಭೃತಿ ತಸ್ಯೈವ ಪಿತಾಚಾರ್ಯಃ ಸ ಉಚ್ಯತೇ ॥**
**ಮಾತಾ ಚ ತಸ್ಯ ಸಾವಿತ್ರೀ ದ್ವಿತೀಯಂ ಜನ್ಮಚೋಚ್ಯತೇ ॥ ಸ್ಮೃತಿಸಾರೇ ॥**
**ಕಾಮಾನ್ಮಾತಾ ಪಿತಾ ಚೈನಂ ಯದುತ್ಪಾದಯತೋ ಮಿಥಃ ।**
**ಸಂಭೂತಿಂ ತಸ್ಯ ತಾಂ ವಿದ್ಯಾದ್ಯದ್ಯೋನಾವಭಿಜಾಯತೇ ॥**

ಆಚಾರ್ಯಸ್ತ್ವಸ್ಯ ಯಾಂ ಜಾತಿಂ ವಿಧಿವದ್ವೇದ ಪಾರಗಃ ।
ಉತ್ಪಾದಯತಿ ಸಾವಿತ್ರ್ಯಾ ಸಾ ಸತ್ಯಾ ಸಾಜರಾಮರಾ ॥ ಮನುಃ ॥

ಉಪನಯನಸಂಸ್ಕಾರಲೋಪೇ ಪ್ರಾಯಶ್ಚಿತ್ತಂ ॥ ಆಪಸ್ತಂಬಧರ್ಮ-ಸೂತ್ರೇ-ಅಥ ಯಸ್ಯ ಪಿತಾ ಪಿತಾಮಹ ಇತ್ಯನುಪನೇತೌ ಸ್ಯಾತಾಂ ತೇ ಬ್ರಹ್ಮಹಸಂಸ್ತುತಾಃ ॥ ತೇಷಾಮಭ್ಯಾಗಮನಂ ಭೋಜನಂ ವಿವಾಹವಿಧಿಂ ವರ್ಜ-ಯೇತ್ ॥ ಅತಿಕ್ರಾಂತೇ ಸಾವಿತ್ರ್ಯಾಃ ಕಾಲೇ ಕ್ರತುಂ ತ್ರೈವಿದ್ಯಕಂ ಬ್ರಹ್ಮಚರ್ಯಂ ಚರೇತ್ತತಃ ಉಪನಯನಮಥೋದಕಸ್ಪರ್ಶನಮಥಾಧ್ಯಾಪಃ ॥ ತೇಷಾಮಿಚ್ಛತಾಂ ಪ್ರಾಯಶ್ಚಿತ್ತಂ ಯಥಾ ಪ್ರಥಮೇತಿಕ್ರಮೇ ಋತುರೇವ ಸಂವತ್ಸರಂ ಪ್ರತಿಪುರುಷಂ ಸಂಖ್ಯಾಯ ಸಂವತ್ಸರಾನ್ಯಾವಂತೋ ಅನುಪನೀತಾ ಸ್ಯುಃ ॥

ಅನುಕ್ತನಿಷ್ಕೃತೀನಾಂ ತು ಪಾಪಾನಾಮಪನುತ್ತಮೇ ।
ಶಕ್ತಿಂ ಚಾವೇಕ್ಷ್ಯ ಪಾಪಂ ಚ ಪ್ರಾಯಶ್ಚಿತ್ತಂ ಪ್ರಕಲ್ಪಯೇತ್ ॥ ಮನುಃ ॥
ದೇಶಂ ಕಾಲಂ ವಯಃ ಶಕ್ತಿಂ ಪಾತ್ರಂ ಚಾವೇಕ್ಷ್ಯ ಯತ್ನತಃ ।
ಪ್ರಾಯಶ್ಚಿತ್ತಂ ಪ್ರಕಲ್ಪ್ಯಂ ಸ್ಯಾದ್ಯತ್ರ ಚೋಕ್ತಾ ನ ನಿಷ್ಕೃತಿಃ ॥ ಯಾಜ್ಞವಲ್ಕ್ಯಃ ॥
ಅನಾಮ್ನಾತೇಷು ಧರ್ಮೇಷು ಕಥಂ ಸ್ಯಾದಿತಿ ಚೇದ್ಭವೇತ್ ।
ಯಂ ಶಿಷ್ಟಾ ಬ್ರಾಹ್ಮಣಾ ಬ್ರೂಯುಃ ಸ ಧರ್ಮಃ ಸ್ಯಾದಶಂಕಿತಃ ॥

ಉಪನಯನಕಾಲಃ- ತತ್ರೇದಂ ಗೃಹ್ಯಂ, ಅಷ್ಟಮೇ ವರ್ಷೇ ಬ್ರಾಹ್ಮಣಮುಪ ನಯೇತ್ ಗರ್ಭಾಷ್ಟಮೇ ವೇತಿ ॥ ತಥಾ ಚ ಮನುಃ ॥
ಗರ್ಭಾಷ್ಟಮೇಬ್ದೇ ಕುರ್ವೀತ ಬ್ರಾಹ್ಮಣಸ್ಯೋಪನಾಯನಂ ।
ಗರ್ಭಾದೇಕಾದಶೇ ರಾಜ್ಞೋ ಗರ್ಭಾಚ್ಚ ದ್ವಾದಶೇ ವಿಶಃ ॥

ಆಷೋಡಶಾದ್ವರ್ಷಾತ್ ಬ್ರಾಹ್ಮಣಸ್ಯ ಅನತೀತಃ ಕಾಲೋ ಭವತ್ಯಾ-ವಿಂಶಾತ್ ಕ್ಷತ್ರಿಯಸ್ಯ ಚತುರ್ವಿಂಶಾದ್ವೈಶ್ಯಸ್ಯ ॥ ಅತ ಊರ್ಧ್ವಂ ಪತಿತಸಾವಿತ್ರಿಕಾ ಭವಂತಿ ॥ ನೈನಾನುಪನಯೇಯುರ್ನಾಧ್ಯಾಪಯೇಯುರ್ನಯಾಜಯೇಯುರ್ನೈಭಿ ರ್ವಿವಹೇಯುಃ ॥
ಬ್ರಹ್ಮವರ್ಚಸಕಾಮಸ್ಯ ಕಾರ್ಯಂ ವಿಪ್ರಸ್ಯ ಪಂಚಮೇ ।
ಷಷ್ಠೇ ತು ಧನಕಾಮಸ್ಯ ವಿದ್ಯಾಕಾಮಸ್ಯ ಸಪ್ತಮೇ ॥
ಅಷ್ಟಮೇ ಸರ್ವಕಾಮಸ್ಯ ನವಮೇ ಕಾಂತಿಮಿಚ್ಛತಃ ।

ವಸಂತೇ ಬ್ರಾಹ್ಮಣಮುಪನಯೀತ ಮಾಘಾದಿ ಜ್ಯೇಷ್ಠಾಂತಕ ಪಂಚಮಾಸಾಃ ಸಾಧಾರಣಾ ವಾ ಸಕಲದ್ವಿಜಾನಾಮಿತಿ ಗರ್ಗೋಕ್ತೇಃ ವಸಂತಾಲಾಭೇ ಶಿಶಿರಗ್ರೀಷ್ಮಾ-ವಪಿ ಗ್ರಾಹ್ಯೌ ॥

ತತ್ರಾಧಿಕಾರಿಣ! ಪ್ರಯೋಗರತ್ನೇ:-

ಪಿತೈವೋಪನಯೇತ್ಪುತ್ರಂ ತದಭಾವೇ ಪಿತುಃ ಪಿತಾ ।
ತದಭಾವೇ ಪಿತುರ್ಭ್ರಾತಾ ತದಭಾವೇ ತು ಸೋದರಃ ॥
ಪಿತಾ ಪಿತಾಮಹೋ ಭ್ರಾತಾ ಜ್ಞಾತಯೋ ಗೋತ್ರಜಾಗ್ರಜಾಃ ।
ಉಪಾಯನೇಧಿಕಾರೀ ಸ್ಯಾತ್ಪೂರ್ವಾಭಾವೇ ಪರಃ ಪರಃ ॥

ಉಪನಯನಕರ್ತಾರಃ ಕುಮಾರಾತ್ ವಯೋಜ್ಯೇಷ್ಠಾ ವಿವಕ್ಷಿತಾಃ । ಕನಿಷ್ಠ ಕರ್ತೃಕೋಪನಯನಸ್ಯ ನಿಷೇಧಾತ್ ॥

ಉಪನಯನೇಷ್ಟ ಬೃಹಸ್ಪತಿಬಲಂ:-

ದ್ವಿಪಂಚಸಪ್ತಮದೇಶಸ್ಥಿತೋ ಜೀವಃ ಶುಭಪ್ರದಃ ।
ವ್ರತಬಂಧೇಷು ಪುತ್ರಸ್ಯ ಕನ್ಯಾಯಾಶ್ಚ ಕರಗ್ರಹೇ ॥
ಜನ್ಮತ್ರಿದಶಮಾರಿಸ್ಥಃ ಪೂಜಯಾ ಶುಭದೋ ಗುರುಃ ।
ಚತುರ್ಥೋಽಹ್ಯಷ್ಟಮಸ್ಥಶ್ಚ ದ್ವಾದಶಸ್ಥೋ ಮೃತಿಪ್ರದಃ ॥
ಗರ್ಭಾಷ್ಟಮೇಽಷ್ಟಮೇವಾಬ್ದೇ ಯಸ್ಯ ನಾಸ್ತಿಗುರೋರ್ಬಲಂ ।
ತಸ್ಯೋಪನಯನಂ ಕಾರ್ಯಂ ಚೈತ್ರೇ ಮೀನಗತೇ ರವೌ ॥
ನ ವಿಚಾರ್ಯಂ ಬಲಂ ತತ್ರ ದಶವರ್ಷಾಧಿಕೋ ಯದಿ ॥

ಸಂಭವೇ ವಟೋಃ ಪಿತುರಪಿ ಜೀವಬಲಂ ವಿಲೋಕ್ಯಂ ॥ ಏವಮು-ಭಯೋಶ್ಚಂದ್ರಬಲಮಪಿ ಆವಶ್ಯಕಂ ॥ ಪಿತುಶ್ಚಂದ್ರಬಲಾಭಾವೇ ವಟೋರೇವ ಕೇವಲಂ ॥

ಜನ್ಮನಾ ಬ್ರಾಹ್ಮಣೋ ಜ್ಞೇಯಃ ಸಂಸ್ಕಾರೈರ್ದ್ವಿಜ ಉಚ್ಯತೇ ॥
ವಿದ್ವತ್ವಾಚ್ಚಾಪಿ ವಿಪ್ರತ್ವಂ ತ್ರಿಭಿಃ ಶ್ರೋತ್ರಿಯ ಉಚ್ಯತೇ ।
ಕೃಚ್ಛ್ರತ್ರಯಂ ಚೋಪನೇತಾ ತ್ರೀನ್ ಕೃಚ್ಛ್ರಾಂಶ್ಚ ವಟುಶ್ಚರೇತ್ ॥

ಗಾಯತ್ರ್ಯಾ ದ್ವಾದಶಾಧಿಕ ಸಹಸ್ರ ಜಪಶ್ಚೋಪನಯನೇ ಅಧಿಕಾರಸಿದ್ಧ್ಯರ್ಥಂ ಕಾರ್ಯಃ ॥ ಕೇಚಿತ್ ದ್ವಾದಶಸಾಹಸ್ರೀಂ ಜಪಂತಿ ॥

ಉಪನಯನೇ ವೇದಿವಿಚಾರ:-

ವಿವಾಹೋಪನಯನೇ ಯಜ್ಞೇ ವೇದಿಂ ಕುರ್ಯಾತ್ಪ್ರಯತ್ನತಃ ।
ವೇದಿಂ ವಿನಾ ಯದಾ ಹೋಮಃ ಕರ್ಮಭ್ರಷ್ಟೋಽಭಿಜಾಯತೇ ॥

ಇತಿ ವಚನಾತ್ ಉಪನಯನೇ ವೇದಿಃ ಕಾರ್ಯಾ ॥ ತಲ್ಲಕ್ಷಣಂ ॥

ಆಚಾರ್ಯಸ್ಯ ಪದೈಃ ಷಡ್ಭಿಃ ಚತುರ್ಭಿರಥವಾ ಕರೈಃ ।
ವಿಸ್ತೃತಾ ಚತುರಸ್ರಾ ಚ ವಟೋರ್ವೇದಿಃ ಕರೋನ್ನತಾ ।
ವಾಮೇ ಗೃಹಸ್ಯ ವೇದಿಃ ಸ್ಯಾತ್ ವಿವಾಹೇಚೋಪನಾಯನೇ ॥
ಅನ್ಯತ್ರ ಚ ॥

**ಪ್ರಾಕ್ಪಶ್ಚಿಮಾಯಾಂ ಪದಷಟ್ಕಯುಕ್ತಾ ಉದೀಚಿಯಾಮ್ಯಾಂ ಚ**
**ಪದಾನಿ ಪಂಚ ।**
**ಏವಂ ವಿಧಾ ಜ್ಯೋತಿಷರತ್ನನಿರ್ಮಿತಾ ವಟುಃ**
**ಶತಾಯುರ್ಭವತೀತಿ ವೇದೇ ॥**

**ಯಮಲ ವಿಚಾರಃ– ಜ್ಯೋತಿರ್ನಿಬಂಧೇ.**

**ಏಕಸ್ಮಿನ್ಮಂಡಪೇ ಚೈಕವಾಸರೇ ಮಂಡಪೇ ತಥಾ ।**
**ಕರ್ತವ್ಯಂ ಮಂಗಲಂ ಸ್ವಸ್ರೋರ್ಭ್ರಾತ್ರೋರ್ಯಮಲಜಾತಯೋಃ ॥**

**ಸ್ತ್ರಿಯೋಪನಯನಂ:–**

**ಪುರಾ ಕಲ್ಪೇಷು ನಾರೀಣಾಂ ಮೌಂಜೀಬಂಧನಮಿಷ್ಯತೇ ।**
**ಅಧ್ಯಾಪನಂ ಚ ವೇದಾನಾಂ ಸಾವಿತ್ರೀವಚನಂ ಯಥಾ ॥**

**ಉಪನಯನಸಂಸ್ಕಾರದ ವಿಚಾರ ಮತ್ತು ನಿರ್ಣಯ:–** ಉಪ = ಸಮೀಪಕ್ಕೆ ನಯನ = ಕೊಂಡೊಯ್ಯುವುದು. ತಂದೆ ಅಥವಾ ರಕ್ಷಕನು ವಟುವನ್ನು ಆಚಾರ್ಯನ ಬಳಿಗೆ ಅಧ್ಯಯನಕ್ಕಾಗಿ ಕೊಂಡೊಯ್ದು ಬಿಡುವುದು. ಚೂಡಾಕರ್ಮದ ವರೆಗಿನ ಎಲ್ಲ ಸಂಸ್ಕಾರಗಳನ್ನೂ ಮಗನಿಗೆ-ಮಗಳಿಗೆ, ತಂದೆಯಾದವನೇ ಮಾಡಬೇಕು. ಉಪನಯನ ಸಂಸ್ಕಾರವನ್ನು ಶ್ರೋತ್ರಿಯನಾದ ಆಚಾರ್ಯನು ಮಾಡಬೇಕು. ವೇದಾಧ್ಯಯನಕ್ಕಾಗಿ ವಟುವು ಗುರುಕುಲಕ್ಕೆ ಆಚಾರ್ಯನ ಹತ್ತಿರ ಹೋಗುವ ಪದ್ಧತಿ ಇರುವಷ್ಟು ಕಾಲ ಹೀಗೇ ನಡೆಯುತ್ತಿತ್ತು. ಈಗ ಆ ಪದ್ಧತಿ ಇಲ್ಲದಿರುವುದರಿಂದ ತಂದೆಯಾದವನೇ ಈ ಸಂಸ್ಕಾರವನ್ನು ಮಾಡುತ್ತಾನೆ. ಗಾಯತ್ರಿಯಿಂದಲೇ ವೇದಾಧ್ಯಯನದ ಆರಂಭವಾಗುವುದರಿಂದ ಈ ಸಂಸ್ಕಾರಕ್ಕೆ ಅತ್ಯಂತ ಮಹತ್ತ್ವ ಕೊಡಲಾಗಿದೆ.

ತಂದೆ-ತಾಯಿಗಳಿಂದ ಲಭಿಸುವ ಜನ್ಮದಿಂದ ಕೇವಲ ಮನುಷ್ಯಶರೀರವು ಪ್ರಾಪ್ತವಾಗುತ್ತದೆ. ಉಪನಯನದಿಂದ "ದ್ವಿಜತ್ವವು" ಎರಡನೆಯ ಜನ್ಮವೇ ಲಭಿಸುತ್ತದೆ. ಈ ಜನ್ಮದಲ್ಲಿ ವೇದಾಧ್ಯಯನ ಮಾಡಿಸುವ ಆಚಾರ್ಯನೇ ತಂದೆ, ಗಾಯತ್ರೀಮಾತೆಯೇ ತಾಯಿ. ಈ ನೂತನ ಮಾತಾಪಿತರ ರಕ್ಷಣೆಯಲ್ಲಿ ವಟುವು ತನ್ನ ಪುರೋಭಿವೃದ್ಧಿಯನ್ನು ಸಾಧಿಸಬೇಕು. ತಂದೆ-ತಾಯಿಗಳ ಆಸರೆ ಇಲ್ಲದ ಮಗುವು ಹೇಗೆ ಬದುಕಲಾರದೋ ಅಂತೆಯೇ ಅಧ್ಯಯನ ಮಾಡಿಸುವ ಆಚಾರ್ಯರೂಪೀ ತಂದೆ, ಹಾಗೂ ಗಾಯತ್ರೀ ರೂಪಿಯಾದ ತಾಯಿಯ ಆಶ್ರಯವಿಲ್ಲದೆ ವಟುವು ಆರೋಗ್ಯವಂತನಾಗಿ ಬದುಕಲಾರ. ಆದ್ದರಿಂದ ಸಂಧ್ಯಾವಂದನ ಗಾಯತ್ರೀಜಪ ಇತ್ಯಾದಿಗಳನ್ನು ತಪ್ಪದೆ ಅವಶ್ಯ ಮಾಡಲೇಬೇಕು. ಪ್ರತಿಯೊರ್ವ ವ್ಯಕ್ತಿಯ ಸಮಗ್ರ ಭಾವೀಜೀವನವನ್ನೇ ರೂಪಿಸುವ ಸಂಸ್ಕಾರವು ಇದಾಗಿರುವುದರಿಂದ ಉಪನಯನವು ಅತ್ಯಂತ ಆವಶ್ಯಕವೂ ಅನಿವಾರ್ಯವೂ ಆದ ಸಂಸ್ಕಾರವಾಗಿದೆ.

**ಉಪನಯನಸಂಸ್ಕಾರವಾಗದಿದ್ದರೆ ಪ್ರಾಯಶ್ಚಿತ್ತ:–** ತಂದೆ ಹಾಗೂ ಅಜ್ಜ ಇವರಿಗೆ ಉಪನಯನವಾಗಿರದಿದ್ದರೆ ಅವರನ್ನು ಬ್ರಹ್ಮಘಾತಕಿಗಳೆಂದು ತಿಳಿದು ಅವರ ಸಂಪರ್ಕವನ್ನು ಬಿಡಬೇಕು. ಅವರೊಡನೆ ಭೋಜನ ವಿವಾಹ ಮುಂತಾದ ಸಂಬಂಧಗಳನ್ನಿಡಕೂಡದು.

ಉಪನಯನ ಕಾಲ ಮೀರಿದ್ದರೆ ಒಂದು ಋತುವಿನಷ್ಟು ಕಾಲ ತ್ರೈವಿದ್ಯಕ ಬ್ರಹ್ಮಚರ್ಯವನ್ನು (೧. ಗುರುಶುಶ್ರೂಷೆ, ೨. ಅಗ್ನಿಸೇವೆ, ೩. ಅಧ್ಯಯನ) ಆಚರಿಸಿ ನಂತರ ಉಪನಯನ ಮಾಡಬೇಕು. ಉಪನಯನ ಆಗದೇ ಇರುವರಿಗೆ ಅವರು ಬಯಸಿದರೆ ಪ್ರಾಯಶ್ಚಿತ್ತ ಮಾಡಬೇಕು. ಒಂದು ವರ್ಷ ಕಾಲ ಮೀರಿದ್ದರೆ ಒಂದು ಋತುವಿನ ಪ್ರಾಯಶ್ಚಿತ್ತ. ಅದೇ ರೀತಿ ಒಂದೊಂದು ತಲೆಮಾರಿಗೆ ಒಂದೊಂದು ವರ್ಷದ ಪ್ರಾಯಶ್ಚಿತ್ತ ಮಾಡಬೇಕು. ಮನು ಯಾಜ್ಞವಲ್ಕ್ಯ ಮುಂತಾದವರು ಪ್ರಾಯಶ್ಚಿತ್ತವನ್ನು ವಿಧಿಸುವಾಗಲೂ ಬಹಳ ಸಹಾನುಭೂತಿಯನ್ನು ತೋರಿದ್ದಾರೆ. ಅವರವರ ಯೋಗ್ಯತೆ, ಸಾಮರ್ಥ್ಯ ಇತ್ಯಾದಿಗಳನ್ನು ಹೊಂದಿಕೊಂಡು ಪ್ರತಿಯೊಬ್ಬನೂ ಪ್ರಾಯಶ್ಚಿತ್ತ ಮಾಡಿಕೊಳ್ಳಬಹುದು.

**ಉಪನಯನ ಸಂಸ್ಕಾರದ ನಿರ್ಣಯ:–** ಜನ್ಮದಿಂದ ಅಥವಾ ಗರ್ಭದಿಂದ ಎಂಟನೆಯ ವರ್ಷ ಬ್ರಾಹ್ಮಣನಿಗೆ ಉಪನಯನ ಮಾಡಬೇಕು. ಮನುವಿನ ಅಭಿಪ್ರಾಯದಂತೆ ಎಂಟನೆಯ ವರ್ಷದಲ್ಲಿ ಬ್ರಾಹ್ಮಣನಿಗೆ, ಹನ್ನೊಂದನೆಯ ವರ್ಷದಲ್ಲಿ ಕ್ಷತ್ರಿಯನಿಗೆ, ಹನ್ನೆರಡನೆಯ ವರ್ಷದಲ್ಲಿ ವೈಶ್ಯನಿಗೆ ಉಪನಯನ ಮಾಡಬೇಕು. ಇಂತಹ ನಿರ್ದಿಷ್ಟಕಾಲದಲ್ಲಿ ಅನಿವಾರ್ಯ ಕಾರಣಗಳಿಂದ ಉಪನಯನ ಮಾಡಲು ಸಾಧ್ಯವಾಗದಿದ್ದರೆ, ಬ್ರಾಹ್ಮಣನಿಗೆ ೧೬ ವರ್ಷ, ಕ್ಷತ್ರಿಯನಿಗೆ ೨೨ ವರ್ಷ, ವೈಶ್ಯನಿಗೆ ೨೪ ವರ್ಷದ ಕಾಲಾವಧಿ ಇದೆ. ಈ ಅವಧಿಯನ್ನೂ ಮೀರಿದರೆ ಅಂಥವನು ಪತಿತನಾಗಿ ವೇದಾಧ್ಯಯನಕ್ಕೆ ಅನಧಿಕಾರಿಯಾಗುತ್ತಾನೆ. ಅಂಥವನೊಡನೆ ವಿವಾಹಾದಿಯಾಗಿ ಯಾವುದೇ ಸಂಬಂಧ ಇಡಬಾರದು. ಬ್ರಹ್ಮತೇಜಸ್ಸನ್ನು ಇಚ್ಛಿಸುವ ಬ್ರಾಹ್ಮಣನಿಗೆ ೫ನೆಯ ವರ್ಷದಲ್ಲೂ, ದ್ರವ್ಯವನ್ನು ಇಚ್ಛಿಸುವವನಿಗೆ ೬ನೆಯ ವರ್ಷದಲ್ಲೂ, ವಿದ್ಯೆಯನ್ನು ಇಚ್ಛಿಸುವವನಿಗೆ ೭ನೆಯ ವರ್ಷದಲ್ಲೂ, ಇವೆಲ್ಲವುಗಳನ್ನು ಇಚ್ಛಿಸುವವನಿಗೆ ೮ನೆಯ ವರ್ಷದಲ್ಲೂ, ಶಾಂತಿಯನ್ನು ಇಚ್ಛಿಸುವವನಿಗೆ ೯ನೆಯ ವರ್ಷದಲ್ಲೂ ಉಪನಯನ ಮಾಡಬೇಕು. ಬ್ರಾಹ್ಮಣನಿಗೆ ವಸಂತಋತುವಿನಲ್ಲಿ ಉಪನಯನ ಮಾಡುವುದು ಉತ್ತಮ. ಮಾಘಮಾಸದಿಂದ ಜ್ಯೇಷ್ಠಮಾಸದ ವರೆಗೆ ಸಾಧಾರಣವಾಗಿ ಎಲ್ಲ ಮಾಸಗಳೂ ಬ್ರಾಹ್ಮಣರಿಗೆ ಯೋಗ್ಯವೆಂದು ಗರ್ಗಮಹರ್ಷಿಗಳು ಅಭಿಪ್ರಾಯಪಡುತ್ತಾರೆ.

**ಉಪನಯನ ಅಧಿಕಾರಿಗಳು:–** ಉಪನಯನ ಮಾಡಲು ತಂದೆಯಾದವನೇ ಮೊದಲನೆಯ ಅಧಿಕಾರಿಯಾಗಿರುತ್ತಾನೆ. ಆತನಿಲ್ಲದಿದ್ದಾಗ ಅಜ್ಜ, ಚಿಕ್ಕಪ್ಪ, ಅಣ್ಣ, ಸಪಿಂಡದವ, ಸಗೋತ್ರದವ, ಪ್ರಾಯದಲ್ಲಿ ಹಿರಿಯನಾಗಿರುವ ಯಾವನಾದರೊಬ್ಬ ಶ್ರೋತ್ರಿಯ ಬ್ರಾಹ್ಮಣ. ಉಪನಯನ ಮಾಡುವವನು ವಟುವಿಗಿಂತ ವಯಸ್ಸಿನಲ್ಲಿ ದೊಡ್ಡವನೇ ಆಗಿರಬೇಕು. ಕಿರಿಯನು ಹಿರಿಯನಿಗೆ ಉಪನಯನ ಮಾಡುವುದನ್ನು ನಿಷೇಧಿಸಲಾಗಿದೆ.

**ಉಪನಯನಕಾಲದಲ್ಲಿ ಇರಬೇಕಾದ ಗುರುಬಲ:–** ೨, ೫, ೭, ೯ ೧೧ ಈ ಸ್ಥಾನಗಳಲ್ಲಿರುವ ಗುರುವು ಉಪನಯನಕ್ಕೂ, ಕನ್ಯೆಯ ವಿವಾಹಕ್ಕೂ ಶುಭಫಲದಾಯಕನಾಗಿರುತ್ತಾನೆ. ೧, ೩, ೬ ಮತ್ತು ೧೦ನೆಯ ಸ್ಥಾನದಲ್ಲಿರುವ ಗುರುವನ್ನು ಪೂಜಾದಿಗಳಿಂದ ಶುಭಪ್ರದನನ್ನಾಗಿ ಮಾಡಬಹುದು. ೪, ೮ ಮತ್ತು ೧೨ನೆಯ ಸ್ಥಾನದಲ್ಲಿರುವ ಗುರುವು

ಸಂಪೂರ್ಣವಾಗಿ ಅಶುಭಕಾರಿಯಾಗಿರುತ್ತಾನೆ. ೮ನೆಯ ವರ್ಷದಲ್ಲಿ ಗುರುವು ಅಶುಭಸ್ಥಾನದಲ್ಲಿದ್ದರೂ ಶಾಂತ್ಯಾದಿಗಳನ್ನು ಮಾಡಿ ಉಪನಯನ ಮಾಡಬಹುದು. ಹತ್ತು ವರ್ಷಗಳು ಕಳೆದ ಮೇಲೆ ಗುರುಬಲವನ್ನು ನೋಡುವ ಆವಶ್ಯಕತೆ ಇಲ್ಲ. ವಟುವಿನ ತಂದೆಯ ಗುರುಬಲ ಹಾಗೂ ಚಂದ್ರಬಲಗಳನ್ನು ನೋಡುವುದು ಒಳ್ಳೆಯದು. ಉಪನಯನ ಮಾಡುವವನು ಮೂರು ಕೃಚ್ಛ್ರಗಳ ಪ್ರಾಯಶ್ಚಿತ್ತವನ್ನೂ, ವಟುವು ಮೂರು ಕೃಚ್ಛ್ರಗಳ ಪ್ರಾಯಶ್ಚಿತ್ತವನ್ನೂ ಮಾಡಿಕೊಳ್ಳಬೇಕು. ಉಪನಯನ ಮಾಡುವ ಅಧಿಕಾರ ಬರಬೇಕಾದರೆ, ಒಂದು ಸಾವಿರದ ಹನ್ನೆರಡು ಗಾಯತ್ರೀಜಪ ಮಾಡಬೇಕು. ಕೆಲವರು ಹನ್ನೆರಡುಸಾವಿರ ಗಾಯತ್ರೀಜಪ ಮಾಡಬೇಕೆಂದು ಹೇಳುತ್ತಾರೆ.

**ಉಪನಯನಕ್ಕೆ ವೇದಿಯ ನಿರ್ಮಾಣ:-** ಉಪನಯನ, ವಿವಾಹ ಹಾಗೂ ಯಜ್ಞಗಳಲ್ಲಿ ವೇದಿಯನ್ನು ನಿರ್ಮಾಣಮಾಡಿಯೇ ಹೋಮಮಾಡಬೇಕು. ವೇದಿ ಇಲ್ಲದೆ ಹೋಮ ಮಾಡಿದವನು ಕರ್ಮಭ್ರಷ್ಟನೆನಿಸುತ್ತಾನೆ. ಉಪನಯನಕ್ಕೆ ನಿರ್ಮಿಸಲ್ಪಡುವ ವೇದಿಯು ಆಚಾರ್ಯನ ಕಾಲಿನ ಅಳತೆಯಿಂದ ಆರು ಹೆಜ್ಜೆ ಉದ್ದ ಹಾಗೂ ಆರು ಹೆಜ್ಜೆ ಅಗಲವಿರಬೇಕು. ಅದಕ್ಕೆ ಸೋಪಾನಗಳನ್ನು ನಿರ್ಮಿಸಬೇಕು. ಅಥವಾ ವಟುವಿನ ಕೈಯ ಅಳತೆಯಿಂದ ನಾಲ್ಕು ಮೊಳ ಉದ್ದ ಹಾಗೂ ಅಗಲ ಇರಬೇಕು. ಎತ್ತರ ಒಂದು ಮೊಳದಷ್ಟಿರಬೇಕು. ವೇದಿಯು ಮನೆಯ ಎಡಭಾಗದಲ್ಲಿರಬೇಕು. ವೇದಿಯು ಪೂರ್ವ ಪಶ್ಚಿಮಕ್ಕೆ ಆರು ಹೆಜ್ಜೆ ಉದ್ದ ಮತ್ತು ದಕ್ಷಿಣೋತ್ತರಕ್ಕೆ ಐದು ಹೆಜ್ಜೆ ಅಗಲವಿದ್ದರೆ ವಟುವು ಶತಾಯುಷಿ ಆಗುತ್ತಾನೆಂದು ಜ್ಯೋತಿಷರತ್ನದಲ್ಲಿ ಹೇಳಲಾಗಿದೆ.

**ಅವಳಿಮಕ್ಕಳು:-** ಅವಳಿಮಕ್ಕಳಿಗೆ ಒಂದೇ ದಿನ ಒಂದೇ ಮಂಟಪದಲ್ಲಿ ಮಂಗಲ ಕಾರ್ಯವನ್ನು ಮಾಡಬಹುದು.

**ಸ್ತ್ರೀಯರ ಉಪನಯನ ವಿಚಾರ:-** ಪೂರ್ವಕಾಲದಲ್ಲಿ ಸ್ತ್ರೀಯರಿಗೂ ಉಪನಯನ, ವೇದಾಧ್ಯಯನ ಮತ್ತು ಗಾಯತ್ರ್ಯುಪದೇಶಗಳ ಅಧಿಕಾರವಿತ್ತು. ಪ್ರೌಢವಿವಾಹವು ಬಳಕೆಯಲ್ಲಿರುವ ವರೆಗೆ, ಅಂದರೆ ಸುಮಾರು ಕ್ರಿ.ಶ. ೭ನೇ ಶತಮಾನದ ವರೆಗೆ ಸ್ತ್ರೀಯರಿಗೂ ಉಪನಯನಸಂಸ್ಕಾರ ನಡೆಯುತ್ತಿತ್ತು. ಬಾಣಭಟ್ಟನ ಕಾದಂಬರಿಯಲ್ಲಿ **"ಬ್ರಹ್ಮಸೂತ್ರೇಣ ಪವಿತ್ರೀಕೃತಕಾಯಾಂ"** ಎಂದು ಸ್ತ್ರೀವರ್ಣನೆ ಬರುತ್ತದೆ. ನಂತರ ಬಾಲ್ಯವಿವಾಹ ಪದ್ಧತಿಯು ಜಾರಿಗೆ ಬಂದಾಗ, ವಿವಾಹಸಂಸ್ಕಾರವೇ ಸಾಕೆಂಬ ಭಾವನೆಯಿಂದ ಸ್ತ್ರೀಯರಿಗೆ ಉಪನಯನ ಮಾಡುವ ಕ್ರಮವು ನಿಂತುಹೋಯಿತು. ಈಗ ಪುನಃ ಪ್ರೌಢವಿವಾಹವು ಪ್ರಚಲಿತವಾದುದರಿಂದ ಹೆಣ್ಣುಮಕ್ಕಳಿಗೂ ಉಪನಯನಸಂಸ್ಕಾರ ಮಾಡುವುದು ಉಚಿತವಾಗಿದೆ.

ಉಪನಯನಸಂಸ್ಕಾರವಾದ ಮೇಲೆ ಬ್ರಹ್ಮಚರ್ಯಾಶ್ರಮವನ್ನು ಪ್ರವೇಶಿಸಿ ವಟುವು ಶಿಕ್ಷಣವನ್ನು ಪಡೆಯಬೇಕಾಗಿದೆ. ವಿದ್ಯಾಭ್ಯಾಸ ಮಾಡುವಾಗ ಆತನು ಕಠಿಣವಾದ ವ್ರತವನ್ನು ಪಾಲಿಸುತ್ತ ನಿಯಮಬದ್ಧನಾಗಿರಬೇಕು. ಆದ್ದರಿಂದಲೇ ಈ ಸಂಸ್ಕಾರವನ್ನು **"ವ್ರತಬಂಧ"** ಎಂದು ಕರೆಯುತ್ತಾರೆ. ಆದರೆ ಈಗ ನಡೆಯುತ್ತಿರುವ ಉಪನಯನಗಳಲ್ಲಿ ಊಟ, ಉಪಚಾರ, ಪಾಯಸ,

ಭಕ್ಷ್ಯ, ಭಿಕ್ಷೆ, ವಾದ್ಯ ಇತ್ಯಾದಿಗಳಿಗೇ ಪ್ರಾಧಾನ್ಯವನ್ನು ಕೊಟ್ಟು, ವೈಭವದ ಸಮಾರಂಭವನ್ನು ನಡೆಸಿ ತಮ್ಮ ಐಶ್ವರ್ಯ ಅಂತಸ್ತು ಇತ್ಯಾದಿಗಳ ಪ್ರದರ್ಶನವಾಗುತ್ತಿದೆಯೇ ಹೊರತು ಈ ಸಂಸ್ಕಾರದ ಯಥಾರ್ಥವಾದ ಉದ್ದೇಶ ಈಡೇರುವುದಿಲ್ಲ. ಅನವಶ್ಯಕಗಳಾದ ಅರ್ಥಶೂನ್ಯ ರೂಢಿಗಳನ್ನು ಬಿಟ್ಟು ಆವಶ್ಯಕವೂ, ಅರ್ಥ ಪೂರ್ಣವೂ ಆಗಿರುವ ವೈದಿಕಕ್ರಿಯಾಭಾಗಗಳಿಗೆ ಪ್ರಾಶಸ್ತ್ಯವನ್ನಿತ್ತರೆ, ಮಾಡಿದ ಕರ್ಮವು ಸಾರ್ಥಕವಾದೀತು.

## ॥ ಸಮಾವರ್ತನಸಂಸ್ಕಾರನಿರ್ಣಯಃ ॥

**ಗುರುಣಾನುಮತೋ ಸ್ನಾತ್ವಾ ಸಮಾವೃತ್ತೋ ಯಥಾವಿಧಿ ॥ ಮನುಃ ॥ ಸ್ನಾನಂ ನಾಮ ಸಮಾವರ್ತನಂ ತತ್ರೋಪನಯನೋಕ್ತಕಾಲೇ ಸಮಾವರ್ತನಮತಿ-ಮುಖ್ಯಃ ಕಾಲಃ ॥ ತಥಾಪಿ ಮಾರ್ಗಶೀರ್ಷೇ ವಿವಾಹಪ್ರಸಕ್ತೌ ದಕ್ಷಿಣಾಯನೇಽಪಿ ಭವತಿ ॥ ಅನಾಶ್ರಮೀ ನ ತಿಷ್ಠೇತ ದಿನಮೇಕಮಪಿ ದ್ವಿಜಃ ॥ ಆಶ್ರಮೇಣ ವಿನಾ ತಿಷ್ಠನ್ ಪ್ರಾಯಶ್ಚಿತ್ತೀಯತೇ ಹಿ ಸಃ ॥ ಇತಿ ನಿಷೇಧಾತಿಕ್ರಮಾಪತ್ತೇಃ ॥ ಅನ್ಯೇತು ಶುಭದಿನೇ ಸಮಾವರ್ತನಂ ಕಾರ್ಯಮಿತ್ಯಾಹುಃ ॥ ಬ್ರಹ್ಮಚರ್ಯದಶಾಯಾಂ ದಶಾಹಾಶೌಚೋತ್ಪಾದಕಸಪಿಂಡಮೃತೌ ಸಮಾವರ್ತನೋತ್ತರಂ ತ್ರಿರಾತ್ರಮಧ್ಯೇ ವಿವಾಹೋ ನ ಕಾರ್ಯಃ ॥ ಕಸ್ಯಚಿನ್ಮರಣಾಭಾವೇ ತು ನ ವಿವಾಹೇ ದೋಷಃ ॥**

**ಸಮಾವರ್ತನಸಂಸ್ಕಾರನಿರ್ಣಯ:-** ವೇದಾಧ್ಯಯನವು ಪೂರ್ಣವಾದ ಬಳಿಕ ಗುರುವಿನ ಅನುಜ್ಞೆಯನ್ನು ಪಡೆದು 'ಸ್ನಾನ' ಅಂದರೆ ಸಮಾವರ್ತನ ಮಾಡಬೇಕು. (ಸಮ್=ಪೂರ್ಣವಾಗಿ, ಆವರ್ತನ=ನಿವೃತ್ತನಾಗುವುದು). ಬ್ರಹ್ಮಚಾರಿಯು ತನ್ನ ವಿದ್ಯಾಭ್ಯಾಸವನ್ನು ಪೂರ್ಣಗೊಳಿಸಿ ಗುರು ಹಾಗೂ ತಂದೆ-ತಾಯಿಗಳ ಅನುಮತಿಯಿಂದ, ತನಗೆ ಅನುರೂಪಳಾದ ಕನ್ಯೆಯನ್ನು ಆಯ್ಕೆ ಮಾಡಿದ ಮೇಲೆ ಈ ಸಂಸ್ಕಾರವನ್ನು ಮಾಡಲಾಗುತ್ತದೆ. ಈಗ ಪರಿಸ್ಥಿತಿಯು ತೀರ ಬದಲಾಗಿದೆ. ಮೊದಲಿನಂತೆ ವೇದಾಧ್ಯಯನ ನಡೆಯುವುದಿಲ್ಲ. ವಿದ್ಯಾರ್ಥಿಯಾದವನು ವ್ರತಸ್ಥನಾಗಿರುವುದೂ ಇಲ್ಲ. ಉಪನಯನವಾದ ಮೇಲೆ ಬ್ರಹ್ಮಚಾರಿಯು ಅನುಸರಿಸಬೇಕಾದ ಯಾವುದೇ ನಿಯಮವನ್ನು ಪಾಲಿಸದಿದ್ದರೂ, ಆ ನಿಯಮಗಳ ಸಮಾಪ್ತಿಸೂಚಕವಾದ ಈ ಸಮಾವರ್ತನಸಂಸ್ಕಾರವನ್ನು ಮಾಡುತ್ತಾರೆ. ಸರ್ವಲೋಕೋಪಕಾರಕವಾದ ಈ ಗೃಹಸ್ಥಾಶ್ರಮದ ಮಹತ್ತ್ವವನ್ನೂ, ಹೊಣೆಯನ್ನೂ ಮನಸ್ಸಿನಲ್ಲಿ ದೃಢೀಕರಿಸುವುದೇ ಈ ಸಂಸ್ಕಾರದ ಮುಖ್ಯ ಉದ್ದೇಶ. ಮೌಂಜೀಬಂಧನಕ್ಕೆ ನಿರ್ದಿಷ್ಟವಾದ ಮುಹೂರ್ತದಲ್ಲಿಯೇ ಸಮಾವರ್ತನವನ್ನೂ ಮಾಡಬೇಕು. ಮಾರ್ಗಶೀರ್ಷ ಮಾಸದಲ್ಲಿ ವಿವಾಹವಾಗುವುದಾದರೆ ದಕ್ಷಿಣಾಯನದಲ್ಲಾದರೂ ಸಮಾವರ್ತನ ಮಾಡಬಹುದು. ಯಾವ ಆಶ್ರಮವೂ ಇಲ್ಲದೆ ಮನುಷ್ಯನು ಒಂದೇ ಒಂದು ದಿನವಾದರೂ ಇರಬಾರದು ಎಂಬ ನಿಯಮವಿದೆ.

## ॥ ವಿವಾಹಸಂಸ್ಕಾರನಿರ್ಣಯಃ ॥

ವಿವಾಹೋದ್ದೇಶಃ- ವೀರಸೂರ್ದೇವಕಾಮಾಸ್ಯೋನಾ ... ॥ ಇಮಾಂತ್ವಮಿಂದ್ರಮೀಢ್ವಃ ಸುಪುತ್ರಾಂ ಸುಭಗಾಂ ಕೃಣು ॥ ಪ್ರಜಾಭಿರಗ್ನೇ ಅಮೃತತ್ವಮಶ್ಯಾಂ ॥ ಭಾಷ್ಯೇ ॥ ವೀರಸೂಃ ಪುತ್ರಾಣಾಮೇವ ಪ್ರಸವಿತ್ರೀ ಭವ ॥ ಹೇ ಇಂದ್ರ, ಇಮಾಂ ವಧೂಂ ಸುಪುತ್ರಾಂ, ಶೋಭನ ಪುತ್ರಾಂ ಸುಭಗಾಂ ಚ ಕೃಣು ॥ ಅಗ್ನೇ ಪ್ರಜಾಭಿಃ ತ್ವದ್ದತ್ತಾಭಿಃ ಅಮೃತತ್ವಂ ಸಂತತ್ಯವಿಚ್ಛೇದಂ ಅವಿನಾಶಿತ್ವಂ ಅಶ್ಯಾಂ ಪ್ರಾಪ್ನುಯಾಂ ॥ ಮನುಸ್ಮೃತಿ ಭಾಷ್ಯೇ ವಿವಾಹೇನ ಭಾರ್ಯಾ ಭವತೀತಿ ॥ ವಿವಾಹನಂ ದಾರಕರ್ಮ ಪಾಣಿಗ್ರಹಣಮಿತಿ ॥

ವಿವಾಹಭೇದಾಃ-

ಬ್ರಾಹ್ಮೋ ದೈವಸ್ತಥಾಚಾರ್ಷಃ ಪ್ರಾಜಾಪತ್ಯಸ್ತಥಾಸುರಃ ।
ಗಾಂಧರ್ವೋ ರಾಕ್ಷಸಶ್ಚೈವ ಪೈಶಾಚಸ್ತ್ವಷ್ಟಮೋ ಮತಃ ॥ ಮನುಃ ॥

ಪೂರ್ವೇಷು ಚತುರ್ಷು ಪೂರ್ವಃ ಪೂರ್ವಃ ಪ್ರಶಸ್ತಃ ॥ ಉತ್ತರೇಷು ಉತ್ತರೋತ್ತರಃ ಪಾಪೀಯಾನ್ ॥ ನಾರಾಯಣ ವೃತ್ತಿಕಾರಃ ॥

ವಿವಾಹಫಲಾನಿ:-

ಬ್ರಾಹ್ಮಾದಿಷು ವಿವಾಹೇಷು ಚತುರ್ಷ್ವೇವಾನುಪೂರ್ವಶಃ ॥
ಬ್ರಹ್ಮವರ್ಚಸಿನಃ ಪುತ್ರಾ ಜಾಯಂತೇ ಶಿಷ್ಟಸಂಮತಾಃ ॥
ಇತರೇಷ್ವವಶಿಷ್ಟೇಷು ನೃಶಂಸಾನೃತವಾದಿನಃ ।
ಜಾಯಂತೇ ದುರ್ವಿವಾಹೇಷು ಬ್ರಹ್ಮಧರ್ಮದ್ವಿಷಃ ಸುತಾಃ ॥

ವಧೂಲಕ್ಷಣಾನಿ:-

ಅವಿಪ್ಲುತಬ್ರಹ್ಮಚರ್ಯೋ ಲಕ್ಷಣ್ಯಾಂ ಸ್ತ್ರಿಯಮುದ್ವಹೇತ್ ।
ಅಸಪಿಂಡಾ ಚ ಯಾ ಮಾತುರಸಗೋತ್ರಾ ಚ ಯಾ ಪಿತುಃ ॥
ಸಾ ಪ್ರಶಸ್ತಾ ದ್ವಿಜಾತೀನಾಂ ದಾರಕರ್ಮಣಿ ಮೈಥುನೇ ।
ನೋದ್ವಹೇತ್ ಕಪಿಲಾಂ ಕನ್ಯಾಂ ನಾಧಿಕಾಂಗೀಂ ನ ರೋಗಿಣೀಂ ॥
ನಾಲೋಮಿಕಾಂ ನಾತಿಲೋಮಾಂ ನ ವಾಚಾಟಾಂ ನ ಪಿಂಗಲಾಂ ॥
ಅವ್ಯಂಗಾಂಗೀಂ ಸೌಮ್ಯನಾಮ್ನೀಂ ಹಂಸವಾರಣಗಾಮಿನೀಂ ॥
ತನುಲೋಮಕೇಶದಶನಾಂ ಮೃದ್ವಂಗೀಮುದ್ವಹೇತ್ ಸ್ತ್ರಿಯಂ ॥ ಮನುಃ ॥

ವರಲಕ್ಷಣಾನಿ:-

ಕುಲಂ ಚ ಶೀಲಂ ಚ ವಪುರ್ವಯಶ್ಚ ವಿದ್ಯಾಂ ಚ ವಿತ್ತಂ ಚ ಸನಾಥತಾಂ ಚ ।

ಏತಾನ್ ಗುಣಾನ್ ಸಪ್ತ ಪರೀಕ್ಷ್ಯ ದೇಯಾ ಕನ್ಯಾ ಬುಧೈಃ
ಶೇಷಮಚಿಂತನೀಯಂ ॥

ದಶದೋಷಾಃ-

ಮಹಾಂತ್ಯಪಿ ಸಮೃದ್ಧಾನಿ ಗೋಜಾವಿಧನಧಾನ್ಯತಃ ।
ಸ್ತ್ರೀಸಂಬಂಧೇ ದಶೇಮಾನಿ ಕುಲಾನಿ ಪರಿವರ್ಜಯೇತ್ ॥
ಹೀನಜಾತೀಯ ಪಾಖಂಡ ಸುಜನೋದ್ವೇಗಕಾರಿಣಂ ।
ಛದ್ಮಾಮಯ ಸದಾವಾಚ್ಯಶ್ವಿತ್ರಿಕುಷ್ಠಿಕುಲಾನಿ ಚ ॥
ಯಸ್ಯಾಸ್ತು ನ ಭವೇತ್ ಭ್ರಾತಾ ನ ಚ ವಿಜ್ಞಾಯತೇ ಪಿತಾ ।
ನೋಪಯಚ್ಛೇತ್ತು ತಾಂ ಪ್ರಾಜ್ಞಃ ಪುತ್ರಿಕಾಧರ್ಮಶಂಕಯಾ ॥ ಸ್ಮೃತಿಃ ॥

ಜ್ಯೋತಿಃ ಶಾಸ್ತ್ರೋಕ್ತವಿಚಾರಃ-

ಜನ್ಮಸ್ಥಂ ಚ ವಿಲೋಕ್ಯ ಬಾಲವಿಧವಾಯೋಗಂ ವಿಧಾಪ್ಯ ವ್ರತಂ
ಸಾವಿತ್ರ್ಯಾ ಉತ ಪೈಪ್ಪಲಂ ಹಿ ಸುತಯಾ ದದ್ಯಾದಿಮಾಂ ವಾ ರಹಃ ।
ಸಲ್ಲಗ್ನೇಚ್ಯುತಮೂರ್ತಿ ಪಿಪ್ಪಲಘಟೈಃ ಕೃತ್ವಾ ವಿವಾಹಂ ಸ್ಫುಟಂ
ದದ್ಯಾತ್ತಾಂ ಚಿರಜೀವಿನೇಽತ್ರ ನ ಭವೇದ್ದೋಷಃ ಪುನರ್ಭೂರ್ಭವಃ ॥

ಸೂತ್ರೋಕ್ತವಧೂಲಕ್ಷಣ ಪರೀಕ್ಷಾ:- ದುರ್ಜ್ಞೇಯಾನಿ ಲಕ್ಷಣಾನೀತಿ ಅಷ್ಟೌ ಪಿಂಡಾನ್ ಕೃತ್ವಾ ॥ ಋತಮಗ್ರೇ ... ಗೃಹಾಣೇತಿ ॥ ಕ್ಷೇತ್ರಾಚ್ಚೇದುಭಯತಃ ಸಸ್ಯಾದ್ಗೃಹ್ಣೀಯಾತ್ ಭವತ್ಯಸ್ಯಾಃ ಪ್ರಜಾ ಭವಿಷ್ಯತೀತಿ ವಿದ್ಯಾತ್, ಗೋಷ್ಠಾತ್ ಪಶುಮತೀ ವೇದಿ ಪುರೀಷಾತ್ ಬ್ರಹ್ಮವರ್ಚಸ್ವಿನ್ಯವಿದಾಸಿನೋ ಹ್ರದಾತ್ ಸರ್ವಸಂಪನ್ನಾ ದೇವನಾತ್ ಕಿತವೀ ಚತುಷ್ಪಥಾತ್ ವಿಪ್ರವ್ರಾಜಿನೀರಿಣಾದಧಾನಾ ಶ್ಮಶಾನಾತ್ಪತಿಘ್ನೀ ॥ ಆಶ್ವಲಾಯನಗೃಹ್ಯಸೂತ್ರಂ ॥

ವಿರುದ್ಧ ಸಂಬಂಧಃ-

ಮಾತುಃ ಸಪತ್ನ್ಯಾ ಭಗಿನೀಂ ತತ್ಸುತಾಂ ಚ ವಿವರ್ಜಯೇತ್ ।
ಪಿತೃವ್ಯಪತ್ನೀಭಗಿನೀಂ ತತ್ಸುತಾಂ ಚ ವಿವರ್ಜಯೇತ್ ॥

ಕೇಚಿತ್ ಜ್ಯೇಷ್ಠಭ್ರಾತಾ ಪಿತುಃ ಸಮ ಇತ್ಯುಕ್ತೇ ಜ್ಯೇಷ್ಠಭ್ರಾತೃಪತ್ನ್ಯಾ ಭಗಿನೀ ಮಾತೃಷ್ವಸೃ ತುಲ್ಯತ್ವಾತ್ ನ ವಿವಾಹ್ಯೇತ್ಯಾಹುಃ ॥ ಸ್ಮೃತಿಃ ॥

ವಿವಾಹವಯೋಮರ್ಯಾದಾ:-

ಪಂಚವಿಂಶೇ ತತೋ ವರ್ಷೇ ಪುಮಾನ್ನಾರೀತು ಷೋಡಶೇ ।
ಸಮತ್ವಾಗತವೀರ್ಯೌ ತೌ ಜಾನೀಯಾತ್ಕುಶಲೋ ಭಿಷಕ್ ॥ ಸುಶ್ರುತ ॥
ಅನಗ್ನಿಕಾ ತು ಶ್ರೇಷ್ಠಾ ॥ ಗೋಭಿಲಗೃಹ್ಯ ಸೂತ್ರೇ ॥

ಭಿನ್ನಶಾಖೀಯ ವಿವಾಹಃ-

ಉದ್ವಹೇತ್ತು ದ್ವಿಜೋ ಭಾರ್ಯಾಂ ಸವರ್ಣಾಂ ಲಕ್ಷಣೈರ್ಯುತಾಂ ।
ಅವ್ಯಂಗಾಂಗೀಂ ಸೌಮ್ಯನಾಮ್ನೀಂ ಮೃದ್ವಂಗೀಂಚ ಮನೋಹರಾಂ ॥ ಸ್ಮೃತಿಃ ॥

ವಿವಾಹಮುಹೂರ್ತಃ- ಉದಗಯನ ಆಪೂರ್ಯಮಾಣೇ ಪಕ್ಷೇ ಕಲ್ಯಾಣೇ ನಕ್ಷತ್ರೇ ಚೌಲಕರ್ಮೋಪನಯನಗೋದಾನವಿವಾಹಾಃ ॥ ಸಾರ್ವಕಾಲಮೇಕೇ ವಿವಾಹಂ ॥ ಆ. ಗೃ. ಸೂ. ೧. ॥

ಹೇತುರ್ಧರ್ಮಾರ್ಥಕಾಮಾನಾಂ ಭಾರ್ಯಾ ಸಚ್ಛೀಲಶಾಲಿನೀ ।
ವಿವಾಹಕಾಲಶುದ್ಧ್ಯಾ ತಚ್ಛೀಲಂ ತಸ್ಮಾದ್ಬ್ರವೀಮಿ ತೇ ॥

ಗುರ್ವರ್ಕಬಲಂ:-

ಜ್ಯೋತಿರ್ನಿಬಂಧೇ ಗರ್ಗಃ ॥
ಸ್ತ್ರೀಣಾಂ ಗುರುಬಲಂ ಶ್ರೇಷ್ಠಂ ಪುರುಷಾಣಾಂ ರವೇರ್ಬಲಂ ।
ತಯೋಶ್ಚಂದ್ರಬಲಂ ಶ್ರೇಷ್ಠಮಿತಿ ಗರ್ಗೇಣ ಭಾಷಿತಂ ॥
ಜನ್ಮತ್ರಿದಶಮಾರಿಸ್ಥಃ ಪೂಜಯಾ ಶುಭದೋ ಗುರುಃ ।
ವಿವಾಹೇಥ ಚತುರ್ಥಾಷ್ಟದ್ವಾದಶಸ್ಥೋ ಮೃತಿಪ್ರದಃ ॥

ಕನ್ಯಾದಾನಾಧಿಕಾರಿಣಃ- ಯಾಜ್ಞವಲ್ಕ್ಯಃ ॥

ಪಿತಾ ಪಿತಾಮಹೋ ಭ್ರಾತಾ ಪಿತೃವ್ಯೋ ಗೋತ್ರಿಣೋ ಗುರುಃ ।
ಮಾತಾಮಹೋ ಮಾತುಲೋ ವಾ ಜನನೀ ಬಾಂಧವಾಃ ಕ್ರಮಾತ್ ॥
ಕನ್ಯಾಪ್ರದಃ ಪೂರ್ವನಾಶೇ ಪ್ರಕೃತಿಸ್ಥಃ ಪರಃ ಪರಃ ।
ಪ್ರಕೃತಿಸ್ಥ ಉನ್ಮಾದಾದಿ ದೋಷಹೀನಃ॥

ಜ್ಯೇಷ್ಠವಿಚಾರಃ- ರತ್ನಕೋಶೇ ॥

ಜನ್ಮನಕ್ಷತ್ರೇ ಜನ್ಮದಿವಸೇ ಜನ್ಮಮಾಸೇ ಶುಭಂ ತ್ಯಜೇತ್ ।
ಜ್ಯೇಷ್ಠೇಮಾಸ್ಯಾದ್ಯಗರ್ಭಸ್ಯ ಶುಭಂ ವರ್ಜ್ಯಂ ಸ್ತ್ರಿಯಾ ಅಪಿ ॥
ಅಜ್ಯೇಷ್ಠಾ ಕನ್ಯಕಾ ಯತ್ರ ಜ್ಯೇಷ್ಠಪುತ್ರೋ ವರೋ ಯದಿ ।
ವ್ಯತ್ಯಯೋ ವಾ ತಯೋಸ್ತತ್ರ ಜ್ಯೇಷ್ಠಮಾಸಃ ಶುಭಪ್ರದಃ ॥

ಸಗೋತ್ರಾದಿ ವಿವಾಹೇ ಪ್ರಾಯಶ್ಚಿತ್ತಂ:-

ಇತ್ಥಂ ಸಗೋತ್ರಸಂಬಂಧಂ ವಿವಾಹ ವಿಷಯೇ ಸ್ಥಿತೇ ।
ಯದಿ ಕಶ್ಚಿತ್ ಜ್ಞಾನತಸ್ತಾಂ ಕನ್ಯಾಮೂಢ್ವೋಪಗಚ್ಛತಿ ॥
ಗುರುತಲ್ಪವ್ರತಾತ್ ಶುದ್ಧ್ಯೇತ್ ॥ ಸ್ಮೃತ್ಯರ್ಥಸಾರೇ ॥

ವಿವಾಹೇ ಜನನಾಶೌಚವಿಚಾರಃ-

ವ್ರತಯಜ್ಞವಿವಾಹೇಷು ಶ್ರಾದ್ಧೇ ಹೋಮೇರ್ಚನೇ ಜಪೇ ।

**ಆರಬ್ಧೇ ಸೂತಕಂ ನ ಸ್ಯಾದನಾರಬ್ಧೇ ತು ಸೂತಕಂ ॥**
**ಪ್ರಾರಂಭೋ ವರಣಂ ಯಜ್ಞೇ ಸಂಕಲ್ಪೋ ವ್ರತಸತ್ರಯೋಃ ।**
**ನಾಂದೀಮುಖಂ ವಿವಾಹಾದೌ ಶ್ರಾದ್ಧೇ**
**ಪಾಕಪರಿಕ್ರಿಯಾ ॥ ಬ್ರಹ್ಮಪುರಾಣ ॥**

**ಗೃಹೀತಮಧುಪರ್ಕಸ್ಯ ಯಜಮಾನಾಚ್ಚ ಋತ್ವಿಜಃ ।**
**ಪಶ್ಚಾದಶೌಚೇ ಪತಿತೇ ನ ಭವೇದಿತಿ ನಿಶ್ಚಯಃ ॥**
**ಅನಾರಬ್ಧೇ ವಿಶುದ್ಧ್ಯರ್ಥಂ ಕೂಷ್ಮಾಂಡೈರ್ಜುಹುಯಾತ್ ಘೃತಂ ।**
**ಗಾಂ ದತ್ವಾ ಪಂಚಗವ್ಯಾಶೀಃ ತತಃ ಶುದ್ಧ್ಯತಿ ಸೂತಕೀ ॥**
**ಚೂಡೋಪನಯನೋದ್ವಾಹ ಪ್ರತಿಷ್ಠಾದಿಕಮಾಚರೇತ್ ।**
**ಯದ್ಯೈವ ಸೂತಕಪ್ರಾಪ್ತಿಃ ತದ್ಯೈವಾಭ್ಯುದಯಕ್ರಿಯಾ ॥**

# ವಿವಾಹಸಂಸ್ಕಾರದ ನಿರ್ಣಯ

**ವಿವಾಹದ ಉದ್ದೇಶ:-** ಋಗ್ವೇದದಲ್ಲಿ ಹೀಗೆ ಹೇಳಿದೆ: ಎಲೈ ವಧು, ನೀನು ವೀರರಾದ ಪುತ್ರರನ್ನೇ ಪ್ರಸವಿಸು. ಹೇ ಇಂದ್ರ, ನೀನು ಈ ವಧುವನ್ನು ಸುಪುತ್ರವತಿಯನ್ನಾಗಿಯೂ, ಸೌಭಾಗ್ಯವತಿಯನ್ನಾಗಿಯೂ ಮಾಡು. ಹೇ ಅಗ್ನಿ, ನೀನು ಕೊಟ್ಟಿರುವ ಸತ್ಸಂತಾನದಿಂದ ನಾನು ಅವಿಚ್ಛಿನ್ನಸಂತತಿಯುಳ್ಳವನಾಗಿ ಅವಿನಾಶಿತ್ವನ್ನು ಪಡೆಯುವೆನು. ಈ ಮಾತುಗಳಿಂದ ಉತ್ತಮ ಸಂತಾನವನ್ನು ಪಡೆಯುವುದೇ ವಿವಾಹದ ಪ್ರಧಾನ ಉದ್ದೇಶವೆಂಬುದು ಸ್ಪಷ್ಟವಾಗುತ್ತದೆ. ಕೇವಲ ಕಾಮತೃಪ್ತಿಗಾಗಿ ಮಾಡುವ ಅತಿಸಂಭೋಗವನ್ನು ವೇದವು ನಿಷೇಧಿಸುತ್ತದೆ. ಆದರೆ ಸಂಭೋಗವು ಪ್ರಾಣಿಸಹಜವಾದ ಪ್ರವೃತ್ತಿಯಾದುದರಿಂದ ಮನುಷ್ಯನು ವಿಧಿವತ್ತಾಗಿ ವಿವಾಹಮಾಡಿಕೊಂಡು ತನ್ನ ಭಾರ್ಯೆಯಲ್ಲಿ, ಮುಖ್ಯವಾಗಿ ಸತ್ಸಂತತಿಯನ್ನೂ, ಕಾಮತೃಪ್ತಿಯನ್ನೂ ಪಡೆಯುವುದು ದೋಷವಲ್ಲ. 'ವಹ್ ಪ್ರಾಪಣೇ' ಎಂಬ ಧಾತುವಿನಿಂದ ವಿವಾಹ ಶಬ್ದ ರೂಪಿತವಾಗಿದೆ. ಹೊಂದುವುದು, ಪಡೆದುಕೊಳ್ಳುವುದು ಪಾಣಿಗ್ರಹಣಮಾಡುವುದು ಎಂದರ್ಥ.

**ವಿವಾಹಭೇದಗಳು:-** ಬ್ರಾಹ್ಮ, ದೈವ, ಆರ್ಷ, ಪ್ರಾಜಾಪತ್ಯ, ಆಸುರ, ಗಾಂಧರ್ವ, ರಾಕ್ಷಸ ಮತ್ತು ಪೈಶಾಚ ಎಂಬ ಎಂಟು ವಿಧದ ವಿವಾಹಗಳಿವೆ. ಇವುಗಳಲ್ಲಿ ಒಂದು, ಎರಡು ಮೂರು, ನಾಲ್ಕು ಕ್ರಮವಾಗಿ ಮೊದಲು ಹೇಳಿದ್ದು ಶ್ರೇಷ್ಠವಾಗಿವೆ. ನಂತರದ ನಾಲ್ಕರಲ್ಲಿ ಕ್ರಮವಾಗಿ ನಂತರ ಹೇಳಿದ್ದು ನಿಕೃಷ್ಟವಾಗಿದೆ.

**ವಿವಾಹದ ಫಲಗಳು:-** ಬ್ರಾಹ್ಮವೇ ಮೊದಲಾದ ಮೊದಲಿನ ನಾಲ್ಕು ವಿವಾಹಗಳಲ್ಲಿ ಯಾವುದಾದರೊಂದನ್ನು ವಿಧಿವತ್ತಾಗಿ ಮಾಡಿದಲ್ಲಿ ತೇಜಸ್ವಿಗಳೂ, ಸದಾಚಾರ ಸಂಪನ್ನರೂ ಆದ ಮಕ್ಕಳು ಹುಟ್ಟುತ್ತಾರೆ. ಮುಂದಿನ ನಾಲ್ಕು ಪ್ರಕಾರಗಳ ವಿವಾಹಗಳಿಂದ ಧರ್ಮದ್ವೇಷಿಗಳೂ, ಸಮಾಜಘಾತಕಗಳೂ, ವಂಚಕರೂ, ಅಸತ್ಯವಾದಿಗಳೂ ಆದ ಮಕ್ಕಳು ಹುಟ್ಟುತ್ತಾರೆ.

**ವಧುವಿನ ಲಕ್ಷಣ:-** ಅಸ್ಖಲಿತ ಬ್ರಹ್ಮಚಾರಿಯಾದ ಪುರುಷನು ಸಮಾವರ್ತನವಾದ ಮೇಲೆ ಉತ್ತಮ ಲಕ್ಷಣಗಳಿಂದ ಕೂಡಿದ ವಧುವನ್ನು ಆಯ್ದು ವಿವಾಹವಾಗಬೇಕು. ತಂದೆಯ ಪಕ್ಷದಲ್ಲಿ ಏಳು ಹಾಗೂ ತಾಯಿಯ ಪಕ್ಷದಲ್ಲಿ ಐದು ತಲೆಮಾರುಗಳ ಸಂಬಂಧ ಇಲ್ಲದ ಭಿನ್ನಗೋತ್ರದ ವಧೂವರರು ಇರಬೇಕು. ಅರಸಿನ ಬಣ್ಣ, ಅಂಗಾಧಿಕ್ಯ ಅಥವಾ ನ್ಯೂನತೆ, ಸದಾರೋಗ, ಅತಿರೋಮ ಅಥವಾ ರೋಮವೇ ಇಲ್ಲದಿರುವಿಕೆ, ವಾಚಾಳಿ-ಇತ್ಯಾದಿ ದೋಷಗಳಿರುವ ಕನ್ಯೆಯನ್ನು ಲಗ್ನವಾಗಬಾರದು. ಸುಂದರವಾದ ಶರೀರ, ಸೌಮ್ಯವಾದ ಹೆಸರು, ಹಂಸ ಅಥವಾ ಆನೆಯಂತಹ ನಡಿಗೆ, ಸೂಕ್ಷ್ಮವೂ ಭೂಯಿಷ್ಠವೂ ಆದ ತಲೆಕೂದಲು, ಸುಂದರವಾದ ಹಲ್ಲುಗಳು ಹಾಗೂ ಕೋಮಲವಾದ ಅವಯವಗಳುಳ್ಳ ವಧುವನ್ನು ವರಿಸಬೇಕು.

**ವರನ ಲಕ್ಷಣ:-** ಕುಲ, ಶೀಲ, ಶರೀರ, ವಯಸ್ಸು, ವಿದ್ಯೆ, ದ್ರವ್ಯ ಮತ್ತು ಸನಾಥತ್ವ ಈ ಏಳು ವಿಚಾರಗಳಲ್ಲಿ ವಧುವಿನ ಕುಲಶೀಲಗಳಿಗೆ ಅನುರೂಪನಾದ ವರನನ್ನು ಆಯ್ದು ಕೊಳ್ಳಬೇಕು. ಅಂತೆಯೇ ಈ ಕೆಳಗಿನ ಹತ್ತು ದೋಷಗಳಿರುವವನನ್ನು ಅವನು ಎಷ್ಟೇ ಶ್ರೀಮಂತನಾಗಿದ್ದರೂ ಸರ್ವಥಾ ತ್ಯಜಿಸಬೇಕು. ಜಾತಿಭ್ರಷ್ಟ, ಪಾಷಂಡ, ಸಜ್ಜನ ವಿರೋಧಿ, ವಂಚಕ, ರೋಗಿ, ದುಷ್ಟಸ್ವಭಾವವುಳ್ಳವ, ಒರಟು ಮಾತಿನವ, ಕುಷ್ಠರೋಗಿ, ಬಂಧುಬಾಂಧವ ರಿಲ್ಲದವ, ತಂದೆಯ ಹೆಸರೇ ಗೊತ್ತಿಲ್ಲದವ ಇಂಥವನಿಗೆ ಕನ್ಯಾದಾನಮಾಡಿದರೆ ಕನ್ನಿಕೆಯೂ ಅಧರ್ಮಿಯಾಗಿ ನಾಶಹೊಂದುತ್ತಾಳೆ.

**ಜ್ಯೋತಿಶ್ಶಾಸ್ತ್ರದಲ್ಲಿ ಹೇಳಿದ ವಿಚಾರ:-** ಉತ್ತಮ ವಿದ್ವಾಂಸನಾದ ಜ್ಯೋತಿಷ್ಯನಿಗೆ ತೋರಿಸಿ ವಧೂವರರ ಜಾತಕಗಳನ್ನು ಪರೀಕ್ಷಿಸಬೇಕು. ಅವುಗಳಲ್ಲಿ ಯಾವುದಾದರೂ ದೋಷಗಳಿದ್ದರೆ ಅವುಗಳಿಗೆ ತಕ್ಕ ಪ್ರಾಯಶ್ಚಿತ್ತವನ್ನು ಮಾಡಿ ಮೊದಲು ಪರಿಹರಿಸಿಕೊಳ್ಳಬೇಕು. ವಧೂವರರ ಜಾತಕಗಳ ಹೊಂದಾಣಿಕೆಯನ್ನು ನೋಡುವುದು ಅತ್ಯಂತ ಜಟಿಲವಾದ ಕಾರ್ಯವಾಗಿದೆ. ವಿವಾಹವಾದ ಮೇಲೆ ವಧೂವರರು ಸುಖಶಾಂತಿಯಲ್ಲಿ ಬಾಳಬೇಕು. ಅವರಿಗೆ ಸತ್ಸಂತಾನವಾಗಬೇಕು. ಆದ್ದರಿಂದ ರಾಶಿಕೂಟ, ಗ್ರಹಮೈತ್ರೀ, ಗಣಶುದ್ಧಿ, ನಾಡೀಭೇದ ಇತ್ಯಾದಿಗಳನ್ನು ಕೂಲಂಕಷವಾಗಿ ನೋಡಬೇಕು. ಕಡಿಮೆ ಎಂದರೆ ಇಪ್ಪತ್ತು ಗುಣಗಳಾದರೂ ಕೂಡಿಬರಬೇಕು.

**ವಧೂಪರೀಕ್ಷೆ:-** ವಧುವಿನ ಜನ್ಮಪತ್ರಿಕೆ ಇಲ್ಲದೆ, ಜಾತಕಾನುಕೂಲ್ಯವನ್ನು ನೋಡಲು ಸಾಧ್ಯವಾಗದ ಸಂದರ್ಭದಲ್ಲಿ ಈ ಕೆಳಗಿನಂತೆ ವಧೂಪರೀಕ್ಷೆ ಮಾಡಬಹುದು. ೧. ಎರಡು ಬೆಳೆ ಬರುವ ಜಮೀನು. ೨. ದನಕಟ್ಟುವ ಸ್ಥಳ. ೩. ಉಳಿದ ದರ್ಭೆ ಸಮಿಧೆ ಇತ್ಯಾದಿಗಳನ್ನು ಬಿಸಾಡುವ ಸ್ಥಳ. ೪. ನೀರು ಹರಿದುಹೋಗುವ ಕೆರೆ. ೫. ಜೂಜಾಡುವ ಸ್ಥಳ. ೬. ಸಾರ್ವಜನಿಕ ಚೌಕ. ೭. ಬೆಳೆಬಾರದ ಬಂಜರುಭೂಮಿ. ೮. ಶ್ಮಶಾನ-ಈ ಮಣ್ಣಿನಿಂದ ಎಂಟು ಉಂಡೆಗಳನ್ನು ಮಾಡಿ, ಗುರುತು ಹಾಕಿ ಒಂದು ಮಣೆಯ ಮೇಲಿಟ್ಟು,

**"ಋತಮಗ್ರೇ ಪ್ರಥಮಂ ಜಜ್ಞ ಋತೇ ಸತ್ಯಂ ಪ್ರತಿಷ್ಠಿತಂ ॥**

**ಯದಿಯಂ ಕುಮಾರ್ಯಭಿಜಾತಾ ತದಿಯಮಿಹ ಪ್ರತಿಪದ್ಯತಾಂ**

**ಯತ್ಸತ್ಯಂ ತದ್ದೃಶ್ಯತಾಂ ॥ "**

ಎಂಬ ಮಂತ್ರವನ್ನು ಹೇಳಿ ಅವುಗಳನ್ನು ಅಭಿಮಂತ್ರಿಸಬೇಕು. 'ನಿನಗೆ ಇಷ್ಟಬಂದ ಒಂದು ಉಂಡೆಯನ್ನು ಎತ್ತಿಕೋ' ಎಂದು ಹೇಳಿದಾಗ ಅವಳು ಎತ್ತಿಕೊಂಡ ಉಂಡೆಯು ಯಾವುದೆಂದು ನೋಡಿ. ಈ ಕೆಳಗಿನಂತೆ ಕ್ರಮವಾಗಿ ಅದರ ಫಲವನ್ನು ತಿಳಿಯಬೇಕು. ೧. ಧನಧಾನ್ಯ ಸಂಪನ್ನೆ. ೨. ಪಶುಸಂಪತ್ತು ಉಳ್ಳವಳು. ೩. ವೇದಶಾಸ್ತ್ರಾದಿ ಪಾರಂಗತೆ. ೪. ಸರ್ವವಿಧದ ಸಂಪತ್ತುಳ್ಳವಳು. ೫. ಜೂಜುಕೋರಳು. ೬. ವ್ಯಭಿಚಾರಿಣಿ. ೭. ದಾರಿದ್ರ್ಯವುಳ್ಳವಳು. ೮. ಪತಿಯನ್ನೇ ಕೊಲ್ಲುವವಳು. ಈ ಪರೀಕ್ಷೆಯಿಂದ ವಧು ಎಂಥವಳೆಂಬುದನ್ನು ಅರಿತು ಬಳಿಕ ಆಕೆಯನ್ನು ವರಿಸಬೇಕು. ಇದು ಹಿಂದಿನ ಕಾಲದ ಒಂದು ಪದ್ಧತಿಯಾಗಿದೆಯಷ್ಟೆ.

**ವಿರುದ್ಧ ಸಂಬಂಧಃ-** ಹತ್ತಿರದ ಸಂಬಂಧವುಳ್ಳ ಹುಡುಗಿಯನ್ನು ಮದುವೆ ಆಗಬಾರದು. ಉದಾಹರಣೆಗೆ ತಾಯಿಯ ತಂಗಿಯ ಮಗಳು, ಚಿಕ್ಕಪ್ಪನ ತಂಗಿ ಅಥವಾ ಮಗಳು, ಚಿಕ್ಕಪ್ಪನ ಹೆಂಡತಿಯ ತಂಗಿ, ಅವಳ ಮಗಳು-ಇತ್ಯಾದಿಗಳು. "ಜ್ಯೇಷ್ಠೋಭ್ರಾತಾ ಪಿತುಃ ಸಮಃ" ಎಂಬ ಮಾತಿನಂತೆ ಅಣ್ಣನು ತಂದೆಗೆ ಸಮಾನನಾದವನಾಗಿರುವುದರಿಂದ ಅವನ ಹೆಂಡತಿಯ ತಂಗಿಯು ಚಿಕ್ಕಮ್ಮನಾಗಿರುತ್ತಾಳೆ. ಅಂಥವಳನ್ನೂ ಮದುವೆಯಾಗಬಾರದು.

**ವಿವಾಹಕ್ಕೆ ಯೋಗ್ಯ ಪ್ರಾಯಃ-** ವೈದ್ಯಶಾಸ್ತ್ರದ ದೃಷ್ಟಿಯಿಂದ ಗಂಡುಸಿಗೆ ಇಪ್ಪತ್ತೈದು ವರ್ಷ ಹಾಗೂ ಹೆಣ್ಣಿಗೆ ಹದಿನಾರು ವರ್ಷ ಪ್ರಾಯ ಆದ ಮೇಲೆ ವಿವಾಹ ಮಾಡಬೇಕು. ಆಗ ಇಬ್ಬರ ಶರೀರದ ಬೆಳವಣಿಗೆಯು ಸಾಕಷ್ಟು ಆಗಿದ್ದು ಇಬ್ಬರೂ ಸತ್ಸಂತಾನೋತ್ಪತ್ತಿಗೆ ಅರ್ಹರಾಗಿರುತ್ತಾರೆ. ಮಾತ್ರವಲ್ಲ ಅವರಿಗೆ ಆ ಪ್ರಾಯಕ್ಕೆ ಚೆನ್ನಾಗಿ ತಿಳುವಳಿಕೆ ಬಂದಿರುತ್ತದೆ.

**ಭಿನ್ನಶಾಖೀಯ ವಿವಾಹಃ-** ಸಮಾನವರ್ಣದ ವಧುವನ್ನು ವರಿಸಬೇಕು. ವರ್ಣಗಳು ಬ್ರಾಹ್ಮಣ, ಕ್ಷತ್ರಿಯ ವೈಶ್ಯ ಮತ್ತು ಶೂದ್ರ ಎಂದು ನಾಲ್ಕೇ ಇವೆ. ಈ ಕಾಲದಲ್ಲಿ ಬ್ರಾಹ್ಮಣರಲ್ಲಿ ಹಾಗೂ ಇತರ ವರ್ಣಗಳಲ್ಲಿ ನೂರಾರು ಆಂತರಿಕಪ್ರಭೇದಗಳು, ಜಾತಿಗಳು ಇವೆ. ಒಂದೇ ವರ್ಣದ ಬೇರೆಬೇರೆ ಜಾತಿಯವರು ತಮ್ಮತಮ್ಮಲ್ಲಿ ವಿವಾಹವಾಗಬಹುದು.

**ವಿವಾಹ ಮುಹೂರ್ತಃ-** ಒಳ್ಳೆಯ ಮುಹೂರ್ತವನ್ನು ನೋಡಿ ಸಕಾಲಕ್ಕೆ ಮಾಡಿದ ಸತ್ಕರ್ಮವು ನಿಃಸಂದೇಹವಾಗಿ ಶುಭಫಲವನ್ನು ಕೊಡುತ್ತದೆ. ಧರ್ಮ, ಅರ್ಥ, ಕಾಮ, ಮೋಕ್ಷಗಳಲ್ಲಿ ತನ್ನ ಸಹಧರ್ಮಿಣಿಯನ್ನು ವರಿಸುವ ವಿವಾಹವನ್ನು, ಉತ್ತರಾಯಣ ಶುಕ್ಲಪಕ್ಷ ಮಂಗಲಪ್ರದವಾದ ತಿಥಿ, ನಕ್ಷತ್ರ, ಯೋಗ, ಕರಣ ಇತ್ಯಾದಿಗಳನ್ನು ನೋಡಿ ಜೋಯಿಸರು ಹೇಳಿದ ಶುಭಮುಹೂರ್ತದಲ್ಲಿ ಮಾಡಬೇಕು.

**ಗುರುಬಲ ಹಾಗೂ ರವಿಬಲಃ-** ಸ್ತ್ರೀಯರಿಗೆ ಗುರುಬಲವೂ, ಪುರುಷರಿಗೆ ರವಿಬಲವೂ ಶ್ರೇಷ್ಠವಾಗಿರುತ್ತದೆ. ಸ್ತ್ರೀಪುರುಷರಿಬ್ಬರಿಗೂ ಚಂದ್ರಬಲ ಶ್ರೇಷ್ಠವಾಗಿರುತ್ತದೆ. ವಿವಾಹ ಕಾಲದಲ್ಲಿ ಗುರು ಜನ್ಮ, ಮೂರನೆಯ, ಹತ್ತನೆಯ ಹಾಗೂ ಆರನೆಯ ಸ್ಥಾನದಲ್ಲಿದ್ದರೆ ಬೃಹಸ್ಪತಿಶಾಂತಿ ಮೊದಲಾದವುಗಳಿಂದ ಶುಭಕಾರಕನಾಗುತ್ತಾನೆ. ನಾಲ್ಕು, ಎಂಟು ಮತ್ತು ಹನ್ನೆರಡನೆಯ ಸ್ಥಾನದಲ್ಲಿದ್ದರೆ ಮೃತ್ಯುಕಾರಕನಾಗುತ್ತಾನೆ. ಉಳಿದ ಸ್ಥಾನದಲ್ಲಿದ್ದಾಗ ಶುಭಪ್ರದನೆಂದು ತಿಳಿಯಬೇಕು.

**ಕನ್ಯಾದಾನಕ್ಕೆ ಅಧಿಕಾರಿಗಳು:-** ತಂದೆ, ಅಜ್ಜ, ಅಣ್ಣ, ಚಿಕ್ಕಪ್ಪ, ಕೌಟುಂಬಿಕ, ಆಚಾರ್ಯ, ತಾಯಿಯ ತಂದೆ, ಮಾವ, ತಾಯಿಯ ಇತರ ಬಂಧುಗಳು - ಅನುಕ್ರಮವಾಗಿ ಒಬ್ಬನಿಲ್ಲದಿದ್ದಾಗ ಇನ್ನೊಬ್ಬನು ಅಧಿಕಾರಿಯಾಗುತ್ತಾನೆ.

**ಜ್ಯೇಷ್ಠ ವಿಚಾರ:-** ಜನ್ಮನಕ್ಷತ್ರ, ಜನ್ಮದಿನ, ಜನ್ಮಮಾಸದಲ್ಲಿ ಶುಭಕರ್ಮ ಮಾಡಬಾರದು. ಜ್ಯೇಷ್ಠ ಮಾಸದಲ್ಲಿ ಜ್ಯೇಷ್ಠ ಪುತ್ರ ಹಾಗೂ ಜ್ಯೇಷ್ಠ ಕನ್ಯೆಯ ಯಾವುದೇ ಮಂಗಲಕರ್ಮವನ್ನು ವರ್ಜಿಸಬೇಕು. ವರನು ಜ್ಯೇಷ್ಠನಾಗಿದ್ದು 'ವಧುವು ಜ್ಯೇಷ್ಠಳಲ್ಲದಿದ್ದರೆ ಅಥವಾ ವಧುವು ಜ್ಯೇಷ್ಠಳಾಗಿದ್ದು ವರನು ಜ್ಯೇಷ್ಠನಲ್ಲದಿದ್ದರೆ ಅವರ ವಿವಾಹಕ್ಕೆ ಜ್ಯೇಷ್ಠ ಮಾಸವು ಶುಭದಾಯಕ.

**ಸಗೋತ್ರವಿವಾಹ ಪ್ರಾಯಶ್ಚಿತ್ತ:-** ಯಾರಾದರೂ ತಿಳಿದೂ ಸಗೋತ್ರವಿವಾಹ ಮಾಡಿಕೊಂಡಿದ್ದಾರೆಂದಾದರೆ, ಅಂಥವನು ಗುರುತಲ್ಪಗಮನಕ್ಕೆ ಹೇಳಿದ ಪ್ರಾಯಶ್ಚಿತ್ತವನ್ನು ಮಾಡಿದರೆ ದೋಷಮುಕ್ತನಾಗುತ್ತಾನೆಂದು ಸ್ಮೃತ್ಯರ್ಥಸಾರದಲ್ಲಿ ಹೇಳಿದ್ದಾರೆ.

**ವಿವಾಹದಲ್ಲಿ ಜನನಾಶೌಚವಿಚಾರ:-** ವ್ರತ, ಯಜ್ಞ, ವಿವಾಹ, ಶ್ರಾದ್ಧ, ಹೋಮ, ಪೂಜೆ, ಜಪ ಇವುಗಳನ್ನು ಪ್ರಾರಂಭಿಸಿದ ಮೇಲೆ ಮಧ್ಯದಲ್ಲಿ ಸೂತಕ ಬಂದರೆ, ಅದರಿಂದಲಾಗಿ ಆರಂಭಿಸಿದ ಕರ್ಮವನ್ನು ನಿಲ್ಲಿಸಬಾರದು. ಕರ್ಮದ ಆರಂಭ ಎಂಬುದನ್ನು ಈ ರೀತಿ ನಿರ್ದೇಶಿಸಿದ್ದಾರೆ. ಯಜ್ಞದ ಆರಂಭ ಋತ್ವಿಗ್ವರಣದಿಂದ; ವ್ರತ ಮತ್ತು ಸತ್ರಗಳ ಆರಂಭ ಸಂಕಲ್ಪದಿಂದ; ವಿವಾಹದ ಆರಂಭ ನಾಂದೀಶ್ರಾದ್ಧದಿಂದ; ಶ್ರಾದ್ಧದ ಆರಂಭ ಪಾಕಪ್ರೋಕ್ಷಣದಿಂದ. ಋತ್ವಿಗ್ವರಣದಲ್ಲಿ ಋತ್ವಿಜರಿಗೆ ಯಜಮಾನನು ಮಧುಪರ್ಕವನ್ನು ಕೊಟ್ಟ ಮೇಲೆ ಅವರಿಗೆ ಸೂತಕದ ದೋಷವಿಲ್ಲ. ಕರ್ಮಾರಂಭದ ಮೊದಲು ಸೂತಕ ಬಂದಿದ್ದರೆ, ಕೂಷ್ಮಾಂಡಮಂತ್ರ ಗಳಿಂದ ತುಪ್ಪದ ಹೋಮಮಾಡಿ ಪಂಚಗವ್ಯಪಾನಮಾಡಿದರೆ ಸೂತಕಿಯು ಶುದ್ಧನಾಗುತ್ತಾನೆ. ಆಮೇಲೆ ಚೌಲ, ಉಪನಯನ, ವಿವಾಹ, ದೇವಪ್ರತಿಷ್ಠೆ ಮುಂತಾದ ಕರ್ಮಗಳನ್ನು ಮಾಡಬಹುದು. ಸೂತಕ ಪ್ರಾಪ್ತವಾದ ಅದೇ ದಿನ ವೃದ್ಧಿ ಶ್ರಾದ್ಧಾದಿ ಆಭ್ಯುದಾಯಿಕ ಕರ್ಮಗಳನ್ನು ಮಾಡಬೇಕು.

---

# ॥ ವರ್ಧಾಪನ ನಿರ್ಣಯಃ ॥

**ಸ ಚ ವರ್ಷಪರ್ಯಂತಂ ಪ್ರತಿಮಾಸಂ ಜನ್ಮತಿಥೌ ಕಾರ್ಯಃ । ವರ್ಷೋತ್ತರಂ ಪ್ರತ್ಯಬ್ದಂ ಜನ್ಮತಿಥೌ ಕಾರ್ಯಃ । ತಿಥಿದ್ವೈಧೇ ಯತ್ರ ಜನ್ಮರ್ಕ್ಷಯೋಗಃ ಸಾ ಗ್ರಾಹ್ಯಾ । ದಿನದ್ವಯೇ ಜನ್ಮನಕ್ಷತ್ರಯೋಗಸತ್ತ್ವಾಸತ್ತ್ವಯೋರೌದಯಿಕೀ ದ್ವಿಮುಹೂರ್ತಾಧಿಕಾ ಗ್ರಾಹ್ಯಾ । ದ್ವಿಮುಹೂರ್ತ ನ್ಯೂನತ್ವೇ ಪೂರ್ವಾ । ಜನ್ಮಮಾಸಸ್ಯ ಅಧಿಮಾಸತ್ವೇ ಶುದ್ಧಮಾಸೇ ಪ್ರತ್ಯಾಬ್ದಿಕವರ್ಧಾಪನ ವಿಧಿರ್ನತ್ವಧಿಕೇ ॥**

## ಪುಂಸವನಾದಿನವಸಂಸ್ಕಾರಲೋಪನಿಮಿತ್ತಕ ಪ್ರಾಯಶ್ಚಿತ್ತ ಹೋಮಃ :-

**ಆಚಮ್ಯ ಪವಿತ್ರಪಾಣಿಃ ಪ್ರಾಣಾನಾಯಮ್ಯ । ಮಮಾಸ್ಯ ಕುಮಾರಸ್ಯ ಸ್ವಸ್ವಕಾಲೇಷು ಕರ್ತವ್ಯಾನಾಂ ಪುಂಸವನಾದಿ ಚೌಲಾಂತನವಸಂಸ್ಕಾರಾಣಾಂ ಲೋಪಜನಿತಪ್ರತ್ಯವಾಯಪರಿಹಾರದ್ವಾರಾ ಶ್ರೀ ಪರಮೇಶ್ವರಪ್ರೀತ್ಯರ್ಥಂ ಏತೇಷು ಏಕೈಕಲೋಪೇ ಪಾದಕೃಛ್ರಂ ಚೂಡಾಯಾಶ್ಚಾರ್ಧಕೃಚ್ಛ್ರಮಿತ್ಯೇವಂ ಸಾರ್ಧಕೃಚ್ಛ್ರದ್ರವ್ಯಪರಿಮಿತಪ್ರಾಯಶ್ಚಿತ್ತಂ ಯಥಾಶಕ್ತಿರಜತಪ್ರತ್ಯಾಮ್ನಾಯೇನ ಆಚರಿಷ್ಯೇ ಇತಿ ಸಂಕಲ್ಪ್ಯ ಬ್ರಾಹ್ಮಣಾನ್ ಸಂಪೂಜ್ಯ। ಇದಂ ಸಾರ್ಧಕೃಚ್ಛ್ರ ದ್ವಯಪ್ರತ್ಯಾಮ್ನಾಯಗೋನಿಷ್ಕ್ರಯಿಭೂತಂ ಪ್ರತಿಕೃಚ್ಛ್ರಂ ನಿಷ್ಕತದರ್ಧತದರ್ಧಾನ್ಯತಮಪ್ರಮಾಣ-**

---

**ವರ್ಧಾಪನ ನಿರ್ಣಯ (ಹುಟ್ಟುಹಬ್ಬ):-** ಒಂದು ವರ್ಷ ಪರ್ಯಂತ ಜನ್ಮ ದಿನ ವಿಧಿಯನ್ನು ಜನ್ಮತಿಥಿಯ ದಿವಸ ಪ್ರತಿತಿಂಗಳಲ್ಲಿಯೂ ಮಾಡಬೇಕು. ನಂತರ ವರ್ಷಕ್ಕೊಂದು ಸಲ ಸಾಕು. ಜನ್ಮತಿಥಿ ಎರಡು ದಿನಗಳಿದ್ದರೆ ಜನ್ಮನಕ್ಷತ್ರದ ಯೋಗವಿದ್ದ ದಿವಸ ಮಾಡಬೇಕು. ಎರಡು ದಿನವೂ ಜನ್ಮನಕ್ಷತ್ರದ ಯೋಗವಿದ್ದರೆ, ಯೋಗವಿದ್ದ ದಿವಸ ಮಾಡಬೇಕು. ಅಥವಾ ಎರಡು ದಿನಗಳಲ್ಲೂ ಇಲ್ಲವೆಂದಾದರೆ ಸೂರ್ಯೋದಯಕಾಲ ವ್ಯಾಪಿನೀ ನಾಲ್ಕು ಘಳಿಗೆಗಳಿಗಿಂತ ಅಧಿಕವಿರುವ ದಿನವನ್ನು ತೆಕ್ಕೊಳ್ಳಬೇಕು. ಹುಟ್ಟಿದ ತಿಂಗಳು ಅಧಿಕಮಾಸವಾಗಿದ್ದರೆ ಪ್ರತಿವರ್ಷವೂ ಶುದ್ಧಮಾಸದಲ್ಲಿ ವರ್ಧಾಪನವಿಧಿಯನ್ನು ಮಾಡಬೇಕು.

**ಪುಂಸವನಾದಿ ಚೌಲಾಂತ ಸಂಸ್ಕಾರಲೋಪದ ಪ್ರಾಯಶ್ಚಿತ್ತ:-** ಆಚಮನ ಮಾಡಿ ಪವಿತ್ರ ಧರಿಸಿ, ಪ್ರಾಣಾಯಾಮವನ್ನು ಮಾಡಿ **"ಮಮಾಸ್ಯ ಕುಮಾರಸ್ಯ ..... ಆಚರಿಷ್ಯೇ"** ಎಂದು ಸಂಕಲ್ಪ ಮಾಡಬೇಕು. ಬಳಿಕ ಬ್ರಾಹ್ಮಣರನ್ನು ಅರ್ಚಿಸಿ, **"ಇದಂ ಸಾರ್ಧ ..... ಮುತ್ಸೃಜೇ"** ಎಂದು ಹೇಳಿ ಗರ್ಭಾದಾನ ಅಥವಾ ಪುಂಸವನದಿಂದ ಯಾವ ಸಂಸ್ಕಾರ ಮಾಡದೆ

ರಜತದ್ರವ್ಯಂ ನಾನಾನಾಮಗೋತ್ರೇಭ್ಯೋ ಬ್ರಾಹ್ಮಣೇಭ್ಯೋ ದಾತುಮಹ-ಮುತ್ಸೃಜೇ ॥ ತತಃ ಪ್ರಾಯಶ್ಚಿತ್ತಹೋಮಸಂಕಲ್ಪಂ ಕುರ್ಯಾತ್ ॥ ತಥಾ ಚ ಅಸ್ಯ ಚೂಡಾಂತಾನಾಂ ಸಂಸ್ಕಾರಾಣಾಂ ಕಾಲಾತ್ಯಯನಿಮಿತ್ತಪ್ರಾಯಶ್ಚಿತ್ತಹೋಮಂ ಕರಿಷ್ಯೇ । ತತ್ರಾದೌ ನಿರ್ವಿಘ್ನತಾಸಿದ್ಧ್ಯರ್ಥಂ ಗಣಪತಿಪೂಜನಂ ಕರಿಷ್ಯೇ । ಗಣಪತಿಂ ಸಂಪೂಜ್ಯ ॥ ಸ್ಥಂಡಿಲಾದಿಕೃತ್ವಾ ವಿಟ್ ನಾಮಾಗ್ನಿಂ ಪ್ರತಿಷ್ಠಾಪ್ಯ । ಅನ್ವಾಧಾನಂ ಕುರ್ಯಾತ್ । ಅಸ್ಮಿನ್ನನ್ವಾಹಿತೇಗ್ನೌ ಜಾತವೇದಸಮಗ್ನಿಮಿಧ್ಮೇನ ಪ್ರಜಾಪತಿಂ ಪ್ರಜಾಪತಿಂ ಚಾಘಾರದೇವತೇ ಆಜ್ಯೇನ ಅತ್ರ ಪ್ರಧಾನಂ । ಸಮಸ್ತಾಭಿರೇಕೇತಿ ನವಾಜ್ಯಾಹುತಿಭಿಃ ಪುನರ್ವ್ಯಾಹೃತಿಭಿಶ್ಚ ಯಕ್ಷ್ಯೇ । ಶೇಷೇಣ ಸ್ವಿಷ್ಟಕೃತಮಿತ್ಯಾದಿ ಆಜ್ಯಭಾಗಾಂತಂ ಕೃತ್ವಾ । ಪ್ರಧಾನಹೋಮಂ ಕುರ್ಯಾತ್ ॥ ಓಂ ಭೂರ್ಭುವಃ ಸ್ವಃ ಸ್ವಾಹಾ ಇತಿ ಮಂತ್ರೇಣ ನವಾಹುತಿಂ ದದ್ಯಾತ್ । ಓಂ ಭೂಃ ಸ್ವಾಹಾ ॥ ೧ ॥ ಓಂ ಭುವಃ ಸ್ವಾಹಾ ॥ ೨ ॥ ಓಂ ಸ್ವಃ ಸ್ವಾಹಾ ॥ ೩ ॥ ಓಂ ಭೂರ್ಭುವಃ ಸ್ವಃ ಸ್ವಾಹಾ ॥ ೪ ॥ ಐಂ ಭೂರಗ್ನಯೇ ಪೃಥಿವ್ಯೈ ಚ ಮಹತೇ ಸ್ವಾಹಾ ॥ ೫ ॥ ಓಂ ಭುವೋ ವಾಯವೇ ಚಾಂತರಿಕ್ಷಾಯ ಮಹತೇ ಸ್ವಾಹಾ ॥ ೬ ॥ ಓಂ ಸುವರಾದಿತ್ಯಾಯ ಚ ದಿವೇ ಚ ಮಹತೇ ಸ್ವಾಹಾ ॥ ೭ ॥ ಓಂ ಭೂರ್ಭುವಃ ಸ್ವಃ ಚಂದ್ರಮಸೇ ಚ ನಕ್ಷತ್ರೇಭ್ಯಶ್ಚ ದಿಗ್ಭ್ಯಶ್ಚ ಮಹತೇ ಸ್ವಾಹಾ ॥ ೮ ॥ ಓಂ ಪಾಹಿನೋ ಅಗ್ನ ಏವಸೇ ಸ್ವಾಹಾ ॥ ೯ ॥ ಓಂ ಪಾಹಿನೋ ವಿಶ್ವವೇದಸೇ ಸ್ವಾಹಾ ॥ ೧೦ ॥ ಓಂ ಯಜ್ಞಂ ಪಾಹಿ

---

ಬಾಕಿಯಾಗಿದೆಯೋ ಆಯಾ ಒಂದೊಂದು ಸಂಸ್ಕಾರದ ಬಗ್ಗೆ ಕಾಲು ಕೃಚ್ಛ್ರದಂತೆಯೂ ಹಾಗೂ ಚೂಡಾಕರ್ಮಕ್ಕೆ ಅರ್ಧ ಕೃಚ್ಛ್ರದಂತೆಯೂ ಯಥಾಶಕ್ತಿ ನಿಶ್ಚಯಮಾಡಿದ ಪ್ರಮಾಣದಲ್ಲಿ ಬ್ರಾಹ್ಮಣರಿಗೆ ಕೊಡಬೇಕು. ಪುನಃ **"ತಥಾ ಚ ಅಸ್ಯ... ಪ್ರಾಯಶ್ಚಿತ್ತಹೋಮಂ ಕರಿಷ್ಯೇ"** ಎಂದು ಸಂಕಲ್ಪಿಸಿ ಗಣಪತಿಪೂಜೆಯನ್ನು ಮಾಡಬೇಕು. ಸ್ಥಂಡಿಲಾದಿಗಳನ್ನು ಮಾಡಿ **"ವಿಟ್"** ಎಂಬ ಅಗ್ನಿಯನ್ನು ಪ್ರತಿಷ್ಠಾಪಿಸಿ ಅನ್ವಾಧಾನ ಮಾಡಬೇಕು. **"ಶೇಷೇಣ ಸ್ವಿಷ್ಟಕೃತ...."** ಎಂದು ಮೊದಲಾಗಿ ಹೇಳಿ ಸ್ಥಾಲೀಪಾಕದಲ್ಲಿ ಹೇಳಿದಂತೆ ಆಜ್ಯ ಭಾಗಾಂತದ ವರೆಗಿನ ಕರ್ಮಗಳನ್ನು

**ವಿಭಾವಸೋ ॥ ೧೧ ॥ ಓಂ ಸರ್ವಂ ಪಾಹಿ ಶತಕ್ರತೋ ಸ್ವಾಹಾ ॥ ೧೨ ॥ ಓಂ ಪುನರುರ್ಜಾನಿವರ್ತಸ್ವ ಪುನರಗ್ನ ಇಹಾಯುಷಾ ॥ ಪುನರ್ನಃ ಪಾಹ್ಯಹಂಸಃ ಸ್ವಾಹಾ ॥ ೧೩ ॥ ಓಂ ಸಹರಯ್ಯಾನಿವರ್ತಸ್ವಾಗ್ನೇಪಿನ್ವಸ್ವಧಾರಯಾ ॥ ವಿಶ್ವಪ್ರಿಯಾಸಿ ವಿಶ್ವತಸ್ಪರಿ ಸ್ವಾಹಾ ॥ ೧೪ ॥ ಓಂ ಭೂರ್ಭುವಃ ಸ್ವಃ ಸ್ವಾಹಾ ॥ ೧೫ ॥ ತತಃ ಸ್ವಿಷ್ಟಕೃದಾದಿ ಹೋಮಶೇಷಂ ಸಮಾಪಯೇತ್ ॥ ವಿಭೂತಿಂ ಧೃತ್ವಾ ಅಗ್ನಿಂ ಸಂಪೂಜಯೇತ್ ॥**

## ಗರ್ಭಾಧಾನಾದಿಪ್ರಾಶನಾಂತನವಸಂಸ್ಕಾರಾಣಾಂ ಸಹತಂತ್ರಪ್ರಯೋಗಃ

**ಆಚಮ್ಯ ಪವಿತ್ರಪಾಣಿಃ ಪ್ರಾಣಾನಾಯಮ್ಯ ॥ ಶ್ರೀಮನ್ಮಹಾಗಣಾಧಿಪತಯೇ .... ॥ ಸುಮುಖಶ್ಚೈಕ .... ॥ ಮಮಾಸ್ಯ ಕುಮಾರಸ್ಯ ಸ್ವಸ್ವ ಕಾಲೇ ಕರ್ತವ್ಯಾನಾಂ ಗರ್ಭಾಧಾನಾದಿ ಪ್ರಾಶನಾಂತ ನವಸಂಸ್ಕಾರಾಣಾಂ ಯಥೋಕ್ತಫಲಪ್ರಾಪ್ತ್ಯರ್ಥಂ ಬೀಜಗರ್ಭಸಮುದ್ಭವೈನೋನಿಬರ್ಹಣೇನ ಬಲಾಯುರ್ವರ್ಚೋರ್ವೃದ್ಧಿದ್ವಾರಾ ಶ್ರೀಪರಮೇಶ್ವರಪ್ರೀತ್ಯರ್ಥಂ ಗರ್ಭಾಧಾನಪುಂಸವನಾದಿ ಅನ್ನಪ್ರಾಶನಾಂತಸಂಸ್ಕಾರಾನ್ ಸಹ ತಂತ್ರೇಣ ಕರಿಷ್ಯೇ ॥ ತದಂಗಭೂತಂ ಸ್ವಸ್ತಿಪುಣ್ಯಾಹವಾಚನಂ ಮಾತೃಕಾಪೂಜನಂ ನಾಂದೀಶ್ರಾದ್ಧಂ ಗ್ರಹಯಜ್ಞಂ ಚ ಕರಿಷ್ಯೇ ॥ ತತ್ರಾದೌ ನಿರ್ವಿಘ್ನತಾಸಿದ್ಧ್ಯರ್ಥಂ ಮಹಾಗಣಪತಿ ಪೂಜನಂ ಕರಿಷ್ಯೇ ।**

---

ಮಾಡಿ ಪ್ರಧಾನಹೋಮವನ್ನು ನೆರವೇರಿಸಬೇಕು. "**ಓಂ ಭೂರ್ಭುವಃ ಸ್ವಃ ಸ್ವಾಹಾ**" ಈ ಮಂತ್ರದಿಂದ ಒಂಭತ್ತು ಆಜ್ಯಾಹುತಿಗಳನ್ನೂ ಕೊಡಬೇಕು. ಬಳಿಕ ಸ್ಥಾಲೀಪಾಕದಲ್ಲಿ ಹೇಳಿದಂತೆ ಸ್ವಿಷ್ಟಕೃದಾದಿ ಹೋಮಶೇಷವನ್ನು ಮಾಡಿ ಮುಗಿಸಬೇಕು.

**ಗರ್ಭಾಧಾನಾದಿ ಅನ್ನಪ್ರಾಶನದ ವರೆಗಿನ ಸಂಸ್ಕಾರಗಳನ್ನು ಸಹತಂತ್ರದಿಂದ ಮಾಡುವ ಕ್ರಮ:-** ಆಚಮನ ಮಾಡಿ ಪವಿತ್ರ ಧರಿಸಿ ಪ್ರಾಣಾಯಾಮ ಮಾಡಿ "**ಮಮಾಸ್ಯ ಕುಮಾರಸ್ಯ.... ನಾಂದೀಶ್ರಾದ್ಧಂ ಚ ಕರಿಷ್ಯೇ**" ಎಂದು ಸಂಕಲ್ಪ ಮಾಡಬೇಕು. "**ತತ್ರಾದೌ..... ಗಣಪತಿಪೂಜನಂ ಕರಿಷ್ಯೇ**" ಎಂದು ಹೇಳಿ, ಗಣಪತಿ ಪೂಜೆ, ಪುಣ್ಯಾಹವಾಚನ, ಮಾತೃಕಾಪೂಜನ, ನಾಂದೀಶ್ರಾದ್ಧ ಗ್ರಹಯಜ್ಞಗಳನ್ನು ಮಾಡಬೇಕು.

**ತಾನಿಕೃತ್ವಾ । ಅಥ ಸಾಮಗ್ರಿಂ ದರ್ಭದೂರ್ವಾಗೋಮಯಗೋಧಿಯವೈಕಮಾಷದ್ವಯದೂರ್ವಾಕಲ್ಕವಸ್ತ್ರಸಂಚಲೇ ಸಂಗ್ರಹಣಂ । ಆಜ್ಯ ಚರುಸಿದ್ಧಂ । ಅಪಕ್ವಫಲಯುತೌದುಂಬರಸ್ತಬಕೌ ಕಂಬಲಾಸನಂ ಇಧ್ಮಾಬರ್ಹಿಷೀ ಔದುಂಬರಫಲಮಾಲಾ । ದಕ್ಷಿಣತೋಗ್ನೇ ವಿಷ್ಣುಬಲ್ಯಂಗತ್ವೇನ ಸ್ಥಂಡಿಲೇ ಪೀಠೇ ಅಷ್ಟದಲೇ ಪದ್ಮೇ ಸ್ವಸ್ತಿಕೇ ವಾ ವಿಷ್ಣೋಃ ಪ್ರತಿಮಾಪೂಜನಂ ॥ ಅಗ್ನೇರೈಶಾನ್ಯಾಂ ದ್ವಾತ್ರಿಂಶದಂಗುಲಾಯಾಮವಿಸ್ತಾರಂ ಗೋಮಯೇನೋಪಲಿಪ್ತೇ ಸ್ಥಂಡಿಲೇ ಚತುರಂಗುಲಕ್ರೀಡಾವತ್ಸಮಚತುರಸ್ರ ಚತುಃ ಷಷ್ಟಿಪದಂ ಸಿತೇನ ರಜಸಾಮಂಡಲಕರಣಂ ॥ ಅಥಜಾತಕರ್ಮಾರ್ಥಂ ವಿಷಮ ಮಾನೇನ ಮಧುಸ-**

---

ಬಳಿಕ ಈ ಸಂಸ್ಕಾರಗಳಿಗೆ ಬೇಕಾದ ಯಜ್ಞಸಾಮಗ್ರಿಗಳನ್ನು ದಕ್ಷಿಣದಿಂದ ಉತ್ತರಕ್ಕೆ ತಯಾರಿಸಿ ಇಡಬೇಕು. ಪುಂಸವನಕ್ಕೆ ದರ್ಭೆ, ದೂರ್ವೆ, ಗೋಮಯ, ದನದ ಮೊಸರು, ಒಂದು ಯವ, ಎರಡು ಉದ್ದಿನ ಕಾಳು, ದೂರ್ವೆಯನ್ನು ಜಜ್ಜಿ ಅದನ್ನು ಶುಭ್ರ ವಸ್ತ್ರದಲ್ಲಿ ಕಟ್ಟಿದ ಗಂಟು, ಆಜ್ಯ, ಚರು, ಎರಡು ಕಾಯಿಗಳಿರುವ ಔದುಂಬರದ ಟೊಂಗೆ ಒಂದು, ಕೆಂಪುಬಟ್ಟೆಯ ಆಸನ, ಇಧ್ಮ, ಬರ್ಹಿ, ಶೂರ್ಪ, ಕೃಷ್ಣಾಜಿನ ಮುಂತಾದ ಸ್ಥಾಲೀಪಾಕದಲ್ಲಿ ಹೇಳಿದ ವಸ್ತುಗಳು-ಇವುಗಳನ್ನು ಸ್ಥಂಡಿಲದಿಂದ ಪೂರ್ವಭಾಗದಲ್ಲಿ ದಕ್ಷಿಣದಿಕ್ಕಿನಲ್ಲಿಡಬೇಕು. ಅದರ ಉತ್ತರಭಾಗದಲ್ಲಿ ವಿಷ್ಣುಬಲಿಗಾಗಿ ವೇದಿ ಅಥವಾ ಮಣೆಯ ಮೇಲೆ ಗಂಧದಿಂದ ಅಷ್ಟದಳ ಪದ್ಮ ಅಥವಾ ಸ್ವಸ್ತಿಕಚಿಹ್ನೆಯನ್ನು ಬರೆದು, ಅದರ ಮೇಲೆ ವಿಷ್ಣು ಪ್ರತಿಮೆಯನ್ನು ಅಗ್ನ್ಯುತ್ತಾರಣ ವಿಧಿಯಿಂದ ಇಡಬೇಕು. ಆ ಪ್ರತಿಮೆಯ ಉತ್ತರಕ್ಕೆ ಮೂವತ್ತೆರಡು ಅಂಗುಲ ಚಚ್ಚೌಕವಾಗಿರುವ ವೇದಿಯನ್ನು ನಿರ್ಮಿಸಿ ಅದನ್ನು ಗೋಮಯದಿಂದ ಶುದ್ಧೀಕರಿಸಿ, ಅದರ ಮೇಲೆ ಬಿಳಿ ರಂಗವಲ್ಲಿಯಿಂದ ನಾಲ್ಕು ನಾಲ್ಕು ಅಂಗುಲದ ಅರ್ವತ್ತನಾಲ್ಕು ಚೌಕಗಳನ್ನು ಬರೆಯಬೇಕು. ಅದರ ಉತ್ತರಕ್ಕೆ ಜಾತಕರ್ಮಕ್ಕಾಗಿ ಜೇನು ಮತ್ತು ತುಪ್ಪಗಳನ್ನು ಕಡಿಮೆ ಹಾಗೂ ಹೆಚ್ಚು ಇರುವ ಪ್ರಮಾಣದಲ್ಲಿ ಬೆರೆಸಿ ಸ್ವಚ್ಛವಾದ ಕಲ್ಲಿನ ಮೇಲೆ ಇಟ್ಟು ಅದರಲ್ಲಿ ಬಂಗಾರದ ಒಂದು ವಸ್ತುವನ್ನು ಹಾಕಿ, ಅದನ್ನು ಚಿನ್ನ ಅಥವಾ ಬೆಳ್ಳಿಯ ಪಾತ್ರೆಯಲ್ಲಿ ಇಡಬೇಕು. ನಾಮಕರಣಕ್ಕಾಗಿ ಪಾತ್ರೆಯಲ್ಲಿ ಅಕ್ಕಿ ಹಾಕಿ, ಅದರ ಮೇಲೆ ಕುಲದೇವತಾ ಭಕ್ತನಾಮ ಮೊದಲಾಗಿ ನಾಲ್ಕು ಹೆಸರುಗಳನ್ನು ಬರೆಯಬೇಕು. ನಿಷ್ಕ್ರಮಣ ಸಂಸಾರಕ್ಕೆ ಬಟ್ಟೆಯಿಂದ ಮುಚ್ಚಿದ ಮಣೆಯ ಮೇಲೆ ಇಂದ್ರಾದಿ ಅಷ್ಟದಿಕ್ಪಾಲ, ಚಂದ್ರ, ಸೂರ್ಯ, ವಾಸುದೇವ ಮತ್ತು ಗಗನದೇವತೆಗಳನ್ನು ಉತ್ತರದಿಕ್ಕಿಗೆ ಆಗುವಂತೆ ಇಡಬೇಕು. ಮಗುವಿಗೆ ತೋರಿಸಲಿಕ್ಕೆಂದು ಅಗ್ನಿಮೂರ್ತಿ, ಚಂದ್ರಮೂರ್ತಿ ಮತ್ತು ಧೇನು ಕುಳಿತುಕೊಳ್ಳಲು ಕುದುರೆ ಇವಿಷ್ಟನ್ನು ಹೊರಗೆ ತಂದಿಡಬೇಕು. ಹುಡುಗನ ರಕ್ಷಣೆಗೆ ವಿಭೂತಿ, ಮಂತ್ರಾಕ್ಷತೆ ಇಟ್ಟು ಅದರ ಉತ್ತರಕ್ಕೆ ಸಪ್ತಧಾನ್ಯ ರಾಶಿಯ ಮೇಲೆ ಎರಡು ಕಲಶಗಳನ್ನು ಸ್ಥಾಪಿಸಿ, ಅದರ ಮೇಲೆ ಭೂತೇಶ ಮತ್ತು ಗಣೇಶನ ಪ್ರತಿಮೆಗಳನ್ನು ಅಗ್ನ್ಯುತ್ತಾರಣವಿಧಿಯಿಂದ ಸ್ಥಾಪಿಸಿ ಅದರ ಹತ್ತಿರ ಎರಡು ಬಲಿಪಾತ್ರೆಗಳನ್ನೂ ಪೂಜಾಸಾಮಗ್ರಿಗಳನ್ನೂ ಇಡಬೇಕು.

ರ್ಪಿಷೀ ಮಿಶ್ರೀಕೃತ್ಯ ಶಿಲಾತಲೇ ನಿಧಾನಂ । ಸುವರ್ಣರಜೋವಿಮೋಕಂ ಯಾವದವಘರ್ಷಣಂ ಭಾಜನೇ ॥ ನಾಮಕರ್ಮಾರ್ಥಂ ಕಾಂಸ್ಯಪಾತ್ರೇ ತಂದುಲ-ಪೂರ್ಣೇ ಸುವರ್ಣಶಲಾಕಯಾ ನಾಮಚತುಷ್ಟಯಂ (ಕುಲದೇವತಾ ಭಕ್ತನಾಮ ಮಾಸನಾಮ ನಾಕ್ಷತ್ರಂ ನಾಮ ವ್ಯಾವಹಾರಿಕಂ ನಾಮೇತಿ) ॥ ನಿಷ್ಕ್ರಮಣಾರ್ಥಂ ಇಂದ್ರಾದಿ ಅಷ್ಟದಿಕ್ಪಾಲಾನಾಂ ಚಂದ್ರಾರ್ಕವಸುದೇವಗಗನಾನಾಂ ಚ ಯಥಾಕ್ರಮಂ ಪೀಠೇಸ್ಥಾಪನಾ ॥ ಅಗ್ನಿಚಂದ್ರಧೇನುದರ್ಶನಂ ಚ ॥ ಅಶ್ವಾರೋಹಣಂ ಗೃಹಾದ್ಬಹಿಃ ಶಿವವಿಷ್ಣ್ವಾದಿದೇವಾಯ ಪುಷ್ಪೋಪಹಾರಾಃ ಪೂಜನಾರ್ಥಂ ॥ ಶಿಶೋರುಪವೇಶ-ನಾರ್ಥಂ ಗೋಮಯಲಿಪ್ತೇ ದೇಶೇ ಚತುರಸ್ರೇ ದೇಶೇ ಧಾನ್ಯಾದಿ ನಿಧಾನಂ ॥ ರಕ್ಷಾರ್ಥಂ ವಿಭೂತಿರ್ಮಂತ್ರಾಕ್ಷತಾಃ । ಭೂತೇಶಗಣೇಶಯೋಃ ಸ್ಥಾಪನಾ ॥ ಅನ್ನಪ್ರಾಶನೇ ದಧಿಮಧುಘೃತಮಿಶ್ರಂ ಅನ್ನಂ ಶುಭೇ ಭಾಜನೇ ಪ್ರಕ್ಷಿಪತಿ ॥ ಪುಸ್ತಕ ಶಸ್ತ್ರ ವಸ್ತ್ರಾದಿಕಂ ಚ ಸಂಪಾದ್ಯ ॥ ಅದ್ಯೇತ್ಯಾದಿ ..... ॥ ಅಸ್ಯ ಕುಮಾರಸ್ಯ ಗರ್ಭಾಧಾನಪುಂಸವನಾನವಲೋಭನಸೀಮಂತೋನ್ನಯನ ವಿಷ್ಣುಬಲಿಜಾತಕರ್ಮ ನಾಮಕರಣನಿಷ್ಕ್ರಮಣಾನ್ನಪ್ರಾಶನೇತಿ ನವ ಸಂಸ್ಕಾರಾಣಾಂ ಸಹ ತಂತ್ರೇಣ ಕರ್ಮ ಕರ್ತುಂ ಆದೌ ಸ್ಥಂಡಿಲಾದಿ ಕರ್ಮ ಕರಿಷ್ಯೇ ॥ ಗೋಮಯಾಲಿಪ್ತೇ... । ಬಲವರ್ಧನನಾಮಾಗ್ನಿಂ ಪ್ರತಿಷ್ಠಾಪ್ಯ । ಅಭ್ಯುದಯಿಕಸಂಸ್ಕಾರಾಣಾಂ ಪೌಷ್ಟಿಕಾತ್ವಾವ-ಗಮಾತ್ ಪೌಷ್ಟಿಕೇಷು ಬಲವರ್ಧನನಾಮಾಗ್ನಿರಿತಿ ವಚನಾತ್ । ಅನ್ವಾಧಾನಂ ಕುರ್ಯಾತ್ । ಮಯಾ ಕ್ರಿಯ ಮಾಣೇ ಗರ್ಭಾಧಾನಾದಿ ನವಸಂಸ್ಕಾರಾಣಾಂ ಸಹ ತಂತ್ರೇಣ ಹೋಮೇ ದೇವತಾಪರಿಗ್ರಹಾರ್ಥಮನ್ವಾಧಾನಂ ಕರಿಷ್ಯೇ ॥ ಸಮಿದ್ದ್ವ-ಯಮಾದಾಯ । ಅಸ್ಮಿನ್ನನ್ವಾಹಿತೇಗ್ನೌ ಜಾತವೇದಸಮಗ್ನಿಮಿಧ್ಮೇನ ಪ್ರಜಾಪತಿಂ ಪ್ರಜಾಪತಿಂ ಚಾಘಾರದೇವತೇ ಆಜ್ಯೇನ ಅತ್ರಪ್ರಧಾನಂ । ಪ್ರಜಾಪತಿಂ ಚರುಣಾ ವಿಷ್ಣುಂ ಷಡ್ವಾರಮಾಜ್ಯೇನ ಪ್ರಜಾಪತಿಂ ಚಾಜ್ಯೇನೇತಿ ಗರ್ಭಾಧಾನದೇವತಾಃ । ಪ್ರಜಾಪತಿಂ ಚರುದ್ರವ್ಯೇಣೇತಿ ಪುಂಸವನಾನವಲೋಭನದೇವತಾಃ । ದ್ವಿರ್ಧಾತಾರಂ ದ್ವಿರಾಕಾಂ ತ್ರಿರ್ವಿಷ್ಣುಂ ಪ್ರಜಾಪತಿಂ ಚೈತಾಃ ಸೀಮಂತೋನ್ನಯನ ದೇವತಾಃ ಆಜ್ಯೇನ । ವಿಷ್ಣುಂ ಚತುಃಷಷ್ಟಿವಾರಂ ಚರುಣೇತಿ ಬಲಿಪ್ರಧಾನದೇವತಾಃ । ಅಗ್ನಿಮಿಂದ್ರಂ ಪ್ರಜಾಪತಿಂ ವಿಶ್ವಾನ್ ದೇವಾನ್ ಬ್ರಹ್ಮಾಣಂ ಚೈತಾಃ ಜಾತಕರ್ಮ ದೇವತಾ ಆಜ್ಯೇನ । ಪುನಶ್ಚೈತಾ ಏವ ನಾಮಕರ್ಮದೇವತಾ ಆಜ್ಯೇನ ಪುನರ-ಪಿಶ್ಚೈತಾ ಏವ ನಿಷ್ಕ್ರಮಣಾನ್ನಪ್ರಾಶನ ಪ್ರಧಾನಾದೇಶದೇವತಾಃ ಅಗ್ನಿಮಿಂದ್ರಂ ಪ್ರಜಾಪತಿಂ ವಿಶ್ವಾನ್ ದೇವಾನ್ ಬ್ರಹ್ಮಾಣಂ ಚೈತಾಃ ಅನಾದೇಶದೇವತಾ

**ದ್ವಿವಾರಮಾಜ್ಯೇನ ॥ ಶೇಷೇಣ ಸ್ವಿಷ್ಟಕೃತಮಿತ್ಯಾದಿ ಅವದಾನಧರ್ಮಾಂತಂ ಸ್ಥಾಲೀಪಾಕಂ ಕರ್ಮ ಕುರ್ಯಾತ್ ॥ ನವಸಂಸ್ಕಾರಪ್ರಯೋಗೇಷು ಯಥೋಕ್ತಾನಿ ಪ್ರಧಾನ ಹೋಮಾದ್ಯಂಗಭೂತಾನಿ ಕರ್ಮಾಣಿ ಕುರ್ಯಾತ್ । ತತಃ ಸ್ವಿಷ್ಟಕೃದಾದಿ ಹೋಮಶೇಷಂ ಕರ್ಮ ಸಮಾಪಯೇತ್ ॥**

---

# ॥ ರಜೋದೋಷವಿಚಾರಃ ॥

**ಮೇಧಾತಿಥಿಃ ॥ ಚೌಲೇ ಚ ವ್ರತಬಂಧೇ ಚ ವಿವಾಹೇ ಯಜ್ಞ-ಕರ್ಮಣಿ । ಭಾರ್ಯಾ ರಜಸ್ವಲಾ ಯಸ್ಯ ಪ್ರಾಯಸ್ತಸ್ಯ ನ ಶೋಭನಂ ॥ ನಾಂದೀಶ್ರಾದ್ಧೋತ್ತರಂ ರಜೋದೋಷೇ ತು ಕಪರ್ದಿಕಾಕಾರಿಕಾಸು-ಸೂತಿಕೋದ-ಕ್ಯಯೋಃ ಶುದ್ಧ್ಯೈ ಗಾಂ ದದ್ಯಾದ್ಧೋಮಪೂರ್ವಕಂ । ಪ್ರಾಪ್ತೇ ಕರ್ಮಣಿ ಶುದ್ಧಿಃ ಸ್ಯಾದಿತರಸ್ಮಿನ್ನ ಶುದ್ಧ್ಯತಿ ॥ ಅಲಾಭೇ ಸುಮುಹೂರ್ತಸ್ಯ ರಜೋದೋಷೇ ಚ ಸಂಗತೇ । ಶ್ರಿಯಂ ಸಂಪೂಜ್ಯ ತತ್ಕುರ್ಯಾತ್ಪಾಣಿಗ್ರಹಣಮಂಗಲಂ ॥**

---

ಅನ್ನಪ್ರಾಶನಕ್ಕೆ ಮೊಸರು, ಜೇನು, ತುಪ್ಪ ಇತ್ಯಾದಿಗಳನ್ನು ಬೇಕಾದಾಗ ತರಬೇಕು. ಪುಸ್ತಕ, ಶಸ್ತ್ರ, ವಸ್ತ್ರ ಮೊದಲಾದವುಗಳನ್ನು ತಂದಿಡಬೇಕು. ನಂತರ ಹೋಮವನ್ನು ಪ್ರಾರಂಭಿಸಬೇಕು. **"ಅಸ್ಯ ಕುಮಾರಸ್ಯ... ಕರಿಷ್ಯೇ"** ಎಂದು ಸಂಕಲ್ಪಿಸಿ, ಸ್ಥಾಲೀಪಾಕದಲ್ಲಿ ಹೇಳಿದಂತೆ ಸ್ಥಂಡಿಲ ಸಂಸ್ಕಾರಾದಿಗಳನ್ನು ಮಾಡಿ 'ಬಲವರ್ಧನ' ಅಗ್ನಿಯನ್ನು ಪ್ರತಿಷ್ಠಾಪಿಸಿ, ಮೇಲೆ ಹೇಳಿದಂತೆ ಎಲ್ಲ ಸಂಸ್ಕಾರಗಳಿಗೂ ಅನ್ವಾಧಾನ ಮಾಡಿ ಪ್ರತಿಯೊಂದು ಸಂಸ್ಕಾರದ ಪ್ರಯೋಗದಲ್ಲಿ ಹೇಳಿದಂತೆ ಹೋಮಾದಿಗಳನ್ನು ಸ್ವಿಷ್ಟಕೃದಾದಿಹೋಮಶೇಷಕರ್ಮಗಳನ್ನು ಮಾಡಿ ಮುಗಿಸಬೇಕು.

**ರಜೋದೋಷವಿಚಾರ:** ಚೌಲ, ಉಪನಯನ, ವಿವಾಹ, ಯಜ್ಞ - ಈ ಕರ್ಮಗಳಲ್ಲಿ ಹೆಂಡತಿಯು ರಜಸ್ವಲೆಯಾದರೆ ಆ ಕರ್ಮಗಳು ಶುಭಪ್ರದವಾಗುವುದಿಲ್ಲವೆಂದು ಮೇಧಾತಿಥಿ ಯವರು ಹೇಳುತ್ತಾರೆ. ನಾಂದೀಶ್ರಾದ್ಧಾನಂತರ ಪತ್ನಿಯು ರಜಸ್ವಾಲೆಯಾದರೆ, ಸೂತಿಕಾ ಹಾಗೂ ರಜಸ್ವಲೆಯ ಶುದ್ಧಿಗೋಸ್ಕರ ಹೋಮಮಾಡಿ ಗೋದಾನ ಮಾಡಬೇಕೆಂದು ಕಪರ್ದಿಕಾಕಾರಿಕೆಗಳಲ್ಲಿ ಹೇಳಲಾಗಿದೆ. ರಜೋದೋಷ ಉಂಟಾಗಿದ್ದು ಬೇರೆ ಒಳ್ಳೆಯ ಮುಹೂರ್ತವು ಸಿಗದಿದ್ದರೆ ಶ್ರೀಪೂಜೆಯನ್ನು ಮಾಡಿ ವಿವಾಹಾದಿ ಮಂಗಲ ಕಾರ್ಯಗಳನ್ನು ಮಾಡಬೇಕು.

## ಏಕೋದರವಿಚಾರಃ:-

**ಜ್ಯೋತಿರ್ನಿಬಂಧೇ ಮನುಃ-ಏಕಮಾತೃಜಯೋರೇಕವತ್ಸರೇ ಪುರುಷ ಸ್ತ್ರಿಯೋಃ ನ ಸಮಾನಕ್ರಿಯಾಂ ಕುರ್ಯಾತ್ । ಮಾತೃಭೇದಾಭಾವಾತ್ ॥ ನಾರದಃ- ಪುತ್ರೋದ್ವಾಹಾತ್ಪರಂ ಪುತ್ರೀವಿವಾಹೋ ನ ಋತುತ್ರಯೇ । ನ ತಯೋರ್ವ್ರತಮುದ್ವಾಹಾನ್ಮಂಡನಾದಪಿ ಮುಂಡನಂ ॥ ಸಾರಾವಲ್ಯಾಂ-ಫಾಲ್ಗುನೇ ಚೈತ್ರಮಾಸೇ ತು ಪುತ್ರೋದ್ವಾಹೋಪನಾಯನೇ । ಭೇದಾದ್ವರ್ಷಸ್ಯ ಕುರ್ವೀತ ನರ್ತುತ್ರಯವಿಲಂಬನಂ ॥ ಮದನರತ್ನೇ ವಸಿಷ್ಠಃ- ದ್ವಿಶೋಭನಂ ತ್ವೇಕಗೃಹೇಪಿ ನೇಷ್ಟಂ ಶುಭಂ ತು ಪಶ್ಚಾನ್ನವಭಿರ್ದಿನೈಸ್ತು । ಆವಶ್ಯಕಂ ಶೋಭನಮುತ್ಸವೋ ವಾ ದ್ವಾರೇಥವಾಚಾರ್ಯ ವಿಭೇದತೋ ವಾ ॥ ಏಕೋದರ ಪ್ರಸೂತಾನಾಂ ನಾಗ್ನಿಕಾರ್ಯತ್ರಯಂ ಭವೇತ್ । ಭಿನ್ನೋದರಪ್ರಸೂತಾನಾಂ ನೇತಿ ಶಾತಾತಪೋಬ್ರವೀತ್ ॥ ಜ್ಯೋತಿರ್ನಿಬಂಧೇ ಕಾತ್ಯಾಯನಃ-ಅಭಿನ್ನವತ್ಸರೇಪಿ ಸ್ಯಾತ್**

---

**ಮೇಧಾತಿಥಿ:-** ತನ್ನ ಗೋತ್ರದಲ್ಲಿ ಮೂರು ಪುರುಷರ ವರೇಗೆ ಯಾರಾದರೂ ಮೃತಿಹೊಂದಿದರೆ ಪ್ರತಿಕೂಲವೆಂದು ತಿಳಿಯಬೇಕು. ಅದೇ ರೀತಿ "ಪ್ರವೇಶ" ಪುತ್ರ ವಿವಾಹಮಾಡಿದ ಒಡನೇ "ನಿರ್ಗಮ" ಕನ್ಯಾವಿವಾಹ ಮಾಡಬಾರದು. ಹಾಗೆಯೇ ಮಂಡನ (ವಿವಾಹ) ಮಾಡಿದ ನಂತರ ಮುಂಡನ (ಚೌಲ) ಮಾಡಬಾರದು.

**ಏಕೋದರ ವಿಚಾರ:-** ಒಬ್ಬಳೇ ತಾಯಿಯ ಪುತ್ರ ಮತ್ತು ಪುತ್ರಿಯ ಸಮಾನ ಸಂಸ್ಕಾರವನ್ನು ಒಂದೇ ವರ್ಷದಲ್ಲಿ ಮಾಡಬಾರದೆಂದು, ತಾಯಿ ಬೇರೆಯಾದರೆ ನಿಷೇಧವಿಲ್ಲ ವೆಂದು, ತಾಯಿ ಒಬ್ಬಳೇ ಆಗಿರುವುದರಿಂದ ಒಬ್ಬ ಪುರುಷನಿಗೆ ಒಂದೇ ದಿನ ಎರಡು ವಿವಾಹಗಳು ನಿಷಿದ್ಧವೆಂದೂ ಜ್ಯೋತಿರ್ನಿಬಂಧದಲ್ಲಿ ವೃದ್ಧಮನು ಹೇಳಿದ್ದಾರೆ.

**ನಾರದ:-** ಪುತ್ರನ ವಿವಾಹದ ನಂತರ ಆರು ತಿಂಗಳ ಒಳಗೆ ಕನ್ಯೆಯ ವಿವಾಹ ಮಾಡಬಾರದು. ಪುತ್ರ ಅಥವಾ ಕನ್ಯೆಯ ವಿವಾಹದ ನಂತರ ಆರು ತಿಂಗಳ ಒಳಗೆ ಮೌಂಜೀ ಬಂಧನ ಮಾಡಬಾರದು. ವರ್ಷವು ಬೇರೆ ಆಗಿರದಿದ್ದರೆ ಮಾತ್ರ ಈ ನಿಷೇಧವಿರುವುದೆಂದು ತಿಳಿಯಬೇಕು.

**ಸಾರಾವಲೀ:-** ಫಾಲ್ಗುನ ಮಾಸದಲ್ಲಿ ಮಗನ ಮದುವೆ ಮಾಡಿದ ನಂತರ ವರ್ಷವು ಬೇರೆ ಆಗುವುದರಿಂದ ಚೈತ್ರದಲ್ಲಿ ಮಗನ ಉಪನಯನ ಮಾಡಬಹುದು. ಇಲ್ಲಿ 6 ತಿಂಗಳು ಕಳೆಯಬೇಕೆಂದಿಲ್ಲ

**ಮದನರತ್ನದಲ್ಲಿ ವಸಿಷ್ಠರು:-** ಒಂದೇ ಮನೆಯಲ್ಲಿ ಎರಡು ಮಂಗಲಕಾರ್ಯಗಳನ್ನು ಮಾಡಬಾರದು. ಒಂದಾದ ಬಳಿಕ ಒಂಭತ್ತು ದಿನಗಳು ಕಳೆದ ಮೇಲೆ ಮತ್ತೊಂದನ್ನು

**ತದಹಸ್ತತ್ರ ಭೇದಯೇತ್ ॥ ಅಭೇದೇ ತು ವಿನಾಶಃ ಸ್ಯಾತ್ ನ ಕುರ್ಯಾದೇಕಮಂಡಪೇ ॥ ಜ್ಯೋತಿರ್ನಿಬಂಧೇ ನಾರದಃ ಪ್ರತ್ಯುದ್ವಾಹೋ ನೈವ ಕಾರ್ಯೋ ನೈಕಸ್ಮೈ ದುಹಿತೃದ್ವಯಂ । ನೈಕಜನ್ಯಯೋಃ ಪುಂಸೋರ್ನೈಕಜನ್ಯೇ ತು ಕನ್ಯಕೇ । ನೈವಂ ಕದಾಚಿದುದ್ವಾಹೋ ನೈಕದಾಮುಂಡನದ್ವಯಂ ॥ ನೈಕಜನ್ಯೇ ತು ಕನ್ಯೇ ದ್ವೇ ಪುತ್ರಯೋರೇಕಜನ್ಯಯೋಃ । ನ ಪುತ್ರೀದ್ವಯಮೇಕಸ್ಮೈ ಪ್ರದದ್ಯಾತ್ತು ಕದಾಚನ ॥ ಇತಿ ॥**

## ಕನ್ಯಾವಿಕ್ರಯದೋಷವಿಚಾರಃ:-

**ಯಃ ಕನ್ಯಾಪಾಲನಂ ಕೃತ್ವಾ ಕರೋತಿ ವಿಕ್ರಯಂ ಯದಿ । ವಿಪದಾ ಧನಲೋಭೇನ ಕುಂಭೀಪಾಕಂ ಸ ಗಚ್ಛತಿ ॥ ಕನ್ಯಾಮೂತ್ರಂ ಪುರೀಷಂ ಚ ತತ್ರ ಭಕ್ಷತಿ ಪಾತಕೀ । ಕೃಮಿಭಿರ್ದಂಶಿತಃ ಕಾಕೈಃ ಯಾವದಿಂದ್ರಾಶ್ಚತುರ್ದಶ ॥ ತದಂತೇ**

---

ಮಾಡಬಹುದು. ಅನಿವಾರ್ಯ ಸಂದರ್ಭ ಒದಗಿಬಂದರೆ, ದ್ವಾರಭೇದ ಹಾಗೂ ಆಚಾರ್ಯ ಭೇದವನ್ನು ಮಾಡಿಕೊಂಡು ನೆರವೇರಿಸಬೇಕು. ಆರು ತಿಂಗಳ ಒಳಗೆ ಸಹೋದರರ ಅಗ್ನಿಕಾರ್ಯ, ಉಪನಯನ, ವಿವಾಹ ಮೂರು ಮಾಡಬಾರದು. ಶಾತಾತಪರು ಭಿನ್ನೋದರರ ಮೂರು ಅಗ್ನಿಕಾರ್ಯಗಳನ್ನು ಆರು ತಿಂಗಳೊಳಗೆ ಮಾಡಬಾರದೆಂದು ಹೇಳುತ್ತಾರೆ. ಸಂಕಟ ಪ್ರಾಪ್ತವಾದರೆ ಸೋದರರ ಸಮಾನ ಸಂಸ್ಕಾರವನ್ನೂ ಒಂದೇ ವರ್ಷದಲ್ಲಿ ಮಾಡಬಹುದೆಂದು ಜ್ಯೋತಿರ್ನಿಬಂಧದಲ್ಲಿ ಕಾತ್ಯಾಯನರು ಹೇಳುತ್ತಾರೆ. ದಿನಗಳು ಮಾತ್ರ ಭಿನ್ನವಾಗಿರಬೇಕು. ಒಂದೇ ದಿನ ಮಾಡಿದರೆ ಒಬ್ಬನ ನಾಶವಾಗುವುದು. ಸೋದರರ ಸಮಾನಸಂಸ್ಕಾರವನ್ನು ಒಂದೇ ಮಂಟಪದಲ್ಲಿ ಮಾಡಬಾರದು. ಜ್ಯೋತಿರ್ನಿಬಂಧದಲ್ಲಿ ನಾರದ:- ಪ್ರತ್ಯುದ್ವಾಹ (ತನ್ನ ಮಗಳನ್ನು ಇನ್ನೊಬ್ಬನ ಮಗನಿಗೂ ಇನ್ನೊಬ್ಬನ ಮಗಳನ್ನು ತನ್ನ ಮಗನಿಗೂ) ಮಾಡಬಾರದು. ಒಬ್ಬನಿಗೆ ಇಬ್ಬರು ಪುತ್ರಿಯರನ್ನು ಕೊಡಬಾರದು. ಅಣ್ಣ-ತಮ್ಮಂದಿರಿಗೆ ಅಕ್ಕ-ತಂಗಿಯರನ್ನು ಕೊಡಬಾರದು. ಒಬ್ಬನಿಂದಲೇ ಜನ್ಮತಾಳಿದ ಇಬ್ಬರ ವಿವಾಹವನ್ನು, ಚೌಲಾದಿಗಳನ್ನು ಒಂದೇ ಸಲ ಮಾಡಬಾರದು. ಒಬ್ಬರಿಂದ ಉತ್ಪನ್ನರಾದ ಇಬ್ಬರು ಕನ್ಯೆಯರನ್ನು ಇಬ್ಬರಿಗೆ ಅಥವಾ ಒಬ್ಬನಿಗೇ ಕೊಡಕೂಡದು.

**ಕನ್ಯಾವಿಕ್ರಯದೋಷ:-** ಆಪತ್ತಿನಲ್ಲಿ ಸಿಲುಕಿ ಅಥವಾ ಧನದಾಸೆಯಿಂದ ಯಾವ ತಂದೆಯು ತನ್ನ ಮಗಳನ್ನು ವಿಕ್ರಯಿಸುತ್ತಾನೋ ಆತನು ಕುಂಭೀಪಾಕ ನರಕದಲ್ಲಿ ಬಿದ್ದು ಕ್ರಿಮಿಕೀಟಾದಿಗಳಿಂದ ಕಚ್ಚಲ್ಪಟ್ಟು ಕನ್ಯೆಯ ಮಲಮೂತ್ರಗಳನ್ನು ಭಕ್ಷಿಸುತ್ತ ಪುನಃ ಭೂಮಿಯ ಮೇಲೆ ಹುಟ್ಟುವಾಗ ರೋಗಿಯೂ ಮಾಂಸವಿಕ್ರಯ ಮಾಡುವವನೂ ಆಗುತ್ತಾನೆ. ರಿಕ್ತವಲ್ಲದ ತಿಥಿಯ ದಿವಸ; ಶ್ರವಣ, ಪುಷ್ಯ, ಪುನರ್ವಸು, ಮೃಗ, ಹಸ್ತಾ, ಮೂಲಾ, ಅನುರಾಧಾ

**ವ್ಯಾಧಿತೋ ಭೂತ್ವಾ ಲಭೇಜ್ಜನ್ಮ ಸುನಿಶ್ಚಿತಂ ॥ ವಿಕ್ರೀಣಾತಿ ಮಾಂಸಭಾರಂ ವಹತ್ಯೇವ ದಿವಾನಿಶಂ ॥**

# ॥ ಬಾಲಕಸ್ಯ ದೃಷ್ಟಿದೋಷಾದೌ ರಕ್ಷಾವಿಧಿಃ ॥

**ವಾಸುದೇವೋ ಜಗನ್ನಾಥಃ ಪೂತನಾತರ್ಜನೋ ಹರಿಃ । ರಕ್ಷತು ತ್ವರಿತೋ ಬಾಲಂ ಮುಂಚ ಮುಂಚ ಕುಮಾರಕಂ ॥ ಕೃಷ್ಣ ರಕ್ಷ ಶಿಶುಂ ಶಂಖಮಧುಕೈಟಭಮರ್ದನ । ಪ್ರಾತಃ ಸಮಯ ಮಧ್ಯಾಹ್ನ ಸಾಯಾಹ್ನೇಷು ಚ ಸಂಧ್ಯಯೋಃ । ಮಹಾನಿಶಿ ಸದಾ ರಕ್ಷ ಕಂಸಾರಿಷ್ಟನಿಷೂದನ । ಯದ್ಘೋರಜಃ ಪಿಶಾಚಾಂಶ್ಚ ಗ್ರಹನ್ಮಾತೃಗ್ರಹಾನಪಿ ॥ ಬಾಲಗ್ರಹಾನ್ವಿಶೇಷೇಣ ಛಿಂದಿ ಛಿಂದಿ ಮಹಾಭಯಾತ್ । ತ್ರಾಹಿ ತ್ರಾಹಿ ಹರೇ ನಿತ್ಯಂ ತ್ವದ್ರಕ್ಷಾ-ಭೂಷಿತಂ ಶಿಶುಂ ॥ ಇತಿ ಭಸ್ಮಾಭಿಮಂತ್ರ್ಯೈವ ಭೂಷಯೇತ್ತೇನ ಭಸ್ಮನಾ । ಶಿರೋ ಲಲಾಟಾದ್ಯಂಗೇಷು ರಕ್ಷಾಂ ಕುರ್ಯಾದ್ಯಥಾವಿಧಿ ॥ ಇತಿ ॥ ಪ್ರಯೋಗಸಾರೇ-ರಕ್ಷ ರಕ್ಷ ಮಹಾದೇವ ನೀಲಗ್ರೀವ ಜಟಾಧರ । ಗ್ರಹೈಸ್ತು ಸಹಿತೋ ರಕ್ಷ ಮುಂಚ ಮುಂಚ ಕುಮಾರಕಂ ॥ ಅಮುಂ ಮಂತ್ರಂ ಭೂರ್ಜಪತ್ರೇ ವಿಲಿಖ್ಯ ತತ್ಪತ್ರಂ ಭುಜೇ ಬಧ್ನೀಯಾತ್ ॥ ಬಾಲರೋದನ-ಪರಿಹಾರಾರ್ಥಂ ಯಂತ್ರಮುಕ್ತಂ ಮಯೂಖೇ-ಷಡಸ್ರಮಧ್ಯೇ ಹಿಂಕಾರ-ಸ್ತನ್ಮಧ್ಯೇ ಶಿಶೋರ್ನಾಮಾಲಿಖ್ಯಷಟ್‌ಕೋಣೇಷು ಓಂ ಲುಲುವಸ್ವಾಹಾ ಇತಿ ಮಂತ್ರ ಷಡಕ್ಷರಾಣಿ ವಿಲಿಖ್ಯ ತದ್ಬಹಿರ್ನೇಮಿವತ್ ವೃತ್ತದ್ವಯಂ ವಿಲಿಖ್ಯ ತದ್ಬಹಿರಧೋಮುಖೈರರ್ಧಚಂದ್ರೈರಾವೇಷ್ಟ್ಯ ಪಂಚೋಪಚಾರೈಃ ಸಂಪೂಜ್ಯ**

---

ನಕ್ಷತ್ರಗಳಲ್ಲಿ ನೀರಿದ್ದ ಸ್ಥಳಕ್ಕೆ ಹೋಗಿ ಪೂಜೆ ಮಾಡಬೇಕು. ಗುರು, ಶುಕ್ರಾಸ್ತ, ಚೈತ್ರ, ಪೌಷ್ಯ ಹಾಗೂ ಅಧಿಕಮಾಸಗಳನ್ನು ಬಿಡಬೇಕು.

**ಬಾಲಕನಿಗೆ ದೃಷ್ಟಿದೋಷವಾಗಿದ್ದರೆ ರಕ್ಷಾವಿಧಿ:-** ಮಗುವಿಗೆ ಯಾರದಾದರೂ ದೃಷ್ಟಿ ತಾಗಿದರೆ **"ವಾಸುದೇವೋ... ಶಿಶುಂ"** ಎಂಬಲ್ಲಿ ವರೆಗಿನ ಶ್ಲೋಕಗಳಿಂದ ಭಸ್ಮವನ್ನು ಅಭಿಮಂತ್ರಿಸಿ ತಲೆ ಹಣೆ ಮುಂತಾದ ಅವಯವಗಳಿಗೆ ಹಚ್ಚಬೇಕು.

**"ರಕ್ಷ ರಕ್ಷ....."** ಎಂಬ ಮಂತ್ರವನ್ನು ಭೂರ್ಜಪತ್ರದಲ್ಲಿ ಬರೆದು ಅದನ್ನು ಮಗುವಿನ ತೋಳಿಗೆ ಕಟ್ಟಬೇಕೆಂದು ಪ್ರಯೋಗಸಾರದಲ್ಲಿ ಹೇಳಿದೆ.

ಬಾಲಕನು ಅಳುತ್ತಿದ್ದರೆ ಅದರ ಪರಿಹಾರಕ್ಕೆ ಮಯೂಖ ಗ್ರಂಥದಲ್ಲಿ ಈ ಕೆಳಗಿನ ಯಂತ್ರವನ್ನು ಬರೆದು ಮಧ್ಯದಲ್ಲಿ **ಹ್ರೀಂ** ಎಂತ ದೊಡ್ಡ ಅಕ್ಷರವನ್ನು ಬರೆದು, ಅದರ ನಡುವೆ ಮಗುವಿನ ಹೆಸರು ಬರೆದು, ಆರು ಕೋನಗಳಲ್ಲಿ **"ಓಂ ಲು ಲು ವ ಸ್ವಾ ಹಾ"** ಎಂಬ

**ಬಾಲಹಸ್ತೇ ಬಧ್ನೀಯಾದಿತಿ ॥ ಬಾಲಗ್ರಹಶಾಂತ್ಯಾದಿಕಂ ಬಾಲಗ್ರಹಸ್ತವಶ್ಚ ಶಾಂತಿ-ಕಮಲಾಕರ ಶಾಂತಿಮಯೂಖಯೋರ್ದ್ರಷ್ಟವ್ಯಃ ॥**

## ಕಟಿಸೂತ್ರಧಾರಣಂ ಭೂಮ್ಯುಪವೇಶನಂ ಚ:-

**ಧರಾವರಾಹಾವಪಿ ಸಂಪೂಜ್ಯ ಪಂಚಮೇ ಮಾಸೇ ಧರಾಯಾಮುಪವೇಶ-ಯೇಚ್ಛಿಶುಂ । ಶುಭೇಹ್ನಿ ಬದ್ಧ್ವಾ ಕಟಿಸೂತ್ರಮೈಂದವ ಕ್ಷಿಪ್ರೇಂದ್ರಮಿತ್ರ-ಧ್ರುವಭೈರಸೃಗ್ಬಲೇ ॥**

**ಪಂಚಮೇ ಮಾಸಿ ಶುಕ್ಲಪಕ್ಷೇ ಜ್ಯೋತಿಃಶಾಸ್ತ್ರೋಕ್ತ ಶುಭತಿಥ್ಯಾದೌ ಪೂರ್ವಾಹ್ಣೇ ಸ್ವಸ್ತಿವಾಚನಂ ಕೃತ್ವಾ ವರಾಹಪೃಥಿವೀಗುರುದೇವದ್ವಿಜಾನ್ ಪೂಜಯಿತ್ವಾ ಭೂಭಾಗಮುಪಲಿಪ್ಯ ತತ್ರ ಮಂಡಲಂ ಕೃತ್ವಾ ಶಂಖ ತೂರ್ಯಾದಿ ಮಾಂಗಲಿಕಧ್ವನೌ ಕ್ರಿಯಮಾಣೇ ಭೂಮೌ ಶಿಶುಮುಪವೇಶ-ಯೇತ್ ಏತೈರ್ಮಂತ್ರೈಃ ॥ ರಕ್ಷೈನಂ ವಸುಧೇ ದೇವಿ ಸದಾ ಸರ್ವಗತಂ ಶುಭೇ । ಆಯುಃ ಪ್ರಮಾಣಂ ನಿಖಿಲಂ ನಿಕ್ಷಿಪಸ್ವ ಹರಿಪ್ರಿಯೇ । ಅಚಿರಾದಾ-ಯುಷಸ್ತ್ವಸ್ಯ ಯೇ ಕೇಚಿತ್ಪರಿಪಂಥಿನಃ । ಜೀವಿತಾರೋಗ್ಯವಿತ್ತೇಷು ನಿರ್ದಹ ಸ್ವಾಚಿರೇಣ ತಾನ್ ॥ ಧಾರಿಣ್ಯಶೇಷಭೂತಾನಾಂ ಮಾತಸ್ತ್ವಮಧಿಕಾಹ್ಯಸಿ । ಕುಮಾರಂ ಪಾಹಿ ಮಾತಸ್ತ್ವಂ ಬ್ರಹ್ಮಾ ತದನುಮನ್ಯತಾಂ ॥ ಇತಿ ॥ ತತೋ**

---

ಆರು ಅಕ್ಷರಗಳನ್ನೂ ಬರೆದು ಯಂತ್ರದ ಹೊರಬದಿಯಲ್ಲಿ ರಥಚಕ್ರದ ಪ್ರಾಂತಭಾಗದಂತೆ ಎರಡು ವರ್ತುಲಗಳನ್ನೂ ರಚಿಸಿ, ಅದಕ್ಕಿಂತ ಹೊರಗೆ ಸುತ್ತಲೂ ಕೆಳಮುಖವಾಗಿರುವ ಅರ್ಧಚಂದ್ರ ಆಕೃತಿಯನ್ನು ಮಾಡಿ ಪಂಚೋಪಚಾರಗಳಿಂದ ಯಂತ್ರವನ್ನು ಪೂಜಿಸಬೇಕು.

ಬಾಲಗ್ರಹಶಾಂತಿ, ಬಾಲಗ್ರಹಸ್ತೋತ್ರ ಇತ್ಯಾದಿಗಳನ್ನು ಶಾಂತಿಕಮಲಾಕರ ಶಾಂತಿಮ ಯೂಖ ಮುಂತಾದ ಗ್ರಂಥಗಳಲ್ಲಿ ನೋಡಬೇಕು.

**ಮಗುವಿನ ಸೊಂಟಕ್ಕೆ ನೂಲುಕಟ್ಟುವುದು ಮತ್ತು ನೆಲದ ಮೇಲೆ ಕುಳ್ಳಿರಿಸುವುದು:-** ಐದನೆಯ ತಿಂಗಳಿನಲ್ಲಿ ಶುಭದಿನ ಮತ್ತು ಮುಹೂರ್ತಗಳನ್ನು ನೋಡಿ ಮೃಗ, ಹಸ್ತಾ, ಪುಷ್ಯ, ಅಶ್ವಿನೀ, ಜ್ಯೇಷ್ಠಾ, ಮೂರು ಉತ್ತರಾ, ರೋಹಿಣೀ ಈ ನಕ್ಷತ್ರವಿರುವ ದಿವಸ ಭೂದೇವಿ ಮತ್ತು ವರಾಹಸ್ವಾಮಿಯ ಪೂಜೆಮಾಡಿ ಬಾಲಕನಿಗೆ ಉಡುದಾರವನ್ನು ಕಟ್ಟಿ ಭೂಮಿಯ ಮೇಲೆ ಕುಳ್ಳಿರಿಸಬೇಕು.

ಐದನೆಯ ತಿಂಗಳಿನಲ್ಲಿ ಶುಕ್ಲಪಕ್ಷದಲ್ಲಿ ಜ್ಯೋತಿಃಶಾಸ್ತ್ರದಲ್ಲಿ ಹೇಳಿದ ಶುಭತಿಥಿ ಇರುವ ದಿನ ಪೂರ್ವಾಹ್ಣ ಸ್ವಸ್ತಿವಾಚನ ಮಾಡಿ ವರಾಹ, ಪೃಥ್ವೀ, ಗುರು, ದೇವ ಮತ್ತು ಬ್ರಾಹ್ಮಣರನ್ನು ಪೂಜಿಸಿ, ನೆಲವನ್ನು ಗೋಮಯದಿಂದ ಶುಚಿಗೊಳಿಸಿ, ಮಂಡಲ ಬರೆದು ಮಂಗಲವಾದ್ಯಧ್ವನಿ ಯೊಂದಿಗೆ ಶಿಶುವನ್ನು **"ರಕ್ಷೈನಂ ..."** ಮುಂತಾದ ಮಂತ್ರಗಳನ್ನು ಹೇಳಿ ನೆಲದ ಮೇಲೆ ಕೂತುಕೊಳ್ಳಿಸಬೇಕು. ನಂತರ ಬ್ರಾಹ್ಮಣರ ಪೂಜೆಮಾಡಿ ಆಶೀರ್ವಾದ ಪಡೆದು ನೀರಾಜನ ಮೊದಲಾದ ಉತ್ಸವಗಳನ್ನು ಮಾಡಬೇಕು.

**ಬ್ರಾಹ್ಮಣಾನ್ ಪೂಜಯಿತ್ವಾ ಆಶಿಷೋ ವಾಚಯಿತ್ವಾ ನೀರಾಜನಾದ್ಯುತ್ಸವಂ ಕುರ್ಯಾತ್ ॥ ಏವಂ ಕುಮಾರ್ಯಾ ಅಪಿ ॥**

## ಪ್ರಥಮಕೇಶಕರ್ತನ ನಿರ್ಣಯ:-

**ಚರಕಸಂಹಿತಾ ಅ. ೫ ಸೂ. ೮೩ ॥ ಪೌಷ್ಟಿಕಂ ಹೃದ್ಯಮಾಯುಷ್ಯಂ ಶುಚಿರೂಪವಿರಾಜನಂ । ಕೇಶಶ್ಮಶ್ರುನಖಾದೀನಾಂ ಕರ್ತನಂ ಸಂಪ್ರಸಾಧನಂ ॥ ಜನ್ಮಾದೌ ಸಮಮಾಸಿ ಪುತ್ರವಿಷಯೇ ಸ್ತ್ರೀಣಾಂ ತು ತದ್ವ್ಯತ್ಯಯೇ ॥ ಕಾರ್ಯಂ ಚಾದಿಮಕೇಶಖಂಡನಮಿದಂ ಪೂರ್ವಾಹ್ಣ ಸೌಮ್ಯಾಯನೇ । ಆದಿತ್ಯದ್ವಯದಸ್ರ-ಪೌಷ್ಣ ಶಶಭೃದ್ವಿಷ್ಣುತ್ರಯಾರ್ಕತ್ರಯೇ । ಪೂರ್ವಾಹ್ಣೇ ಶುಭವಾಸರೇ ಜಯದಿನೇ-ಷ್ವಷ್ಟಮ್ಯಮಾವರ್ಜಯೇತ್ ॥**

---

"ಹೇ ಭೂದೇವಿ, ನೀನು ಯಾವಾಗಲೂ ಈ ಬಾಲಕನನ್ನು ರಕ್ಷಿಸುತ್ತಿರು. ಇವನ ಆಯುಸ್ಸನ್ನು ವರ್ಧಿಸು. ಆಯುಸ್ಸನ್ನು ಕಡಿಮೆ ಮಾಡುವ ಹಾಗೂ ಜೀವಿತ, ಸಂಪತ್ತು ಮತ್ತು ಆರೋಗ್ಯವನ್ನು ಕೆಡಿಸುವ ಶತ್ರುಗಳನ್ನು ನಾಶಮಾಡು. ಸಕಲ ಪ್ರಾಣಿಗಳನ್ನೂ ಧಾರಣೆ ಮಾಡಿರುವ ನೀನು ಎಲ್ಲರಿಗೂ ಮಹಾಮಾತೆಯಂತಿರುವಿ. ಆದ್ದರಿಂದ ತಾಯಿಯಂತೆ ಈತನನ್ನು ಕಾಪಾಡು. ಬ್ರಹ್ಮನ ಅನುಗ್ರಹವೂ ಇವನ ಮೇಲೆ ಇರಲಿ" - ಇದು ಪ್ರಾರ್ಥನಾಶ್ಲೋಕಗಳ ಅರ್ಥವಾಗಿದೆ.

**ಪ್ರಥಮಕೇಶಕರ್ತನ (ಕ್ಷೌರ) ನಿರ್ಣಯ:-** ಮಗುವಿನ ತಲೆಕೂದಲನ್ನು ಬಹಳ ಎಚ್ಚರಿಕೆಯಿಂದ ತೆಗೆದು ತಲೆಗೆ ಕೆನೆಯನ್ನು ಲೇಪಿಸಿದರೆ ತಲೆಯ ಚರ್ಮಕ್ಕೆ ಬರುವ ರೋಗಗಳು ಉಂಟಾಗುವುದಿಲ್ಲ. ಕೂದಲು ಬೆಳೆಯದ ಭಾಗಗಳೂ ಉಳಿಯುವುದಿಲ್ಲ. ತಲೆಯ ಎಲ್ಲ ಭಾಗಗಳಿಗೂ ಸರಿಯಾಗಿ ರಕ್ತಸಂಚಾರವಾಗುತ್ತಿದ್ದು ಮುಂದೆ ಹುಟ್ಟುವ ಕೂದಲು ದಟ್ಟವಾಗಿಯೂ ಗಟ್ಟಿಯಾಗಿಯೂ ಇರುತ್ತದೆ. ಕೂದಲು, ರೋಮ ಮತ್ತು ಉಗುರುಗಳನ್ನು ತೆಗೆಯುವುದರಿಂದ ಸೌಂದರ್ಯವರ್ಧನೆಯಾಗಿ ಸಂತೋಷ, ಉತ್ಸಾಹ ಹಾಗೂ ಸುಖ ಪ್ರಾಪ್ತಿಯಾಗುತ್ತದೆ. ಆಯುಷ್ಯ, ಪಾವಿತ್ರ್ಯ ಪುಷ್ಟಿಗಳು ವೃದ್ಧಿಯಾಗುತ್ತವೆ. ಗಂಡುಮಗುವಿನ ಕ್ಷೌರಕರ್ಮವನ್ನು ಜನ್ಮದಿನದಿಂದ ಸಮತಿಂಗಳುಗಳಲ್ಲೂ ಹೆಣ್ಣು ಮಗುವಿನ ಕ್ಷೌರಕರ್ಮವನ್ನು ವಿಷಮ ತಿಂಗಳುಗಳಲ್ಲಿಯೂ ಮಾಡಬೇಕು. ಉತ್ತರಾಯಣದಲ್ಲಿ ಶುಭವಾರ, ಪೂರ್ಣತಿಥಿ ಮತ್ತು ಪುನರ್ವಸು, ಪುಷ್ಯ, ಅಶ್ವಿನೀ, ಮೃಗಶಿರ, ಶ್ರವಣಾ, ಧನಿಷ್ಠಾ, ಶತತಾರಕಾ, ಹಸ್ತಾ, ಚಿತ್ರಾ ಮತ್ತು ಸ್ವಾತಿ ನಕ್ಷತ್ರಗಳಲ್ಲಿ ಎರಡು ಜಾವಗಳೊಳಗೆ ಈ ಕರ್ಮವನ್ನು ಮಾಡಬೇಕು.

# ॥ ಶ್ರೀಪೂಜನಾದಿಶಾಂತಿಃ ॥

**ಯಜಮಾನಃ ಆಚಮ್ಯ ಪವಿತ್ರಪಾಣಿಃ ಪ್ರಾಣಾನಾಯಮ್ಯ ದೇಶಕಾಲೌ ಸಂಕೀರ್ತ್ಯ ಅಸ್ಯ ಕುಮಾರಸ್ಯೋಪನಯನೇ (ಕನ್ಯಾಯಾ ಉದ್ವಾಹೇ ವಾ) ಸಂಸ್ಕಾರ್ಯಜನನೀ ರಜೋದೋಷೋಪಸ್ಥಿತಿಸೂಚಿತಸಕಲಾನಿಷ್ಟನಿರಾಸಪೂರ್ವಕ-ಶುಭಫಲಪ್ರಾಪ್ತಿದ್ವಾರಾ ಶ್ರೀಪರಮೇಶ್ವರಪ್ರೀತ್ಯರ್ಥಂ ಶ್ರೀ ಪೂಜನಾದಿಶಾಂತಿಂ ಕರಿಷ್ಯೇ ॥ ಆದೌ ನಿರ್ವಿಘ್ನತಾಸಿದ್ಧ್ಯರ್ಥಂ ಗಣಪತಿಪೂಜನಂ ಪುಣ್ಯಾಹವಾಚನಂ ಚ ಕರಿಷ್ಯೇ ಇತಿ ಸಂಕಲ್ಪ್ಯ ಕೃತ್ವಾ ॥ ಗೋತ್ರೋಚ್ಚಾರಪೂರ್ವಕಮಾಚಾರ್ಯಂ ವೃತ್ವಾ ಸಂಪೂಜ್ಯ ॥ ಆಚಾರ್ಯಃ ಕರ್ಮ ಸಂಕಲ್ಪ್ಯ ಪ್ರಾದೇಶಕರಣಾಂತಂ ಕೃತ್ವಾ. ರಂಗವಲ್ಲ್ಯಾದ್ಯಲಂಕೃತೇ ಐಶಾನಪ್ರದೇಶೇ ಮಹೀದ್ಯೌಃ ಇತ್ಯಾದಿಭಿರ್ಮಂತ್ರೈಃ ವಿಧಿವತ್ಕಲಶಂ ಸಂಸ್ಥಾಪ್ಯ ತದುಪರಿ ಪೂರ್ಣಾದರ್ವೀತಿ ಪಾತ್ರಂ ನಿಧಾಯ ತದುಪರ್ಯಗ್ನ್ಯುತ್ತಾರಣಪೂರ್ವಕಂ ಸೌವರ್ಣಪ್ರತಿಮಾಯಾಂ ಹಿರಣ್ಯವರ್ಣಾ-ಮಿತ್ಯಸ್ಯ ಆನಂದಕರ್ದಮಚಿಕ್ಲೀತೇಂದಿರಾ ಸುತಾಃ ಶ್ರೀರನುಷ್ಟುಪ್ ಶ್ರೀಪೂಜನೇ ವಿನಿಯೋಗಃ ॥ ಓಂ ಹಿರಣ್ಯವರ್ಣಾಂ ... ॥ ೧ ॥ ಓಂ ಭೂರ್ಭುವಃ ಸ್ವಃ ಶ್ರಿಯೈ ನಮಃ ಶ್ರಿಯಮಾವಾಹಯಾಮಿ ಇತ್ಯಾವಾಹ್ಯ ಶ್ರೀ ಸೂಕ್ತೇನ ಷೋಡ-ಶೋಪಚಾರೈಃ ಪೂಜಯೇತ್ ॥ ತತಃ ಸ್ಥಂಡಿಲೋಲ್ಲೇಪನಾದ್ಯಗ್ನಿಪ್ರತಿಷ್ಠಾಂತಂ ಕೃತ್ವಾ ಸಮಿದ್ದ್ವಯಮಾದಾಯ ಕ್ರಿಯಮಾಣೇ ಶ್ರೀಪೂಜನಶಾಂತಿಹೋಮೇ ದೇವತಾಪರಿ-ಗ್ರಹಾರ್ಥಮಿತ್ಯಾದಿ ಚಕ್ಷುಷೀ ಆಜ್ಯೇನೇತ್ಯಂತಮುಕ್ತ್ವಾ ಅತ್ರಪ್ರಧಾನಂ ॥ ಶ್ರಿಯಂ ಶ್ರೀಸೂಕ್ತೇನ ಪ್ರತ್ಯೃಚಂ ಪಾಯಸಾಹುತ್ಯಾ ಶೇಷೇಣ ಸ್ವಿಷ್ಟಕೃತಮಿತ್ಯಾದ್ಯಾಜ್ಯಭಾ-ಗಾಂತಂ ಕೃತ್ವಾ ಪ್ರಧಾನ ಹೋಮಃ ॥ ಯಥಾ ಹಿರಣ್ಯವರ್ಣಾಮಿತಿ ಪಂಚದಶರ್ಚಸ್ಯ**

---

**ಶ್ರೀಪೂಜನಾದಿಶಾಂತಿ:-** ಯಜಮಾನನು ಆಚಮನ ಪವಿತ್ರಧಾರಣ ಪ್ರಾಣಾಯಾಮ ದೇಶಕಾಲಸಂಕೀರ್ತನಾದಿಗಳನ್ನು ಮಾಡಿ **"ಅಸ್ಯ ಕುಮಾರಸ್ಯ ....ಕರಿಷ್ಯೇ"** ಎಂದೂ **"ಆದೌ.... ಪುಣ್ಯಾಹವಾಚನಂ ಚ ಕರಿಷ್ಯೇ"** ಎಂದೂ ಸಂಕಲ್ಪಮಾಡಿ ಆ ಕರ್ಮಗಳನ್ನು ಮಾಡಬೇಕು. ಬಳಿಕ ಆಚಾರ್ಯವರಣ ಮಾಡಿ, ಆಚಾರ್ಯನು ಪಂಚಗವ್ಯವಿಧಿ ಭೂಮಿಪ್ರೋಕ್ಷಣ ಮುಂತಾದವುಗಳನ್ನು ಮಾಡಿದ ಮೇಲೆ ಮಹೀದ್ಯೌ ಇತ್ಯಾದಿ ಮಂತ್ರಗಳಿಂದ ಕಲಶಸ್ಥಾಪನಾದಿ ಗಳನ್ನು ಮಾಡಿ ಅಗ್ನ್ಯುತ್ತಾರಣ ಕ್ರಮದಂತೆ ಲಕ್ಷ್ಮಿಯ ಸುವರ್ಣಪ್ರತಿಮೆಯನ್ನು ಸ್ಥಾಪಿಸಿ, ಶ್ರೀಸೂಕ್ತದ ಮೊದಲನೆಯ ಋಕ್ಕಿನಿಂದ ಶ್ರೀಯನ್ನು ಆವಾಹಿಸಿ ಉಳಿದ ೧೪ ಋಕ್ಕುಗಳಿಂದ ಷೋಡಶೋಪಚಾರ ಪೂಜೆಯನ್ನು ಮಾಡಬೇಕು.

ಬಳಿಕ ಸ್ಥಾಲೀಪಾಕದಲ್ಲಿ ಹೇಳಿದಂತೆ ಸ್ಥಂಡಿಲಸಂಸ್ಕಾರಾದಿಗಳನ್ನು ಮಾಡಿ, **"ಕ್ರಿಯಮಾಣೇ ಶ್ರೀಪೂಜನಶಾಂತಿಹೋಮೇ...."** ಎಂದು ಹೇಳಿ ಅನ್ವಾಧಾನ ಮಾಡಬೇಕು. ಆಜ್ಯಭಾಗಾಂತದ

**ಸೂಕ್ತಸ್ಯ ..... ಶ್ರೀ ಮಹಾಲಕ್ಷ್ಮೀ ಪ್ರೀತ್ಯರ್ಥೇ ಪಾಯಸಹೋಮೇ ವಿನಿಯೋಗಃ ॥ ಓಂ ಹಿರಣ್ಯವರ್ಣಾಂ ... ಇತ್ಯಾದಿ ಪಂಚದಶ ಋಗ್ಭಿಃ ಪ್ರತ್ಯೃಚಮೇಕಾಂ ಪಾಯಸಾಹುತಿಂ ಹುತ್ವಾ ॥ ಸ್ವಿಷ್ಟಕೃದಾದಿ ಹೋಮಶೇಷಂ ಸಮಾಪ್ಯ ಸ್ಥಾಪಿತ ಕಲಶೋದಕೇನ ಶ್ರೀಸೂಕ್ತೇನ ಯಜಮಾನಮಭಿಷಿಚ್ಯ ಆವಾಹಿತದೇವತಾಃ ಪಂಚೋಪಚಾರೈಃ ಸಂಪೂಜ್ಯ ಆಚಾರ್ಯಾಯ ಗಾಂ ದಕ್ಷಿಣಾಂ ದತ್ವಾ ಪೀಠದಾನಾದಿ ಕೃತ್ವಾ ಯಥಾಶಕ್ತಿ ತ್ರಯೋ ವಾ ಬ್ರಾಹ್ಮಣಾ ಭೋಜ್ಯಾಃ ॥**

---

# ॥ ಮಂಡಪದೇವತೋತ್ಥಾಪನಂ ॥

**ತಚ್ಚ ಸ್ಥಾಪನದಿನಾತ್ಸಪ್ತಮದಿವಸೇ ಪಂಚಮಸಪ್ತದಿನಯೋಶ್ಚ ಶುಭಂ ಷಷ್ಠದಿನೇ ವಿಷಮದಿನೇಚಾಶುಭಂ ॥ ಮಂಡಪದೇವತೋತ್ಥಾಪನಪ್ರಯೋಗೋ**

---

ವರೆಗೆ ಕರ್ಮಗಳನ್ನು ಮಾಡಿ ಶ್ರೀಸೂಕ್ತದ ೧೫ ಋಕ್ಕುಗಳಿಂದ ೧೫ ಪಾಯಸದ ಆಹುತಿಗಳನ್ನು ಕೊಟ್ಟು ಪ್ರಧಾನಹೋಮವನ್ನು ಮಾಡಬೇಕು. ಬಳಿಕ ಸ್ವಿಷ್ಟಕೃದಾದಿ ಹೋಮಶೇಷವನ್ನು ಮುಗಿಸಿ ಕಲಶೋದಕದಿಂದ ಶ್ರೀಸೂಕ್ತವನ್ನು ಹೇಳಿ ಯಜಮಾನನಿಗೆ ಅಭಿಷೇಕ ಮಾಡಿ ದಕ್ಷಿಣೆಗಳನ್ನೂ ಇತರರಿಗೆ ಸಾಕಷ್ಟು ದಕ್ಷಿಣೆಯನ್ನೂ ಕೊಟ್ಟು **"ಯಸ್ಯ ಸ್ಮೃತ್ಯಾ...."** ಎಂದು ವಿಷ್ಣುಸ್ಮರಣೆಯನ್ನು ಮಾಡಿ ಕರ್ಮ ಸಮಾಪ್ತಿ ಮಾಡಬೇಕು. ಈ ಕರ್ಮದಲ್ಲಿ ಹತ್ತು ಅಥವಾ ಮೂರು ಮಂದಿ ಬ್ರಾಹ್ಮಣರ ಸಂತರ್ಪಣೆ ಆಗಬೇಕು.

**ಮಂಡಪದೇವತೆಗಳ ಉತ್ಥಾಪನ:-** ಇದನ್ನು ಮಂಡಪದೇವತೆಗಳನ್ನು ಸ್ಥಾಪನೆಮಾಡಿದ ದಿನದಿಂದ ಮುಂದೆ ಸಮದಿನಗಳಲ್ಲಿ ಅಥವಾ ಏಳನೆಯ ದಿನ ಮಾಡಬೇಕು. ಆರನೆಯ ದಿನ ಅಥವಾ ವಿಷಮದಿನಗಳಲ್ಲಿ ಮಾಡುವುದು ಅಶುಭ. ಇದರ ಪ್ರಯೋಗವನ್ನು ವಿವಾಹಪ್ರಕರಣದಲ್ಲಿ ಕೊಡಲಾಗಿದೆ. ಉಪನಯನಾದಿಗಳಲ್ಲಿ **"ಉಪನಯನಾಂಗತ್ವೇನ .... ಕರಿಷ್ಯೇ"** ಎಂದು ಸಂಕಲ್ಪವನ್ನು ಮಾತ್ರ ಬೇರೆ ಮಾಡಿದರಾಯಿತು.

ಸೂತ್ರಕಾರರು ಮಂಡಪಪ್ರತಿಷ್ಠೆ, ಪುಣ್ಯಾಹವಾಚನ, ಮಾತೃಕಾಪೂಜನ, ನಾಂದೀಶ್ರಾದ್ಧ ಇವುಗಳ ಉಲ್ಲೇಖವನ್ನು ಮಾಡಿಲ್ಲ. ನಿಬಂಧಾದಿ ಗ್ರಂಥಕಾರರು ಇದರ ವಿಸ್ತೃತ ವಿವರಣೆ ಮಾಡಿದ್ದಾರೆ. ಪ್ರಧಾನ ಕರ್ಮಕ್ಕೆ ಉಪಕಾರವೆಂದು ಇವುಗಳ ಸಂಗ್ರಹ ಮಾಡಿದ್ದಾರೆ. **"ಸರ್ವನಾಶೇ ಸಮುತ್ಪನ್ನೇ ಅರ್ಧಂ ತ್ಯಜತಿ ಪಂಡಿತಃ"** ಎಂಬ ಮಾತಿನಂತೆ ಅಂಗೋಪಾಂಗಕ್ಕಾಗಿ ಪ್ರಧಾನಕರ್ಮವನ್ನು ಬಿಡಬೇಕಾದ ಸಂದರ್ಭ ಬಂದರೆ ಅಂಗೋಪಾಂಗ ಕರ್ಮವನ್ನು ಬಿಡಬೇಕೇ ಹೊರತು ಪ್ರಧಾನಕರ್ಮವನ್ನು ಬಿಡಬಾರದು.

**ವಿವಾಹಪ್ರಕರಣೇ ದ್ರಷ್ಟವ್ಯಃ ॥ ತತ್ರ ಸಂಕಲ್ಪವಿಶೇಷಃ ಉಪನಯನಾಂಗತ್ವೇನ ಸ್ಥಾಪಿತದೇವತಾನಾಂ ಉತ್ಥಾಪನಂ ಮಂಡಪೋದ್ವಾದಸನಂ ತದಂಗ ಗಣಪತಿ ಪೂಜನಂ ಪುಣ್ಯಾಹವಾಚನಂ ಚ ಕರಿಷ್ಯೇ । ಶೇಷಂ ವಿವಾಹವತ್ ॥**

---

# ॥ ವಿವಾಹಸಂಸ್ಕಾರನಿರ್ಣಯಃ ॥

## ಪ್ರತಿಕೂಲವಿಚಾರಃ:-

**ಶೌನಕಃ:- ಪಿತಾ ಪಿತಾಮಹಶ್ಚೈವ ಮಾತಾ ಚೈವ ಪಿತಾಮಹೀ । ಪಿತೃವ್ಯಃ ಸ್ತ್ರೀಸುತಭ್ರಾತಾ ಭಗಿನೀಚಾವಿವಾಹಿತಾ ॥ ಏಭಿರತ್ರ ವಿಪನ್ನೈಶ್ಚ ಪ್ರತಿಕೂಲಂ ಬುಧೈಃ ಸ್ಮೃತಂ ॥ ಸಂಕಟೇ ಸಮನುಪ್ರಾಪ್ತೇ ಯಾಜ್ಞವಲ್ಕ್ಯೇನ ಯೋಗಿನಾ । ಶಾಂತಿರುಕ್ತಾ ಗಣೇಶಸ್ಯ ಕೃತ್ವಾ ತಾಂ ಶುಭಮಾಚರೇತ್ ॥ ಮೇಧಾತಿಥಿಃ- ಪುರುಷತ್ರಯಪರ್ಯಂತೇ ಪ್ರತಿಕೂಲಂ ಸ್ವಗೋತ್ರಿಣಾಂ । ಪ್ರವೇಶಾನಿಗಣಸ್ತದ್ವತ್ತಥಾ ಮಂಡನಮುಂಡನೇ ॥**

---

ಜ್ಯೋತಿಃಶಾಸ್ತ್ರದ ದೃಷ್ಟಿಯಿಂದ ಅನಧ್ಯಾಯ, ಕುಯೋಗ, ಜನ್ಮಮಾಸ, ಜನ್ಮಲಗ್ನ, ಜನ್ಮಷ್ಟಚಂದ್ರ ಶಾಖಾಧಿಪತಿಯ ಪ್ರಾತಿಕೂಲ್ಯ ಮುಂತಾದವು ಉಪನಯನಕ್ಕೆ ವರ್ಜ್ಯವಾಗಿವೆ. ಗಾಯತ್ರಿಯ ಉಪದೇಶಕ್ಕೆ ವಿದ್ವಾಂಸನಾದ ಜ್ಯೋತಿಷಿಯಿಂದ ಮುಹೂರ್ತವನ್ನು ನಿರ್ಣಯಿಸಬೇಕು. ಈಗೀಗ ಮಂಗಲಾಷ್ಟಕದ ನಂತರ ನಿರೀಕ್ಷಣೆಗಾಗಿ ಮಾತ್ರ ಮುಹೂರ್ತ ನೋಡುತ್ತಾರೆ. ಪತ್ರಿಕಾಪೂಜನ ಘಟಿಕಾಪೂಜನ ಮುಂತಾದುವುಗಳ ಅವಶ್ಯಕತೆ ಇಲ್ಲ. ಜ್ಯೋತಿಷಿಗೆ ಸರಿಯಾಗಿ ದಕ್ಷಿಣೆ ಕೊಡಬೇಕು.

**ಪ್ರತಿಕೂಲವಿಚಾರಃ-** ವಿವಾಹನಿರ್ಣಯಾನಂತರ ವಧೂವರರ ತಂದೆ, ಅಜ್ಜ, ತಾಯಿ, ಪಿತೃವ್ಯ, ಪೂರ್ವಪತ್ನಿ ಹಾಗೂ ಮೊದಲಿನ ಮಗ, ಅಣ್ಣ, ಅವಿವಾಹಿತೆಯಾದ ಅಕ್ಕ, ತಂಗಿ ಇವರಲ್ಲಿ ಯಾರಾದರೂ ಮರಣಹೊಂದಿದರೆ ಅದು ವಿವಾಹಕ್ಕೆ ಪ್ರತಿಕೂಲವೆಂದು ತಿಳಿಯಬೇಕು. ಸಂಕಟ (ಎರಡನೆಯ ಯೋಗ್ಯವರ ಸಿಕ್ಕದೆ ಇರುವುದು) ಪ್ರಾಪ್ತವಾದರೆ, ವಿನಾಯಕಶಾಂತಿಯನ್ನು ಮಾಡಿ ಮಂಗಲಕಾರ್ಯವನ್ನು ಮಾಡಬೇಕೆಂದು ಯಾಜ್ಞವಲ್ಕ್ಯರು ಹೇಳುತ್ತಾರೆ.

**ಕನ್ಯಾದಾನ ಪ್ರಶಂಸಾ:-**

**ಸಂವರ್ತಃ ॥ ಅಲಂಕೃತ್ಯ ತು ಯಃ ಕನ್ಯಾಂ ಭೂಷಣಾಚ್ಛಾದನಾದಿಭಿಃ । ದತ್ವಾ ಸ್ವರ್ಗಮವಾಪ್ನೋತಿ ಪೂಜ್ಯತೇ ವಾಸವಾದಿಭಿಃ ॥ ವೃಕುದಶ್ಚಾಶ್ವ ಮೇದೀ ಚ ಪ್ರಾಣದಾನಾಭಯೇಷು ಚ । ಸಮಂ ಯಾತಿ ರಥಾ ಯೇಷಾಂ ತ್ರಯೋ ವೈ ನಾತ್ರ ಸಂಶಯಃ ॥ ಸಾಲಂಕೃತ ಕನ್ಯಾದಾತಾ ವೈಕುದಃ ॥ ವಹ್ನಿಪುರಾಣೇ-ಶ್ರುತ್ವಾ ಕನ್ಯಾಪ್ರದಾನಂ ಚ ಪಿತರಃ ಸಪಿತಾಮಹಾಃ ॥ ವಿಮುಕ್ತಾಃ ಸರ್ವಪಾಪೇಭ್ಯೋ ಬ್ರಹ್ಮಲೋಕಂ ವ್ರಜಂತಿ ತೇ ॥**

---

# ॥ ವಿವಾಹೇ ಮಂಡಪವೇದ್ಯಾದಿ ನಿರ್ಣಯಃ ॥

**ವಸಿಷ್ಠಃ- ಷೋಡಶಾರತ್ನಿಕಂ ಕುರ್ಯಾಚ್ಚತುರ್ದ್ವಾರೋಪಶೋಭಿತಂ । ಮಂಡಪಂ ತೋರಣೈರ್ಯುಕ್ತಂ ತತ್ರ ವೇದಿಂ ಪ್ರಕಲ್ಪಯೇತ್ ॥ ಅಷ್ಟಹಸ್ತಂ ತು ರಚಯೇತ್ ಮಂಡಪಂ ವಾ ದ್ವಿಷಟ್ಕರಂ ॥ ಸಪ್ತರ್ಷಿಮತೇ-ಮಂಗಲೇಷು ಚ ಸರ್ವೇಷು ಮಂಡಪೋ ಗೃಹಮಾನತಃ । ಕಾರ್ಯಃ ಷೋಡಶಹಸ್ತೋ ವಾ ನ್ಯೂನಹಸ್ತೋ ದಶಾವಧಿಃ ॥ ದೈವಜ್ಞಮನೋಹರಃ- ಚಿತ್ರಾ ವಿಶಾಖಾ ಶತ-**

---

**ಕನ್ಯಾದಾನ ಪ್ರಶಂಸಾ:-** ವಸ್ತ್ರಾಲಂಕಾರಭೂಷಿತಳಾದ ಕನ್ಯೆಯನ್ನು ದಾನ, ಮಾಡಿದವನು ಸ್ವರ್ಗವನ್ನು ಸೇರಿ ದೇವತೆಗಳಿಂದ ಸ್ತುತಿಸಲ್ಪಡುತ್ತಾನೆ. ಕನ್ಯಾದಾನ, ಅಶ್ವಮೇಧ, ಪ್ರಾಣರಕ್ಷಣೆ ಈ ಮೂರರ ಪುಣ್ಯ ಸಮಾನವಾದುದು. ತಮ್ಮ ಕುಲದಲ್ಲಿ ಕನ್ಯಾದಾನವನ್ನು ಮಾಡಿದ ವಾರ್ತೆಯನ್ನು ಕೇಳಿದ ಪಿತೃಗಳು ಪಾಪಮುಕ್ತರಾಗಿ ಬ್ರಹ್ಮಲೋಕವನ್ನು ಸೇರುತ್ತಾರೆಂದು ಅಗ್ನಿಪುರಾಣದಲ್ಲಿ ಹೇಳಲಾಗಿದೆ.

**ವಿವಾಹಕ್ಕೆ ಸಂಬಂಧಿಸಿದ ಮಂಡಪ ಹಾಗೂ ವೇದಿಗಳ ನಿರ್ಣಯ:-**

**ವಸಿಷ್ಠ:-** ಕಿರುಬೆರಳಿನ ವರೆಗಿನ ಕೈ ಅಳತೆಗೆ ಅರತ್ನಿ ಎನ್ನುತ್ತಾರೆ. ಅಂತಹ ಹದಿನಾರು ಅರತ್ನಿ ಉದ್ದಗಲವಿರುವ ಮಂಟಪವನ್ನು ನಿರ್ಮಿಸಿ ಅದಕ್ಕೆ ನಾಲ್ಕು ಬಾಗಿಲುಗಳನ್ನಿಟ್ಟು ತೋರಣಾದಿಗಳಿಂದ ಸಿಂಗರಿಸಬೇಕು.

**ಸಪ್ತರ್ಷಿಮತ:-** ಎಲ್ಲ ಮಂಗಲಕಾರ್ಯಗಳಲ್ಲಿ ಮಂಟಪವನ್ನು ತನ್ನ ಮನೆಯ ಮಾನಕ್ಕೆ ಹೊಂದಿಕೆಯಾಗುವ ಅಳತೆಯಲ್ಲಿ ಮಾಡಬೇಕು. ಹತ್ತು ಕೈ ಅಳತೆಗಿಂತ ಸಣ್ಣದಾಗಿರಬಾರದು. ಅಂತಹ ಮಂಟಪದಲ್ಲಿ ವೇದಿಯನ್ನು ನಿರ್ಮಿಸಬೇಕು.

**ದೈವಜ್ಞಮನೋಹರಮತ:-** ಚಿತ್ರಾ, ವಿಶಾಖಾ, ಶತತಾರಕಾ, ಅಶ್ವಿನೀ, ಜ್ಯೇಷ್ಠಾ, ಭರಣೀ, ಆರ್ದ್ರಾ, ಪುನರ್ವಸು, ಪುಷ್ಯ, ಆಶ್ಲೇಷಾ ಈ ನಕ್ಷತ್ರಗಳನ್ನು ಬಿಟ್ಟು

**ತಾರಕಾಶ್ವಿನೀ ಜ್ಯೇಷ್ಠಾಭರಣೌ ಶಿವಭಾಚ್ಚತುಷ್ಟಯಂ । ಹಿತ್ವಾ ಪ್ರಶಸ್ತಂ ಫಲ ತೈಲ ವೇದಿಕಾ ಪ್ರದಾನಕಂ ಕಂಡನಮಂಡಪಾದಿಕಂ ॥ ಹೇಮಾದ್ರೌ ವ್ಯಾಸಃ– ಕಂಡನ ದಲನ ಯವಾರಕಂ ಮಂಡಪಮೃದ್ವೇದಿವರ್ಣಕಾದ್ಯಖಿಲಂ । ತತ್ಸಂಬಂಧಿ ಗತಾಗತಂ ಮೃಗೇ ವೈವಾಹಿಕೇ ಕುರ್ಯಾತ್ । ಯವಾರಕಂ ಚಿಕಸಾ ಇತಿ ಪ್ರಸಿದ್ಧಂ । ವೇದಿಮಾಹ ನಾರದಃ-ಹಸ್ತೋಚ್ಛ್ರಿತಾಂ ಚತುರ್ಹಸ್ತೈಃ ಚತುರಸ್ರಾಂ ಸಮಂತತಃ । ಸ್ತಂಭೈಶ್ಚತುರ್ಭಿಃ ಸುಶ್ಲಕ್ಷ್ಣಂ ವಾಮಭಾಗೇ ತು ಸದ್ಮನಿ । ಸಮಾಂ ತಥಾ ಚತುರ್ದಿಕ್ಷು ಸೋಪಾನೈರತಿಶೋಭಿತಾಂ । ಪ್ರಾಗುದಕ್ಪ್ರವಣಾರಂಭಾಂ ಸ್ತಂಭೈರ್ಹಂಸಶುಕಾದಿಭಿಃ । ಏವಂ ವಿಧಾಮಾರುರುಕ್ಷೇನ್ಮಿಥುನಂ ಸಾಗ್ನಿವೇದಿಕಾಂ ॥ ಇತಿ ॥ ಹಸ್ತೋ ವಧ್ವಾಃ । ಸೋಪಾನಂ ಪಶ್ಚಿಮತಃ ಉಪರಿಭಾಗೇ ಉಕ್ತಪರಿಮಾಣಾದ್ಭಿನ್ನಂ ॥**

---

ಉಳಿದ ನಕ್ಷತ್ರಗಳಲ್ಲಿ ಫಲ, ತೈಲ, ವೇದಿಕಾ ಮುಂತಾದ ವಿವಾಹಕ್ಕೆ ಸಂಬಂಧಿಸಿದ ಕರ್ಮಗಳನ್ನು ಮಾಡಬೇಕು.

**ಹೇಮಾದ್ರಿಯಲ್ಲಿ ವ್ಯಾಸವಚನ:–** ವಿವಾಹ ನಕ್ಷತ್ರಕ್ಕೆ ಹೊಂದಾಣಿಕೆಯಾಗುವ ನಕ್ಷತ್ರಗಳಲ್ಲಿ ವಿವಾಹಕ್ಕೆ ಸಂಬಂಧಿಸಿದ ಇತರ ಕರ್ಮಗಳನ್ನು ಮಾಡಬೇಕು.

**ನಾರದವೇದೀಮತ:–** ಮನೆಯ ವಾಮಭಾಗದಲ್ಲಿ ಒಂದು ಮೊಳ ಎತ್ತರ ಹಾಗೂ ನಾಲ್ಕು ಮೊಳ ಉದ್ದಗಲವಿರುವ ವೇದಿಕೆಯ ನಿರ್ಮಾಣ ಮಾಡಬೇಕು. ಅದಕ್ಕೆ ನಾಲ್ಕು ಬದಿಗಳಲ್ಲಿ ಬಾಳೆಯ ಕಂಬಗಳನ್ನಿರಿಸಿ ಪಶ್ಚಿಮದಲ್ಲಿ ಮೆಟ್ಟಲುಗಳನ್ನು ಮಾಡಿಡಬೇಕು. ಬಾಳೆಯ ತೋರಣ, ಹಂಸ, ಗಿಳಿ ಮುಂತಾದ ಪಕ್ಷಿಗಳು ಮುಂತಾದ ಅಲಂಕಾರಗಳುಳ್ಳ ಆ ವೇದಿಕೆಯ ಮೇಲೆ ಅಗ್ನಿಸಹಿತರಾಗಿ ವಧೂವರರು ಹತ್ತಿಹೋಗಬೇಕು. "**ಸಾಗ್ನಿ ವೇದಿಕಾಂ**" ಎಂದು ಹೇಳಿರುವುದರಿಂದ ವಧೂವರರು ಅಲ್ಲಿಗೆ ಬರುವ ಮೊದಲೇ ಅಲ್ಲಿ ಅಗ್ನಿ ಪ್ರತಿಷ್ಠಾಪನೆ ಮಾಡಿರಬೇಕೆಂದು ಊಹಿಸಬೇಕು. ಇಲ್ಲಿ ವಧುವಿನ ಕೈ ಅಳತೆಯನ್ನು ಇಟ್ಟುಕೊಳ್ಳಬೇಕು. ಹನ್ನೆರಡು ಮೊಳ ಉದ್ದಗಲವಿರುವ ಮಂಡಪವು ಅಷ್ಟು ಪ್ರಶಸ್ತವಲ್ಲ.

# ॥ ಗರ್ಭಾಧಾನಸಂಸ್ಕಾರಃ ॥

**॥ ಶ್ರೀಃ ॥ ಯಜಮಾನಃ ಆಚಮ್ಯ ಪ್ರಾಣಾನಾಯಮ್ಯ ದೇಶಕಾಲೌ ಸ್ಮೃತ್ವಾ ॥ ಅಸ್ಯಾಃ ಮಮ ಭಾರ್ಯಾಯಾಃ ಪ್ರತಿಗರ್ಭಸಂಸ್ಕಾರಾತಿಶಯದ್ವಾರಾ ಅಸ್ಯಾಂ ಜನಿಷ್ಯಮಾಣಸರ್ವಗರ್ಭಾಣಾಂ ಬೀಜಗರ್ಭಸಮುದ್ಭವೈನೋನಿಬರ್ಹಣ ದ್ವಾರಾ ಶ್ರೀಪರಮೇಶ್ವರಪ್ರೀತ್ಯರ್ಥಂ ಗರ್ಭಾಧಾನಾಖ್ಯಂ ಕರ್ಮ ಕರಿಷ್ಯೇ ॥**

**ತದಂಗತಯಾದೌ ಗಣಪತಿಪೂಜನಂ ಪುಣ್ಯಾಹವಾಚನಂ ಮಾತೃಕಾಪೂಜನಂ ನಾಂದೀಶ್ರಾದ್ಧಂ ಚ ಕರಿಷ್ಯೇ ॥ ಇತಿ ಸಂಕಲ್ಪ್ಯ ತಾನಿ ಕೃತ್ವಾ ॥ (ನಾಂದೀಶ್ರಾದ್ಧೇ ಕ್ರತುದಕ್ಷಸಂಜ್ಞಕಾ ವಿಶ್ವೇದೇವಾಃ)**

**ಪ್ರಾಜಾಪತ್ಯಹೋಮಂ ಕರ್ತುಂ ಸ್ಥಂಡಿಲಾದಿ ಕರಿಷ್ಯೇ ॥ ಸ್ಥಂಡಿಲ ಸಂಸ್ಕಾರಾದಿ ಮಾರುತನಾಮಾಗ್ನಿಪ್ರತಿಷ್ಠಾಂತಂ ಕೃತ್ವಾಗ್ನಿಂ ಧ್ಯಾತ್ವಾ ಸಮಿದ್ವಯ ಮಾದಾಯ ಕ್ರಿಯಮಾಣೇ ಗರ್ಭಾಧಾನಹೋಮೇ ದೇವತಾಪರಿಗ್ರಹಾರ್ಥಮಿತ್ಯಾದಿ ಚಕ್ಷುಷೀ ಆಜ್ಯೇನೇತ್ಯಂತಮುಕ್ತ್ವಾ ಪ್ರಜಾಪತಿಂ ಚರುಣಾ ವಿಷ್ಣುಂ ಷಡ್ವಾರಮಾಜ್ಯೇನ ಪ್ರಜಾ-ಪತಿಂಚಾಜ್ಯೇನ ಶೇಷೇಣಸ್ವಿಷ್ಟಕೃತಮಿತ್ಯಾದಿ ಸದ್ಯೋಯಕ್ಷ್ಯ ಇತ್ಯಂತಮುಕ್ತ್ವಾ ಸಮಿದ್ವ-ಯಮಗ್ನಾವಾಧಾಯ ಪರಿಸಮೂಹನಾದಿ ಪೂರ್ಣಪಾತ್ರನಿಧಾನಾಂತಂ ಕೃತ್ವಾ ॥**

**ಪ್ರಜಾಪತಯೇ ತ್ವಾ ಜುಷ್ಟಂ ನಿರ್ವಪಾಮಿ ಪ್ರೋಕ್ಷಾಮಿತ್ಯಾದ್ಯಭಾಗಾಂತಂ ಕೃತ್ವಾ ಅವದಾನಧರ್ಮೇಣ ಚರುಮವದಾಯ ॥ ಓಂ ಪ್ರಜಾಪತಯೇ ಸ್ವಾಹಾ ಪ್ರಜಾಪತಯ ಇದಂ ನಮಮ ॥ ಇತಿ ಚರುಣಾ ಏಕಾಹುತಿಂ ಹುತ್ವಾ ॥**

---

ಯಜಮಾನನು ಆಚಮನ ಪ್ರಾಣಾಯಾಮಗಳನ್ನು ಮಾಡಿ, ದೇಶಕಾಲಗಳನ್ನು ಸ್ಮರಿಸಿ, **"ಅಸ್ಯಾಃ ಮಮ...ಕರಿಷ್ಯೇ"** ಮತ್ತು **"ತದಂಗತಯಾದೌ... ಕರಿಷ್ಯೇ"** ಎಂದು ಸಂಕಲ್ಪಮಾಡಬೇಕು, ಅಂತೆಯೇ ಗಣಪತಿಪೂಜೆ, ಪುಣ್ಯಾಹವಾಚನ, ಮಾತೃಕಾಪೂಜನ, ನಾಂದೀಶ್ರಾದ್ಧಗಳನ್ನು ಮಾಡಬೇಕು. ನಾಂದೀಶ್ರಾದ್ಧದಲ್ಲಿ ಕ್ರತುದಕ್ಷ ಸಂಜ್ಞೆಯ ವಿಶ್ವೇದೇವರು.

ಆಮೇಲೆ **"ಪ್ರಾಜಾಪತ್ಯ...ಕರಿಷ್ಯೇ"** ಎಂದು ಸಂಕಲ್ಪಿಸಿ ಸ್ಥಾಲೀಪಾಕದಲ್ಲಿ ಹೇಳಿದಂತೆ ಸ್ಥಂಡಿಲಸಂಸ್ಕಾರಾದಿಗಳನ್ನು ಮಾಡಿ, **"ಮರುತ್"** ಎಂಬ ಅಗ್ನಿಯನ್ನು ಪ್ರತಿಷ್ಠೆ ಮಾಡಬೇಕು. ಅಗ್ನಿಧ್ಯಾನಾದಿಗಳನ್ನು ಪೂರಯಿಸಿ ಎರಡು ಸಮಿಧೆಗಳನ್ನು ತೆಕ್ಕೊಂಡು **"ಕ್ರಿಯಮಾಣೇ... ಪ್ರಜಾಪತಿಂ ಚಾಜ್ಯೇನ" "ಶೇಷೇಣ ಸ್ವಿಷ್ಟಕೃತ...ಸದ್ಯೋ ಯಕ್ಷ್ಯೇ"** ಎಂಬಲ್ಲಿ ವರೆಗೆ ಹೇಳಿ

ವಿಷ್ಣುರ್ಯೋನಿಮಿತಿ ತಿಸೃಣಾಂ ತ್ವಷ್ಟಾ ವಿಷ್ಣುರನುಷ್ಟುಪ್ ಗರ್ಭಾಧಾನ ಪ್ರಧಾನಾಜ್ಯಹೋಮೇ ವಿನಿಯೋಗಃ ॥ ಓಂ ವಿಷ್ಣುರ್ಯೋನಿಂ ಕಲ್ಪಯ-ತುತ್ವಷ್ಟಾ ರೂಪಾಣಿಪಿಂಶತು ॥ ಆಸಿಂಚತು ಪ್ರಜಾಪತಿರ್ಧಾತಾ ಗರ್ಭಂ ದಧಾತು ತೇ ಸ್ವಾಹಾ ॥ ವಿಷ್ಣವ ಇದಂ ನಮಮ ॥ ಓಂ ಗರ್ಭಂ ಧೇಹಿಸಿನೀವಾಲಿ-ಗರ್ಭಂ ದೇಹಿ ಸರಸ್ವತಿ । ಗರ್ಭಂ ತೇ ಅಶ್ವಿನೌ ದೇವಾ ವಾಧತ್ತಾಂ ಪುಷ್ಕರ-ಸ್ರಜಾ ಸ್ವಾಹಾ ॥ ವಿಷ್ಣವ ಇದಂ ನಮಮ ॥ ಓಂ ಹಿರಣ್ಯಯೀ ಅರಣೀಯಂ ನಿರ್ಮಂಥತೋ ಅಶ್ವಿನಾ । ತಂ ತೇ ಗರ್ಭಂ ಹವಾಮಹೇ ದಶಮೇ ಮಾಸಿ ಸೂತವೇ ಸ್ವಾಹಾ ॥ ವಿಷ್ಣವ ಇದಂ ನಮಮ ॥ ನೈಜಮೇಷೇತಿ ತಿಸೃಣಾಂ ತ್ವಷ್ಟಾ ವಿಷ್ಣುರನುಷ್ಟುಪ್ ॥ ಗರ್ಭಾಧಾನಪ್ರಧಾನಾಜ್ಯ ಹೋಮೇ ವಿನಿ-ಯೋಗಃ ॥ ನೇಜಮೇಷಪರಾಪತ ಸುಪುತ್ರಃ ಪುನರಾಪತ ॥ ಅಸ್ಯೈ ಮೇ ಪುತ್ರ-ಕಾಮಾಯೈ ಗರ್ಭಮಾಧೇಹಿ ಯಃ ಪುಮಾನ್ ಸ್ವಾಹಾ ॥ ವಿಷ್ಣವ ಇದಂ ನಮಮ ॥ ಓಂ ಯಥೇಯಂಪೃಥಿವೀ ಮಹ್ಯುತ್ತಾನಾಗರ್ಭಮಾದಧೇ । ಏವಂ ತಂ ಗರ್ಭಮಾಧೇಹಿ ದಶಮೇ ಮಾಸಿಸೂತವೇ ಸ್ವಾಹಾ ॥ ವಿಷ್ಣವ ಇದಂ ನಮಮ ॥ ಓಂ ವಿಷ್ಣೋ ಶ್ರೇಷ್ಠೇನ ರೂಪೇಣಾಸ್ಯಾಂ ನಾರ್ಯಾಂ ಗವೀನ್ಯಾಂ ॥ ಪುಮಾಂಸಂ ಪುತ್ರಾನಾಧೇಹಿ ದಶಮೇ ಮಾಸಿ ಸೂತವೇ ಸ್ವಾಹಾ ॥ ವಿಷ್ಣವ ಇದಂ ನಮಮ ॥

ಪ್ರಜಾಪತೇ ಹಿರಣ್ಯಗರ್ಭಃ ಪ್ರಜಾಪತಿಸ್ತ್ರಿಷ್ಟುಪ್ ॥ ಗರ್ಭಾಧಾನಾಜ್ಯ ಹೋಮೇ ವಿನಿಯೋಗಃ ॥ ಓಂ ಪ್ರಜಾಪತೇ ನತ್ವದೇತಾನ್ಯನ್ಯೋವಿಶ್ವಾಜಾತಾನಿ

---

ಆ ಸಮಿಧೆಗಳನ್ನು ಅಗ್ನಿಯಲ್ಲಿ ಹೋಮಿಸಿ ಪರಿಸಮೂಹನ ಮುಂತಾಗಿ ಪೂರ್ಣಪಾತ್ರವನ್ನು ಇಡುವಲ್ಲಿ ವರೆಗಿನ ಎಲ್ಲ ಕ್ರಿಯಾಭಾಗಗಳನ್ನೂ ಮಾಡಬೇಕು.

ಆಮೇಲೆ **"ಪ್ರಜಾಪತಯೇ ತ್ವಾ..."** ಎಂಬಲ್ಲಿಂದ ಆಜ್ಯಭಾಗಾಂತದ ವರೆಗೆ ಸ್ಥಾಲೀಪಾಕದಲ್ಲಿ ಹೇಳಿದ ಕ್ರಿಯೆಗಳನ್ನು ಮಾಡಿ, ಅವದಾನಕ್ರಮದಿಂದ ಚರುವನ್ನು ತೆಗೆದುಕೊಂಡು **"ಪ್ರಜಾಪತಯೇ...ನಮಮ"** ಎಂದು ಚರುವಿನಿಂದ ಒಂದು ಆಹುತಿಯನ್ನು ಕೊಡಬೇಕು. ಮುಂದೆ **"ವಿಷ್ಣುರ್ಯೋನಿ..."** ಮುಂತಾಗಿ ಒಂದೊಂದೇ ಮಂತ್ರವನ್ನು ಉಚ್ಚರಿಸಿ ಒಂದೊಂದು

ಪರಿತಾ ಬಭೂವ ॥ ಯತ್ಕಾಮಾಸ್ತೇ ಜಹುಮಸ್ತನ್ನೋ ಅಸ್ತು ವಯಂ ಸ್ಯಾಮ ಪತಯೋ ರಯೀಣಾಂ ಸ್ವಾಹಾ ॥ ಪ್ರಜಾಪತಯ ಇದಂ ನಮಮ ॥ ಏವಂ ಸಪ್ತಾಜ್ಯಾಹುತೀರ್ಹುತ್ವಾ ॥ ಅಪನಃ ಶೋಶುಚದಘಮಿತ್ಯಷ್ಟರ್ಚಸ್ಯ ಸೂಕ್ತಸ್ಯ ಕುತ್ಸೋಽಗ್ನಿರ್ಗಾಯತ್ರೀ ಪತ್ನ್ಯಾ ಮೂರ್ಧಾಭಿಮರ್ಶನೇ ವಿನಿಯೋಗಃ ॥ ಓಂ ಅಪನಃ ಶೋಶುಚದಘಮಗ್ನೇಶುಶುಧ್ಯಾರಯಿಂ ॥ ಅಪನಃ ಶೋಶುಚದಘಂ ॥ ಸುಕ್ಷೇತ್ರಿಯಾಸುಗಾತುಯಾವಸೂಯಾ ಚ ಯಜಾಮಹೇ ॥ ಅಪನಃ ಶೋ ..... ॥ ಪ್ರಯದ್ಭಂದಿಷ್ಠ ಏಷಾಂ ಪ್ರಾಸ್ಮಾಕಾಸಶ್ಚಸೂರಯಃ ॥ ಅಪನಃ ಶೋ ... ॥ ಪ್ರಯತ್ತೇ ಅಗ್ನೇ ಸೂರಯೋ ಜಾಯೇ ಮಹಿಪ್ರತೇವಯಂ ॥ ಅಪನಃ ಶೋ ..... ॥ ಪ್ರಯದಗ್ನೇಃ ಸಹಸ್ವತೋವಿಶ್ವತೋಯಂತಿ ಭಾನವಃ ॥ ಅಪನಃ ಶೋ ... ॥ ತ್ವಂ ಹಿ ವಿಶ್ವತೋಮುಖವಿಶ್ವತಃ ಪರಿಭೂರಸಿ ॥ ಅಪನಃ ಶೋ ... ॥ ದ್ವಿಷೋನೋ ವಿಶ್ವತೋಮುಖಾತಿ ನಾವೇವ ಪಾರಯ ॥ ಅಪನಃ ಶೋ ... ॥ ಸನಃ ಸಿಂಧುಮಿವನಾವಯಾತಿಪರ್ಷಾ ಸ್ವಸ್ತಯೇ ॥ ಅಪನಃ ಶೋಶುಚದಘಂ ॥ ಸೂಕ್ತಾಂತೇ ಪ್ರಾಗಂಗುಲಿನಾನ್ಯಬ್ಜುಖೇನ ಹಸ್ತೇನ ಪತ್ನ್ಯಾ ಮೂರ್ಧಾನಮಭಿ-ಮೃಶ್ಯ ॥ ಯಾಃ ಫಲಿನೀರಿತ್ಯಸ್ಯಾಥರ್ವಣೋ ಭಿಷಗೋಷಧಯೋನುಷ್ಟುಪ್ ॥ ಜಪೇ ವಿನಿಯೋಗಃ ॥ ಓಂ ಯಾಃ ಫಲಿನೀ ... ॥ ಏತಾಂ ಜಪಿತ್ವಾ ॥

---

ಮಂತ್ರದಿಂದ ಒಂದೊಂದು ಆಜ್ಯಾಹುತಿಯನ್ನು ಕೊಡುತ್ತ **"ವಿಷ್ಣವ ಇದಂ ನಮಮ"** ಎಂದು ಸಮರ್ಪಿಸಬೇಕು. ಹೀಗೆ ಆರು ಆಹುತಿಗಳನ್ನು ಕೊಟ್ಟಾದ ಮೇಲೆ, **"ಓಂ ಪ್ರಜಾಪತೇ ನತ್ವ ..."** ಈ ಮಂತ್ರದಿಂದ ಪ್ರಜಾಪತಿಗೆ ಒಂದು ಆಜ್ಯಾಹುತಿಯನ್ನು ಕೊಡಬೇಕು. ಆಮೇಲೆ **"ಅಪನಃ ಶೋಶುಚದಘಂ"** ಎಂಬ ಎಂಟು ಋಕ್ಕುಗಳುಳ್ಳ ಮಂತ್ರವನ್ನು ಹೇಳಿ ಚಾಚಿದ ಬೆರಳುಗಳು ಕವಚಿ ಕೈಯಿಂದ ಪತ್ನಿಯ ತಲೆಯನ್ನು ಸ್ಪರ್ಶಿಸಬೇಕು. **"ಯಾಃ ಫಲಿನೀ..."** ಎಂಬ ಮಂತ್ರವನ್ನು ಜಪಿಸಬೇಕು. ಮುಂದೆ **"ವರ್ಧೇನದಸ್ಮು.."** ಈ ಮಂತ್ರಗಳಿಂದ ಉಪಸ್ಥಾನಮಾಡುವುದು. **"ಉದೀರ್ಷ್ವಾ"** ಎಂಬ ಮಂತ್ರಗಳನ್ನು ಹೇಳಿ ಪತ್ನಿಯ ಬಲಮೂಗಿನಲ್ಲಿ

ವಧೇನ ದಸ್ಯುಮಿತಿ ಷಣ್ಣಾಂ ವಸುಶ್ರುತೋಗ್ನಿಸ್ತ್ರಿಷ್ಟುಪ್ ॥ ಅಗ್ನ್ಯು-ಪಸ್ಥಾನೇ ವಿನಿಯೋಗಃ ॥ ಓಂ ವಧೇನದಸ್ಯುಂ ಪ್ರಹಿಂಚಾತಯಸ್ವಯಃ ಕೃಣ್ವಾ-ನಸ್ತನ್ವೇ ೧ ಸ್ವಾಯೈ ॥ ಪಿಪರ್ಷಿಯತ್ಸಹಸಸ್ಪುತ್ರದೇವಾನ್ ಸೋ ಅಗ್ನೇ ಪಾಹಿನೃತಮವಾಜೇ ಅಸ್ಮಾನ್ ॥ ವಯಂತೇ ಅಗ್ನ ಉಕ್ಥೈರ್ವಿಧೇಮ ವಯಂ ಹವ್ಯೈಃ ಪಾವಕಭದ್ರಶೋಚೇ ॥ ಅಸ್ಮೇರಯಿಂವಿಶ್ವವಾರಂ ಸಮಿನ್ವಾಸ್ಮೇ ವಿಶ್ವಾನಿದ್ರ-ವಿಣಾನಿ ಧೇಹಿ ॥ ಅಸ್ಮಾಕಮಗ್ನೇ ಅಧ್ವರಂ ಜುಷಸ್ವಸಹಸಃ ಸೂನೋತ್ರಿಷಧಸ್ಥ-ಹವ್ಯಂ ॥ ವಯಂ ದೇವೇಷು ಸುಕೃತಃ ಸ್ಯಾಮಶರ್ಮಣಾ ನ ಸ್ತ್ರಿವರೂಥೇನ ಪಾಹಿ ॥ ವಿಶ್ವಾನಿನೋ ... ೩ ॥ ಅಗ್ನಿಸ್ತುವಿಶ್ರವಸ್ತಮಮಿತಿ ದ್ವಯೋರ್ವಸೂಯ-ವೋಗ್ನಿರನುಷ್ಟುಪ್ ಅಗ್ನ್ಯುಪಸ್ಥಾನೇ ವಿನಿಯೋಗಃ ॥ ಓಂ ಅಗ್ನಿಸ್ತುವಿಶ್ರವಸ್ತ-ಮಂತುವಿಬ್ರಹ್ಮಾಣಮುತ್ತಮಂ ॥ ಅತೂರ್ತಂ ಶ್ರಾವಯತ್ಪತಿಂ ಪುತ್ರಂ ದದಾತಿದಾ-ಶುಷೇ ॥ ಅಗ್ನಿರ್ದದಾತಿ ಸತ್ಪತಿಂಸಾಸಾಹಯೋಯುಧಾನೃಭಿಃ ॥ ಅಗ್ನಿರತ್ಯಂರಘು-ಷ್ಯದಂಜೇತಾರಮಪರಾಜಿತಂ ॥ ಇತ್ಯಷ್ಟಾಭಿರಗ್ನಿಮುಪಸ್ಥಾಯ ॥

ಉದೀರ್ಷ್ವೇತಿ ದ್ವಯೋಃ ಸೂರ್ಯಾಸಾವಿತ್ರೀ ಸೂರ್ಯಾಸಾವಿತ್ರೀ ಆದ್ಯಾ ತ್ರಿಷ್ಟುಬಂತ್ಯಾನುಷ್ಟುಪ್ ॥ ಭಾರ್ಯಾಯಾ ದಕ್ಷಿಣನಾಸಾಪುಟೇಶ್ವಗಂ-ಧಾಯಾ (ದೂರ್ವಾಯಾ ವಾ) ರಸಸೇಚನೇ ವಿನಿಯೋಗಃ ॥ ಓಂ ಉದೀ-ರ್ಷ್ವಾತಃ ಪತಿವತೀಹ್ಯೇ ೩ ಷಾವಿಶ್ವಾವಸುಂ ನಮಸಾಗೀರ್ಭಿರೀಳೇ ॥ ಅನ್ಯಾಮಿಚ್ಛ ಪಿತೃಷದಂವ್ಯಕ್ತಾಂ ಸ ತೇ ಭಾಗೋಜನುಷಾತಸ್ಯವಿದ್ಧಿ ॥ ಉದೀರ್ಷ್ವಾತೋ ವಿಶ್ವಾವಸೋನಮಸೇಳಾಮಹೇತ್ವಾ ॥ ಅನ್ಯಾಮಿಚ್ಛಪ್ರಫರ್ವ್ಯಂ ೧ ಸಂಜಾಯಾಂ ಪತ್ಯಾ ಸೃಜಸ್ವಾಹಾ ॥ ಇತಿ ವಾಮಭಾಗೋಪವಿಷ್ಟಾಯಾ ಭಾರ್ಯಾಯಾ ದಕ್ಷಿಣನಾಸಾಬಿ ಲೇಶ್ವಗಂಧಾದಿ ರಸಂ ಸಿಕ್ತ್ವಾ ತದ್ರಸೇ ಉದರಂ ಗತೇ ತಾ ಮಾಚಾಮಯ್ಯೋಪವೇ-ಯಾತ್ ॥ ತತಃ ಸ್ವಿಷ್ಟಕೃದಾದಿ ಹೋಮಶೇಷಂ ಸಮಾಪ್ಯ ॥

ಸೂರ್ಯೋನೋ ದಿವಸ್ಪಾತ್ವಿತಿ ಪಂಚರ್ಚಸ್ಯ ಸೂಕ್ತಸ್ಯ ಚಕ್ಷುಃ ಸೂರ್ಯೋ ಗಾಯತ್ರೀ ॥ ಸೂರ್ಯೋಪಸ್ಥಾನೇ ವಿನಿಯೋಗಃ ॥ ಓಂ ಸೂರ್ಯೋನೋ ದಿವಸ್ಪಾತುವಾತೋ ಅಂತರಿಕ್ಷಾತ್ ॥ ಅಗ್ನಿರ್ನಃ ಪಾರ್ಥಿ-ವೇಭ್ಯಃ ॥ ಜೋಷಾಸವಿತರ್ಯಸ್ಯತೇ ಹರಃ ಶತಂ ಸವಾಂ ಅರ್ಹತಿ ॥ ಪಾಹಿನೋದಿದ್ಯುತಃ ಪತಂತ್ಯಾಃ ॥ ಚಕ್ಷುರ್ನೋ ದೇವಃ ಸವಿತಾ ಚಕ್ಷುರ್ನ ಉತಪರ್ವತಃ । ಚಕ್ಷುರ್ಧಾತಾ ದಧಾತುನಃ ॥ ಚಕ್ಷುರ್ನೋ ಧೇಹಿ ಚಕ್ಷುಷೇ ಚಕ್ಷುರ್ವಿಖ್ಯೈತನೂಭ್ಯಃ ॥ ಸಂ ಚೇದಂ ವಿಚಪಶ್ಯೇಮ ॥ ಸುಸಂದೃಶಂತ್ವಾ ವಯಂ ಪ್ರತಿ ಪಶ್ಯೇಮ ಸೂರ್ಯ ॥ ವಿಪಶ್ಯೇಮನೃಚಕ್ಷಸಃ ॥ ಅನೇನ ಸಪತ್ನೀಕಃ ಸೂರ್ಯಮುಪಸ್ಥಾಯ ಬ್ರಾಹ್ಮಣಾನ್ ಭೋಜಯಿತ್ವಾ ತೇಭ್ಯಃ ಸ್ವಸ್ತ್ಯಯನಪೂರ್ವಕ ಮಾಶಿಷೋ ಗೃಹೀತ್ವಾ ಭುಂಜೀತ ॥ ಇದಾನೀಂ ಶಿಷ್ಟಾ ನಸ್ಯಂದತ್ವೈವ ಸ್ವಿಷ್ಟಕೃದಾದಿ ಹೋಮಶೇಷಂ ಸಮಾಪಯಂತಿ ॥

ತತೋ ರಾತ್ರೌ ವಿಹಿತಃ ಸಮಂತ್ರಕೋ ವಿಧಿರಗ್ರೇ ಲಿಖಿತಃ । ತನ್ಮಂತ್ರಾನ್ ಕೇವಲಮತ್ರ ಪಠಂತಿ ಶಿಷ್ಟಾಃ ॥

ತತೋ ಭರ್ತಾ ಅಭಗ್ನಂ ಜಂತುವರ್ಜಿತಂ ಸುಖಸ್ಪರ್ಶವಿತಾನೋಪರಿ-ಮಂಡಿತಂ ಮಂಚಕಮಾರುಹ್ಯ ಪ್ರಾಗುಕ್ತಶೋಭನೇ ಮುಹೂರ್ತೇ ಸ್ತ್ರಿಯ-ಮಾರೋಪ್ಯ ॥ ಉಪಗಮನೇ ಚಾಯಂ ಕ್ರಮಃ ॥ ಓಂ ಗಂಧರ್ವಸ್ಯ ವಿಶ್ವಾ-ವಸೋರ್ಮುಖಮಸಿ ಇತಿ ಮಂತ್ರೇಣ ಹೋಮೋಕ್ತಮುಷ್ಟ್ಯಾದಿಭಿರ್ವಿಷ್ಣುರ್ಯೋ-ನಿಮಿತಿ ತಿಸೃಭಿರ್ನೇಜಮೇಷೇತಿ ತ್ರಿಸೃಭಿರಂಗುಲೀಭಿರ್ಯೋನಿಮಭಿಮೃಶ್ಯ ॥ ತಾಂ ಪೂಷನ್ನಿತ್ಯಸ್ಯ ಸೂರ್ಯಾಸಾವಿತ್ರೀ ತ್ರಿಷ್ಟುಪ್ ಜಪೇ ನಿಯೋಗಃ ॥ ಓಂ ತಾಂಪೂಷಂಚ್ಛಿವತಮಾಮೇರಯಸ್ವಯಸ್ಯಾಂಬೀಜಂ ಮನುಷ್ಯಾ ೩ ವಪಂತಿ ॥ ಯಾನ ಊರೂಉಶತೀ ವಿಶ್ರಯಾತೇ ಯಸ್ಯಾಮುಶಂತಃ ಪ್ರಹರಾಮ-

ಶೇಪಂ ॥ ೧ ॥ ಯೋ ಗರ್ಭಮಿತ್ಯಸ್ಯ ವಸಿಷ್ಠಃ ಪರ್ಜನ್ಯೋ ಗಾಯತ್ರೀ ॥ ಜಪೇ ವಿ... ॥ ಓಂ ಯೋಗರ್ಭಮೋಷಧೀ ನಾಂಗವಾಂಕ್ಯಾನೋತ್ಯರ್ವತಾಂ ॥ ಪರ್ಜನ್ಯಃ ಪುರುಷೀಣಾಂ ॥ ೨ ॥ ಅಹಂಗರ್ಭಃ ಪ್ರಜಾವಾನ್ ಪ್ರಜಾಪತ್ಯೋ ಭರ್ಗ ಇಂದ್ರೋ ವಾ ತ್ರಿಷ್ಟುಪ್ ॥ ಜಪೇ ವಿ ... ॥ ಓಂ ಅಹಂ ಗರ್ಭಮದಧಾಮೋ-ಷಧೀಷ್ವಹಂ ವಿಶ್ವೇಷು ಭುವನೇಷ್ವಂತಃ ॥ ಅಹಂ ಪ್ರಜಾಅಜನಯಂಪೃಥಿವ್ಯಾಮ-ಹಂಜನಿಭ್ಯೋ ಅಪರೀಷು ಪುತ್ರಾನ್ ॥ ೩ ॥ ಇತಿ ತ್ರೀನ್ ಮಂತ್ರಾನ್ ಜಪಿತ್ವಾ ಸಕೃದುಪಗಚ್ಛೇತ್ ॥ ತತಃ ಪ್ರಾಣೇತೇ ರೇತೋದಧಾಮ್ಯಸಾವಿತ್ಯನುಪ್ರಾಣ್ಯ ॥ ಯಥಾ ಭೂಮಿರಗ್ನಿಗರ್ಭಾ ಯಥಾ ದ್ಯೌರಿಂದ್ರೇಣ ಗರ್ಭಿಣೀ ॥ ವಾಯುರ್ಯಥಾ ದಿಶಾಂ ಗರ್ಭ ಏವಂ ತೇ ಗರ್ಭಂ ದಧಾಮ್ಯಸಾವಿತಿ ಸ್ತ್ರೀಹೃದಯಂ ಅಭಿಮೃಶಾಚಾ-ಮೇತ್ ॥ ಅಸ್ಮಿನ್ ಕರ್ಮಣಿ ಶತಂ ದಶ ವಾ ಬ್ರಾಹ್ಮಣಾ ಭೋಜ್ಯಾಃ ॥

॥ ಇತಿ ಗರ್ಭಾಧಾನ ಸಂಸ್ಕಾರಃ ॥

---

ಅಷ್ಟಗಂಧ ಅಥವಾ ದೂರ್ವಾರಸವನ್ನು ಸುರಿಯಬೇಕು. ಅದು ಹೊಟ್ಟೆಗೆ ಹೋದ ಮೇಲೆ ಸ್ವಿಷ್ಟಕೃದಾದಿ ಹೋಮಶೇಷವನ್ನು ಮಾಡಿ ಮುಗಿಸಬೇಕು. ಬಳಿಕ "ಸೂರ್ಯೋನೋ..." ಮಂತ್ರಗಳಿಂದ ಸೂರ್ಯೋಪಸ್ಥಾನ ಮಾಡಿ ಬ್ರಾಹ್ಮಣರಿಗೆ ಭೋಜನವಿತ್ತು ಆಶೀರ್ವಾದ ಪಡೆದು ತಾನು ಊಟಮಾಡಬೇಕು. ರಾತ್ರಿಕಾಲದ ಮಂತ್ರಸಹಿತ ಉಪಗಮನವಿಧಿ. ಈ ಮಂತ್ರಗಳನ್ನು ಪಠನಮಾತ್ರ ಮಾಡಿದರೆ ಸಾಕೆಂದು ಶಿಷ್ಟಸಂಪ್ರದಾಯ. ಪತಿಯು ಒಡಕಿಲ್ಲದ, ಜಂತುಗಳಿಲ್ಲದ, ಸುಖಸ್ಪರ್ಶದಿಂದ ಕೂಡಿದ ಮಂಚದ ಮೇಲೆ ಪತ್ನಿಯನ್ನು ಮಲಗಿಸಿ, **"ಗಂಧರ್ವಸ್ಯ ವಿಶ್ವಾಸೋ"**, **"ವಿಷ್ಣುರ್ಯೋನಿಂ"**, **"ನೇಜಮೇಷ"** ಈ ಮಂತ್ರಗಳನ್ನು ಹೇಳುತ್ತ ಮೂರು ಬೆರಳುಗಳಿಂದ ಯೋನಿಸ್ಪರ್ಶ ಮಾಡಬೇಕು. ಬಳಿಕ **"ತಾಂ ಪೂಷನ್"** **"ಯೋ ಗರ್ಭ"** **"ಅಹಂ ಗರ್ಭ"** ಎಂಬ ಮೂರು ಮಂತ್ರಗಳನ್ನು ಜಪಿಸಿ ಉಪಗಮನ ಮಾಡಬೇಕು. ಆಮೇಲೆ **"ಪ್ರಾಣೇ ರೇತೋ"** **"ಯಥಾ ಭೂಮಿ"** ಎಂಬ ಎರಡು ಮಂತ್ರಗಳನ್ನು ಹೇಳಿ ಪತ್ನಿಯ ಹೃದಯಸ್ಪರ್ಶ ಮಾಡಬೇಕು. ನೂರು ಅಥವಾ ಹತ್ತು ಮಂದಿ ಬ್ರಾಹ್ಮಣರಿಗೆ ಭೋಜನ ಕೊಡಬೇಕು.

॥ ಗರ್ಭಾಧಾನ ಸಂಸ್ಕಾರ ಸಮಾಪ್ತ ॥

# ॥ ಪುಂಸವನಾನವಲೋಭನಸೀಮಂತೋನ್ನಯನಾನಿ ॥

॥ ಶ್ರೀಃ [ ಹವಿಷ್ಯೇಣ ಕೃತೈಕ ಲಘುಭೋಜನಯಾ ಭಾರ್ಯಯಾ ಅಪರೇದ್ಯುಃ ಕೃತಮಂಗಲಸ್ನಾನಯಾ ಪರಿಹಿತಾಹತವಸ್ತ್ರಯಾಲಂಕೃತಯಾ ದಕ್ಷಿಣತ ಉಪವೇಶ್ಯ] ಯಜಮಾನಃ ಆಚಮ್ಯ ಪ್ರಾಣಾನಾಯಮ್ಯ ದೇಶಕಾಲೌ ಸ್ಮೃತ್ವಾ ಅಸ್ಯಾಂ ಮಮ ಭಾರ್ಯಾಯಾಂ ಉತ್ಪತ್ಸ್ಯಮಾನ ಸರ್ವಗರ್ಭಾಣಾಂ ಬೈಜಿಕಗಾರ್ಭಿಕ-ದೋಷಪರಿಹಾರಪುಂರೂಪತಾ ಜ್ಞಾನೋದಯಪ್ರತಿರೋಧಿಪರಿಹಾರದ್ವಾರಾಪುಂಸ-ವನಮನವಲೋಭನಂ ಚ ತಥಾ ಮಮಾಸ್ಯಾಂ ಭಾರ್ಯಾಯಾಂ ಗರ್ಭಾಭಿವೃದ್ಧಿ ಪರಿಪಂಥಿಪಿಶಿತರುಧಿರಪ್ರಿಯಾಲಕ್ಷ್ಮೀಭೂತರಾಕ್ಷಸೀಗಣದೂರನಿರಸನಕ್ಷೇಮ ಸಕಲ-ಸೌಭಾಗ್ಯನಿದಾನಭೂತ ಮಹಾಲಕ್ಷ್ಮೀಸಮಾವೇಶನದ್ವಾರಾ ಪ್ರತಿಗರ್ಭಂ ಬೀಜ-ಗರ್ಭಸಮುದ್ಭವೈನೋನಿಬರ್ಹಣಜನಕಾತಿಶಯದ್ವಾರಾ ಚ ಸ್ತ್ರೀಸಂಸ್ಕಾರರೂಪಂ ಸೀಮಂತೋನ್ನಯನಾಖ್ಯಸಂಸ್ಕಾರಂ ಚ ತಂತ್ರೇಣ ಕರಿಷ್ಯೇ ॥ ತದಂಗತಯಾ ಗಣಪತಿಪೂಜನಂ ಪುಣ್ಯಾಹವಾಚನಂ ಮಾತೃಕಾಪೂಜನಂ ನಾಂದೀಶ್ರಾದ್ಧಂ ಚ ಕರಿಷ್ಯೇ ಇತಿ ಸಂಕಲ್ಪ್ಯ ತಾನಿ ಕ್ರಮೇಣ ಕುರ್ಯಾತ್ ॥ [ಸ್ವಸ್ತಿವಾಚನೇ, ಏತೇಷಾಂ ಪುಂಸವನಾನವಲೋಭನಸೀಮಂತೋನ್ನಯನ ಕರ್ಮಣಾಂ ಪುಣ್ಯಾಹಂ ಭವಂತೋ ಬ್ರುವಂತ್ವಿತಿ ಉಕ್ತಕರ್ಮಭ್ಯಃ ಸ್ವಸ್ತೀತಿ ಕರ್ಮಾಣಿ ಋಧ್ಯಂತಾಮಿತ್ಯಾದ್ಯೂಹಃ ॥ ನಾಂದೀಶ್ರಾದ್ಧೇ ಕ್ರತುದಕ್ಷಸಂಜ್ಞಕಾ ವಿಶ್ವೇದೇವಾಃ]

---

ಹಿಂದಿನ ಹವಿಷ್ಯಾನ್ನದಿಂದ ಒಂದೇ ಊಟಮಾಡಿದ, ಹಾಗೂ ಮಂಗಲಸ್ನಾನ ಮಾಡಿ ಹೊಸವಸ್ತ್ರವನ್ನು ಧರಿಸಿ ಅಲಂಕೃತಳಾದ ಪತ್ನಿಯನ್ನು ತನ್ನ ಬಲಭಾಗದಲ್ಲಿ ಕೂತುಕೊಳ್ಳಿಸಿ ಯಜಮಾನನು ಆಚಮನ ಪ್ರಾಣಾಯಾಮ ದೇಶ ಕಾಲ ಸಂಕೀರ್ತನಾದಿಗಳನ್ನು ಮಾಡಿ, "**ಅಸ್ಯಾಂ ಮಮ ಭಾರ್ಯಾಯಾಂ...ನಾಂದೀಶ್ರಾದ್ಧಂ ಚ ಕರಿಷ್ಯೇ**" ಎಂದು ಸಂಕಲ್ಪಮಾಡಿ ಅವುಗಳನ್ನು ಈ ಮೊದಲು ಹೇಳಿದ ಪ್ರಕಾರ ಮಾಡಿ ಮುಗಿಸಬೇಕು. ಪುಣ್ಯಾಹವಾಚನದಲ್ಲಿ "**ಏತೇಷಾಂ ಪುಂಸವನಾನವಲೋಭನ ಸೀಮಂತೋನ್ನಯನಕರ್ಮಣಾಂ ಪುಣ್ಯಾಹಂ ಭವಂತೋ ಬ್ರುವಂತು ಉಕ್ತಕರ್ಮಭ್ಯಃ ಸ್ವಸ್ತಿ ಭವಂತೋ ಬ್ರುವಂತು ಕರ್ಮಾಣಿ ಋಧ್ಯಂತಾಂ**" ಎಂದು ಮೊದಲಾಗಿ ಈ ಕರ್ಮಗಳಿಗೆ ಹೊಂದಿಕೆಯಾಗುವಂತೆ ಹೇಳಬೇಕು.

ನಾಂದೀಶ್ರಾದ್ಧದಲ್ಲಿ "**ಕ್ರತುದಕ್ಷ ಸಂಜ್ಞಕಾ ವಿಶ್ವೇದೇವಾ**" ಎಂದು ಹೇಳಬೇಕು.

**ತದಂಗಹೋಮಂ ಕರ್ತುಂ ಸ್ಥಂಡಿಲಾದಿ ಕರಿಷ್ಯೇ ॥ ವಿಧಿವದೌಪಾಸನಾಗ್ನಿಂ ಪವಮಾನಂ ಪುಂಸವನಾದಿ ಪೃಥಕ್ತ್ವೇ ॥ ತ್ರಯಾಣಾಂ ಸಹತ್ವೇ ತು ಮಂಗಲನಾಮಾನಮಗ್ನಿಂ ಪ್ರತಿಷ್ಠಾಪ್ಯ ಕ್ರಿಯಮಾಣೇ ಪುಂಸವನಾನವಲೋಭನಸೀಮಂತೋನ್ನಯನಹೋಮೇ ದೇವತಾಪರಿಗ್ರಹಾರ್ಥಮನ್ವಾಧಾನಂ ಕರಿಷ್ಯೇ ॥ ಅಸ್ಮಿನ್ನನ್ವಾಹಿತೇಗ್ನಾವಿತ್ಯಾದಿ ಚಕ್ಷುಷೀ ಆಜ್ಯೇನೇತ್ಯಂತಮುಕ್ತ್ವಾ ಪ್ರಜಾಪತಿಂ ಚರುಣಾ ದ್ವಿರ್ಧಾತಾರಂ ದ್ವೀರಾಕಾಂ ತ್ರಿರ್ವಿಷ್ಣುಂ ಪ್ರಜಾಪತಿಂ ಚಾಜ್ಯೇನ ಶೇಷೇಣ ಸ್ವಿಷ್ಟಕೃತಮಿತ್ಯಾದ್ಯುಕ್ತ್ವಾ ಅನ್ವಾಧಾಯ ಪರಿಸಮೂಹನಪರಿಸ್ತರಣಾದಿಪ್ರಣೀತಾಪ್ರಣಯನಾವಧಿ ಪ್ರಾಕ್ತನತಂತ್ರಂ ಕೃತ್ವಾ ಪ್ರಜಾಪತಯೇ ತ್ವಾ ಜುಷ್ಟಂ ನಿರ್ವಪಾಮೀತಿ ಚತುರೋ ವ್ರೀಹಿಮುಷ್ಟೀನ್ನಿರುಪ್ಯ ಪ್ರೋಕ್ಷಣಾವಘಾತಾದಿ ಬರ್ಹಿಷಿ ಹವಿರಾಸಾದನಾಂತಂ ಕೃತ್ವಾ ॥**

**ಸ್ವದಕ್ಷಿಣತಃ ಪ್ರತ್ಯಗ್ಗ್ರೀವಮುತ್ತರಲೋಮಾನಡುಹಂ ಚರ್ಮಾಸ್ತೀರ್ಯ ಆತ್ಮಾನಮಗ್ನಿಂ ಚಾಂತರಾ ಪತ್ನೀಮಾಚಾಂತಸಲಿಲಾಂ ತೀರ್ಥಪ್ರವೇಶೇನಾನೀಯ ಚರ್ಮಣ್ಯುಪವೇಶ್ಯ ತಯಾನ್ವಾರಬ್ಧ ಇಧ್ಮಾಧಾನಾದ್ಯಾಜ್ಯಭಾಗಾಂತಂ ಕೃತ್ವಾ ॥ ಪ್ರಕ್ಷಾಲಿತೇ ಪ್ರಸೃತೀಕೃತೇ ದಕ್ಷಿಣೇ ಪತ್ನೀಪಾಣಾವಂತರ್ಜಾನುಸ್ಥಿತೇ ಪ್ರಸೃತಿ ಮಿತಂ ಸಮಾನರೂಪವತ್ಸಾಯಾ ಗೋರನ್ಯಸ್ಯಾ ವಾ ಕ್ಷೀರೇಣ ನಿರ್ಮಿತಂ ದಧಿ ನಿಕ್ಷಿಪ್ಯ**

---

**"ತದಂಗ...ಕರಿಷ್ಯೇ"** ಎಂದು ಸಂಕಲ್ಪಮಾಡಿ ಸ್ಥಾಲೀಪಾಕದಲ್ಲಿ ಹೇಳಿದಂತೆ ಸ್ಥಂಡಿಲರಚನೆ ಸಂಸ್ಕಾರಾದಿಗಳನ್ನು ಮಾಡಬೇಕು. ಈ ಮೂರು ಸಂಸ್ಕಾರಗಳನ್ನು ಬೇರೆ ಬೇರೆಯಾಗಿ ಮಾಡುವುದಾದರೆ ಪುಂಸವನ ಅನವಲೋಭನಗಳಿಗೆ ಔಪಾಸನಾಗ್ನಿ ಪವಮಾನಾಗ್ನಿ ಹಾಗೂ ಮೂರನ್ನೂ ಒಟ್ಟಾಗಿ ಮಾಡುವುದಾದರೆ **"ಮಂಗಲ"** ನಾಮಾಗ್ನಿಯನ್ನೂ ಪ್ರತಿಷ್ಠಾಪಿಸಬೇಕು. ಆಮೇಲೆ ಅನ್ವಾಧಾನಕ್ಕೆ ಸಮಿಧೆಗಳನ್ನು ತೆಗೆದುಕೊಂಡು **"ಕ್ರಿಯಮಾಣೇ...ಕರಿಷ್ಯೇ"** ಎಂದೂ **"ಅಸ್ಮಿನ್ನನ್ವಾಹಿತೇಗ್ನೌ...ಪ್ರಜಾಪತಿಂ ಚಾಜ್ಯೇನ"** ಎಂದೂ **"ಶೇಷೇಣ ಸ್ವಿಷ್ಟಕೃತ..."** ಎಂದು ಪೂರ್ತಿಯಾಗಿ ಹೇಳಿ ಅನ್ವಾಧಾನವನ್ನು ಪೂರ್ತಿಗೊಳಿಸಬೇಕು. ಬಳಿಕ ಪರಿಸಮೂಹನ ಪರ್ಯುಕ್ಷಣ ಮೊದಲಾಗಿ ಪ್ರಣೀತಾಪಾತ್ರಸ್ಥಾಪನೆಯ ವರೆಗಿನ ಕ್ರಮಗಳನ್ನು ಮಾಡಿ **"ಪ್ರಜಾಪತಯೇ ತ್ವಾಜುಷ್ಟಂ ನಿರ್ವಪಾಮಿ"** ಎಂದು ನಾಲ್ಕು ಮುಷ್ಟಿ ಅಕ್ಕಿಯನ್ನು ತೆಗೆದು ಹವಿರಾಸಾದನದ ವರೆಗಿನ ಕರ್ಮ ಮಾಡಬೇಕು.

ಬಳಿಕ ತನ್ನ ಬಲಭಾಗದಲ್ಲಿ ಪಶ್ಚಿಮಕ್ಕೆ ಮುಖವಿರುವಂತೆ ಉತ್ತರಕ್ಕೆ ರೋಮಗಳಿರುವಂತೆ ಎತ್ತಿನ ಚರ್ಮವನ್ನು ಹಾಸಿ (ಬದಲಾಗಿ ಕೆಂಪುಬಟ್ಟೆಯನ್ನು ಹಾಸುತ್ತಾರೆ) ಅದರ ಮೇಲೆ ತನ್ನ ಮತ್ತು ಅಗ್ನಿಯ ಮಧ್ಯದ ದಾರಿಯಾಗಿ ಆಚಮನ ಮಾಡಿದ ಪತ್ನಿಯನ್ನು ಕರೆತಂದು ಕೂತುಕೊಳ್ಳಿಸಬೇಕು. ಅವಳ ಕರಸ್ಪರ್ಶ ಮಾಡಿಸಿ ಇಧ್ಮಾಧಾನದಿಂದ ಮೊದಲ್ಗೊಂಡು ಆಜ್ಯಭಾಗಾಂತ ಕರ್ಮಗಳನ್ನು ಸ್ಥಾಲೀಪಾಕದಲ್ಲಿ ಹೇಳಿದಂತೆ ಮಾಡಿ ಮುಗಿಸಬೇಕು.

**ತದುಪರಿ ಲಿಂಗವದ್ಯವಂ ಪ್ರಾಗಗ್ರಂ ತತ್ಪಾರ್ಶ್ವಯೋರಂಡದ್ವಯವನ್ಮಾಷ-ದ್ವಯಂ ಚ ನಿಧಾಯ ಕಿಂ ಪಿಬಸೀತಿ ತ್ರಿಃ ಪತಿಃ ಪತ್ನೀಂ ಪೃಚ್ಛೇತ್ ॥ ಸಾ ಚ ಪುಂಸವನಮಿತಿ ತ್ರಿರುಕ್ತ್ವಾ ಸಯವಮಾಷಂ ತದ್ದಧಿ ನಿಃಶ್ಶೇಷಂ ಪೀತ್ವಾ ಬಹಿರಾಚಾಮೇತ್ ॥ ಪುನರೇವಂ ದ್ವಿಃ ಪ್ರಶ್ನಪ್ರತಿವಚನಪೂರ್ವಕಂ ಪ್ರಾಶ್ಯಾ-ಚಾಮೇತ್ ॥**

**॥ ಇತಿ ಪುಂಸವನಂ ॥**

---

---

ಪತ್ನಿಯು ಎರಡು ಕೈಗಳನ್ನು ತೊಳೆದು ಅವುಗಳನ್ನು ಬಿಡಿಸಿ, ಚಾಚಿ ಮೊಣಕಾಲುಗಳ ಮಧ್ಯದಲ್ಲಿರಿಸಬೇಕು. ಸಮಾನ ಆಕಾರವುಳ್ಳ ಕರುವಿದ್ದಂಥ ದನದ ಅಥವಾ ಬೇರೆ ದನದ ಹಾಲಿನಿಂದ ತಯಾರಿಸಿದ ಮೊಸರನ್ನು ಅವಳ ಬಲಗೈಯಲ್ಲಿ ಸ್ವಲ್ಪ ಹಾಕಬೇಕು. ಮೊಸರಿನ ಮೇಲೆ ಲಿಂಗಾಕೃತಿಯುಳ್ಳ ಅಕ್ಕಿಕಾಳನ್ನು ಪೂರ್ವಕ್ಕೆ ತಲೆ ಇರುವಂತೆ ಇಡಬೇಕು. ಕಾಳಿನ ಎರಡು ಬದಿಗಳಲ್ಲಿ ವೃಷಣದಂತೆ ಎರಡು ಉದ್ದಿನ ಕಾಳುಗಳನ್ನಿಟ್ಟು **"ಕಿಂ ಪಿಬಸಿ?"** ಎಂದು ಮೂರು ಬಾರಿ ಪತಿಯು ಕೇಳಿದಾಗ **"ಪುಂಸವನಂ"** ಎಂದು ಮೂರು ಬಾರಿ ಹೇಳಿ ಪತ್ನಿಯು ಅದನ್ನು ಕುಡಿಯಬೇಕು. ಇದೇ ಕ್ರಮದಿಂದ ಇನ್ನೆರಡು ಬಾರಿ ಕುಡಿಯಬೇಕು. ಆಚಮನ ಮಾಡಬೇಕು.

# ॥ ಅನವಲೋಭನಂ ॥

॥ ಶ್ರೀಃ ॥ ತತೋ ದೂರ್ವಾಃ ಕನ್ಯಯಾ ದೃಷದ್ಯುಪಲೇನ ಪೇಷಯಿತ್ವಾ ಪಿಂಡೀಕೃತ್ಯ ಶುದ್ಧವಸನಾಂಚಲೇ ಸಂಗೃಹ್ಯ ಪ್ರಜಾವದಾಖ್ಯಂ ಜೀವಪುತ್ರಸಂಜ್ಞಕಂ ಚ ಸೂಕ್ತಂ ಜಪಿತ್ವಾ ಮಂಡಲಾಗಾರಚ್ಛಾಯಾಯಾಮುಪವಿಷ್ಟಾಯಾಃ ಪತ್ನ್ಯಾಃ ಪಶ್ಚಿಮತಸ್ತಿಷ್ಠನ್ ಪತಿಃ ವಾಮಹಸ್ತೇನ ತದಾನನಮುನ್ನಮಯ್ಯ ದಕ್ಷಿಣೇ ನಾಸಾಬಿಲೇ ಸ್ವಾಂಗುಷ್ಠಾಗ್ರೇಣ ದೂರ್ವಾರಸಮಾಸಿಂಚೇತ್ ಯಥೋದರಪರ್ಯಂತಂ ಗಚ್ಛತಿ ॥

ತತ್ರ ಪ್ರಜಾವದಾಖ್ಯಂ ಸೂಕ್ತಂ ಯಥಾ ॥ ಓಂ ಆತೇ ಗರ್ಭೋ-ಯೋನಿಮುಷ್ಯೆತು ಪುಮಾನ್ಬಾಣ ಇವೇಷುಧಿಂ ॥ ಆವಿರೋಜಾಯತಾಂ ಪುತ್ರ-ಸ್ತೇದಶಮಾಸ್ಯ ॥ ಕರೋಮಿ ತೇ ಪ್ರಾಜಾಪತ್ಯಮಾಗರ್ಭೋಯೋನಿಮೇತು ತೇ ॥ ಅನೂನಃ ಪೂರ್ಣೋ ಜಾಯತಾಮಶ್ಲೋಣೋಽಪಿಶಾಚಧೀತಃ ॥ ಪುಮಾಂಸ್ತೇ ಪುತ್ರೋಽನಾರೀ ತಂ ಪುಮಾನನುಜಾಯತಾಂ ॥ ತಾನಿ ಭದ್ರಾಣಿ ಬೀಜಾನ್ ಋಷಭಾ ಜನಯಂತು ತೇ ॥ ಯಾನಿ ಭದ್ರಾಣಿಬೀಜಾನ್ಯೃಷಭಾಜನಯಂತಿ ನಃ ॥ ತೈಸ್ತ್ವಂ ಪುತ್ರಾನ್ವಿಂದಸ್ವ ಸಾ ಪ್ರಸೂರ್ಧೇನುಕಾ ಭವ ॥ ಕಾಮಃ ಸಮೃಧ್ಯತಾಂ ಮಹ್ಯಮಪರಾಜಿತಮೇವ ಮೇ ॥ ಯಂ ಕಾಮಂ ಕಾಮಯೇ ದೇವ ತಂ ಮೇ ವಾಯೋ ಸಮರ್ಧಯ ॥ ಅಥ ಜೀವಪುತ್ರಕಾಖ್ಯಂ ಸೂಕ್ತಂ ॥ ಅಗ್ನಿರೈತು ಪ್ರಥಮೋ ದೇವತಾನಾಂ ಸೋಽಸ್ಯೈಪ್ರಜಾಂ ಮುಂಚತು ಮೃತ್ಯುಪಾಶಾತ್ ॥ ತದಯಂ ರಾಜಾ ವರುಣೋಽನುಮನ್ಯತಾಂ ಯಥೇಯಂ ಸ್ತ್ರೀ-ಪೌತ್ರಮಘಂ ನ ರೋದಾತ್ ॥ ಇಮಾಮಗ್ನಿಸ್ತ್ರಾಯತಾಂ ಗಾರ್ಹಪತ್ಯಃ ಪ್ರಜಾಮಸ್ಯೈ ನಯತು ದೀರ್ಘಮಾಯುಃ ॥ ಅಶೂನ್ಯೋಪಸ್ಥಾ ಜೀವತು ಮಾತಾ ಪೌತ್ರಮಾನಂದಮಭಿಪ್ರಬುಧ್ಯತಾಮಿಯಂ ॥ ಮಾ ತೇ ಗೃಹೇ ನಿಶಿ-ಘೋಷ ಉತ್ಥಾದನ್ಯತ್ರತ್ವದ್ರುದತ್ಯಃ ಸಂವಿಶಂತು ॥ ಮಾ ತ್ವಂ ವಿಕೇಶ್ಯುರವ ಆವಧಿಷ್ಠಾ ಜೀವಪತ್ನೀ ಪತಿಲೋಕೇ ವಿರಾಜಪಶ್ಯಂತೀ ಪ್ರಜಾಂ ಸುಮನಸ್ಯ-ಮಾನಾ ॥ ಅಪ್ರಜಾಸ್ತ್ವಂ ಪುತ್ರಂ ಮೃತ್ಯುಂ ಪಾಪ್ಮಾನಮುತವಾಘಂ ॥ ಶೀರ್ಷ್ಣಃ ಸ್ರಜಮಿವೋನ್ಮುಚ್ಯದ್ವಿಷದ್ಭ್ಯಃ ಪ್ರತಿಮುಂಚಾಮಿ ಪಾಶಂ ॥ ದೇವಕೃತಂ ಬ್ರಾಹ್ಮಣಂ ಕಲ್ಪಮಾನಂ ತೇನ ಹನ್ಮಿಯೋನಿಷದಃ ಪಿಶಾಚಾನ್ ॥ ಕ್ರವ್ಯಾ-ದೋಮೃತ್ಯೂನಧರಾನ್ಪಾತಯಾಮಿ ದೀರ್ಘಾಯುಸ್ತವ ಜೀವಂತು ಪುತ್ರಾಃ ॥ ಏತೈರ್ದಶಭಿರ್ಮಂತ್ರೈಃ ನಸ್ಯೇ ದತ್ತೇ ಆಚಾಂತಜಲಯಾ ಪತ್ನ್ಯಾ ಸ್ಪೃಷ್ಟಃ ಪ್ರಜಾಪತ್ಯಚರುಮವದಾನಧರ್ಮೇಣಾವದಾಯ ॥ ಓಂ ಪ್ರಜಾಪತಯೇ

**ಸ್ವಾಹೇತಿ ಏಕಾಮಾಹುತಿಂ ಹುತ್ವಾ ॥ ಪ್ರಜಾಪತಯ ... ॥ ಯತ್ತೇ ಸುಶೀಮ ಇತಿ ಮಂತ್ರಸ್ಯ ಹಿರಣ್ಯಗರ್ಭಃ ಪ್ರಜಾಪತಿರನುಷ್ಟುಪ್ ॥ ಭಾರ್ಯಾಯಾ ಹೃದಯಾಲಂಭನೇ ವಿನಿಯೋಗಃ ॥ ಯತ್ತೇ ಸುಶೀಮೇ ಹೃದಯೇಹಿತಮಂತಃ ಪ್ರಜಾಪತೌ । ಮನ್ಯೇಹಂಮಾಂತದ್ವಿದ್ವಾಂಸಂ ಮಾಹಂ ಪೌತ್ರಮಘನ್ನಿಯಾಂ ॥ ಇತಿ ಭಾರ್ಯಾಹೃದಯಂ ಪಾಣಿತಲೇನ ಸ್ಪೃಶೇತ್ ॥**

**॥ ಇತಿ ಅನವಲೋಭನಂ ॥**

---

**ಅನವಲೋಭನಂ:–** ಒಬ್ಬ ಕನ್ನಿಕೆಯ ಕೈಯಿಂದ ಒಂದಿಷ್ಟು ದೂರ್ವೆಯನ್ನು ಸಾಣೆಕಲ್ಲಿನ ಮೇಲೆ ಮತ್ತೊಂದು ಕಲ್ಲಿನಿಂದ ಜಜ್ಜಿ ಉಂಡೆ ಮಾಡಿಸಿ, ಅದನ್ನು ಶುಭ್ರವಸ್ತ್ರದ ಒಳಗಿಟ್ಟು ಪತ್ನಿಯನ್ನು ಪೂರ್ವಕ್ಕೆ ಮುಖಮಾಡಿ ನೆರಳಿನಲ್ಲಿ ಕುಳ್ಳಿರಿಸಿ, ಪತಿಯು ಅವಳ ಹಿಂಬದಿಯಲ್ಲಿ ನಿಂತು ತನ್ನ ಎಡಗೈಯಿಂದ ಅವಳ ಮುಖವನ್ನು ಮೇಲೆತ್ತಿ ಬಲಮೂಗಿನ ರಂಧ್ರದಲ್ಲಿ **"ಪ್ರಜಾವದಾಖ್ಯ"** ಜೀವಪುತ್ರಸಂಜ್ಞಕ ಸೂಕ್ತಗಳನ್ನು ಹೇಳುತ್ತ ತನ್ನ ಬಲ ಉಂಗುಷ್ಠದ ತುದಿಯಿಂದ ದೂರ್ವಾರಸವು ಹೊಟ್ಟೆಯ ತನಕ ಹೋಗುವಂತೆ ಹಿಂಡಬೇಕು. ಈ ಹತ್ತು ಮಂತ್ರಗಳನ್ನು ಉಚ್ಚರಿಸುತ್ತ ಪತ್ನಿಯ ಮೂಗಿನಲ್ಲಿ ದೂರ್ವಾರಸವನ್ನು ಸುರಿಯಬೇಕು. ಅವಳು ಆಚಮನ ಮಾಡಿದ ಮೇಲೆ ಅವದಾನಕ್ರಮದಿಂದ ಚರುವನ್ನು ತೆಗೆದು ಪ್ರಜಾಪತಿಗೆ ಒಂದು ಆಹುತಿಕೊಟ್ಟು **"ಯತ್ತೇ ಸುಶೀಮೇ"** ಎಂಬ ಮಂತ್ರವನ್ನು ಹೇಳಿ ಪತ್ನಿಯ ಹೃದಯವನ್ನು ಮುಟ್ಟಬೇಕು.

**॥ ಅನವಲೋಭನ ಸಮಾಪ್ತ ॥**

# ॥ ಸೀಮಂತೋನ್ನಯನಂ ॥

॥ ಶ್ರೀಃ ॥ ಅಥ ಪ್ರಾಗ್ಗ್ರೀವೇ ಉಪವಿಷ್ಟಯಾ ಪತ್ನ್ಯಾನ್ವಾರಬ್ಧಃ ಸ್ರುವೇಣಾಜ್ಯಾಹುತೀರ್ಜುಹುಯಾತ್ ॥ ಯಥಾ ॥ ಧಾತಾದದಾತುದಾಶುಷ ಇತಿ ಮಂತ್ರದ್ವಯಸ್ಯ ಹಿರಣ್ಯಗರ್ಭೋರ್ಧಾತಾನುಷ್ಟುಪ್ । ದ್ವಿತೀಯಾತ್ರಿಷ್ಟುಪ್ ॥ ಸೀಮಂತೋನ್ನಯನಪ್ರಧಾನಾಜ್ಯಹೋಮೇ ವಿನಿಯೋಗಃ ॥ ಓಂ ಧಾತಾದದಾ-ತುದಾಶುಷೇಪ್ರಾಚೀಂಜೀವಾತುಮಕ್ಷಿತಾಂ ॥ ವಯಂ ದೇವಸ್ಯಧೀಮಹಿಸುಮತಿಂ-ವಾಜಿನೀವತಃ ಸ್ವಾಹಾ ॥ ಧಾತ್ರ ಇದಂ ನ ಮಮ ॥ ಓಂ ಧಾತಾಪ್ರಜಾನಾಮು-ತರಾಯಈಶೇಧಾತೇದಂ ವಿಶ್ವಂ ಭುವನಂ ಜಜಾನ ॥ ಧಾತಾಕೃಷ್ಟೀರನಿಮಿಷಾ-ಭಿಚಷ್ಟೇ ಧಾತ್ರ ಇದ್ಧವ್ಯಂ ಘೃತವಜ್ಜುಹೋತಸ್ವಾಹಾ ॥ ಧಾತ್ರ ಇದಂ ನ ಮಮ ॥ ರಾಕಾಮಹಮಿತಿದ್ವಯೋರ್ಗೃತ್ಸಮದೋ ರಾಕಾ ಜಗತೀ ॥ ಸೀಮಂ-ತೋನ್ನಯನ ಪ್ರಧಾನಾಜ್ಯಹೋಮೇ ವಿನಿಯೋಗಃ ॥ ಓಂ ರಾಕಾಮಹಂಸು-ಹವಾಂ ಸುಷ್ಟುತೀಹುವೇಶೃಣೋತುನಃ ಸುಭಗಾಬೋಧತುತ್ಮನಾ ॥ ಸೀವ್ಯತ್ವಪಃ ಸೂಚ್ಯಾಚ್ಛಿದ್ಯ ಮಾನಯಾದದಾತುವೀರಂಶತದಾಯಮುಕ್ಥ್ಯಂ ೧ ಸ್ವಾಹಾ ॥ ರಾಕಾಯಾ ಇದಂ ನಮಮ ॥ ಓಂ ಯಾಸ್ತೇರಾಕೇಸುಮತಯಃ ಸುಪೇಶಸೋ-ಯಾಭಿರ್ದದಾಸಿದಾಶುಷೇವಸೂನಿ ॥ ತಾಭಿರ್ನೋ ಅದ್ಯಸುಮನಾಉಪಾಗಹಿ-ಸಹಸ್ರಪೋಷಂ ಸುಭಗೇರರಾಣಾ ಸ್ವಾಹಾ ॥ ರಾಕಾಯಾ ಇದಂ ನಮಮ ॥ ನೇಜಮೇಷೇತಿ ತಿಸೃಣಾಂ ತ್ವಷ್ಟಾವಿಷ್ಣುರನುಷ್ಟುಪ್ ॥ ಸೀಮಂತೋ ... ॥

---

**ಸೀಮಂತೋನ್ನಯನ ಸಂಸ್ಕಾರ:-** ಪೂರ್ವಕ್ಕೆ ಮುಖಮಾಡಿ ಕುಳಿತ ಪತ್ನಿಯ ಕೈಯನ್ನು ಸ್ಪರ್ಶಮಾಡಿ ಪತಿಯು: (೧) ಧಾತಾದದಾತು, (೨) ಧಾತಾ ಪ್ರಜಾನಾಂ... (೩) ರಾಕಾಮಹಂ ... (೪) ಯಾಸ್ತೇರಾಕೇ... (೫) ನೇಜಮೇಷ ... (೬) ಯಥೇಯಂ ಪೃಥಿವೀ... (೭) ವಿಷ್ಣೋಃ ಶ್ರೇಷ್ಠೇನ (೮) ಪ್ರಜಾಪತೇ... ಈ ಎಂಟು ಮಂತ್ರಗಳನ್ನು ಹೇಳಿ ಎಂಟು ಆಜ್ಯಾಹುತಿಗಳನ್ನು ಕೊಡಬೇಕು.

ಓಂ ನೇಜಮೇಷಪರಾಪತ ..... ॥ ವಿಷ್ಣವ ಇದಂ ನಮಮ ॥ ಓಂ ಯಥೇಯಂ ಪೃಥಿವೀ ..... ॥ ವಿಷ್ಣವ ಇದಂ ನಮಮ ॥ ಓಂ ವಿಷ್ಣೋಃ ಶ್ರೇಷ್ಠೇನ ..... ॥ ವಿಷ್ಣವ ಇದಂ ನಮಮ ॥ ಪ್ರಜಾಪತೇ ಹಿರಣ್ಯಗರ್ಭಃ ಪ್ರಜಾಪತಿಸ್ತ್ರಿಷ್ಟುಪ್ ॥ ಸೀಮಂತೋ ...... ॥ ಓಂ ಪ್ರಜಾಪತೇನತ್ವದೇತಾ .... ಸ್ವಾಹಾ ॥ ಪ್ರಜಾಪತಯ ಇದಂ ನಮಮ ॥ ಏವಮಷ್ಟಾಜ್ಯಾಹುತೀಃ ಸ್ರುವೇಣ ಹುತ್ವಾ ॥ ಪತ್ನ್ಯಾಃ ಪಶ್ಚಿಮತಃ ಪ್ರಾಙ್ಮುಖಸ್ತಿಷ್ಠನ್ನಪಕ್ವಫಲಯುಗ್ಮಾ-ನ್ವಿತಮೌದುಂಬರಸ್ತಬಕದ್ವಯಂ ತ್ರಿಶುಕ್ಲಾಂ ಶಲಲೀಂ ಕುಶಾಂಕುರತ್ರಯಂ ಚೈಕೀ-ಕೃತಂ ಪಾಣಿನಾ ಗೃಹೀತ್ವಾ ತನ್ಮೂಲೇನ ಪತ್ನ್ಯಾಃ ಕೇಶಲಲಾಟಯೋಃ ಸಂಧಿ-ಮಾರಭ್ಯಾಮೂರ್ಧ ಪ್ರದೇಶಾತ್ ॥ ಓಂ ಭೂರ್ಭುವಃ ಸ್ವರೋಂ ಇತಿ ಮಂತ್ರೇಣ ತ್ರಿಶ್ಚತುರ್ವಾ ಪ್ರತ್ಯುನ್ನಯನಂ ಮಂತ್ರಮಾವರ್ತಯನ್ ಸೀಮಂತಮುನ್ನಯೇತ್ ॥ ಓಂ ಭೂರ್ಭುವಃ ಸ್ವರಿತಿ ಮಂತ್ರತ್ರಯಸ್ಯ ಪ್ರಜಾಪತಿರ್ಬೃಹತೀ ಸೀಮಂತ ವ್ಯೂಹನೇ ವಿನಿಯೋಗಃ ॥ ತತೋ ಯಥಾಚಾರಂ ಸಗೋಧೂಮಾಮೌದುಂಬರ ಫಲ-ಮಾಲಾಂ ತತ್ಕಂಠೇ ನಿಧಾಯ ವೀಣಾಗಾಥಿನೌ ದ್ವಿಜೌ ಸೋಮಂ ರಾಜಾನಂ ಸಂಗಾಯೇತಾಮಿತಿ ಪ್ರೇಷಯೇತ್ ॥ ತೌಚ ॥ ಓಂ ಸೋಮೋನೋರಾಜಾ-ವತುಮಾನುಷೀಃ ಪ್ರಜಾನಿವಿಷ್ಟಚಕ್ರಾಸಾವಿತಿಮಂತ್ರಂ ಅಸಾವಿತಿ ಸ್ಥಾನೇ ಗಂಗೇ ಇತ್ಯಾದಿ ಸಮೀಪಸ್ಥನದ್ಯಾಃ ಸಂಬುದ್ಧ್ಯಂತಂ ನಾಮ ನಿರ್ದಿಶಂತೌ ವೀಣಯಾ ಗಾಯೇತಾಂ ॥ ಸಾಮಗಾನಾಪರಿಜ್ಞಾನೇ ಮಂತ್ರಮಾತ್ರಂ ತ್ರಿಃ ಪಠೇತಾಂ ॥ ತತಃ ಸ್ವಿಷ್ಟಕೃದಾದಿ ಹೋಮಶೇಷಂ ಸಮಾಪ್ಯ ಬ್ರಹ್ಮಣೇ ಋಷಭಂ ದಕ್ಷಿಣಾಂ ತದಭಾವೇ ಅನ್ಯಸ್ಮೈ ವಿದುಷೇ ಬ್ರಾಹ್ಮಣಾಯ ದತ್ವಾ ಪತಿಪುತ್ರವತೀಭಿರ್ವೃ-ದ್ಧಾಭಿರುಪದಿಷ್ಟಂ ಮಂಗಲಾಚಾರಂ ಕಾರಯೇತ್ ॥ ಪ್ರತಿಸಂಸ್ಕಾರಂ ದಶದಶ ತ್ರೀಂಸ್ತ್ರೀನ್ ವಾ ಬ್ರಾಹ್ಮಣಾನ್ ಭೋಜಯೇತ್ ॥ ಶಕ್ತೌ ಶತಂ ॥

॥ ಇತಿ ಪುಂಸವನಾನವಲೋಭನಸೀಮಂತೋನ್ನಯನ ಸಂಸ್ಕಾರಾಃ ॥

ಬಳಿಕ ಪತ್ನಿಯ ಪಶ್ಚಿಮದಲ್ಲಿ ಪೂರ್ವಕ್ಕೆ ಮುಖಮಾಡಿ ನಿಂತು ಕಾಯಿಗಳಿಂದ ಕೂಡಿದ ಎರಡು ಉದುಂಬರದ ಗೊಂಚಲುಗಳು, ಬಿಳಿಬಣ್ಣದ ಸೀಯಾಳದ ಮೂರು ಮುಳ್ಳುಗಳು, ಹೆರಳಿನಂತೆ ಮುರಿಗೆ ಹಾಕಿದ ಮೂರು ದರ್ಭೆಗಳು ಇವುಗಳನ್ನು ಕೈಯಲ್ಲಿ ಹಿಡಿದು ಅವಳ ಬೈತಲೆಯಿಂದ ಹಿಂಭಾಗ ವರೆಗೆ **"ಓಂ ಭೂರ್ಭುವಃ ಸ್ವಃ"** ಎಂಬ ಮಂತ್ರವನ್ನು ಹೇಳುತ್ತ ಮೂರು-ನಾಲ್ಕು ಸಲ ಕೂದಲನ್ನು ಸ್ವಚ್ಛಮಾಡಬೇಕು. ಆಮೇಲೆ ದೇಶಾಚಾರದಂತೆ ಅವಳ ಕೊರಳಲ್ಲಿ ವನಸ್ಪತಿ, ಔದುಂಬರಫಲಗಳ ಮಾಲೆಯನ್ನು ಹಾಕಿ ವೀಣೆ ನುಡಿಸಬಲ್ಲ ಬ್ರಾಹ್ಮಣರು **"ಸೋಮೋರಾಜಾನಂ"** ಎಂಬ ಮಂತ್ರವನ್ನು ಹಾಡಬೇಕು. ಆ ಮಂತ್ರದಲ್ಲಿ **"ಅಸೌ"** ಎಂಬಲ್ಲಿ **'ಗಂಗಾ'** ಅಥವಾ ಸಮೀಪದಲ್ಲಿರುವ ನದಿಯ ಹೆಸರನ್ನು ಸೇರಿಸಬೇಕು. ಮುಂದೆ ಸ್ವಿಷ್ಟಕೃದಾದಿ ಹೋಮಶೇಷವನ್ನು ಮಾಡಿ ಮುಗಿಸಿ ಬ್ರಾಹ್ಮಣನಿಗೆ ಎತ್ತು ದಕ್ಷಿಣೆ ಇತ್ಯಾದಿಗಳನ್ನಿತ್ತು ಸತ್ಕರಿಸಬೇಕು. ಪ್ರತಿಸಂಸ್ಕಾರಕ್ಕೆ ಸಾಧ್ಯವಿದ್ದರೆ ನೂರು, ಹತ್ತು ಅಥವಾ ಮೂರು ಮಂದಿ ಬ್ರಾಹ್ಮಣರ ಸಂತರ್ಪಣೆ ಮಾಡಬೇಕು.

**॥ ಸೀಮಂತೋನ್ನಯನಸಂಸ್ಕಾರ ಸಮಾಪ್ತ ॥**

# ೨೭

# ॥ ಜಾತಕರ್ಮಸಂಸ್ಕಾರಃ ॥

**॥ ಶ್ರೀಃ ॥ ಜಾತಮಾತ್ರೇ ಪುತ್ರೇ ಪಿತಾ ತಸ್ಯ ಮುಖಂ ನಿರೀಕ್ಷ್ಯ ನದ್ಯಾದಾವುದಙ್ಮುಖಃ ಸ್ನಾತ್ವಾಚಮ್ಯ ಸಿತಚಂದನಮಾಲ್ಯಾದಿಭಿರಲಂಕೃತೋ ನಾಲಚ್ಛೇದನಾತ್ಪೂರ್ವಂ ಸೂತಿಕಾದಿವ್ಯತಿರಿಕ್ತೈರಸ್ಪೃಷ್ಟಮಕೃತಸ್ತನಪಾನಂ ಪ್ರಕ್ಷಾಲಿತಮಲಂ ಕುಮಾರಂ ಮಾತುರುತ್ಸಂಗೇ ಪ್ರಾಙ್ಮುಖಮವಸ್ಥಾಪ್ಯ ದೇಶಕಾಲೌ ಸ್ಮೃತ್ವಾ ಮಮಾಸ್ಯ ಕುಮಾರಸ್ಯ ಗರ್ಭಾಂಬುಪಾನಜನಿತ ಸಕಲದೋಷನಿಬರ್ಹಣಾಯುರ್ಮೇಧಾಭಿವೃದ್ಧಿಬೀಜಗರ್ಭಸಮುದ್ಭವೈನೋನಿಬರ್ಹಣದ್ವಾರಾ ಶ್ರೀಪರಮೇಶ್ವರಪ್ರೀತ್ಯರ್ಥಂ ಜಾತಕರ್ಮಸಂಸ್ಕಾರಂ ಕರಿಷ್ಯೇ ॥ ತದಂಗಂ ಗಣಪತಿಪೂಜನಪೂರ್ವಕಂ ಸ್ವಸ್ತಿಪುಣ್ಯಾಹವಾಚನಂ ಮಾತೃಕಾಪೂಜನಂ ನಾಂದೀಶ್ರಾದ್ಧಂ ಚ ಕರಿಷ್ಯೇ ಇತಿ ಸಂಕಲ್ಪ್ಯ ತಾನಿ ಕೃತ್ವಾ ॥ ತತೋ ವಿಷಮಮಾನೇನ ಮಧುಸರ್ಪಿಷೀ ಮಿಶ್ರೀಕೃತ್ಯ ಶಿಲಾತಲೇ ನಿಕ್ಷಿಪ್ಯ ತತ್ರ ಸುವರ್ಣಂ ರಜೋವಿಮೋಕಂ ಯಾವದವಘೃಷ್ಯ ರಜತಕಾಂಸ್ಯಾದಿಭಾಜನೇ ನಿಧಾಯ ॥ ಪ್ರತೇ ದದಾಮೀತಿ ಹಿರಣ್ಯಗರ್ಭಃ ಸವಿತಾತ್ರಿಷ್ಟುಪ್ ॥ ಕುಮಾರೇಣ ಮಧುಸರ್ಪಿಃ ಪ್ರಾಶನೇ ವಿನಿಯೋಗಃ ॥ ಓಂ ಪ್ರತೇದದಾಮಿ ಮಧುನೋಘೃತಸ್ಯ ವೇದಂ ಸವಿತ್ರಾ-**

---

**ಕನ್ಯಾಸಂಸ್ಕಾರಃ–** ಕನ್ಯೆಗೂ ಜಾತಕರ್ಮದಿಂದ ಚೌಲದ ವರೆಗೆ ಎಲ್ಲ ಸಂಸ್ಕಾರಗಳನ್ನೂ ಮಂತ್ರರಹಿತವಾಗಿ ಮಾಡಬೇಕು. ವಿವಾಹಸಂಸ್ಕಾರವನ್ನು ಮಾತ್ರ ಸಮಂತ್ರಕವಾಗಿ ಮಾಡಬೇಕು. ಹಿಂದಿನ ಯಾವುದೇ ಸಂಸ್ಕಾರವನ್ನು ಮಾಡದೆ ಬಿಟ್ಟಿದ್ದರೆ ಮುಂದಿನ ಸಂಸ್ಕಾರವನ್ನು ಮಾಡುವಾಗ ಅಥವಾ ವಿವಾಹಕಾಲದಲ್ಲಿ ಅವುಗಳಿಗೆ ಪ್ರಾಯಶ್ಚಿತ್ತ ಮಾಡಬೇಕು.

ಪುತ್ರಜನನವಾದ ಒಡನೆಯೇ ತಂದೆಯು ಅವನ ಮುಖ ನೋಡಿ ಹೊಳೆಯ ಬದಿಗೆ ಹೋಗಿ ಅಥವಾ ಇತರ ಕಡೆಗಳಲ್ಲಿ ಉತ್ತರಕ್ಕೆ ಮುಖಮಾಡಿ ಮಿಂದು ಆಚಮನಮಾಡಿ, ಚಂದನಾದಿಗಳಿಂದ ಅಲಂಕರಿಸಿಕೊಂಡು, ನಾಲಛೇದನದ ಮೊದಲು ಸೂಲಗಿತ್ತಿಯನ್ನು ಬಿಟ್ಟು ಇತರರು ಯಾರೂ ಮುಟ್ಟದಿರುವ, ಮೊಲೆಹಾಲು ಕುಡಿಯದಿರುವ, ಸ್ನಾನಮಾಡಿಸಿದ ಕುಮಾರನನ್ನು ತಾಯಿಯ ಮಡಿಲಲ್ಲಿ ಪೂರ್ವಮುಖವಾಗಿ ಇಟ್ಟು ದೇಶಕಾಲಗಳನ್ನು ಸ್ಮರಿಸಿ **"ಮಮ ಅಸ್ಯ ... ಕರಿಷ್ಯೇ ॥ ತದಂಗಂ ... ಕರಿಷ್ಯೇ"** ಎಂದು ಸಂಕಲ್ಪ ಮಾಡಿ ಅವುಗಳನ್ನು

**ಪ್ರಸೂತಂಮಘೋನಾಂ ॥ ಆಯುಷ್ಮಾನ್ ಗುಪ್ತೋ ದೇವತಾಭಿಃ ಶತಂ ಜೀವಶರದೋಲೋಕೇ ಅಸ್ಮಿನ್ ॥ ಇತಿ ಮಂತ್ರೇಣ ತೇನೈವ ಹಿರಣ್ಯೇನ ಕುಮಾರಂ ಪಾಯಯಿತ್ವಾ ತದ್ಧಿರಣ್ಯಂ ಪ್ರಕ್ಷಾಲ್ಯ ಕುಮಾರಸ್ಯ ದಕ್ಷಿಣಕರ್ಣೇ ನಿಧಾಯ ತನ್ಮುಖಸಮೀಪೇ ಸ್ವಮುಖಮಾನೀಯ ॥ ಮೇಧಾಂತ ಇತಿ ಮಂತ್ರಸ್ಯ ಹಿರಣ್ಯಗರ್ಭಃ ಸವಿತಾ ಸರಸ್ವತ್ಯಶ್ವಿನಾವನುಷ್ಟುಪ್ ॥ ಕುಮಾರದಕ್ಷಿಣಕರ್ಣೇ ಜಪೇ ವಿನಿಯೋಗಃ ॥ ಓಂ ಮೇಧಾಂತೇ ದೇವಃ ಸವಿತಾ ಮೇಧಾಂ ದೇವೀ ಸರಸ್ವತೀ ॥ ಮೇಧಾಂತೇ ಅಶ್ವಿನೌ ದೇವಾ ವಾಧತ್ತಾಂ ಪುಷ್ಕರಸ್ರಜೌ ॥ ಇತ್ಯೃಚಂ ಜಪಿತ್ವಾ ॥ ಪುನಸ್ತದ್ಧಿರಣ್ಯಂ ಸವ್ಯೇ ಕರ್ಣೇ ನಿಧಾಯ ಏತಾಮೇವ ಋಚಂ ಜಪೇತ್ ॥ ತತಃ ॥ ಓಂ ಅಶ್ಮಾಭವ ಪರಶುರ್ಭವಹಿರಣ್ಯಮಸ್ತೃತಂ ಭವ ॥ ವೇದೋವೈಪುತ್ರನಾಮಾಸಿ ಸ ಜೀವ ಶರದಃ ಶತಂ ॥ ಇತಿ ಮಂತ್ರೇಣ ಶಿಶೋರಂಸೌ ಯುಗಪದಭಿಮೃಶೇತ್ ॥ ಇಂದ್ರಶ್ರೇಷ್ಠಾನಿ ಗೃತ್ಸಮದ ಇಂದ್ರ-**

---

ವಿಧಿಪ್ರಕಾರ ಮಾಡಿಮುಗಿಸಬೇಕು. ಆಮೇಲೆ ಸಮಭಾಗವಾಗಿರದಂತೆ ಜೇನುತುಪ್ಪಗಳನ್ನು ಮಿಶ್ರಮಾಡಿ ಒಂದು ಕಲ್ಲಿನ ಮೇಲೆ ಇಟ್ಟು ಅದರ ಮೇಲೆ ಸ್ವಲ್ಪ ಅಂಶವು ಅವುಗಳೊಂದಿಗೆ ಸೇರುವಂತೆ ಬಂಗಾರವನ್ನು ತಿಕ್ಕಬೇಕು. ಅದನ್ನು ಬೆಳ್ಳಿ ಅಥವಾ ಕಂಚಿನ ಪಾತ್ರೆಯಲ್ಲಿ ಹಾಕಿ **"ಪ್ರತೇ ದದಾಮಿ"** ಎಂಬ ಮಂತ್ರದಿಂದ ಅದೇ ಬಂಗಾರದಿಂದ ಮಗುವಿಗೆ ತುಪ್ಪ ಮತ್ತು ಜೇನಿನ ಮಿಶ್ರಣವನ್ನು ಕುಡಿಸಬೇಕು. ಆಮೇಲೆ ಆ ಚಿನ್ನವನ್ನು ತೊಳೆದು ಅದನ್ನು ಮಗುವಿನ ಬಲಕಿವಿಯ ಮೇಲಿಟ್ಟು ಮಗುವಿನ ಮುಖದ ಬಳಿಗೆ ತನ್ನ ಬಾಯಿಯನ್ನು ಸರಿಸಿ, **"ಮೇಧಾಂತೇ ದೇವಃ"** ಎಂಬ ಮಂತ್ರವನ್ನು ಜಪಿಸಬೇಕು. ಪುನಃ ಆ ಚಿನ್ನವನ್ನು ಎಡಗಿವಿಯಲ್ಲಿಟ್ಟು ಇದೇ ಮಂತ್ರವನ್ನು ಜಪಿಸಬೇಕು. ಮುಂದೆ (೧) **"ಅಶ್ಮಾಭವ..."** ಎಂಬ ಮಂತ್ರಹೇಳಿ ಮಗುವಿನ ಎರಡು ಹೆಗಲುಗಳನ್ನು ಒಂದೇ ಸಲ ಮುಟ್ಟಬೇಕು. (೨) **"ಇಂದ್ರಶ್ರೇಷ್ಠಾನಿ..."** (೩) **"ಅಸ್ಮೇಪ್ರಯಂಧಿ..."** ಈ ಮಂತ್ರಗಳಿಂದಲೂ ಹೆಗಲು ಮುಟ್ಟಬೇಕು. ಆ ಮೇಲೆ ಮಗುವಿಗೆ ರಕ್ಷಣೆ ಮತ್ತು ಆಯುಸ್ಸು ಅಭಿವೃದ್ಧಿಯಾಗಲು **"ಅಂಗಾದಂಗಾ ..."** ಎಂಬ ಮಂತ್ರವನ್ನು ಹೇಳಿ ಮೂರು ಬಾರಿ ತಲೆಯನ್ನು ಆಘ್ರಾಣಿಸಬೇಕು. ಮಗುವಿಗೆ ಮುಂದೆ ಇಡುವ ಹೆಸರನ್ನು ಸ್ಮರಿಸಿಕೊಳ್ಳಬೇಕು. ತಾಯಿಯ ಬಲ ಮೊಲೆಯನ್ನು ತೊಳೆದು **"ಇಮಾಂ ಕುಮಾರೋ...."** ಎಂಬ ಮಂತ್ರವನ್ನು ಹೇಳಿ ಮೊಲೆಹಾಲನ್ನು ಕುಡಿಸಬೇಕು. ಬಳಿಕ ಬ್ರಾಹ್ಮಣರಿಗೆ ದಕ್ಷಿಣೆಯನ್ನಿತ್ತು ಆಶೀರ್ವಾದ ಪಡೆಯಬೇಕು.

ಸ್ತ್ರಿಷ್ಟುಪ್ ॥ ಶಿಶೋರಂಸಾಭಿಮರ್ಶನೇ ವಿನಿಯೋಗಃ ॥ ಓಂ ಇಂದ್ರಶ್ರೇಷ್ಠಾನಿ-ದ್ರವಿಣಾನಿಧೇಹಿಚಿತ್ತಿಂದಕ್ಷಸ್ಯಸುಭಗತ್ವಮಸ್ಮೇ । ಪೋಷಂರಯೀಣಾಮರಿಷ್ಟಿಂ ತನೂನಾಂ ಸ್ವಾದ್ಮಾನಂ ವಾಚಃ ಸುದಿನತ್ವಮಹ್ನಾಂ ॥ ಅಸ್ಮೇಪ್ರಯಂಧಿವಿಶ್ವಾಮಿತ್ರ ಇಂದ್ರಸ್ತ್ರಿಷ್ಟುಪ್ ॥ ಶಿಶೋರಂಸಾಭಿಮರ್ಶನೇ ವಿನಿಯೋಗಃ ॥ ಓಂ ಅಸ್ಮೇಪ್ರಯಂಧಿ-ಮಘವನ್ನೃಜೀಷಿನ್ನಿಂದ್ರರಾಯೋವಿಶ್ವವಾರಸ್ಯಭೂರೇಃ ॥ ಅಸ್ಮೇಶತಂಶರದೋ ಜೀವ-ಸೇಧಾ ಅಸ್ಮೇವೀರಾಞ್ಛಶ್ವತಇಂದ್ರಶಿಪ್ರಿನ್ ॥ ಇತಿ ಮಂತ್ರತ್ರಯಾಂತೇ ಅಭಿ-ಮರ್ಶಃ ॥ ತತೋ ರಕ್ಷಾಯುಷೋರಭಿವೃದ್ಧ್ಯರ್ಥಂ ॥ ಓಂ ಅಂಗಾದಂಗಾತ್ಸಂಭವಸಿ-ಹೃದಯಾದಧಿಜಾಯಸೇ ॥ ಆತ್ಮಾವೈಪುತ್ರನಾಮಾಸಿ ಸಜೀವ ಶರದಃ ಶತಂ ॥ ಇತಿ ಮಂತ್ರಮುಚ್ಚಾರ್ಯ ಮೂರ್ಧಾನಂ ತ್ರಿರಾಜಿಘ್ರೇತ್ ॥

ತತಃ ಶಿಶೋಃ ಕರಿಷ್ಯಮಾಣಂ ನಾಮ ತದೈವ ಸ್ಮರೇತ್ ॥ ಮಾತು-ರ್ದಕ್ಷಿಣಸ್ತನಂ ಪ್ರಕ್ಷಾಲ್ಯ ॥ ಓಂ ಇಮಾಂ ಕುಮಾರೋ ಜರಾಂಧಯತು ದೀರ್ಘ-ಮಾಯುಃ ಪ್ರಜೀವಸೇ ॥ ಅಸ್ಯೈಸ್ತನೌ ಪ್ರಯುಂಜಾನಾ ಆಯುರ್ವರ್ಚೋರ್ಯ-ಶೋಬಲಂ ॥ ಇತಿ ಮಂತ್ರೇಣ ಮಾತ್ರಾ ಕುಮಾರಂ ಪಾಯಯಿತ್ವಾ ಬ್ರಾಹ್ಮಣೇಭ್ಯೋ ದಕ್ಷಿಣಾಂ ದತ್ವಾ ಆಶಿಷೋ ಗೃಹ್ಣೀಯಾತ್ ॥

ಹೋಮಕರಣಪಕ್ಷೇ ಪ್ರಬಲನಾಮಾನಮಗ್ನಿಂ ಪ್ರತಿಷ್ಠಾಪ್ಯ ಜಾತಕರ್ಮ ಹೋಮೇ ದೇವತಾಪರಿಗ್ರಹಾರ್ಥಮಿತ್ಯಾದಿ ಚಕ್ಷುಷೀ ಅಜ್ಯೇನೇತ್ಯಂತಮುಕ್ತ್ವಾ ಅಗ್ನಿಮಿಂದ್ರಂ ಪ್ರಜಾಪತಿಂ ವಿಶ್ವಾನ್ ದೇವಾನ್ ಬ್ರಹ್ಮಾಣಮಾಜ್ಯೇನ ಶೇಷೇಣ ಸ್ವಿಷ್ಟಕೃತಮಿತ್ಯಾದಿ ಸದ್ಯೋ ಯಕ್ಷ್ಯ ಇತ್ಯಂತಮುಕ್ತ್ವಾ ಆಜ್ಯಂ ಹುತ್ವಾ ಮಧುಸರ್ಪಿಃ ಪಾಯನಾದಿ ಶಿಶುನಾಮಸ್ಮರಣಾಂತಂ ಕೃತ್ವಾ ಹೋಮಶೇಷಂ ಸಮಾಪ್ಯ ಸ್ತನ್ಯಂ ದದ್ಯಾತ್ ॥ ತಮರ್ವಂತಮಿತಿ ಪಂಚಭಿರಾಶೀರ್ವಾದಃ ॥ ತಮರ್ವಂತಮಿತಿ ಪಂಚಾನಾಂ ವಾಮದೇವೋಽಗ್ನಿರ್ಗಾಯತ್ರೀ ॥ ಓಂ ತಮರ್ವಂತಂ ನ ಸಾನಸಿ ಮರುಷಂ ನ ದಿವಃ ಶಿಶುಂ ॥ ಮರ್ಮೃಜ್ಯಂತೇ ದಿವೇ ದಿವೇ ॥

**ಬೋಧದ್ಯನ್ಸ್ವಾಹರಿಭ್ಯಾಂ ಕುಮಾರಃ ಸಾಹದೇವ್ಯಃ ॥ ಅಚ್ಛಾ ನ ಹೂತ ಉದರೇ ॥ ಉತತ್ಯಾಯಜತಾಹರೀಕುಮಾರಾತ್ಸಾಹದೇವ್ಯಾತ್ ॥ ಪ್ರಯತಾಸದ್ಯ ಆದದೇ ॥ ಏತವಾಂದೇವಾವಶ್ವಿನಾಕುಮಾರಃ ಸಾಹದೇವ್ಯಃ ॥ ದೀರ್ಘಾ ಯುರಸ್ತುಸೋಮಕಃ ॥ ತಂ ಯುವಂ ದೇವಾವಶ್ವಿನಾಕುಮಾರಂ ಸಾಹದೇವ್ಯಂ ॥ ದೀರ್ಘಾಯುಷಂ ಕೃಣೋತನ ॥**

**॥ ಇತಿ ಜಾತಕರ್ಮಸಂಸ್ಕಾರಃ ॥**

---

ಹೋಮ ಮಾಡುವ ಸಂದರ್ಭದಲ್ಲಿ 'ಪ್ರಬಲ' ಎಂಬ ಹೆಸರಿನ ಅಗ್ನಿಯನ್ನು ಪ್ರತಿಷ್ಠಾಪಿಸಿ **"ಜಾತಕರ್ಮ ಹೋಮೇ.... ಸದ್ಯೋ ಯಕ್ಷ್ಯೇ"** ಎಂದು ಹೇಳಿ ಅನ್ವಾಧಾನ ಮಾಡಬೇಕು. ಬಳಿಕ ಹೋಮಮಾಡಿ ಜೇನುತುಪ್ಪದ ಮಿಶ್ರಣವನ್ನು ಕುಡಿಸಿ, ಮಗುವಿನ ಹೆಸರನ್ನು ಸ್ಮರಿಸಿ, ಹೋಮಶೇಷವನ್ನು ಮುಗಿಸಿ ಮೊಲೆಹಾಲು ಕುಡಿಸಬೇಕು. **"ತಮುರ್ವಂತಂ..."** ಎಂಬ ಮಂತ್ರಗಳಿಂದ ಆಶೀರ್ವಾದ ಮಾಡಬೇಕು.

॥ ಜಾತಕರ್ಮಸಂಸ್ಕಾರ ಸಮಾಪ್ತ ॥

# ॥ ಷಷ್ಠೀದೇವೀಪೂಜಾ ॥

**॥ ಶ್ರೀಃ ॥ ಪಂಚಮೇ ಷಷ್ಠೇ ಚ ದಿನೇ ಷಷ್ಠ ಏವ ವಾ ಪೂರ್ವ-ರಾತ್ರೇ ಪಿತ್ರಾದಿರಾಚಮ್ಯ ದೇಶಕಾಲೌ ಸ್ಮೃತ್ವಾ ಅಸ್ಯ ಶಿಶೋಃ ಸಮಾತೃಕಸ್ಯ ಆಯುರಾರೋಗ್ಯಾವಾಪ್ತಿದ್ವಾರಾ ಸಕಲಾರಿಷ್ಟಶಾಂತಯೇ ಶ್ರೀಪರಮೇಶ್ವರ-ಪ್ರೀತ್ಯರ್ಥಂ ವಿಘ್ನೇಶಸ್ಯಜನ್ಮದಾನಾಂ ಷಷ್ಠೀದೇವ್ಯಾ ಜೀವಂತಿಕಾಯಾಃ ಶಸ್ತ್ರ-ಗರ್ಭಾಯಾಶ್ಚ ಯಥಾಮಿಲಿತೋಪಚಾರೈಃ ಪೂಜನಮಹಂ ಕರಿಷ್ಯೇ ॥ ತಥಾ ಚ ಶಾಂತಿಸೂಕ್ತಜಪಾಖ್ಯೇ ಕರ್ಮಣಿ ಆಚಾರ್ಯವರಣಂ ನಿರ್ವಿಘ್ನತಾ-ಸಿದ್ಧ್ಯರ್ಥಂ ಗಣಪತಿಪೂಜನಂ ಚ ಕರಿಷ್ಯೇ ॥ ತಾನಿ ಕೃತ್ವಾ ॥**

**ಅಕ್ಷತಪುಂಜೇಷು ವಿಘ್ನೇಶಂ ಜನ್ಮದಾಃ ಷಷ್ಠೀದೇವೀಂ ಜೀವಂತಿಕಾಂ ಚಾವಾಹ್ಯ ಷೋಡಶೋಪಚಾರೈಃ ಪೃಥಕ್ ತಂತ್ರೇಣ ವಾ ಪೂಜಯೇತ್ ॥ ಷಷ್ಠ್ಯಾವಾಹನಂ ॥ ಆಯಾಹಿ ವರದೇ ದೇವಿ ಮಹಾಷಷ್ಠೀತಿ ವಿಶ್ರುತೇ ॥ ಶಕ್ತಿಭಿಃ ಸಹ ಬಾಲಂ ಮೇ ರಕ್ಷ ಜಾಗರವಾಸರೇ ॥ ಇತಿ ॥ ಶಕ್ತಿಸ್ತ್ವಂ ಸರ್ವ ದೇವಾನಾಂ ಲೋಕಾನಾಂ ಹಿತಕಾರಿಣೀ ॥ ಮಾತರ್ಬಾಲಮಿಮಂ ರಕ್ಷ ಮಹಾಷಷ್ಠಿ ನಮೋಸ್ತುತೇ ॥ ಇತ್ಯುಪಚಾರಾರ್ಪಣಂ ॥ [ಕೇಚಿದತ್ರ ಶಿವಾಂ ಸಂಭೂತಿಂ ಪ್ರೀತಿಂ ಸಂತತಿಂ ಅನುಸೂಯಾಂ ಕ್ಷಮಾಂ ಚ ಪೂಜಯೇದಿತ್ಯಾಹುಃ] ಆಚಾರ್ಯೋಽನ್ಯೇಚ ಶಾಂತಿ ಸೂಕ್ತಾನಿ ಪಠೇಯುಃ ॥**

---

**ಷಷ್ಠೀದೇವೀಪೂಜೆ:-** ಪ್ರಸವವಾದ ಮೇಲೆ ಐದನೆಯ, ಆರನೆಯ ಅಥವಾ ಆರನೆಯ ದಿನವೇ ರಾತ್ರಿ ತಂದೆ ಮೊದಲಾದವರು ಆಚಮನ ಮಾಡಿ ದೇಶಕಾಲಗಳನ್ನು ಸ್ಮರಿಸಿ, **"ಅಸ್ಯ ಶಿಶೋಃ...ಗಣಪತಿ ಪೂಜನಂ ಚ ಕರಿಷ್ಯೇ"** ಎಂದು ಸಂಕಲ್ಪಮಾಡಿ ಶಾಂತಿಸೂಕ್ತವನ್ನು ಜಪಿಸಲು ಆಚಾರ್ಯವರಣವನ್ನು ಮಾಡಬೇಕು. ನಿರ್ವಿಘ್ನತಾ ಸಿದ್ಧಿಗೆ ಗಣಪತಿ ಪೂಜೆಯನ್ನೂ ಮಾಡಬೇಕು. ಅಕ್ಕಿಯ ರಾಶಿಯ ಮೇಲೆ ವಿಘ್ನೇಶ, ಜನ್ಮದಾದೇವಿ, ಷಷ್ಠೀ ದೇವಿ, ಜೀವಂತಿಕಾ ಇವರನ್ನು ಆವಾಹಿಸಿ; **ವಿಘ್ನೇಶಾಯ ನಮಃ, ಜನ್ಮದಾಭ್ಯೋ ನಮಃ, ಷಷ್ಠಿ ದೇವ್ಯೈ ನಮಃ, ಜೀವಂತಿಕಾಯೈ ನಮಃ** ಎಂಬ ನಾಮಮಂತ್ರಗಳಿಂದ ಷೋಡಶೋಪಚಾರ ಪೂಜೆ ಅಥವಾ ತಾಂತ್ರಿಕ ಪೂಜೆಯನ್ನು ಮಾಡಬೇಕು: **"ಆಯಾಹಿ ವರದೇ ದೇವಿ"** .... **"ಶಕ್ತಿಸ್ತ್ವಂ ಸರ್ವದೇವಾನಾಂ...."** ಹೇಳಿ ಆವಾಹನೆ ಮತ್ತು ಉಪಚಾರಗಳನ್ನು ಅರ್ಪಿಸಬೇಕು. ಇಲ್ಲಿ ಕೆಲವರು ಶಿವಾ, ಸಂಭೂತಿ, ಪ್ರೀತಿ, ಸಂತತಿ, ಅನುಸೂಯಾ, ಕ್ಷಮಾ ಇವರನ್ನು ಪೂಜಿಸಬೇಕೆಂದು ಅಭಿಪ್ರಾಯಪಡುತ್ತಾರೆ. ಆಚಾರ್ಯನೂ ಇತರರೂ ಒಂದುಗೂಡಿ ಶಾಂತಿಪಾಠಗಳನ್ನು ಹೇಳಬೇಕು.

**॥ ಪ್ರಾರ್ಥನಾ ॥ ಲಂಬೋದರ ಮಹಾಭಾಗ ಸರ್ವೋಪದ್ರವನಾಶನ ॥ ತ್ವತ್ಪ್ರಸಾದಾದವಿಘ್ನೇಶ ಚಿರಂ ಜೀವತು ಬಾಲಕಃ ॥ ಜನನೀ ಸರ್ವಭೂತಾನಾಂ ಬಾಲಾನಾಂ ಚ ವಿಶೇಷತಃ ॥ ನಾರಾಯಣೀ ಸ್ವರೂಪೇಣ ಬಾಲಂ ಮೇ ರಕ್ಷ ಸರ್ವದಾ ॥ ಭೂತಪ್ರೇತಪಿಶಾಚೇಭ್ಯೋ ಡಾಕಿನೀ ಯೋಗಿನೀಷು ಚ ॥ ಮಾತೇವ ರಕ್ಷ ಬಾಲಂ ಮೇ ಶ್ವಾಪದೇ ಪನ್ನಗೇಷು ಚ ॥ ಗೌರೀಪುತ್ರೋ ಯಥಾ ಸ್ಕಂದಃ ಶಿಶುತ್ವೇ ರಕ್ಷಿತಃ ಪುರಾ ॥ ತಥಾ ಮಮಾಪ್ಯಯಂ ಬಾಲಃ ಷಷ್ಠಿಕೇ ರಕ್ಷ ತೇ ನಮಃ ॥ ತತೋ ವಿಪ್ರೇಭ್ಯಶ್ಚ ತಾಂಬೂಲಖಾದ್ಯದಕ್ಷಿಣಾದಿ ದದ್ಯಾತ್ ॥ ಜನನಾಶೌಚಮಧ್ಯೇ ಪ್ರಥಮಪಂಚಮಷಷ್ಠದಶಮದಿನೇಷು ದಾನೇ ಪ್ರತಿಗ್ರಹೇ ಚ ನ ದೋಷಃ ॥ ಅನ್ನಂ ತು ನಿಷಿದ್ಧಂ ॥ ಅಸ್ಯಾಂ ರಾತ್ರೌ ಜಾಗರಣಂ ಕುರ್ಯುಃ ॥**

**॥ ಇತಿ ಷಷ್ಠೀಪೂಜಾ ॥**

---

"**ಲಂಬೋದರ ಮಹಾಭಾಗ**" ಎಂಬಲ್ಲಿಂದ "**ಷಷ್ಠಿಕೇ ರಕ್ಷ ತೇ ನಮಃ**" ಎಂಬಲ್ಲಿ ವರೆಗೆ ಹೇಳಿ ಪ್ರಾರ್ಥನೆಯನ್ನು ಮಾಡಬೇಕು. ಆ ಬಳಿಕ ಬ್ರಾಹ್ಮಣರಿಗೆ ತಾಂಬೂಲ, ಖಾದ್ಯಪದಾರ್ಥ ದಕ್ಷಿಣೆ ಇತ್ಯಾದಿಗಳನ್ನು ಕೊಟ್ಟು ಸತ್ಕರಿಸಬೇಕು. ಜನನಾಶೌಚವಿದ್ದರೂ ಮೊದಲನೆಯ, ಐದನೆಯ, ಆರನೆಯ ಹಾಗೂ ಹತ್ತನೆಯ ದಿನಗಳಲ್ಲಿ ದಾನಮಾಡುವುದೂ, ದಾನವನ್ನು ಸ್ವೀಕರಿಸುವುದೂ ನಿಷಿದ್ಧವಲ್ಲ. ಆದರೆ, ಅನ್ನವನ್ನು ಸ್ವೀಕರಿಸುವುದು ನಿಷೇಧಿಸಲ್ಪಟ್ಟಿದೆ. ಆ ರಾತ್ರಿ ಎಲ್ಲರೂ ಜಾಗರಣೆ ಮಾಡಬೇಕು.

॥ ಷಷ್ಠೀ ಪೂಜೆಯು ಸಮಾಪ್ತ ॥

# ॥ ನಾಮಕರಣ ಸಂಸ್ಕಾರಃ ॥

॥ ಶ್ರೀಃ ॥ ಯಜಮಾನಃ ಆಚಮ್ಯ ಪ್ರಾಣಾನಾಯಮ್ಯ ದೇಶಕಾಲೌ ಸಂಕೀರ್ತ್ಯ ॥ ಮಮಾಸ್ಯ ಶಿಶೋಃ ಬೀಜಗರ್ಭಸಮುದ್ಭವೈನೋನಿಬರ್ಹಣಾ-ಯುರಭಿವೃದ್ಧಿವ್ಯವಹಾರಸಿದ್ಧಿದ್ವಾರಾ ಶ್ರೀಪರಮೇಶ್ವರಪ್ರೀತ್ಯರ್ಥಂ ನಾಮಕರಣಂ ಕರಿಷ್ಯೇ ॥ ತದಂಗತಯಾ ಗಣಪತಿಪೂಜನಪೂರ್ವಕಂ ಸ್ವಸ್ತಿಪುಣ್ಯಾಹವಾಚನಂ ಮಾತೃಕಾಪೂಜನಂ ನಾಂದೀಶ್ರಾದ್ಧಂ ಚ ಕರಿಷ್ಯೇ ॥ ಇತಿ ಸಂಕಲ್ಪ್ಯ ॥ ಸ್ವಸ್ತಿ-ವಾಚನೇ ಪುಣ್ಯಾಹತ್ರಯಮುಕ್ತ್ವಾ ಕರಿಷ್ಯಮಾಣಂ ನಾಮ ಚತುರ್ಥ್ಯಂತಮುಕ್ತ್ವಾ ತ್ರಿರೇತನ್ನಾಮ್ನೇ ಸ್ವಸ್ತಿ ಭವತ್ವಿತ್ಯುಕ್ತೇ ವಿಪ್ರೈರೇತನ್ನಾಮ್ನೇ ಸ್ವಸ್ತಿ ಇತಿ ತ್ರಿಃ ಪ್ರತ್ಯುಕ್ತೇ ಶೇಷಂ ಸ್ವಸ್ತಿವಾಚನಂ ಸಮಾಪ್ಯ ॥

ಇದಮಾರ್ಯಾಃ ಕುಮಾರಸ್ಯ ನಾಮಾಹಂ ವಿದಧಾಮೀತಿ ವಿಪ್ರಾನನು-ಜ್ಞಾಪ್ಯ ತೈರ್ವಿಧೀಯತಾಮಿತ್ಯನುಮೋದಿತಃ ಸನ್ ತಂಡುಲಾನ್ ಕಾಂಸ್ಯಪಾತ್ರೇ ಪ್ರಸಾರ್ಯ ತದುಪರಿ ಸುವರ್ಣಶಲಾಕಯಾ ಅಮುಕಕುಲದೇವತಾಭಕ್ತ ಇತಿ ನಾಮ ಲೇಖ್ಯಂ ॥ ತತೋ ಜನ್ಮಕಾಲೀನ ಮಾಸನಾಮ ॥ ಕೃಷ್ಣೋಽನಂತೋ-ಽಚ್ಯುತಶ್ಚಕ್ರೀವೈಕುಂಠೋಽಥ ಜನಾರ್ದನಃ । ಉಪೇಂದ್ರೋ ಯಜ್ಞಪುರುಷೋ ವಾಸುದೇವಸ್ತಥಾ ಹರಿಃ ॥ ಯೋಗೀಶಃ ಪುಂಡರೀಕಾಕ್ಷೋ ಮಾಸನಾಮಾನ್ಯ-

---

**ನಾಮಕರಣ ಸಂಸ್ಕಾರಃ–** ಯಜಮಾನನು ಆಚಮನಪ್ರಾಣಾಯಾಮಗಳನ್ನು ಮಾಡಿ ದೇಶಕಾಲಗಳನ್ನು ಸ್ಮರಿಸಿ, **"ಮಮಾಸ್ಯ ಶಿಶೋಃ....ನಾಂದೀಶ್ರಾದ್ಧಂ ಚ ಕರಿಷ್ಯೇ"** ಎಂದು ಸಂಕಲ್ಪಮಾಡಬೇಕು. ಸ್ವಸ್ತಿವಾಚನದಲ್ಲಿ ಮುಂದೆ ಇಡುವ ಹೆಸರಿಗೆ **"ನಾಮ್ನೇ"** ಎಂದು ಸೇರಿಸಿ **"ಸ್ವಸ್ತಿ ಭವತು"** ಎಂದು ಬ್ರಾಹ್ಮಣರನ್ನು ಕೇಳಿಕೊಳ್ಳಬೇಕು. ಬ್ರಾಹ್ಮಣರು "ಏತನ್ನಾಮ್ನೇ ಸ್ವಸ್ತಿಭವತು" ಎಂದು ಮೂರು ಬಾರಿಯೂ ಪ್ರತ್ಯುತ್ತರ ಹೇಳಿದ ನಂತರ ಉಳಿದ ಸ್ವಸ್ತಿವಾಚನ ಕಾರ್ಯವನ್ನು ಪೂರ್ಣಗೊಳಿಸಬೇಕು. ಆಮೇಲೆ **"ಇದಮಾರ್ಯಾಃ...ವಿದಧಾಮಿ"** ಎಂದು ಬ್ರಾಹ್ಮಣರನ್ನು ಕೇಳಿಕೊಂಡಾಗ ಅವರು **"ವಿಧೀಯತಾಂ"** ಎಂದು ಅನುಮತಿ ಕೊಟ್ಟ ಬಳಿಕ ಕಂಚಿನ ಪಾತ್ರೆಯಲ್ಲಿ ಅಕ್ಕಿಯನ್ನು ಹರವಿ ಅದರ ಮೇಲೆ ಚಿನ್ನದ ಕಡ್ಡಿಯಿಂದ **"...ಅಮುಕ ಕುಲದೇವತಾ ಭಕ್ತ"** ಎಂಬ ಹೆಸರನ್ನು ಬರೆಯಬೇಕು. ಆಮೇಲೆ ಹುಟ್ಟಿದ ತಿಂಗಳಿಗೆ ಸಂಬಂಧಿಸಿದ ಹೆಸರನ್ನು ಬರೆಯಬೇಕು. ಚೈತ್ರಾದಿಯಾಗಿ ಆ ಹೆಸರುಗಳು ಹೀಗಿವೆ: ೧. ಕೃಷ್ಣ, ೨. ಅನಂತ, ೩. ಅಚ್ಯುತ, ೪. ಚಕ್ರೀ, ೫. ವೈಕುಂಠ, ೬. ಜನಾರ್ದನ, ೭. ಉಪೇಂದ್ರ, ೮. ಯಜ್ಞಪುರುಷ, ೯. ವಾಸುದೇವ, ೧೦. ಹರಿ, ೧೧. ಯೋಗೀಶ, ೧೨. ಪುಂಡರೀಕಾಕ್ಷ.

**ನುಕ್ರಮಾತ್ ॥ ಅತ್ರ ಚೈತ್ರಾದಿರ್ಮಾರ್ಗಶೀರ್ಷಾದಿರ್ವಾ ಕ್ರಮಃ ॥ ತತೋಭಿ-ವಾದನೀಯಂ ನಾಮ ಉಪಾಂಶು ಕುರ್ಯಾತ್ ॥ ತಚ್ಚಾಮೌಂಜೀಬಂಧನಾ-ನ್ಮಾತಾಪಿತರಾವೇವ ಜಾನೀಯಾತಾಂ ॥ ಉಪನಯನಕಾಲೇಚಾನೇನ ನಾಮ್ನಾ ಅಭಿವಾದಯೇತಿ ಕುಮಾರಂ ಪ್ರತಿ ವಾಚ್ಯಂ ॥ ತತಸ್ತ್ರಿಪುರುಷವಾಚಿ ದೇವತಾ-ವಾಚಿ ವಾ ನಾಮ ಸ್ವೇಷ್ಟಂ ವಾ ಯುಗ್ಮಾಕ್ಷರಂ ದ್ವ್ಯಕ್ಷರಂ ಪ್ರತಿಷ್ಠಾಕಾಮ-ಶ್ಚತುರಕ್ಷರಂ ಬ್ರಹ್ಮವರ್ಚಸಕಾಮೋ ವಿಪ್ರಾದಿವರ್ಣ ಕ್ರಮೇಣ ಶರ್ಮವರ್ಮ-ಗುಪ್ತದಾಸಾನ್ಯತಮಪದಾಂತಂ ಕುರ್ಯಾತ್ ॥ ತತೋಽವಕಹಡಾಚಕ್ರಾಖ್ಯ-ಜ್ಯೋತಿಃ ಶಾಸ್ತ್ರೋಕ್ತ ಚಕ್ರಾನುಸಾರೇಣ ಜನ್ಮನಕ್ಷತ್ರಪಾದಪ್ರಯುಕ್ತಾಕ್ಷರಾದಿ ನಾಮ ॥ ತತೋ ವ್ಯಾವಹಾರಿಕಂ ಸ್ವೇಷ್ಟಂ ನಾಮೇತಿ ನಾಮಚತು-ಷ್ಟಯಂ ಲಿಖಿತ್ವಾ ॥ ನಾಮದೇವತಾಭ್ಯೋ ನಮ ಇತಿ ಸಂಪೂಜ್ಯ ॥ ಅಮುಕನಾಮ್ನಾತ್ವಮಮುಕೋಽಸಿ ಇತಿ ಸ್ವದಕ್ಷಿಣಸ್ಥಮಾತುರುತ್ಸಂಗಸ್ಥಸ್ಯ ಶಿಶೋ-ರ್ದಕ್ಷಿಣ ಕರ್ಣೇ ಕಥಯಿತ್ವಾ । ತದಸ್ತು ಮಿತ್ರಾವರುಣಾ ... ಗೃಹಾವೈಪ್ರತಿಷ್ಠಾ .... ಇತ್ಯಾದಿ ಮಂತ್ರಪಾಠಾಂತೇ ವಿಪ್ರೈರ್ನಾಮ ಸುಪ್ರತಿಷ್ಠಿತಮಸ್ತ್ವಿತ್ಯುಕ್ತೇ ಅಮುಕ-ನಾಮ್ನಾ ಅಮುಕನಾಮಾಯಂ ಭವತೋ ಅಭಿವಾದಯತೇ ಇತ್ಯುಕ್ತ್ವಾ ವಿಪ್ರಾನಭಿ-ವಾದಯೇತ್ ॥ ತೇಚ ಆಯುಷ್ಮಾನ್ ಭವತ್ವಮುಕಶರ್ಮಾ ೩ ಇತಿ ವದೇಯುಃ ॥**

---

ಚೈತ್ರ ಅಥವಾ ಮಾರ್ಗಶೀರ್ಷಮಾಸವನ್ನು ಮೊದಲನೆಯ ತಿಂಗಳೆಂದು ಪರಿಗಣಿಸಿ ಅನುಕ್ರಮವಾಗಿ ಈ ಹೆಸರುಗಳನ್ನು ನಿರ್ಣಯಿಸಿಕೊಳ್ಳಬೇಕು. ಆಮೇಲೆ ಅಭಿವಾದನ ಕಾಲದಲ್ಲಿ ಉಪಯೋಗಿಸುವ ಹೆಸರನ್ನು ಮೌನವಾಗಿ ಮನಸ್ಸಿನಲ್ಲೇ ನಿರ್ಣಯಿಸಿಕೊಳ್ಳಬೇಕು. ಉಪನಯನ ಕಾಲದ ವರೆಗೆ ಈ ಹೆಸರು ತಂದೆ-ತಾಯಿಗಳಿಗೆ ಮಾತ್ರ ಗೊತ್ತಿರಬೇಕು. ಉಪನಯನಕಾಲದಲ್ಲಿ ಈ ಹೆಸರಿನಿಂದ ಅಭಿವಾದನ ಮಾಡೆಂದು ಕುಮಾರನಿಗೆ ತಿಳಿಸಬೇಕು. ಬಳಿಕ ಮೂರು ಪುರುಷವಾಚಕ ಅಥವಾ ದೇವತಾವಾಚಕ ಹೆಸರುಗಳನ್ನು ಪ್ರತಿಷ್ಠೆಯ ಇಚ್ಛೆ ಇದ್ದರೆ ಎರಡು ಅಕ್ಷರ, ಬ್ರಹ್ಮವರ್ಚಸ್ಸು ಬೇಕಿದ್ದರೆ ನಾಲ್ಕು ಅಕ್ಷರಗಳುಳ್ಳ ಹೆಸರುಗಳನ್ನು ಬರೆಯಬೇಕು. ಅವುಗಳ ಕೊನೆಗೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ವರ್ಣಗಳಿಗೆ ಕ್ರಮವಾಗಿ ಶರ್ಮ, ವರ್ಮ, ಗುಪ್ತ, ದಾಸ ಎಂದು ಸೇರಿಸಿಕೊಳ್ಳಬೇಕು. ಜ್ಯೋತಿಃಶ್ಶಾಸ್ತ್ರದ ಅವಕಹಡ ಚಕ್ರದ ಅನುಸಾರವಾಗಿ ಜನ್ಮನಕ್ಷತ್ರದ ಪಾದದ ಮೇಲಿನಿಂದ ಹೆಸರು ಇಡಬೇಕು. ಆಮೇಲೆ ನಿತ್ಯವ್ಯವಹಾರಕ್ಕೆ ತಮಗೆ ಇಷ್ಟ ಬಂದ ಒಂದು ಹೆಸರನ್ನು ಇಡಬೇಕು.

**ತತಃ ದೇವತಾ ಬ್ರಾಹ್ಮಣಾನ್ ಪಿತ್ರಾದೀಂಶ್ಚ ನತ್ವಾ ಯಥಾವಿಭವಂ ವಿಪ್ರಾನ್ ಭೋಜಯೇದ್ದಕ್ಷಿಣಾಂ ಚ ದದ್ಯಾತ್ ॥**

**ಕುಮಾರ್ಯಾ ಅಪಿ ನಾಮಕರಣಮಮಂತ್ರಕಂ ಕಾರ್ಯಂ । ವಿಷಮಾಕ್ಷರಂ ತು ತನ್ನಾಮ ॥**

**ಹೋಮಕರಣಪಕ್ಷೇ ತು ಪಾರ್ಥಿವಾಗ್ನೌ ಜಾತಕರ್ಮವದೇವ ಪ್ರಧಾನಾಹುತೀರ್ಹುತ್ವಾ ನಾಮ ಯಥೋಕ್ತಂ ಕೃತ್ವಾ ಸ್ವಿಷ್ಟಕೃದಾದಿ ಹೋಮಶೇಷ ತಂತ್ರಂ ಕುರ್ಯಾತ್ ॥**

**॥ ಇತಿ ನಾಮಕರಣ ಸಂಸ್ಕಾರಃ ॥**

---

ಆಮೇಲೆ **"ನಾಮದೇವತಾಭ್ಯೋ ನಮಃ"** ಎಂಬ ಮಂತ್ರದಿಂದ ಪೂಜೆಮಾಡಿ, ತನ್ನ ಬಲಭಾಗದಲ್ಲಿ ಕುಳಿತಿರುವ ಪತ್ನಿಯ ಮಡಿಲಲ್ಲಿರುವ ಮಗುವಿನ ಬಲಕಿವಿಯಲ್ಲಿ ಹೆಸರನ್ನು ಉಚ್ಚರಿಸಿ **"ತದಸ್ತು ಮಿತ್ರಾವರುಣಾ..."** **"ಗೃಹಾವೈ....."** ಇತ್ಯಾದಿ ಮಂತ್ರಗಳನ್ನು ಹೇಳಿ ಬ್ರಾಹ್ಮಣರು **"ನಾಮ ಸುಪ್ರತಿಷ್ಠಿತಮಸ್ತು"** ಎಂದು ಹೇಳಿದ ಮೇಲೆ, ಅಮುಕ ಹೆಸರಿನಿಂದ ಅಮುಕ ಹೆಸರಿನ ಈತನು ತಮ್ಮನ್ನು ಅಭಿವಾದಿಸುತ್ತಾನೆ ಎಂದು ಹೇಳಿ ಬ್ರಾಹ್ಮಣರಿಗೆ ನಮಸ್ಕಾರ ಮಾಡಿಸಬೇಕು. ಬ್ರಾಹ್ಮಣರು **"ಆಯುಷ್ಮಾನ್ ಭವತು .... ಅಮುಕಶರ್ಮಾsss"** ಎಂದು ಆಶೀರ್ವದಿಸಬೇಕು. ಬಳಿಕ ಯಜಮಾನನು ಗುರುಹಿರಿಯರಿಗೆ, ಬ್ರಾಹ್ಮಣರಿಗೆ ನಮಸ್ಕಾರ ಮಾಡಿ ಯಥಾಶಕ್ತಿ ಬ್ರಾಹ್ಮಣ ಸಂತರ್ಪಣೆ ಮಾಡಿ ದಕ್ಷಿಣಾದಿಗಳನ್ನು ಕೊಡಬೇಕು.

ಹೆಣ್ಣುಮಗುವಿಗೂ ವೈದಿಕಮಂತ್ರಗಳಿಲ್ಲದೆ ನಾಮಕರಣಸಂಸ್ಕಾರವನ್ನು ಮಾಡಬೇಕು. ವಿಷಮಾಕ್ಷರಗಳುಳ್ಳ ಅಂದರೆ ೩, ೫, ೭ ಅಕ್ಷರಗಳುಳ್ಳ ಹೆಸರನ್ನಿಡಬೇಕು.

ಹೋಮಸಹಿತ ನಾಮಕರಣಸಂಸ್ಕಾರವನ್ನು ಮಾಡುವುದಾದರೆ **"ಪಾರ್ಥಿವ"** ಎಂಬ ಹೆಸರಿನ ಅಗ್ನಿಯನ್ನು ಪ್ರತಿಷ್ಠಾಪಿಸಬೇಕು. ಜಾತಕರ್ಮಸಂಸ್ಕಾರದಲ್ಲಿ ವಿಧಿಸಿದ ಪ್ರಕಾರ ಅನ್ವಾಧಾನಾದಿ ಸಕಲಕರ್ಮಗಳನ್ನೂ ಮಾಡಿ, ಅಂತೆಯೇ ಪ್ರಧಾನ ಆಜ್ಯಾಹುತಿಗಳನ್ನು ಕೊಟ್ಟು, ಈ ಹಿಂದೆ ಹೇಳಿವಂತೆ ನಾಮಕರಣ ಮಾಡಿ ಸ್ವಿಷ್ಟಕೃದಾದಿ ಹೋಮಶೇಷವನ್ನು ಮಾಡಿ ಮುಗಿಸಬೇಕು.

॥ ನಾಮಕರಣಸಂಸ್ಕಾರ ಸಮಾಪ್ತ ॥

೩೦

# ॥ ಸೂರ್ಯಾವಲೋಕನನಿಷ್ಕ್ರಮಣ ಸಂಸ್ಕಾರೌ ॥

॥ ಶ್ರೀಃ ॥ ಜನನಾತ್ತೃತೀಯೇ ಮಾಸಿ ಜನ್ಮದಿನೇ ಜನ್ಮನಕ್ಷತ್ರೇ ವಾ ಇಷ್ಟದೇವತಾಪೂಜನಪೂರ್ವಕಮಲಂಕೃತೇನ ಶಿಶುನಾ ಸೋತ್ಸವಂ ಸೂರ್ಯ ದರ್ಶನಂ ಕಾರಯಿತ್ವಾ ಚತುರ್ಥಮಾಸೇ ಶುಭಕಾಲೇ ಅಗ್ನಿಂ ಚಂದ್ರಂ ಧೇನುಂ ಚ ದರ್ಶಯೇತ್ ॥

ಸ್ವಸ್ತಿ ನ ಆತ್ರೇಯೋ ವಿಶ್ವೇದೇವಾಸ್ತ್ರಿಷ್ಟುಪ್ ॥ ಶಿಶೋರಂಕಾರೋಪಣೇ ವಿನಿಯೋಗಃ ॥ ಓಂ ಸ್ವಸ್ತಿ ನೋ ಮಿಮೀತಾಮಶ್ವಿನಾಭಗಃ ॥ ಸ್ವಸ್ತಿದೇವ್ಯದಿತಿರನರ್ವಣಃ ॥ ಸ್ವಸ್ತಿಪೂಷಾಅಸುರೋದಧಾತು ನಃ ॥ ಸ್ವಸ್ತಿದ್ಯಾವಾಪೃಥಿವೀಸುಚೇತುನಾ ॥ ಅನೇನ ಪಿತ್ರಾದಿಃ ಶಿಶುಮಂಕಮಾರೋಪ್ಯ ॥ ಆಶುಃ ಶಿಶಾನ ಇತಿ ತ್ರಯೋದಶರ್ಚಸ್ಯಾಪ್ರತಿರಥಸ್ಯ ಸೂಕ್ತಸ್ಯ ಐಂದ್ರೋಽಪ್ರತಿರಥ ಇಂದ್ರಸ್ತ್ರಿಷ್ಟುಪ್ ॥ ಚತುರ್ಥೀ ಬೃಹಸ್ಪತಿರ್ದೇವತ್ಯಾ ॥ ತ್ರಯೋದಶ್ಯನುಷ್ಟುಪ್ ॥ ಶಿಶೋರಾಯುಷ್ಯಾಭಿವೃದ್ಧ್ಯರ್ಥಂ ಜಪೇ ವಿನಿಯೋಗಃ ॥ ಓಂ ಆಶುಃ ಶಿಶಾನೋ

---

**ಸೂರ್ಯಾವಲೋಕನಃ–** ಶಿಶುಜನನವಾದ ಮೇಲೆ ಮೂರನೆಯ ತಿಂಗಳಲ್ಲಿ ಜನ್ಮದಿನ ಅಥವಾ ಜನ್ಮನಕ್ಷತ್ರದ ದಿನ ಇಷ್ಟದೇವತಾಪೂಜೆಯನ್ನು ಮಾಡಿ ಮಗುವನ್ನು ಅಲಂಕರಿಸಿ, ಉತ್ಸವದೊಂದಿಗೆ ಅದಕ್ಕೆ ಸೂರ್ಯದರ್ಶನ ಮಾಡಿಸಬೇಕು. ನಾಲ್ಕನೆಯ ತಿಂಗಳಲ್ಲಿ ಶುಭಕಾಲದಲ್ಲಿ ಅಗ್ನಿ, ಚಂದ್ರ ಮತ್ತು ಗೋವಿನ ದರ್ಶನಮಾಡಿಸಬೇಕು. ತಂದೆ ಮೊದಲಾದವರು ಮಗುವನ್ನು ತೊಡೆಯ ಮೇಲೆ ಮಲಗಿಸಿ **"ಸ್ವಸ್ತಿ ನೋ ಮಿಮೀತಾ"** ಎಂಬ ಮಂತ್ರವನ್ನು ಹೇಳಬೇಕು. ಆಮೇಲೆ **"ಆಶುಃ ಶಿಶಾನೋ...."** ಎಂಬ ೧೩ ಋಕ್ಕುಗಳುಳ್ಳ ಸೂಕ್ತವನ್ನೂ **"ಅಸೌ ಯಾ ಸೇನಾ"** ಎಂಬ ೨ ಋಕ್ಕುಗಳ ಸೂಕ್ತವನ್ನೂ ಶಿಶುವಿನ ಆಯುಷ್ಯಾಭಿವೃದ್ಧಿಗೋಸ್ಕರ ಜಪಿಸಬೇಕು. ಆ ಬಳಿಕ **"ತಚ್ಚಕ್ಷುರ್ದೇವ"** ಎಂಬ ಸೂಕ್ತವನ್ನು ಹೇಳಿ ಮಗುವಿಗೆ ಸೂರ್ಯನನ್ನು ತೋರಿಸಬೇಕು.

॥ ಸೂರ್ಯಾವಲೋಕನ ಸಂಸ್ಕಾರ ಸಮಾಪ್ತ ॥

ಮುಂದೆ ಹೇಳುವ ನಿಷ್ಕ್ರಮಣ ಸಂಸ್ಕಾರವನ್ನೂ ಸೂರ್ಯಾವಲೋಕನ ಸಂಸ್ಕಾರದ ಜತೆಗೇ ತಂತ್ರದಿಂದ ಮಾಡುತ್ತಾರೆ.

... ಋಕ್ ೧೩ ॥ ಓಂ ಅಸೌಯಾಸೇನಾ ... ಋಕ್ ೨ ॥ ತಚ್ಚಕ್ಷುರ್ವಸಿಷ್ಠಃ ಸೂರ್ಯಃಪುರ ಉಷ್ಣಿಕ್ ॥ ಕುಮಾರಸ್ಯಾದಿತ್ಯಾವೇಕ್ಷಣೇ ವಿನಿಯೋಗಃ ॥ ಓಂ ತಚ್ಚಕ್ಷುರ್ದೇವ... ॥ ಇತಿ ಸೂರ್ಯಂ ನಿರೀಕ್ಷಯೇತ್ ॥ ಇತಿ ಸೂರ್ಯಾವಲೋಕನಸಂಸ್ಕಾರಃ ॥ ಇದಂ ಅಗ್ರೇತನಂ ನಿಷ್ಕ್ರಮಣಂ ಚ ಸಹ ತಂತ್ರೇಣೈವ ಕುರ್ವಂತಿ ॥

॥ ಸೂರ್ಯಾವಲೋಕನ ಸಂಸ್ಕಾರ ಸಮಾಪ್ತ ॥

---

# ೩೧

# ॥ ನಿಷ್ಕ್ರಮಣಾ ಸಂಸ್ಕಾರಃ ॥

॥ ಶ್ರೀಃ ॥ (ಸೂರ್ಯಾವಲೋಕನ ತಂತ್ರೇಣ) ತತಶ್ಚತುರ್ಥೇ ಮಾಸಿ ಷಷ್ಠೇ ವಾ ಶುಕ್ಲಪಕ್ಷೇ ಶುಭತಿಥ್ಯಾದೌ ಪಿತಾ ಸಭಾರ್ಯಃ ಸಶಿಶುರಭ್ಯಂಗ-ಸ್ನಾತಃ ॥ ಮಮ ಶಿಶೋಃ ಆಯುಃ ಶ್ರೀವೃದ್ಧಿ ಬೀಜಗರ್ಭಸಮುದ್ಭವೈನೋನಿ-ಬರ್ಹಣದ್ವಾರಾ ಶ್ರೀಪರಮೇಶ್ವರಪ್ರೀತ್ಯರ್ಥಂ ನಿಷ್ಕ್ರಮಣಾಖ್ಯಂ ಕರ್ಮ ಕರಿಷ್ಯೇ ॥ ಇತಿ ಸಂಕಲ್ಪ್ಯ ॥ ತದಂಗತಯಾ ಸ್ವಸ್ತಿವಾಚನಾಭ್ಯುದಯಿಕಗ್ರಹ-ಯಜ್ಞಾನ್ ಕೃತ್ವಾ ॥ ಇಂದ್ರಾಗ್ನಿಯಮನಿರ್ಋತಿವರುಣವಾಯುಕುಬೇರೇಶಾನಾನಾಂ ಪ್ರಾಚ್ಯಾದಿದಿಶಾಂ ಚಂದ್ರಾರ್ಕವಾಸುದೇವ ಗಗನಾನಾಂ ಚ ಯಥಾ ಕ್ರಮಂ ತಂಡುಲಪುಂಜೇಷು ಪೂಜಾಂ ಕೃತ್ವಾ ಬ್ರಾಹ್ಮಣಾನ್ ಭೋಜಯಿತ್ವಾ ತೈಃ ಸ್ವಸ್ತ್ಯಯನಂ ವಾಚಯಿತ್ವಾ ॥ ಸಾಯಂ ಸಂಧ್ಯಾದಿಕಂ ಕೃತ್ವಾ ॥ ಶಿಶುಂ ಸೌವರ್ಣೈಃ ಕೃತ್ರಿಮೈರ್ವಾಭರಣೈಃ ಯಥಾಶಕ್ತ್ಯಲಂಕೃತ್ಯ ಪೂರ್ವಂ ನ ಕೃತಂ ಚೇತ್ ಇದಾನೀಂ ಶಿಶುನಾಗ್ನಿಚಂದ್ರಧೇನೂನಾಂ ದರ್ಶನಂ ಕಾರಯಿತ್ವಾ ಅಶ್ವಾದಿ ವಾಹನಸ್ಥಂ ಶಿಶುಂ ಮಾತುಲೇನ ಧಾತ್ರ್ಯಾ ವಾ ವಾಹಯಿತ್ವಾ ಭಾರ್ಯಾಪುತ್ರ ವಿದ್ವ ದ್ಬ್ರಾಹ್ಮಣ ಜ್ಞಾತಿಬಾಂಧವಪುರಂಧ್ರೀಗಣದರ್ಪಣಪೂರ್ಣಕಲಶಯುಕ್ತಕನ್ಯಾಗಣ ಪುಷ್ಪಹರಿದ್ರಾಕ್ಷತಾದೀಪಮಾಲಾಧ್ವಜಲಾಜಮಂಗಲವಾದ್ಯಘೋಷಯುಕ್ತಃ ॥

---

**ನಿಷ್ಕ್ರಮಣ ಸಂಸ್ಕಾರಃ–** ನಾಲ್ಕನೆಯ ತಿಂಗಳಲ್ಲಿ ಅಥವಾ ಆರನೆಯ ತಿಂಗಳಲ್ಲಿ ಶುಕ್ಲ ಪಕ್ಷದಲ್ಲಿ ಶುಭತಿಥಿಯನ್ನು ನೋಡಿ ತಂದೆಯು ತನ್ನ ಪತ್ನಿ ಮತ್ತು ಬಾಲಕನೊಡನೆ ಅಭ್ಯಂಗಸ್ನಾನ ಮಾಡಬೇಕು. ಆಮೇಲೆ **"ಮಮ ಶಿಶೋಃ ... ಕರ್ಮ ಕರಿಷ್ಯೇ"** ಎಂದು ಸಂಕಲ್ಪಮಾಡಿ ಇದರ ಅಂಗವಾಗಿ ಸ್ವಸ್ತಿವಾಚನ ಆಭ್ಯುದಯಿಕ ಗ್ರಹಯಜ್ಞಾದಿಗಳನ್ನೂ ಮಾಡಿ, ಅಕ್ಕಿಯ ರಾಶಿಯ ಮೇಲೆ ಇಂದ್ರ, ಅಗ್ನಿ, ಯಮ, ನಿರ್ಋತಿ, ವರುಣ, ವಾಯು, ಕುಬೇರ, ಈಶಾನ, ಪೂರ್ವ ಮೊದಲಾದ ದಿಕ್ಕುಗಳಲ್ಲಿ, ಅಂತೆಯೇ ಚಂದ್ರ, ಸೂರ್ಯ, ವಾಸುದೇವ, ಗಗನ ಇವುಗಳನ್ನು ಪೂಜಿಸಿ, ಬ್ರಾಹ್ಮಣಸಂತರ್ಪಣೆ ಮಾಡಿ, ಅವರಿಂದ ಆಶೀರ್ವಾದ ಪಡೆದು, ಸಾಯಂ ಸಂಧ್ಯಾವಂದನೆ ಮಾಡಿ, ಮಗುವನ್ನು ಆಭರಣಗಳಿಂದ ಅಲಂಕರಿಸಿ, ಮೊದಲು ಮಾಡಿರದಿದ್ದರೆ ಈಗ ಶಿಶುವಿಗೆ ಅಗ್ನಿ, ಚಂದ್ರ ಮತ್ತು ಗೋವುಗಳ ದರ್ಶನ ಮಾಡಿಸಿ, ಕುದುರೆ ಅಥವಾ ಬೇರೆ ವಾಹನದ ಮೇಲಿರುವ ಶಿಶುವನ್ನು ಮಾವ ಅಥವಾ ದಾಯಿಯು ತಿರುಗಾಡಿಸಬೇಕು. ಹೆಂಡತಿ, ಮಗ, ಬ್ರಾಹ್ಮಣರು, ಬಂಧುಗಳು ಮುಂತಾದವರೊಡನೆ ವಾದ್ಯಘೋಷದಿಂದ ಕೂಡಿ **"ಕನಿಕ್ರದ..."** ಮುಂತಾದ ಮಂತ್ರಗಳನ್ನು ಹೇಳುತ್ತ ಮನೆಯಿಂದ ಹೊರಬಂದು ಮುಂದೆ ಹೇಳುವ ಮಂತ್ರವನ್ನು ಪಠಿಸಬೇಕು.

**ಓಂ ಕನಿಕ್ರದಜ್ಜನುಷಂ .......... ಋಕ್ ೩ ಓಂ ಪ್ರದಕ್ಷಿಣಿದಭಿ .......... ಋಕ್ ೨ ॥ ಓಂ ಆವದಂಸ್ತ್ವ .......... ಋಕ್ ೧ ॥ ಇತ್ಯಾದಿ ಶಕುಂತಾದಿ ಸುಮಂಗಲಸೂಕ್ತಂ ಪಠನ್ ಗೃಹಾದ್ಬಹಿರ್ಗತ್ವಾ ಮಂತ್ರಮೇತಮುದೀರಯೇತ್ ॥**

**ಚಂದ್ರಾರ್ಕಯೋರ್ದಿಶೀಶಾನಾಂ ದಿಶಾಂ ಚ ಗಗನಸ್ಯ ಚ ॥ ನಿಕ್ಷೇಪಾರ್ಥಮಿಮಂ ದದ್ಮಿತೇ (ऽಮುಂ) ತ್ವಾಂ ರಕ್ಷಂತು ಸರ್ವದಾ ॥ ಅಪ್ರಮತ್ತಂ ಪ್ರಮತ್ತಂ ವಾ ದಿವಾರಾತ್ರಾವಥಾಪಿ ವಾ ॥ ರಕ್ಷಂತು ಸತತಂ ಸರ್ವೇ ದೇವಾಃ ಶಕ್ರಪುರೋಗಮಾಃ ॥ ಏವಂ ಶಿಶುರಕ್ಷಣಾರ್ಥಂ ದೇವಾನ್ ಸಂಪ್ರಾರ್ಥ್ಯ ವಿಷ್ಣುಶಿವಾಲಯಯೋರನ್ಯತರದ್ಬಂಧುಗೃಹಂ ವಾ ಗತ್ವಾ ತತ್ರ ದೇವಂ ಸುಮಂಗಲವಾದ್ಯಘೋಷ ಪುಷ್ಪೋಪಹಾರಾದಿಭಿಃ ಪ್ರಪೂಜ್ಯ ॥ ಗೋಮಯಾದ್ಯನುಲಿಪ್ತ ಚತುರಪ್ರದೇಶೇ ಧಾನ್ಯಾದಿ ನಿಧಾಯ ತತ್ರ ಶಿಶುಮಾಸಯಿತ್ವಾ ಮಂತ್ರೇಣ ರಕ್ಷಾಂ ಕುರ್ಯಾತ್ ॥ ಮಂತ್ರಸ್ತು ॥ ತ್ರ್ಯಂತಕಮಿತ್ಯಸ್ಯ ವಸಿಷ್ಠೋ ಮೃತ್ಯುಂಜಯಸ್ತ್ರ್ಯಂಬಕೋಽನುಷ್ಟುಪ್ ॥ ಶಿಶೋಃ ರಕ್ಷಾಯಾಂ ವಿನಿಯೋಗಃ ॥ ಓಂ ಹೌಂಜೂಂಸಃ ಓಂ ಭೂರ್ಭುವಃ ಸ್ವಃ ಓಂ ತ್ರ್ಯಂಬಕಂ ಯಜಾಮಹೇ ಸುಗಂಧಿಂ ....॥ ಓಂ ಸ್ವಃ ಭುಃ ಓಂ ಸಃ ಜೂಂ ಓಂ ಇತ್ಯೇವಂ ರೂಪಂ ಮೃತಸಂಜೀವಿನೀಮಂತ್ರಂ ಜಪನ್ ವಿಭೂತ್ಯಾಕ್ಷತೈರ್ವಾಮೂರ್ಧ್ನಿ ಲಲಾಟೇ ಚ ರಕ್ಷಾಂ ಕೃತ್ವಾ ॥**

---

"**ಚಂದ್ರಾರ್ಕಯೋರ್ದಿಶೀಶಾನಾಂ ....**" ಎಂಬ ಮಂತ್ರವನ್ನು ಹೇಳಿ ಮಗುವಿನ ರಕ್ಷಣೆ ಮಾಡಬೇಕೆಂದು ದೇವತಾಪ್ರಾರ್ಥನೆ ಮಾಡಬೇಕು. ಆಮೇಲೆ ಊರಿನ ವಿಷ್ಣು ಅಥವಾ ಶಿವದೇವಾಲಯದ ಇಲ್ಲವೇ ಯಾವನಾದರೊಬ್ಬ ಬಂಧುವಿನ ಮನೆಗೆ ಹೋಗಿ ಅಲ್ಲಿ ದೇವರನ್ನು ಮಂಗಲವಾದ್ಯಘೋಷ, ಪುಷ್ಪ ನೈವೇದ್ಯಾದಿಗಳಿಂದ ಪೂಜಿಸಬೇಕು.

ಆ ಬಳಿಕ ಗೋಮಯವನ್ನು ಲೇಪಿಸಿದ ಚೌಕಾಕಾರದ ಸ್ಥಳದಲ್ಲಿ ಧಾನ್ಯರಾಶಿಯನ್ನು ಹಾಕಿ ಅದರ ಮೇಲೆ ಮಗುವನ್ನು ಕುಳ್ಳಿರಿಸಿ, "**ಓಂ ಹೌಂಜೂಂಸಃ .... ತ್ರ್ಯಬಕಂ**" ಎಂಬ ಮೃತಸಂಜೀವಿನೀ ಮಂತ್ರವನ್ನು ಪಠಿಸಿ ವಿಭೂತಿ ಅಥವಾ ಅಕ್ಷತೆಗಳನ್ನು ಶಿಶುವಿನ ಲಲಾಟ ಇಲ್ಲವೇ ತಲೆಯ ಮೇಲೆ ಹಾಕಿ ರಕ್ಷೆಯನ್ನು ಕೊಡಬೇಕು.

**ಅಪೂಪಾದಿಭಿರ್ಭೂತೇಶಾನಂ ಗಣೇಶಮಭ್ಯರ್ಚ್ಯ ಶಿಶುಂ ಭಕ್ಷ್ಯಾದಿಭಿ-ಸ್ತೋಷಯಿತ್ವಾ ಆಶಿಷೋ ವಾಚಯಿತ್ವಾ ದೇವತಾಪ್ರಣಾಮಂ ಪ್ರದಕ್ಷಿಣತ್ರಯಂ ಚ ಶಿಶುನಾ ಕಾರಯಿತ್ವಾ ಮಾತುಲಾದ್ಯಾಸನ್ನ ಬಂಧುಗೃಹೇ ಪೂರ್ವವನ್ನೀತ್ವಾ ತತ್ರ ದಾನೋಪಹಾರಾದಿಭಿಃ ಶಿಶುಂ ತೋಷಯಿತ್ವಾ ಸ್ವಗೃಹಂ ಗತ್ವಾ ಬ್ರಾಹ್ಮಣೈ ರಾಶಿಷೋ ವಾಚಯಿತ್ವಾ ತೇಭ್ಯಃ ಸುವಾಸಿನೀಭ್ಯಶ್ಚ ಯಥಾಶಕ್ತಿ ದಕ್ಷಿಣಾಂ ದತ್ವಾ ಬಂಧುಭಿಃ ಸಹ ಭುಂಜೀತ ॥**

**ಕುಮಾರ್ಯಾ ಅಪಿ ಏತತ್ಸಮಾನಂ ॥ ಹೋಮೋಽತ್ರಕೃತಾಕೃತಃ ॥ ಹೋಮಪಕ್ಷೇ ಶಿಶೋರಲಂಕರಣಾನಂತರಂ ಲೌಕಿಕಾಗ್ನಿಂ ಪ್ರತಿಷ್ಠಾಪ್ಯ ಜಾತಕರ್ಮ-ವದನಾದೇಶದೇವತಾಭ್ಯೋ ಹುತ್ವಾ ಅಗ್ನಿಚಂದ್ರದರ್ಶನಾದಿಸ್ವಗೃಹಗಮನಾಂತಂ ಕೃತ್ವಾ ಸ್ವಿಷ್ಟಕೃದಾದಿ ಹೋಮಶೇಷಂ ಸಮಾಪ್ಯ ಬ್ರಾಹ್ಮಣಾಶೀರ್ವಾದಾದಿ ಕಾರಯೇ-ದಿತಿ ಕ್ರಮಃ ॥**

**॥ ಇತಿ ನಿಷ್ಕ್ರಮಣ ಪ್ರಯೋಗಃ ॥**

---

ಅಪ್ಪಕಜ್ಜಾಯ ಮೊದಲಾದವುಗಳಿಂದ ಭೂತೇಶ ಗಣೇಶ ಇವರ ಪೂಜೆಯನ್ನು ಮಾಡಿ, ಒಳ್ಳೆಯ ತಿಂಡಿಗಳನ್ನಿತ್ತು ಮಗುವನ್ನು ಸಂತೋಷಪಡಿಸಿ, ಆಶೀರ್ವಾದಗಳನ್ನು ಹೇಳಿಸಿ, ಮಗುವಿನಿಂದ ದೇವರಿಗೆ ನಮಸ್ಕಾರ ಹಾಗೂ ಮೂರು ಪ್ರದಕ್ಷಿಣೆಗಳನ್ನು ಮಾಡಿಸಿ, ಮಾವ ಮೊದಲಾದ ಸಮೀಪದ ಬಂಧುಗಳ ಮನೆಗೆ ಶಿಶುವನ್ನು ಕೊಂಡೊಯ್ದು ಅಲ್ಲಿ ಮೊದಲಿನಂತೆ ದಾನ ಉಪಹಾರಾದಿಗಳಿಂದ ಅದನ್ನು ಸಂತೋಷಪಡಿಸಿ ತನ್ನ ಮನೆಗೆ ಕರೆತಂದು, ಬ್ರಾಹ್ಮಣರಿಂದ ಆಶೀರ್ವಾದ ಮಾಡಿಸಿ ಆ ಬ್ರಾಹ್ಮಣರಿಗೂ, ಸುವಾಸಿನಿಯರಿಗೂ ಯಥಾಶಕ್ತಿ ದಕ್ಷಿಣೆಯನ್ನು ಕೊಟ್ಟು ಬಂಧುಗಳೊಡನೆ ಊಟಮಾಡಬೇಕು.

ಹೆಣ್ಣುಮಗುವಿಗೂ ಇದೇ ಕ್ರಮವನ್ನು ಅನುಸರಿಸಬೇಕು. ಈ ಸಂಸ್ಕಾರದಲ್ಲಿ ಹೋಮವನ್ನು ಮಾಡಲೂಬಹುದು, ಮಾಡದಿರಲೂಬಹುದು. ಹೋಮ ಮಾಡುವುದಾದರೆ ಶಿಶುವಿಗೆ ಅಲಂಕಾರ ಮಾಡಿದ ನಂತರ **"ಲೌಕಿಕ"** ಅಗ್ನಿಯನ್ನು ಪ್ರತಿಷ್ಠಾಪಿಸಿ, ಜಾತಕರ್ಮದಲ್ಲಿ ಹೇಳಿದಂತೆ ಹೋಮಕಾರ್ಯವನ್ನು ಮಾಡಿ ಅಗ್ನಿ, ಚಂದ್ರ ಮೊದಲಾದವರ ದರ್ಶನ ಮಾಡಿಸಿ, ಮನೆಗೆ ಬಂದು ಸ್ವಿಷ್ಟಕೃದಾದಿ ಹೋಮಶೇಷವನ್ನು ಮಾಡಿ ಮುಗಿಸಬೇಕು.

**॥ ನಿಷ್ಕ್ರಮಣ ಸಂಸ್ಕಾರ ಸಮಾಪ್ತ ॥**

# ॥ ಉಪವೇಶನವಿಧಿಃ ॥

॥ ಶ್ರೀಃ ॥ ಪಂಚಮೇ ಮಾಸಿ ಶುಕ್ಲಪಕ್ಷೇ ಜ್ಯೋತಿಃಶಾಸ್ತ್ರೋಕ್ತಶುಭ-ತಿಥ್ಯಾದೌ ಪೂರ್ವಾಹ್ಣೇ ಸ್ವಸ್ತಿವಾಚನಂ ಕೃತ್ವಾ ವರಾಹಪೃಥಿವೀಗುರುದೇವ-ದ್ವಿಜಾನ್ ಪೂಜಯಿತ್ವಾ ಭೂಭಾಗಮುಪಲಿಪ್ಯ ತತ್ರ ಮಂಡಲಂ ಕೃತ್ವಾ ಶಂಖ-ತೂರ್ಯಾದಿ ಮಾಂಗಲಿಕಧ್ವನೌ ಕ್ರಿಯಮಾಣೇ ಭೂಮೌ ಶಿಶುಮುಪವೇಶ-ಯೇದೇಭಿರ್ಮಂತ್ರೈಃ ॥ ರಕ್ಷೈನಂ ವಸುಧೇ ದೇವಿ ಸದಾ ಸರ್ವಗತಂ ಶುಭೇ ॥ ಆಯುಃ ಪ್ರಮಾಣಂ ನಿಖಿಲಂ ನಿಕ್ಷಿಪಸ್ವ ಹರಿಪ್ರಿಯೇ ॥ ಅಚಿರಾದಾಯುಷಸ್ತ್ವಸ್ಯ ಯೇ ಕೇಚಿತ್ಪರಿಪಂಥಿನಃ । ಜೀವಿತಾರೋಗ್ಯವಿತ್ತೇಷು ನಿರ್ದಹಸ್ವಾಚಿರೇಣ ತಾನ್ ॥ ಧಾರಿಣ್ಯಶೇಷಭೂತಾನಾಂ ಮಾತಸ್ತ್ವಮಧಿಕಾಹ್ಯಸಿ ॥ ಕುಮಾರಂ ಪಾಹಿ ಮಾತಸ್ತ್ವಂ ಬ್ರಹ್ಮಾ ತದನುಮನ್ಯತಾಂ ॥ ಇತಿ ॥ ತತೋ ಬ್ರಾಹ್ಮಣಾನ್ಪೂಜಯಿತ್ವಾ ಆಶಿಷೋ ವಾಚಯಿತ್ವಾ ನೀರಾಜನಾದ್ಯುತ್ಸವಂ ಕುರ್ಯಾತ್ ॥ ಏವಂ ಕುಮಾರ್ಯಾ ಅಪಿ ॥ ಇತ್ಯುಪವೇಶನಂ ॥

॥ ಇತಿ ಉಪವೇಶನವಿಧಿಃ ॥

---

**ಉಪವೇಶನವಿಧಿಃ:-** ಶಿಶುವನ್ನು ಮೊದಲ ಬಾರಿ ನೆಲದ ಮೇಲೆ ಕುಳ್ಳಿರಿಸುವುದು. ಐದನೆಯ ತಿಂಗಳ ಶುಕ್ಲಪಕ್ಷದಲ್ಲಿ ಒಳ್ಳೆಯ ಮುಹೂರ್ತ ನೋಡಿ ಪೂರ್ವಾಹ್ಣ ಸ್ವಸ್ತಿವಾಚನ ಮಾಡಿಸಿ ವರಾಹ, ಭೂಮಿ, ಗುರುದೇವ, ಬ್ರಾಹ್ಮಣರನ್ನು ಪೂಜಿಸಿ, ಗೋಮಯದಿಂದ ಭೂಮಿಯನ್ನು ಲೇಪಿಸಿ ಅಲ್ಲಿ ಮಂಡಲಮಾಡಿ ಮಂಗಲವಾದ್ಯದೊಂದಿಗೆ **"ರಕ್ಷೈನಂ ವಸುಧೇ...."** ಮಂತ್ರವನ್ನು ಹೇಳಿ ಶಿಶುವನ್ನು ಕುಳ್ಳಿರಿಸಬೇಕು. ಆಮೇಲೆ ಬ್ರಾಹ್ಮಣ ಪೂಜೆಮಾಡಿ ನೀರಾಜನ ಎತ್ತಬೇಕು. ಹೆಣ್ಣುಮಕ್ಕಳಿಗೂ ಇದೇ ಕ್ರಮ.

# ॥ ಅನ್ನಪ್ರಾಶನಪ್ರಯೋಗಃ ॥

॥ ಶ್ರೀಃ ॥ ಯಜಮಾನಃ ಆಚಮ್ಯ ಪ್ರಾಣಾನಾಯಮ್ಯ ದೇಶ ಕಾಲೌ ಸ್ಮೃತ್ವಾ ॥ ಮಮಾಸ್ಯ ಶಿಶೋರ್ಮಾತೃಗರ್ಭಮಲಪ್ರಾಶುದ್ಧ್ಯನ್ನಾದ್ಯಬ್ರಹ್ಮ-ವರ್ಚಸ ಇಂದ್ರಿಯಾಯುರ್ಲಕ್ಷಣ ಫಲಸಿದ್ಧಿ ಬೀಜಗರ್ಭಸಮುದ್ಭವೈನೋ ನಿಬರ್ಹಣದ್ವಾರಾ ಶ್ರೀಪರಮೇಶ್ವರಪ್ರೀತ್ಯರ್ಥಂ ಅನ್ನಪ್ರಾಶನಾಖ್ಯಂ ಕರ್ಮ ಕರಿಷ್ಯೇ ಇತಿ ಸಂಕಲ್ಪ್ಯ ॥ ತದಂಗಗಣಪತಿಪೂಜನ ಸ್ವಸ್ತಿವಾಚನಾಭ್ಯುದಯಿಕೇ ಕೃತ್ವಾ ಶಿಶುಮಲಂಕೃತ್ಯ ಪೂಜೋಪಹಾರಾದಿಭಿರಿಷ್ಟದೇವತಾಮಭ್ಯರ್ಚ್ಯ ॥ ತತ್ಪುರತಃ ಸ್ವದಕ್ಷಿಣೇ ಶುಭ್ರವಸ್ತ್ರೋಪರಿ ಮಾತುರುತ್ಸಂಗೇ ಪ್ರಾಙ್ಮುಖೋಪವಿಷ್ಟಸ್ಯ ಶಿಶೋಃ ಪ್ರಥಮಾನ್ನಪ್ರಾಶನಂ ಕಾರಯೇತ್ ॥

ದಧಿಮಧುಘೃತಮಿಶ್ರಮನ್ನಂ ಕಾಂಚನೇ ಕಾಂಸ್ಯೇ ವಾ ಭಾಜನೇ ನಿಕ್ಷಿಪ್ಯ ॥ ಅನ್ನಪತಯ ಇತ್ಯಸ್ಯ ನಲಕೂಬರೋನ್ನಪತಿರುಪರಿಷ್ಟಾದ್ಬೃಹತೀ ॥ ಶಿಶೋರನ್ನಪ್ರಾಶನೇ ವಿನಿಯೋಗಃ ॥ ಓಂ ಅನ್ನಪತೇನ್ನಸ್ಯನೋ ಧೇಹ್ಯನಮೀ-ವಸ್ಯಶುಷ್ಮಿಣಃ ॥ ಪ್ರಪ್ರದಾತಾರಂ ತಾರಿಷ ಊರ್ಜಂ ನೋಧೇಹಿ ದ್ವಿಪದೇ

---

**ಅನ್ನಪ್ರಾಶನಪ್ರಯೋಗಃ-** ಯಜಮಾನನು ಆಚಮನ ಪ್ರಾಣಾಯಾಮಗಳನ್ನು ಮಾಡಿ ದೇಶಕಾಲಗಳನ್ನು ಸ್ಮರಿಸಿ **"ಮಮಾಸ್ಯ ಶಿಶೋಃ .... ಕರಿಷ್ಯೇ"** ಎಂದು ಸಂಕಲ್ಪಮಾಡಿ ಇದರ ಅಂಗವಾಗಿ ಗಣಪತಿಪೂಜೆ, ಸ್ವಸ್ತಿವಾಚನಾದಿ ಕರ್ಮಗಳನ್ನು ಮಾಡಿ ಮಗುವನ್ನು ಅಲಂಕರಿಸಿ, ಇಷ್ಟದೇವತೆಯನ್ನು ಪೂಜಿಸಿ ಅದರ ಮುಂದೆ ತನ್ನ ಬಲಭಾಗದಲ್ಲಿ ಕುಳಿತ ಪತ್ನಿಯ ಮಡಿಲಲ್ಲಿ ಪೂರ್ವಾಭಿಮುಖವಾಗಿ ಮಗುವನ್ನು ಕುಳ್ಳಿರಿಸಿ ಮೊದಲ ಅನ್ನಪ್ರಾಶನ ಮಾಡಿಸಬೇಕು. ಮೊಸರು, ಜೇನು ಮತ್ತು ತುಪ್ಪವನ್ನು ಬೆರೆಸಿದ ಅನ್ನವನ್ನು ಚಿನ್ನದ ಅಥವಾ ಕಂಚಿನ ಪಾತ್ರೆಯಲ್ಲಿಟ್ಟು **"ಅನ್ನಪತಯೇ...."** ಎಂಬ ಮಂತ್ರವನ್ನು ಹೇಳಿ ಸುವರ್ಣವನ್ನು ಹಿಡಿದಿರುವ ಕೈಯಿಂದ ಮೊದಲನೆಯ ತುತ್ತನ್ನು ಉಣ್ಣಿಸಿ, ಆಮೇಲೆ ಹೊಟ್ಟೆತುಂಬ ಊಟಮಾಡಿಸಬೇಕು. ಬಳಿಕ ಮುಖ ತೊಳೆದು ಮಗುವನ್ನು ನೆಲದ ಮೇಲೆ ಕುಳ್ಳಿರಿಸಿ ಅದರ ಮುಂದೆ ವಸ್ತ್ರ, ಶಸ್ತ್ರ, ಪುಸ್ತಕ, ಲೇಖನೀ, ಚಿನ್ನ, ಬೆಳ್ಳಿ, ಕರಕೌಶಲದ ಇತರ ವಸ್ತು ಮುಂತಾದುವುಗಳನ್ನಿಟ್ಟು ಜೀವಿಕಾ

**ಚತುಷ್ಪದೇ ॥ ಇತಿ ಮಂತ್ರೇಣ ಸಸುವರ್ಣಹಸ್ತೋನ್ನಮಾದಾಯ ಪ್ರಥಮ-ಕವಲಂ ಪ್ರಾಶಯಿತ್ವಾ ಯಥೇಷ್ಟಂ ಭೋಜಯಿತ್ವಾ ಮುಖಂ ಪ್ರಕ್ಷಾಲ್ಯ ಬಾಲಂ ಭೂಮಾವುಪವೇಶ್ಯ ತದಗ್ರೇ ಪುಸ್ತಕಶಸ್ತ್ರವಸ್ತ್ರಾದಿಶಿಲ್ಪಾನಿ ವಿನ್ಯಸ್ಯ ಜೀವಿಕಾಪರೀಕ್ಷಾಂ ಕುರ್ಯಾತ್ ॥ ಶಿಶುಃ ಸ್ವೇಚ್ಛಯಾ ಯತ್ಪ್ರಥಮಂ ಸ್ಪೃಶೇತ್ ಸಾಸ್ಯ ಜೀವಿಕೇತಿ ವಿದ್ಯಾತ್ ॥ ಹೋಮಕರಣಪಕ್ಷೇ ಜಾತಕರ್ಮವತ್ ಶುಚನಾಮಾನಮಗ್ನಿಂ ಪ್ರತಿಷ್ಠಾಪ್ಯ ಪ್ರಧಾನಹೋಮಾಂತೇ ಅನ್ನಪ್ರಾಶನಜೀವಿಕಾಪ ರೀಕ್ಷೇ ॥ ತತಃ ಸ್ವಿಷ್ಟಕೃದಾದಿ ಹೋಮಶೇಷಂ ಸಮಾಪ್ಯಯಥಾಶಕ್ತಿ ಬ್ರಾಹ್ಮಣಾನ್ ಭೋಜಯಿತ್ವಾ ದಕ್ಷಿಣಾಂ ದತ್ವಾ ಆಶಿಷೋ ವಾಚಯಿತ್ವಾ ಬಂಧುಭಿಃ ಸಹ ಭುಂಜೀತ ॥**

**॥ ಇತಿ ಅನ್ನಪ್ರಾಶನ ಸಂಸ್ಕಾರಃ ॥**

---

ಪರೀಕ್ಷೆಯನ್ನು ಮಾಡಬೇಕು. ಮಗುವು ಯಾವ ವಸ್ತುವನ್ನು ಮೊದಲಿಗೆ ಮುಟ್ಟುತ್ತದೋ ಅದನ್ನು ಹೊಂದಿಕೊಂಡು ಅವರ ಮುಂದಿನ ಜೀವನ ರೂಪಿತವಾಗುತ್ತದೆಂದು ತಿಳಿಯಬೇಕು.

ಹೋಮಸಹಿತ ಅನ್ನಪ್ರಾಶನ ಮಾಡುವುದಾದರೆ **"ಶುಚಿ"** ಎಂಬ ಹೆಸರಿನ ಅಗ್ನಿಯನ್ನು ಪ್ರತಿಷ್ಠಾಪಿಸಿ ಇತರ ಎಲ್ಲ ಕ್ರಿಯಾಭಾಗಗಳನ್ನು ಜಾತಕರ್ಮದಲ್ಲಿ ಹೇಳಿದಂತೆ ಮಾಡಿ ಪ್ರಧಾನ ಹೋಮವಾದ ಮೇಲೆ ಅನ್ನಪ್ರಾಶನವನ್ನೂ ಜೀವಿಕಾ ಪರೀಕ್ಷೆಯನ್ನೂ ಮಾಡಬೇಕು. ಆಮೇಲೆ ಸ್ವಿಷ್ಟಕೃದಾದಿ ಹೋಮಶೇಷವನ್ನು ಮಾಡಿ ಬ್ರಾಹ್ಮಣರಿಗೆ ಭೋಜನ ದಕ್ಷಿಣಾದಿಗಳನ್ನು ಕೊಟ್ಟು ಆಶೀರ್ವಾದ ಪಡೆದು ಬಂಧುಗಳೊಡನೆ ಊಟಮಾಡಬೇಕು.

॥ ಅನ್ನಪ್ರಾಶನಪ್ರಯೋಗ ಸಮಾಪ್ತ ॥

# ॥ ವರ್ಧಾಪನ ಸಂಸ್ಕಾರಃ ॥

॥ ಶ್ರೀಃ ॥ ಯಜಮಾನಃ ಆಚಮ್ಯ ಪ್ರಾಣಾನಾಯಮ್ಯ ದೇಶಕಾಲೌ ಸ್ಮೃತ್ವಾ ಮಮ (ಸೂನೋರ್ವಾ) ಅಬ್ದಪೂರ್ತಿಜನ್ಮದಿವಸೇ ಆಯುರಭಿವೃದ್ಧಿ-ದ್ವಾರಾ ಶ್ರೀಪರಮೇಶ್ವರಪ್ರೀತ್ಯರ್ಥಂ ದೂರ್ವಾಹೋಮಂ ಕರಿಷ್ಯೇ ಇತಿ ಸಂಕಲ್ಪ್ಯ ವಿಧಿವದಗ್ನಿಂ (ಬಲವರ್ಧನನಾಮಕಂ) ಪ್ರತಿಷ್ಠಾಪ್ಯ ಪುನರ್ದೇಶಕಾಲೌ ಸಂಕೀರ್ತ್ಯ ಸಮಿಧಾವಾದಾಯ ಅಸ್ಮಿನ್ ದೂರ್ವಾಹೋಮೇ ದೇವತಾಪರಿಗ್ರಹೇತ್ಯಾದಿ ಚಕ್ಷುಷೀ ಆಜ್ಯೇನೇತ್ಯಂತಮುಕ್ತ್ವಾ ಪ್ರಧಾನದೇವತಾಂ ಮೃತ್ಯುಂಜಯಮ-ಷ್ಟೋತ್ತರಶತಂ ದೂರ್ವಾದ್ರವ್ಯೇಣ ಶೇಷೇಣ ಸ್ವಿಷ್ಟಕೃತಮಿತ್ಯಾದ್ಯಾಜ್ಯ ಭಾಗಾಂತಂ ಕೃತ್ವಾ ದಧಿಮಧುಘೃತಾಕ್ತಂ ವಾ ದೂರ್ವಾತ್ರಯಂ ಗೃಹೀತ್ವಾ ॥ ತ್ರ್ಯಂಬಕ ಮಿತ್ಯಸ್ಯ ವಸಿಷ್ಠೋ ಮೃತ್ಯುಂಜಯಸ್ತ್ರ್ಯಂಬಕೋಽನುಷ್ಟುಪ್ ॥ ದೂರ್ವಾ ಹೋಮೇ ವಿನಿಯೋಗಃ ॥ ಓಂ ಹೌಂಜೂಂಸಃ । ಓಂ ಭೂರ್ಭುವಃ ಸ್ವಃ ॥ ಓಂ ತ್ರ್ಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಂ ॥ ಉರ್ವಾರು-ಕಮಿವ ಬಂಧನಾನ್ ಮೃತ್ಯೋರ್ಮುಕ್ಷೀಯಮಾಮೃತಾತ್ ॥ ಓಂ ಸ್ವಃ ಭುವಃ ಭೂಃ ॥ ಓಂ ಸಃ ಜೂಂ ಹೌ ಓಂ ॥ ಇತ್ಯನೇನ ಮಂತ್ರೇಣ ಅಷ್ಟೋ-

---

**ವರ್ಧಾಪನವಿಧಿಃ:-** ಯಜಮಾನನು ಆಚಮನ ಪ್ರಾಣಾಯಾಮ ದೇಶಕಾಲ ಸ್ಮರಣೆಗಳನ್ನು ಮಾಡಿ **"ಮಮ ....... ಕರಿಷ್ಯೇ"** ಎಂದು ಸಂಕಲ್ಪಮಾಡಿ **"ಬಲವರ್ಧನ"** ಅಗ್ನಿಯನ್ನು ಪ್ರತಿಷ್ಠಾಪಿಸಿ ಅನ್ವಾಧಾನಾದಿ ಕರ್ಮಗಳನ್ನು ಸ್ಥಾಲೀಪಾಕದಲ್ಲಿ ಹೇಳಿದಂತೆ ಮಾಡಬೇಕು. ಮೊಸರು ಜೇನುತುಪ್ಪ ಸವರಿದ ಮೂರು ಮೂರು ದೂರ್ವೆಗಳ ಒಂದೊಂದು ಕಟ್ಟನ್ನು ತಯಾರಿಸಿ **"ಓಂ ಹೌಂಜೂಂಸಃ...."** **"ತ್ರ್ಯಂಬಕಂ"** ಎಂಬ ಮಂತ್ರದಿಂದ ನೂರಎಂಟು ಆಹುತಿಗಳನ್ನು ಕೊಡಬೇಕು. ಸ್ವಿಷ್ಟಕೃದಾದಿ ಹೋಮಶೇಷವನ್ನು ಮಾಡಿ ವಿಧಿವತ್ತಾಗಿ ಗ್ರಹಯಜ್ಞವನ್ನು ಮಾಡಿ ಆಯುಷ್ಯ ಚರುಹೋಮವನ್ನು ಮಾಡಬೇಕು. **"ಆಯುರಭಿವೃದ್ಧಿ ..."** ಎಂದು ಸಂಕಲ್ಪಿಸಿ ಅನ್ವಾಧಾನಾದಿ ಆಜ್ಯಭಾಗಾಂತ ಕರ್ಮಗಳನ್ನು ಮಾಡಿ ಪ್ರಧಾನಹೋಮವನ್ನು ಈ ಮುಂದಿನ ಮಂತ್ರಗಳಿಂದ ಮಾಡುವುದು.

ತ್ತರಶತಂ ಹುತ್ವಾ ಸ್ವಿಷ್ಟಕೃದಾದಿ ಹೋಮಶೇಷಂ ಸಮಾಪಯೇತ್ ॥ ತತೋ ವಿಧಿವದ್ಗೃಹಯಜ್ಞಂ ಕೃತ್ವಾ ಆಯುಷ್ಯಚರುಹೋಮಂ ಸಂಕಲ್ಪಪೂರ್ವಕಂ ಕುರ್ಯಾತ್ ॥ ತತ್ರಾಯಂ ಕ್ರಮಃ ॥ ದೇಶಕಾಲೌ ಸಂಕೀರ್ತ್ಯ ಆಯುರಭಿವೃದ್ಧಿದ್ವಾರಾ ಶ್ರೀಪರಮೇಶ್ವರಪ್ರೀತ್ಯರ್ಥಂ ಆಯುಷ್ಯಚರುಹೋಮಂ ಕರಿಷ್ಯೇ ॥ ಇತಿ ಸಂಕಲ್ಪ್ಯ ಸ್ಥಂಡಿಲೇ ಬಲವರ್ಧನನಾಮಾನಮಗ್ನಿಂ ಪ್ರತಿಷ್ಠಾಪ್ಯ ಆಯುಷ್ಯಚರುಹೋಮೇ ದೇವತಾಪರಿಗ್ರಹಾರ್ಥಮಿತ್ಯಾದಿ ಚಕ್ಷುಷೀ ಆಜ್ಯೇನೇತ್ಯಂತಮುಕ್ತ್ವಾ ವಿಶ್ವಾನ್ ದೇವಾನ್ ದಶವಾರಂ ಅಗ್ನಿಂ ಷೋಡಶವಾರಂ ಜಾತವೇದಸಮಗ್ನಿಮೇಕವಾರಂ ಚರುದ್ರವ್ಯೇಣ ಶೇಷೇಣೇತ್ಯಾದ್ಯಾಜ್ಯ ಭಾಗಾಂತಂ ಕೃತ್ವಾ ॥

ಆ ನೋಭದ್ರಾ ಇತಿ ದಶರ್ಚಸ್ಯ ಸೂಕ್ತಸ್ಯ ಗೌತಮೋ ವಿಶ್ವೇದೇವಾ ಆದ್ಯಾಃ ಪಂಚ ಸಪ್ತಮೀ ಚ ಜಗತ್ಯಃ ಷಷ್ಠೀ ವಿರಾಟ್‌ಸ್ಥಾನಾ ಅಷ್ಟಮ್ಯಾದ್ಯಾಸ್ತಿಸ್ರಃ ತ್ರಿಷ್ಟುಭಃ ॥ ಇಮಂಸ್ತೋಮಮಿತ್ಯಸ್ಯ ಷೋಡಶರ್ಚಸ್ಯಾಂಗಿರಸಃ ಕುತ್ಸೋಽಗ್ನಿರಾದಿತಶ್ಚತುರ್ದಶ ಜಗತ್ಯಃ ಅಂತ್ಯೇ ದ್ವೇ ತ್ರಿಷ್ಟುಭೌ ॥ ಪೂರ್ವೋರ್ಧೇದೇವಾ ಭವತ್ವಿತ್ಯಾದಿತ್ರಯಃ ಪಾದಾ ದೇವದೇವತ್ಯಾಃ ॥ ತನ್ನೋ ಮಿತ್ರೋರ್ಧರ್ಚೋರ್ಲಿಂಗೋಕ್ತದೇವತೋಽಗ್ನಿದೇವತಶ್ಚ ॥ ಜಾತವೇದಸ ಇತ್ಯಸ್ಯ ಮಾರೀಚಃ ಕಶ್ಯಪೋ ಜಾತವೇದಾ ಅಗ್ನಿಸ್ತ್ರಿಷ್ಟುಬ್ ॥ ಸರ್ವೇಷಾಂ ಚರುಹೋಮೇ ವಿನಿಯೋಗಃ ॥

ಓಂ ಆನೋಭದ್ರಾಃ ಕ್ರತವೋ ಯಂತು ವಿಶ್ವತೋದಬ್ಧಾಸೋ ಅಪರೀತಾಸಉದ್ಭಿದಃ ॥ ದೇವಾನೋಯಥಾಸದಮಿದ್ವೃಧೇ ಅಸನ್ನಪ್ರಾಯುವೋ ರಕ್ಷಿತಾರೋ ದಿವೇ ದಿವೇ ಸ್ವಾಹಾ ॥ ದೇವಾನಾಂ ಭದ್ರಾಸುಮತಿರ್ಋಜೂಯತಾಂ ದೇವಾನಾಂ ರಾತಿರಭಿನೋ ನಿವರ್ತತಾಂ ॥ ದೇವಾನಾಂ ಸಖ್ಯಮುಪಸೇದಿಮಾವಯಂ ದೇವಾನ ಆಯುಃ ಪ್ರತಿರಂತು ಜೀವಸೇ ಸ್ವಾಹಾ ॥ ೨ ॥ ತಾನ್ ಪೂರ್ವಯಾನಿವಿದಾಹೂಮಹೇವಯಂಭಗಂಮಿತ್ರಮದಿತಿಂ ದಕ್ಷಮ-

ಸ್ರಿಧಂ ॥ ಅರ್ಯಮಣಂ ವರುಣಂ ಸೋಮಮಶ್ವಿನಾಸರಸ್ವತೀನಃಸುಭಗಾಮ-ಯಸ್ಕರತ್ ಸ್ವಾಹಾ ॥ ೩ ॥ ತನ್ನೋ ವಾತೋಮಯೋಭುವಾತುಭೇಷಜಂ ತನ್ಮಾತಾ ಪೃಥಿವೀ ತತ್ಪಿತಾ ದ್ಯೌಃ ॥ ತದ್ಗ್ರಾವಾಣಃ ಸೋಮಸುತೋಮ. ಯೋಭುವಸ್ತದಶ್ವಿನಾಶೃಣುತಂಧಿಷ್ಣ್ಯಾಯುವಂ ಸ್ವಾಹಾ ॥ ೪ ॥ ತಮೀಶಾನಂ ಜಗತಸ್ತಸ್ಥುಷಸ್ಪತಿಂ ಧಿಯಂಜಿನ್ವಮವಸೇಹೂಮಹೇವಯಂ ॥ ಪೂಷಾನೋಯ-ಥಾವೇದಸಾಮಸದ್ವೃಧೇರಕ್ಷಿತಾಪಾಯುರದಬ್ಧಃ ಸ್ವಸ್ತಯೇ ಸ್ವಾಹಾ ॥ ೫ ॥ ಸ್ವಸ್ತಿನ ಇಂದ್ರೋವೃದ್ಧಶ್ರವಾಃ ಸ್ವಸ್ತಿನಃ ಪೂಷಾ ವಿಶ್ವವೇದಾಃ ॥ ಸ್ವಸ್ತಿನ-ಸ್ತಾರ್ಕ್ಷ್ಯೋ ಅರಿಷ್ಟನೇಮಿಃ ಸ್ವಸ್ತಿನೋಬೃಹಸ್ಪತಿರ್ದಧಾತು ಸ್ವಾಹಾ ॥ ೬ ॥ ಪೃಷದಶ್ವಾಮರುತಃ ಪೃಶ್ನಿಮಾತರಃ ಶುಭಂ ಯಾವಾನೋವಿದಥೇಷುಜಗ್ಮಯಃ ॥ ಅಗ್ನಿಜಿಹ್ವಾಮನವಃ ಸೂರಚಕ್ಷಸೋ ವಿಶ್ವೇನೋ ದೇವಾ ಅವಸಾಗಮನ್ನಿಹ ಸ್ವಾಹಾ ॥ ೭ ॥ ಭದ್ರಂ ಕರ್ಣೇಭಿಃ ಶೃಣುಯಾಮದೇವಾ ಭದ್ರಂಪಶ್ಯೇಮಾಕ್ಷ-ಭಿರ್ಯಜತ್ರಾಃ ॥ ಸ್ಥಿರೈರಂಗೈಸ್ತುಷ್ಟುವಾಂಸಸ್ತನೂಭಿರ್ವ್ಯಶೇಮದೇವಹಿತಂ ಯದಾಯುಃ ಸ್ವಾಹಾ ॥ ೮ ॥ ಶತಮಿನ್ನುಶರದೋ ಅಂತಿದೇವಾಯತ್ರಾನಶ್ಚ-ಕ್ರಾಜರಸಂತನೂನಾಂ ॥ ಪುತ್ರಾಸೋಯತ್ರಪಿತರೋ ಭವಂತಿಮಾನೋಮಧ್ಯಾ-ರೀರಿಷತಾಯುರ್ಗಂತೋಃ ಸ್ವಾಹಾ ॥ ೯ ॥ ಅದಿತಿರ್ದ್ಯೌರದಿತಿರಂತರಿಕ್ಷಮದಿತಿ-ರ್ಮಾತಾಸಪಿತಾಸಪುತ್ರಃ ವಿಶ್ವೇದೇವಾ ಅದಿತಿಃ ಪಂಚಜನಾಅದಿತಿರ್ಜಾತಮ ದಿತಿರ್ಜನಿತ್ವಂ ಸ್ವಾಹಾ ॥ ೧೦ ॥ ವಿಶ್ವೇಭ್ಯೋ ದೇವೇಭ್ಯ ಇದಂ ನಮಮ ॥

ಓಂ ಇಮಂಸ್ತೋಮಮರ್ಹತೇಜಾತವೇದಸೇರಥಮಿವಸಂಮಹೇಮಾ-ಮನೀಷಯಾ ॥ ಭದ್ರಾಹಿನಃ ಪ್ರಮತಿರಸ್ಯಸಂಸದ್ಯಗ್ನೇಸಖ್ಯೇಮಾರಿಷಾ-ಮಾವಯಂ ತವ ಸ್ವಾಹಾ ॥ ೧ ॥ ಓಂ ಯಸ್ಮೈತ್ವಮಾಯಜಸೇಶಸಾಧತ್ಯನ-

---

ಈ ಹತ್ತು ಮಂತ್ರಗಳಿಂದ ಹತ್ತು ಆಹುತಿಗಳನ್ನು (ಚರುವಿನ) ಕೊಟ್ಟು "ವಿಶ್ವೇಭ್ಯೋದೇವೇಭ್ಯ ಇದಂ ನಮಮ" ಎಂದು ಹೇಳಬೇಕು.

ವಾರ್ಕ್ಷೇತಿದಧತೇಸುವೀರ್ಯಂ ॥ ಸತೂತಾವನ್ನೈನಮಶ್ನೋತ್ಯಂಹತಿರಗ್ನೇಸಖ್ಯೇ-
ಮಾರಿಷಾಮಾವಯಂ ತವ ಸ್ವಾಹಾ ॥ ೨ ॥ ಓಂ ಶಕೇಮತವಸಮಿಧಂ
ಸಾಧಯಾಧಿಯಸ್ತ್ವೇದೇವಾಹವಿರದಂತ್ಯಾಹುತಂ ॥ ತ್ವಮಾದಿತ್ಯಾಂ ಆವಹತಾನ್
ಹ್ಯೂ ೧ ಹಮಸ್ಯಗ್ನೇಸಖ್ಯೇಮಾರಿಷಾಮಾವಯಂ ತವ ಸ್ವಾಹಾ ॥ ೩ ॥ ಓಂ
ಭರಾಮೇಧ್ಮಂಕೃಣವಾಮಾಹವೀಂಷಿತೇಚಿತಯಂತಃ ಪರ್ವಣಾ ಪರ್ವಣಾ
ವಯಂ ॥ ಜೀವಾತವೇಪ್ರತರಂ ಸಾಧಯಾಧಿಯೋಗ್ನೇಸಖ್ಯೇಮಾರಿಷಾಮಾ-
ವಯಂ ತವ ಸ್ವಾಹಾ ॥ ೪ ॥ ಓಂ ವಿಶಾಂ ಗೋಪಾ ಅಸ್ಯಚರಂತಿ ಜಂತವೋ-
ಧಿಪಚ್ಚಯದುತ ಚತುಷ್ಪದಕ್ತುಭಿಃ ॥ ಚಿತ್ರಃಪ್ರಕೇತಽಉಷಸೋಮಹಾಂಽಅಸ್ಯ-
ಗ್ನೇಸಖ್ಯೇಮಾರಿಷಾಮಾವಯಂ ತವ ಸ್ವಾಹಾ ॥ ೫ ॥ ಓಂ ತ್ವಮಧ್ವರ್ಯು-
ರುತಹೋತಾಸಿ ಪೂರ್ವ್ಯಃ ಪ್ರಶಾಸ್ತಾಪೋತಾಜನುಷಾ ಪುರೋಹಿತಃ ॥ ವಿಶ್ವಾ-
ವಿದ್ವಾಂ ಆರ್ತ್ವಿಜ್ಯಾಧೀರ ಪುಷ್ಯಸ್ಯಗ್ನೇಸಖ್ಯೇಮಾರಿಷಾಮಾವಯಂ ತವ ಸ್ವಾಹಾ
॥ ೬ ॥ ಓಂ ವಿಶ್ವತಃ ಸುಪ್ರತೀಕಃ ಸದೃಙ್ಙಸಿದೂರೇಚಿತ್ಸಂತಳಿದಿವಾತಿರೋಚಸೇ ॥
ರಾತ್ರ್ಯಾಶ್ಚಿದಂಧೋಽ ಅತಿದೇವಪಶ್ಯಸ್ಯಗ್ನೇಸಖ್ಯೇಮಾರಿಷಾಮಾವಯಂ ತವ
ಸ್ವಾಹಾ ॥ ೭ ॥ ಓಂ ಪೂರ್ವೋದೇವಾಭವತು ಸುನ್ವತೋ ರಥೋಽಸ್ಮಾಕಂ-
ಶಂಸೋಽ ಅಭ್ಯಸ್ತುದೂಢ್ಯಃ ॥ ತದಾ ಜಾನೀತೋತಪುಷ್ಯತಾವಚೋಗ್ನೇಸಖ್ಯೇ-
ಮಾರಿಷಾಮಾವಯಂ ತವ ಸ್ವಾಹಾ ॥ ೮ ॥ ಓಂ ವಧೈರ್ದುಃ ಶಂಸಾಽ ಅಪ-
ದೂಢ್ಯೋಜಹಿದೂರೇವಾಯೇಽ ಅಂತಿವಾಕೇಚಿದತ್ರಿಣಃ ॥ ಅಥಾಯಜ್ಞಾಯ- ಗೃಣ
ತೇಸುಗಂಕೃಧ್ಯಗ್ನೇಸಖ್ಯೇಮಾರಿಷಾಮಾವಯಂ ತವ ಸ್ವಾಹಾ ॥ ೯ ॥ ಓಂ
ಯದಯುಕ್ಥಾಽ ಅರುಷಾ ರೋಹಿತಾರಥೇವಾತಜೂತಾವೃಷಭಸ್ಯೇವತೇರವಃ ॥
ಆದಿನ್ವಸಿವನಿನೋಧೂಮಕೇತುನಾಗ್ನೇಸಖ್ಯೇಮಾರಿಷಾಮಾವಯಂ ತವ ಸ್ವಾಹಾ
॥ ೧೦ ॥ ಓಂ ಅಧಸ್ವನಾದುತಬಿಭ್ಯುಃ ಪತತ್ರಿಣೋದ್ರಪ್ಸಾಯತ್ತೇಯ
ವಸಾದೋವ್ಯಸ್ಥಿರನ್ ॥ ಸುಗಂತತ್ತೇತಾವಕೇಭ್ಯೋರಥೇಭ್ಯೋಗ್ನೇಸಖ್ಯೇಮಾರಿ-

ಪಾಮಾವಯಂ ತವ ಸ್ವಾಹಾ ॥ ೧೧ ॥ ಓಂ ಅಯಂಮಿತ್ರಸ್ಯವರುಣಸ್ಯಧಾಯ-
ಸೇವಯಾತಾಂ ಮರುತಾಂ ಹೇಳೋ ಅದ್ಭುತಃ ಮೃಳಾಸುನೋಭೂತ್ವೇಷಾಂ
ಮನಃ ಪುನರಗ್ನೇಸಖ್ಯೇಮಾರಿಷಾಮಾವಯಂ ತವ ಸ್ವಾಹಾ ॥ ೧೨ ॥ ಓಂ
ದೇವೋದೇವಾನಾಮಸಿಮಿತ್ರೋ ಅದ್ಭುತೋವಸುರ್ವಸೂನಾಮಸಿಚಾರುರಧ್ವರೇ ॥
ಶರ್ಮನ್ ತ್ಸ್ಯಾಮತವಸಪ್ರಥಸ್ತಮೇಗ್ನೇಸಖ್ಯೇಮಾರಿಷಾಮಾವಯಂ ತವ
ಸ್ವಾಹಾ ॥ ೧೩ ॥ ಓಂ ತತ್ತೇ ಭದ್ರಂ ಯತ್ಸಮಿದ್ಧಃ ಸ್ವೇದಮೇಸೋಮಾ-
ಹುತೋಜರಸೇಮೃಳಯತ್ತಮಃ ॥ ದಧಾಸಿರತ್ನಂ ದ್ರವಿಣಂ ಚ ದಾಶುಷೇಗ್ನೇ-
ಸಖ್ಯೇಮಾರಿಷಾಮಾವಯಂ ತವ ಸ್ವಾಹಾ ॥ ೧೪ ॥ ಓಂ ಯಸ್ಮೈತ್ವಂಸುದ್ರವಿ-
ಣೋದದಾಶೋನಾಗಾಸ್ತ್ವಮದಿತೇ ಸರ್ವತಾತಾ ॥ ಯಂ ಭದ್ರೇಣಶವಸಾ-
ಚೋದಯಾಸಿಪ್ರಜಾವತಾರಾಧಸಾತೇಸ್ಯಾಮ ಸ್ವಾಹಾ ॥ ೧೫ ॥ ಓಂ ಸತ್ವ-
ಮಗ್ನೇಸೌಭಗತ್ವಸ್ಯವಿದ್ವಾನ ಸ್ಮಾಕ ಮಾಯುಃಪ್ರತಿರೇಹದೇವ ॥ ತನ್ನೋಮಿತ್ರೋ-
ವರುಣೋಮಾಮಹಂ ತಾಮದಿತಿಃ ಸಿಂಧುಃ ಪೃಥಿವೀ ಉತದ್ಯೌಃ ಸ್ವಾಹಾ-
॥೧೬॥ ಅಗ್ನಯ ಇದಂ ನಮಮ ॥ ಇತಿ ಷೋಡಶ ಋಗ್ಭಿಃ .... ಹುತ್ವಾ ॥
ಓಂ ಜಾತವೇದಸೇಸುನವಾಮ ... ತೃಗ್ಭಿಃ ಸ್ವಾಹಾ ॥ ಜಾತವೇದಸೇಗ್ನಯ ಇದಂ
ನಮಮ ॥ ಏತೈಃ ಸಪ್ತವಿಂಶತಿ ಮಂತ್ರೈರವದಾನಧರ್ಮೇಣ ಹುತ್ವಾ ಸ್ವಿಷ್ಟಕೃದಾದಿ
ಹೋಮಶೇಷಂ ಸಮಾಪ್ಯ ॥

ವಾಸುದೇವಂ ನಕ್ಷತ್ರದೇವತಾಂ ಚಂದ್ರಂ ಸ್ವನಕ್ಷತ್ರಂ ವರುಣಂ ಚ
ಷೋಡಶೋಪಚಾರೈರಭ್ಯರ್ಚ್ಯ ತತ್ಪ್ರಕಾಶಕಮಂತ್ರೈಃ ಘೃತೇನ ತೇಭ್ಯೋ ಯಥಾ-
ಶಕ್ತಿ ಹೋಮಂ ಕೃತ್ವಾ ಗ್ರಹಯಜ್ಞೋಕ್ತವಿಧಿನಾಭಿಷಿಕ್ತೋ ಯಥಾಶಕ್ತಿ ಗೋಭೂ-
ಹಿರಣ್ಯಾದಿ ದತ್ವಾ ದೇವಗುರುಬ್ರಾಹ್ಮಣಸುಹೃದ್ಬಂಧುಜನಪೂಜಾಂಸ್ವವಾಹನಾ-
ಯುಧಪೀಠಛತ್ರಪೂಜಾಂ ಕೃತ್ವಾ ವಿಧಿವನ್ನಾಂದೀಶ್ರಾದ್ಧಂ ಚ ಕೃತ್ವಾ ಬ್ರಾಹ್ಮಣಾನ್
ಭೋಜಯಿತ್ವಾ ಶುಭಮುಹೂರ್ತೇ ಗಂಧಾದಿಭಿರಲಂಕೃತ್ಯ ಸ್ರಗ್ಭೂಷಣಧಾರಣ-

**ಪೂರ್ವಕಂ ಸುವರ್ಣಮಯಕಟಿಸೂತ್ರಂ ನೂತನವಸ್ತ್ರಂ ಚ ಧೃತ್ವಾ ಪತಿಪುತ್ರವ- ತೀಭಿಃ ಸ್ತ್ರೀಭಿರ್ನೀರಾಜಿತೋ ಬ್ರಾಹ್ಮಣಾಶಿಷೋ ಗೃಹೀತ್ವಾ ಸ್ವಯಂ ಹವಿಷ್ಯಾಶೀ ಜಿತೇಂದ್ರಿಯೋ ವರ್ತೇತೇತಿ ॥ ಇದಂ ಸರ್ವಂ ಯಾವದ್ಬಾಲ್ಯಂ ಪಿತ್ರಾದಿಭಿಃ ಕಾರ್ಯಂ ॥ ಪಶ್ಚಾತ್ತು ಪ್ರತಿವರ್ಷಂ ಸ್ವಯಮೇವೇತಿ ॥**

**॥ ಇತ್ಯಬ್ದಪೂರ್ತಿವಿಧಿಃ ॥**

---

ಈ ಇಪ್ಪತ್ತೇಳು ಮಂತ್ರಗಳನ್ನು ಹೇಳಿ ಅವದಾನಧರ್ಮದಿಂದ ಆಹುತಿಗಳನ್ನು ಕೊಟ್ಟು ಸ್ವಿಷ್ಟಕೃದಾದಿ ಹೋಮಶೇಷವನ್ನು ಮಾಡಿ ಮುಗಿಸಬೇಕು. ಆಮೇಲೆ ವಾಸುದೇವ, ನಕ್ಷತ್ರದೇವತೆ, ಚಂದ್ರ, ತನ್ನ ನಕ್ಷತ್ರ ಮತ್ತು ವರುಣನನ್ನು ಷೋಡಶೋಪಚಾರಗಳಿಂದ ಪೂಜಿಸಿ ಆಯಾ ದೇವತೆಯ ಮಂತ್ರದಿಂದ ಯಥಾಶಕ್ತಿ ತುಪ್ಪದ ಆಹುತಿಗಳನ್ನು ಕೊಡಬೇಕು. **"ಗೃಹಯಜ್ಞ"**ದಲ್ಲಿ ಹೇಳಿದ ಕ್ರಮದಂತೆ ಅಭಿಷೇಕಮಾಡಿಸಿ, ಯಥಾಶಕ್ತಿ ಗೋ, ಭೂ, ಹಿರಣ್ಯದಾನಗಳನ್ನು ಕೊಟ್ಟು, ದೇವರು, ಗುರುಗಳು, ಬ್ರಾಹ್ಮಣರು, ಸ್ನೇಹಿತರು ಬಂಧುಗಳು ಹಾಗೂ ತನ್ನ ವಾಹನ, ಆಯುಧ, ಪೀಠ, ಛತ್ರಗಳ ಪೂಜೆಮಾಡಿ; ಕ್ರಮದಂತೆ ನಾಂದೀಶ್ರಾದ್ಧವನ್ನೂ ಮಾಡಿ, ಬ್ರಾಹ್ಮಣಸಂತರ್ಪಣೆ ಮಾಡಿಸಿ, ಶುಭಮುಹೂರ್ತದಲ್ಲಿ ಗಂಧಾದಿಗಳಿಂದ ಅಲಂಕರಿಸಿಕೊಂಡು ಹಾರಾದಿ ಆಭರಣಗಳನ್ನು ತೊಟ್ಟು ಚಿನ್ನದ ಉಡುದಾರವನ್ನೂ, ಹೊಸಬಟ್ಟೆಯನ್ನೂ ಧರಿಸಿ, ಸುಮಂಗಲಿಯರಿಂದ ನೀರಾಜನ ಮಾಡಿಸಿ ಆಶೀರ್ವಾದ ಪಡೆದು ಹವಿಷ್ಯಾನ್ನವನ್ನೂ ಸ್ವೀಕರಿಸಿ ಇರಬೇಕು. ಬಾಲ್ಯದಲ್ಲಿ ಈ ಕ್ರಿಯೆಗಳನ್ನು ತಂದೆ ಮೊದಲಾದ ಹಿರಿಯರು ಮಾಡಬೇಕು. ಬಳಿಕ ತಾನೇ ಮಾಡಿಕೊಳ್ಳಬೇಕು.

॥ ಅಬ್ದಪೂರ್ತಿ ಸಮಾಪ್ತ ॥

॥ ಅನ್ಯತ್ರ ತು ॥ ವರ್ಷಪರ್ಯಂತಂ ಪ್ರತಿಮಾಸಂ ತತಃ ಪ್ರತಿವರ್ಷಂ ಮಾಂಗಲ್ಯಸ್ನಾನಂ ಕೃತ್ವಾ ಕುಮುದಾದಿದೇವತಾ ಸಂಪೂಜ್ಯ ಯಥಾಶಕ್ತಿ ಬ್ರಾಹ್ಮಣಭೋಜನಂ ದಕ್ಷಿಣಾಂ ಚ ದತ್ವಾ ಸುವಾಸಿನೀಭಿರ್ನೀರಾಜಿತೋ ಧೃತ ನೂತನವಸ್ತ್ರೋ ಬ್ರಾಹ್ಮಣೇಭ್ಯಃ ಶಿಶುಭ್ಯಶ್ಚ ಅಪೂಪಪೂರಿತಾಃ ಸಾಜ್ಯಾಃ ಕುಮುದಾದಿಪ್ರೀತಯೇ ಆಯುರ್ವೃದ್ಧಯೇ ಚ ವಾಯನದಾನಾನಿ ದದ್ಯಾತ್ ॥ ಜನ್ಮರ್ಕ್ಷದೇವತಾಪ್ರೀತ್ಯೈಚ ದದ್ಯಾತ್ ॥ ವರ್ಷಾಂತೇ ಚ ಸುದೃಢದ್ವಾದಶವಂಶ-ಪೇಟಿಕಾಸು ಮೋದಕಾದಿ ಖಾದ್ಯಂ ನಿಧಾಯ ನೂತನವಸ್ತ್ರಾಚ್ಛಾದಿತಾಃ ಪೇಟಿ-ಕಾಽಜೀವತ್ಪತಿಪುತ್ರಾಭ್ಯೋ ದತ್ವಾ ತದಾಶಿಷೋ ಗೃಹ್ಣೀಯಾತ್ ॥ ಇದಂ ಸರ್ವಂ ಜೀವಂತೀಮಾತೈವಾಪತ್ಯಾಯುಷೇ ಕುರ್ಯಾತ್ ॥ ಗ್ರಂಥಾಂತರೇ ತು ॥ ಗಣೇಶಂ ಗ್ರಹಾನಿಷ್ಟದೇವತಾಂ ಮಾರ್ಕಂಡೇಯಂ ಚ ಪ್ರಪೂಜ್ಯ ಪ್ರಾರ್ಥ-ಯೇತ್ ॥ ಚಿರಂಜೀವೀ ಯಥಾ ತ್ವಂ ಭೋ ಭವಿಷ್ಯಾಮಿ ತಥಾ ಮುನೇ ॥ ರೂಪವಾನ್ ವಿತ್ತವಾಂಶ್ಚೈವ ಶ್ರಿಯಾಯುಕ್ತಶ್ಚ ಸರ್ವದಾ ॥ ಮಾರ್ಕಂಡೇಯ ನಮಸ್ತೇಽಸ್ತು ಸಪ್ತಕಲ್ಪಾಂತಜೀವನ ॥ ಆಯುರಾರೋಗ್ಯಸಿದ್ಧ್ಯರ್ಥಂ ಪ್ರಸೀದ-ಭಗವನ್ಮುನೇ ॥ ಚಿರಂಜೀವೀ ಯಥಾ ತ್ವಂ ತು ಮುನೀನಾಂ ಪ್ರವರ ದ್ವಿಜ ॥ ಕುರು ತ್ವಂ ಮುನಿಶಾರ್ದೂಲ ತಥಾ ಮಾಂ ಚಿರಜೀವಿನಂ ॥ ಮಾರ್ಕಂಡೇಯ ಮಹಾಭಾಗ ಸಪ್ತಕಲ್ಪಾಂತ ಜೀವಿನಃ ॥ ಆಯುರಾರೋಗ್ಯಸಿದ್ಧ್ಯರ್ಥಮಸ್ಮಾಕಂ ವರದೋ ಭವ ॥ ತತಃ ಸತಿಲಂ ಗುಡಸಮ್ಮಿಶ್ರಮಂಜಲ್ಯರ್ಧಮಿತಂ ಪಯಃ ॥ ಮಾರ್ಕಂಡೇಯಾದ್ವರಂ ಲಬ್ಧ್ವಾ ಪಿಬಾಮ್ಯಾಯುರ್ವಿವರ್ಧಯೇ ॥ ಇತಿ ಸತಿಲ-ಗುಡಮಂಜಲ್ಯರ್ಧಮಿತಂ ಪಯಃ ಪಿಬೇತ್ ॥ ಅಶ್ವತ್ಥಾಮಾ ಬಲಿರ್ವ್ಯಾಸೋ ಹನೂಮಾಂಶ್ಚ ವಿಭೀಷಣಃ ॥ ಕೃಪಃ ಪರಶುರಾಮಶ್ಚ ಸಪ್ತೈತೇ ಚಿರಜೀವಿನಃ ॥ ಸಪ್ತೈತಾನ್ಯಃ ಸ್ಮರೇನ್ನಿತ್ಯಂ ಮಾರ್ಕಂಡೇಯಮಥಾಷ್ಟಮಂ ॥ ಜೀವೇದ್ವರ್ಷಶತಂ ಸಾಗ್ರಂ ಸರ್ವವ್ಯಾಧಿವಿವರ್ಜಿತಃ ಇತಿ ವಚನಾದಶ್ವತ್ಥಾಮಾದೀನ್ ಮಾರ್ಕಂ-

---

ಇತರ ಕಡೆಗಳಲ್ಲಿ ಈ ವಿಧಿಯನ್ನು ಈ ಪ್ರಕಾರ ಹೇಳಲಾಗಿದೆ. ಮೊದಲನೆಯ ವರ್ಷ ಪ್ರತಿ ತಿಂಗಳಲ್ಲಿಯೂ ನಂತರ ವರ್ಷಕ್ಕೊಮ್ಮೆ ಸ್ನಾನಮಾಡಿ ಕುಮುದಾದಿ ದೇವತೆಗಳನ್ನು ಪೂಜಿಸಿ. ಬ್ರಾಹ್ಮಣರಿಗೆ ಭೋಜನ ದಕ್ಷಿಣೆಗಳನ್ನಿತ್ತು ಸುವಾಸಿನಿಯರಿಂದ ನೀರಾಜನ ಮಾಡಿಸಿ ಹೊಸಬಟ್ಟೆ ಉಟ್ಟು ಬ್ರಾಹ್ಮಣರಿಗೂ ಮಕ್ಕಳಿಗೂ ಸಿಹಿತಿಂಡಿಗಳನ್ನು ಆಯುಷ್ಯಾಭಿವೃದ್ಧಿಗೆ ವಾಯನದಾನಗಳನ್ನೂ ಕೊಡಬೇಕು. ವರ್ಷದ ಕೊನೆಗೆ ಬಿದಿರಿನಿಂದ ತಯಾರಿಸಿದ ಹನ್ನೆರಡು ಪೆಟ್ಟಿಗೆಗಳಲ್ಲಿ ತಿಂಡಿಗಳನ್ನಿಟ್ಟು ಹೊಸಬಟ್ಟೆಗಳಿಂದ ಮುಚ್ಚಿ, ಗಂಡನೂ ಮಕ್ಕಳೂ ಬದುಕಿರುವ ಸುವಾಸಿನಿಯರಿಗೆ ದಾನಮಾಡಿಕೊಡಬೇಕು. ಇನ್ನೂ ಒಂದು ಕ್ರಮ ಹೀಗಿದೆ: ಗಣೇಶ, ಗ್ರಹಗಳು, ಇಷ್ಟದೇವತೆ

**ಡೇಯಾಂತಾನಷ್ಟೌ ಸ್ಮರೇದಿತಿ ॥ ಇದಂ ಚ ವರ್ಧಾಪನಂ ಯದಿ ಜನ್ಮಮಾಸೋಽಸಂಕ್ರಾಂತಃ ತದಾ ಶುದ್ಧಮಾಸ ಏವ ಕಾರ್ಯಂ ॥ ನತ್ವಧಿಕೇ ॥ ವಿಶೇಷಃ ಶಾಸ್ತ್ರಾರ್ಥ ಕೌಸ್ತುಭಾದ್ಯಾಕರೇಭ್ಯೋಽವಗಂತವ್ಯಃ ॥**

**॥ ಇತಿ ವರ್ಧಾಪನ ವಿಧಿಃ ॥**

---

ಮತ್ತು ಮಾರ್ಕಂಡೇಯನನ್ನು ಪೂಜಿಸಿ, "**ಚಿರಂಜೀವಿ.... ವರದೋ ಭವ**" ಎಂದು ಪ್ರಾರ್ಥಿಸಬೇಕು. ಎಳ್ಳು, ಬೆಲ್ಲಗಳಿಂದ ಕೂಡಿದ ಹಾಲನ್ನು ಅರ್ಧಬೊಗಸೆಯಷ್ಟು ಕುಡಿಸಬೇಕು. ಈ ವರ್ಧಾಪನವಿಧಿಯನ್ನು ಶುದ್ಧಮಾಸದಲ್ಲಿಯೇ ಮಾಡಬೇಕು.

॥ ವರ್ಧಾಪನವಿಧಿ ಸಮಾಪ್ತ ॥

# ॥ ಅಕ್ಷರಾರಂಭಸಂಸ್ಕಾರಃ ॥

**ಶ್ರೀ ಗಣೇಶಾಯ ನಮಃ ॥ ಕೃತಮಂಗಲಸ್ನಾನಃ ಕೃತನಿತ್ಯಕ್ರಿಯಃ ವಸ್ತ್ರಾಚ್ಛಾದಿತೇ ಪೀಠೇ ಸಪತ್ನೀಕಃ ಪ್ರಾಙ್ಮುಖ ಉಪವಿಶ್ಯ ಕುಮಾರಂ ದಕ್ಷಿಣತ ಉಪವೇಶ್ಯ ॥ ಆಚಮ್ಯ ಪವಿತ್ರಪಾಣಿಃ ಪ್ರಾಣಾನಾಯಮ್ಯ ದೇಶಕಾಲೌ ಸಂಕೀರ್ತ್ಯ ಮಮಾಸ್ಯ ಶಿಶೋಃ ಸನ್ನಿಧೌ ಕರಿಷ್ಯಮಾಣ ಸ್ವವಿದ್ಯಾಸೂತ್ರಾಧ್ಯಯ-ನಾಧಿಕಾರಾರ್ಥಂ ಅದ್ಯ ಅಕ್ಷರಸ್ವೀಕಾರಸಂಸ್ಕಾರಂ ಕರಿಷ್ಯೇ ॥ ತತ್ರಾದೌ ನಿರ್ವಿಘ್ನತಾಸಿದ್ಧ್ಯರ್ಥಂ ಗಣಪತಿಪೂಜನಂ ಚ ಕರಿಷ್ಯೇ ॥ ಗಣಪತಿಪೂಜನಂ ಸ್ವಸ್ತಿವಾಚನಂ ಚ ಕೃತ್ವಾ ॥**

**ಗೋಮಯೋಪಲಿಪ್ತೇ ಗೋಚರ್ಮಮಾತ್ರೇ ಶುಚೌ ಸಮೇ ದೇಶೇ ಸೈಕತಂ ಸ್ಥಲಂ ಕೃತ್ವಾ ಪಲಾಶಶಾಖಯಾ ಮೃದಂ ಖನಿತ್ವಾ ತಸ್ಯಾಂ ವೇದ್ಯಾಂ ಅಕ್ಷತಪುಂಜೇಷು ಸುವರ್ಣಪ್ರತಿಮಾಸು ಉದಕ್ಸಂಸ್ಥಾಃ ಕ್ರಮೇಣ ಸರಸ್ವತೀಂ ಲಕ್ಷ್ಮೀಂ ದೇವೀಂ ಗಣಪತಿಂ ವಿಷ್ಣುಂ ಸವಿದ್ಯಾಸೂತ್ರಕಾರಾಂಶ್ಚ ಅಗ್ನ್ಯುತ್ತಾರಣಪ್ರಾಣ-**

---

**ಅಕ್ಷರಾರಂಭಸಂಸ್ಕಾರಃ:-** ಐದನೆಯ ವರ್ಷದಲ್ಲಿ ಉತ್ತರಾಯಣದಲ್ಲಿ ಅಕ್ಷರಾರಂಭ ಮಾಡಬೇಕು. ಕುಂಭರಾಶಿಯಲ್ಲಿರುವ ಸೂರ್ಯನನ್ನು ವರ್ಜಿಸಬೇಕು. ಶುಕ್ಲಪಕ್ಷದ ದ್ವಿತೀಯಾ, ತೃತೀಯಾ, ಪಂಚಮೀ, ದಶಮೀ, ಏಕಾದಶೀ, ದ್ವಾದಶೀ ಮತ್ತು ತ್ರಯೋದಶೀ, ತಿಥಿಗಳು, ಅಶ್ವಿನೀ, ಮೃಗಶಿರಾ, ಆರ್ದ್ರಾ, ಪುನರ್ವಸು, ಹಸ್ತಾ, ಪುಷ್ಯ, ಚಿತ್ರಾ, ಸ್ವಾತಿ, ಅನುರಾಧಾ, ಶ್ರವಣ, ಧನಿಷ್ಠಾ, ಶತಭಿಷಾ, ರೇವತೀ ನಕ್ಷತ್ರಗಳೂ ಶುಭ, ಮಂಗಳ ಮತ್ತು ಶನಿವಾರಗಳನ್ನು ವರ್ಜಿಸಬೇಕು.

ಸ್ನಾನ ನಿತ್ಯಕರ್ಮಾದಿಗಳನ್ನು ಮಾಡಿ ಯಜಮಾನನು ಬಟ್ಟೆ ಹಾಸಿದ ಪೀಠದ ಮೇಲೆ ಹೆಂಡತಿಯೊಡನೆ ಕುಳಿತು ಕುಮಾರನನ್ನು ದಕ್ಷಿಣಭಾಗದಲ್ಲಿ ಕುಳ್ಳಿರಿಸಬೇಕು. ಆಚಮನ ಮಾಡಿ, ಪವಿತ್ರ ಧರಿಸಿ, ಪ್ರಾಣಾಯಾಮ ಮಾಡಿ, ದೇಶಕಾಲಗಳನ್ನು ಸ್ಮರಿಸಿ, **"ಮಮಾಸ್ಯ .... ಗಣಪತಿಪೂಜನಂ ಚ ಕರಿಷ್ಯೇ"** ಎಂದು ಸಂಕಲ್ಪ ಮಾಡಬೇಕು.

ಗೋಮಯದಿಂದ ಶುದ್ಧಗೊಳಿಸಿದ, ಗೋಚರ್ಮದಷ್ಟು ವ್ಯಾಪಿಸುವ ಸ್ಥಳದಲ್ಲಿ ಹೊಯ್ಗೆಯನ್ನು ಹಾಕಬೇಕು. ಪಲಾಶದಂಡದಿಂದ ಮಣ್ಣನ್ನು ಅಗೆದು ವೇದಿಯ ನಿರ್ಮಾಣ ಮಾಡಿ ಅದರ ಮೇಲೆ ಅಕ್ಕಿಯ ರಾಶಿಯಲ್ಲಿ ಸುವರ್ಣ ಪ್ರತಿಮೆಗಳನ್ನಿಟ್ಟು ಅವುಗಳನ್ನು ದಕ್ಷಿಣದಿಂದ ಉತ್ತರಕ್ಕೆ ಕ್ರಮವಾಗಿ ಸರಸ್ವತೀ, ಲಕ್ಷ್ಮೀ, ದೇವಿ, ಗಣಪತಿ, ವಿಷ್ಣು ಮತ್ತು ತನ್ನ ವಿದ್ಯೆಯ ಸೂತ್ರಕಾರರನ್ನು ಆವಾಹಿಸಬೇಕು. ಅಥವಾ ಮಧ್ಯದಲ್ಲಿ ಸರಸ್ವತಿ, ದಕ್ಷಿಣದಲ್ಲಿ ವಿಷ್ಣು, ಉತ್ತರದಲ್ಲಿ ಲಕ್ಷ್ಮಿ, ಪಶ್ಚಿಮದಲ್ಲಿ ಗಣಪತಿ, ಪೂರ್ವದಲ್ಲಿ ಸೂತ್ರಕಾರರನ್ನು ಆವಾಹಿಸಬೇಕು.

ಪ್ರತಿಷ್ಠಾಪೂರ್ವಕಂ ಆವಾಹಯೇತ್ ॥ ಅಥವಾ ಮಧ್ಯೇ ಸರಸ್ವತೀಂ ದಕ್ಷಿಣೇ ವಿಷ್ಣುಂ ಉತ್ತರೇ ಲಕ್ಷ್ಮೀಂ ಚ ಪಶ್ಚಿಮೇ ಗಣಪತಿಂ ಪೂರ್ವೇ ಉದಕ್ಸಂಸ್ಥಾಃ ಸ್ವವಿದ್ಯಾಸೂತ್ರಕಾರಾನ್ ಸ್ವವಿದ್ಯಾನಾಮದೇವತಾಶ್ಚ ಆವಾಹಯೇತ್ ॥

ತತ್ರಾದೌ ಸರಸ್ವತ್ಯಾವಾಹನಂ ॥ ಪಾವಕಾನಃ ಸರಸ್ವತೀತಿ ಮಂತ್ರಸ್ಯ ಮಧುಚ್ಛಂದ ಋಷಿಃ ಸರಸ್ವತೀರ್ದೇವತಾ ಗಾಯತ್ರೀಛಂದಃ ॥ ಸರಸ್ವತ್ಯಾವಾಹನೇ ವಿನಿಯೋಗಃ ॥ ಓಂ ಪಾವಕಾನಃ ಸರಸ್ವತೀವಾಜೇಭಿರ್ವಾಜಿನೀವತೀ ॥ ಯಜ್ಞಂವಷ್ಟುಧಿಯಾವಸುಃ ॥ ಓಂ ಭೂರ್ಭುವಃಸ್ವಃ ಭುವನಮಾತಃ ಸರಸ್ವತಿ ಸರ್ವವಾಙ್ಮಯರೂಪೇಣಾಗಚ್ಛ ಪೂಜಾಂ ಗೃಹಾಣ ಸುಪ್ರಸನ್ನಾ ವರದಾ ಭವ ॥ ಇದಂ ವಿಷ್ಣುರ್ಮೇಧಾತಿರ್ವಿಷ್ಣುರ್ಗಾಯತ್ರೀ ॥ ವಿಷ್ಣ್ವಾವಾಹನೇ ವಿನಿಯೋಗಃ ॥ ಓಂ ಇದಂ ವಿಷ್ಣುರ್ವಿಷ್ಣು ... ॥ ಓಂ ಭೂರ್ಭುವಃ ಸ್ವಃ ವಿಷ್ಣವೇ ನಮಃ ವಿಷ್ಣುಂ ಆವಾಹಯಾಮಿ ॥ ಸಕ್ತುಮಿವೇತ್ಯಸ್ಯ ಬೃಹಸ್ಪತಿರ್ಲಕ್ಷ್ಮೀರ್ದೇವತಾ ತ್ರಿಷ್ಟುಪ್ ಛಂದಃ ॥ ಲಕ್ಷ್ಮ್ಯಾವಾಹನೇ ವಿನಿಯೋಗಃ । ಓಂ ಸುಕ್ತುಮಿವತಿತಉನಾಪುನಂತೋಯತ್ರಧೀರಾಮನಸಾವಾಚಮಕ್ರತ ॥ ಅತ್ರಾಸಖಾಯಃ ಸಖ್ಯಾನಿ ಜಾನತೇ ಭದ್ರೈಷಾಂ ಲಕ್ಷ್ಮೀರ್ನಿಹಿತಾಧಿವಾಚಿ ॥ ಓಂ ಭೂರ್ಭುವಃ ಸ್ವಃ ಲಕ್ಷ್ಮ್ಯೈ ನಮಃ ಲಕ್ಷ್ಮೀಂ ಆವಾಹಯಾಮಿ ॥ ದೇವೀಂ ವಾಚಮಿತಿ ಮಂತ್ರಸ್ಯ ನೇಮಾಭಾರ್ಗವಋಷಿಃವಾಕ್‌ದೇವೀದೇವತಾ ತ್ರಿಷ್ಟುಪ್ ಛಂದಃ ॥ ದೇವ್ಯಾವಾಹನೇ ವಿನಿಯೋಗಃ ॥ ಓಂ ದೇವೀಂ ವಾಚಮಜನಯಂತ ದೇವಾಸ್ತಾಂ ವಿಶ್ವರೂಪಾಃ ಪಶವೋ ವದಂತಿ ॥ ಸಾನೋಮಂದ್ರೇಷಮೂರ್ಜಂ ದುಹಾನಾಧೇನುರ್ವಾಗಸ್ಮಾನುಪಸುಷ್ಟುತೈತು ॥ ಓಂ ಭೂರ್ಭುವಃ ಸ್ವಃ ॥ ದೇವ್ಯೈ ನಮಃ ದೇವೀಂ ಆವಾಹಯಾಮಿ ॥ ಗಣಾನಾಂ ತ್ವಾ ಶೌನಕೋ ಗೃತ್ಸಮದೋ ಗಣಪತಿರ್ಜಗತೀ ॥ ಗಣಪತ್ಯಾವಾಹನೇ ವಿನಿಯೋಗಃ ॥ ಓಂ ಗಣಾನಾಂ ತ್ವಾ...... ॥ ಓಂ ಭೂರ್ಭುವಃ ಸ್ವಃ ॥ ಗಣಪತಯೇ ನಮಃ

ಗಣಪತಿಂ ಆವಾಸಯಾಮಿ ॥ ಯ ಇಮಾ ಇತ್ಯಸ್ಯ ಭೌವನೋ ವಿಶ್ವಕರ್ಮಾ ಋಷಿಃ । ವಿಶ್ವಕರ್ಮಾ ದೇವತಾ ತ್ರಿಷ್ಟುಪ್ ಛಂದಃ ॥ ವಿಶ್ವಕರ್ಮಾವಾಹನೇ ವಿನಿಯೋಗಃ ॥ ಓಂ ಯ ಇಮಾ ವಿಶ್ವಾಭುವನಾನಿಜುಹ್ವದೃಷಿರ್ಹೋತಾನ್ಯಸೀದತ್ಪಿತಾನಃ ॥ ಸ ಆಶಿಷಾದ್ರವಿಣಮಿಚ್ಛಮಾನಃಪ್ರಥಮಚ್ಛದವರಾಂ ಆವಿವೇಶ ॥ ಓಂ ಭೂರ್ಭುವಃ ಸ್ವಃ ವಿಶ್ವಕರ್ಮಾಣಂ ಆವಾಹಯಾಮಿ ॥ ಮಯೋಭೂರ್ವಾತ ಇತಿ ಮಂತ್ರಸ್ಯ ಶಬರಋಷಿಃ ಮಯೋ ದೇವತಾ ತ್ರಿಷ್ಟುಪ್ ಛಂದಃ ॥ ಮಯಾವಾಹನೇ ವಿನಿಯೋಗಃ ॥ ಓಂ ಮಯೋಭೂರ್ವಾತೋ ಅಭಿವಾತೂಸ್ರಾಊರ್ಜಸ್ವತೀರೋಷಧೀರಾರಿಶಂತಾಂ ॥ ಪೀವಸ್ವತೀರ್ಜೀವಧನ್ಯಾಃ ಪಿಬಂತ್ವವಸಾಯಪದ್ವತೇರುದ್ರಮೃಳ ॥ ಓಂ ಭೂರ್ಭುವ ಸ್ವಃ ॥ ಮಯಮುನಯೇ ನಮಃ ॥ ಮಯಮುನಿಂ ಆವಾಹಯಾಮಿ ॥ ಓಂ ಋಗ್ವೇದಾಯ ನಮಃ ಋಗ್ವೇದಂ ಆವಾಹಯಾಮಿ ॥ ಓಂ ಆಶ್ವಲಾಯನಾಯ ನಮಃ ಆಶ್ವಲಾಯನಂ ಆವಾಹಯಾಮಿ ॥ ಶಿಲ್ಪಶಾಸ್ತ್ರಾಯ ನಮಃ ಶಿಲ್ಪಶಾಸ್ತ್ರಂ ಆವಾಹ ಯಾಮಿ ॥ ಇತ್ಯಾದಿನಾ ಆವಾಹ್ಯ ॥

ಓಂ ತದಸ್ತುಮಿ.... ಗೃಹಾವೈ ಪ್ರತಿಷ್ಠಾಸೂಕ್ತಂ ತತ್ಪ್ರತಿಷ್ಠಿತತಮಯಾ ವಾಚಾ ಶಂಸ್ತವ್ಯಂ ತಸ್ಮಾದ್ಯದ್ಯಪಿ ದೂರ ಇವ ಪಶೂಂಲ್ಲಭತೇ ಗೃಹಾನೇವೈನಾನಾಜಿಗಮಿಷತಿಗೃಹಾಹಿ ಪಶೂನಾಂ ಪ್ರತಿಷ್ಠಾಪ್ರತಿಷ್ಠಾ ॥ ಸುಪ್ರತಿಷ್ಠಿತಮಸ್ತು ॥ ಸರಸ್ವತ್ಯಾದ್ಯಾವಾಹಿತದೇವತಾಭ್ಯೋ ನಮಃ ॥ ಇತಿ ಪ್ರಣವಪೂರ್ವಕೇನ ಅರ್ಘ್ಯಪಾದ್ಯಾಚಮನೀಯಗಂಧಪುಷ್ಪಾಕ್ಷತಧೂಪದೀಪಪಾಯಸಗುಡೌದನನೈವೇದ್ಯಸಮರ್ಪಣ ನಮಸ್ಕಾರಾನ್ ಕೃತ್ವಾ ॥

ಹೋಮಂ ಕುರ್ಯಾತ್ ॥ ಅದ್ಯೇತ್ಯಾದಿ ... ಅಸ್ಯ ಶಿಶೋಃ ಅಕ್ಷರ ಸ್ವೀಕಾರಸಂಸ್ಕಾರೇ ಹೋಮಂ ಕರ್ತುಂ ಸ್ಥಂಡಿಲಾದಿ ಕರ್ಮ ಕರಿಷ್ಯೇ ॥ ಶುದ್ಧಮೃದಾ ಈಶಾನ್ಯಾ ... ಇತ್ಯಾದಿ ಅಗ್ನಿಪ್ರತಿಷ್ಠಾಪನಾಂತಂ ಕೃತ್ವಾ ॥ ಶೋಭನನಾಮಾನಮಗ್ನಿಂ ಪ್ರತಿಷ್ಠಾಪ್ಯ ॥ ಸಮಿದ್ವಯಮಾದಾಯ ಅಸ್ಮಿನ್ನನ್ವಾಹಿತೇಗ್ನೌ

ಇತ್ಯಾದ್ಯಾಘಾರದೇವತೇ ಆಜ್ಯೇನೇತ್ಯಂತಮುಕ್ತ್ವಾ ಅತ್ರ ಪ್ರಧಾನಂ ಸರಸ್ವತೀಂ ವಿಷ್ಣುಂ ಲಕ್ಷ್ಮೀಂ ದೇವೀಂ ಗಣಪತಿಂ ವಿಶ್ವಕರ್ಮಾಣಂ ಮಯಂ ಋಗ್ವೇದಂ ಆಶ್ವಲಾಯನಂ ಶಿಲ್ಪಶಾಸ್ತ್ರಂ ಚ ಏತಾಃ ಪ್ರಧಾನದೇವತಾ ಆಜ್ಯೇನ ಶೇಷೇಣ ಸ್ವಿಷ್ಟಕೃತಮಿತ್ಯಾದಿ ಸದ್ಯೋ ಯಕ್ಷ್ಯೇ ಇತ್ಯಂತಮುಕ್ತ್ವಾ ॥ ವ್ಯಾಹೃತಿಭಿರಗ್ನಾವಾ-ಧಾಯ ॥ ಪರಿಸಮೂಹನಾದ್ಯಾಜ್ಯಭಾಗಾಂತಂ ಕೃತ್ವಾ ॥ ಪೂರ್ವೋಕ್ತ ಆವಾಹನ ಮಂತ್ರೈಃ ಪ್ರಧಾನಹೋಮಂ ಕೃತ್ವಾ ॥ ಸ್ವಿಷ್ಟಕೃದಾದಿ ಹೋಮಶೇಷಂ ಸಮಾಪ್ಯ ॥ ಮಾರ್ಜನಾಂತೇ ಭಸ್ಮ ಆದಾಯ ॥ ಗುರುಪೂಜನಂ ಕುರ್ಯಾತ್ ॥

ಅಗ್ನೇರುತ್ತರತಃ ಆಚಾರ್ಯೋ ಪ್ರಾಙ್ಮುಖ ಆಸೀತ ॥ ಗಂಧಾದಿನಾ ಸಂಪೂಜ್ಯ ॥ ಯಥಾಶಕ್ತಿ ವಸ್ತ್ರಾಲಂಕಾರಾದಿಭಿಃ ಪೂಜಯಿತ್ವಾ ॥ ದೇವತಾಂ ಧಾತ್ರೀಂ ರಾಮಂ ಗುರುಂ ಬ್ರಾಹ್ಮಣಾನ್ ಮಾತಾಪಿತರೌ ನಮಸ್ಕೃತ್ಯ ಸರಸ್ವತೀಂ ವಿಘ್ನೇಶಾಚಾರ್ಯಾನ್ ತ್ರಿಃ ಪ್ರದಕ್ಷಿಣೀಕೃತ್ಯ ॥

ಪ್ರತ್ಯಙ್ಮುಖಂ ಆಚಾರ್ಯಾಭಿಮುಖಂ ಶಿಶುಮುಪವೇಶ್ಯ ಮುಹೂರ್ತೇ ಪ್ರಣವಪೂರ್ವಕಮಕ್ಷರಂ ಆರಭೇತ ॥ ತತ ಆಚಾರ್ಯಾಭಿವಂದನಂ ಕೃತ್ವಾ

---

**"ಓಂ ತದಸ್ತು ...... ಸುಪ್ರತಿಷ್ಠಿತಮಸ್ತು"** ಎಂದು ಅಕ್ಷತೆಗಳನ್ನು ಹಾಕಬೇಕು. **"ಓಂ ಸರಸ್ವತ್ಯಾದ್ಯಾವಾಹಿತ ... ನಮಃ"** ಎಂದು ಹೇಳುತ್ತ ಷೋಡಶೋಪಚಾರ ಪೂಜೆ ಮಾಡಬೇಕು.

ಹೋಮಕ್ಕೆ ಸ್ಥಾಲೀಪಾಕತಂತ್ರದಲ್ಲಿ ಹೇಳಿದ ಎಲ್ಲ ಕರ್ಮಗಳನ್ನೂ ಮಾಡಿ **"ಅಸ್ಮಿನ್ನನ್ವಾಹಿತೇಗ್ನೌ ... ಸದ್ಯೋ ಯಕ್ಷ್ಯೇ"** ಎಂದು ಹೇಳಿ ವ್ಯಾಹೃತಿಗಳಿಂದ ಸಮಿತ್ತುಗಳನ್ನು ಹೋಮಿಸಬೇಕು. ಆವಾಹನೆ ಮಾಡಿದ ಮಂತ್ರಗಳಿಂದ ಪ್ರಧಾನ ಆಜ್ಯಾಹುತಿಗಳನ್ನು ಕೊಟ್ಟು ಸ್ವಿಷ್ಟಕೃದಾದಿ ಹೋಮಶೇಷವನ್ನು ಮಾಡಿಮುಗಿಸಿ ಭಸ್ಮಧಾರಣ ಮಾಡಿದ ಮೇಲೆ ಆಚಾರ್ಯ ಪೂಜೆಯನ್ನು ಮಾಡಬೇಕು. ಅಗ್ನಿಯ ಉತ್ತರಭಾಗದಲ್ಲಿ ಪೂರ್ವಕ್ಕೆ ಮುಖಮಾಡಿ ಆಚಾರ್ಯನನ್ನು ಕುಳಿತುಕೊಳ್ಳಿಸಿ ಗಂಧಪುಷ್ಪವಸ್ತ್ರಾದಿಗಳಿಂದ ಅವನನ್ನು ಅರ್ಚಿಸಬೇಕು. ದೇವತೆಗಳಿಗೆ ನಮಸ್ಕರಿಸಿ ಮೂರು ಪ್ರದಕ್ಷಿಣೆ ಬಂದು ಆಚಾರ್ಯನಿಗೆ ಇದಿರಾಗಿ ಪಶ್ಚಿಮಮುಖವಾಗಿ ಮಗುವನ್ನು ಕೂತುಕೊಳ್ಳಿಸಿ, ಮುಹೂರ್ತಕ್ಕೆ ಸರಿಯಾಗಿ 'ಓಂ'ಕಾರದಿಂದ ಆರಂಭಿಸಿ ಅಕ್ಷರಾಭ್ಯಾಸವನ್ನು ಮಾಡಿಸಬೇಕು. ಆಮೇಲೆ ಆಚಾರ್ಯನಿಗೆ ಅಭಿವಾದನ ಮಾಡಿ ಆವಾಹನ ಮಾಡಿದ ಕ್ರಮದಿಂದ

**ಸರಸ್ವತ್ಯಾದೀನಾವಾಹನಕ್ರಮೇಣೋದ್ವಾಸಯೇತ್ ॥ ಬ್ರಾಹ್ಮಣಾನ್ ಸಂಪೂಜ್ಯ ತೈಃ ವಿದ್ಯಾವೃದ್ಧಿರ್ವಾಚಯೇತ್ ॥ ಪಿತಾ ಅಸ್ಯ ಶಿಶೋರ್ವಿದ್ಯಾಭಿವೃದ್ಧಿರ್ಭವತು ॥ ಬ್ರಾಹ್ಮಣೇಭ್ಯೋ ಭೂಯಸೀಂ ದಕ್ಷಿಣಾಂ ದತ್ವಾ ಆಶಿಷೋ ಗೃಹ್ಣೀಯಾತ್**

**॥ ಇತಿ ಅಕ್ಷರಾರಂಭ ಸಂಸ್ಕಾರಃ ॥**

---

ಸರಸ್ವತ್ಯಾದಿ ದೇವತೆಗಳನ್ನು ಉದ್ವಾಸನೆ ಮಾಡಬೇಕು. ಬಳಿಕ ತಂದೆಯು "**ಅಸ್ಯ ಶಿಶೋಃ ... ಬ್ರುವಂತು**" ಎಂದು ಹೇಳಬೇಕು. ಬ್ರಾಹ್ಮಣರು "**ವಿದ್ಯಾಭಿ .... ಭವತು**" ಎಂದು ಹೇಳಬೇಕು. ಆಮೇಲೆ ಬ್ರಾಹ್ಮಣರಿಗೆ ದಕ್ಷಿಣೆ ಕೊಟ್ಟು ಅವರಿಂದ ಆಶೀರ್ವಾದ ಪಡೆಯಬೇಕು.

**॥ ಅಕ್ಷರಾರಂಭಸಂಸ್ಕಾರ ಸಮಾಪ್ತ ॥**

## ೩೬

# ॥ ಚೂಡಾಕರ್ಮಪ್ರಯೋಗಃ ॥

**॥ ಶ್ರೀಃ ॥ ಯಜಮಾನಃ ಕೃತಮಂಗಲಸ್ನಾನಂ ಕುಮಾರಮಲಂಕೃತ್ಯ ಸ್ವದಕ್ಷಿಣಸ್ಥಮಾತ್ರಂಕೇ ಉಪವೇಶ್ಯ ದೇಶಕಾಲೌ ಸ್ಮೃತ್ವಾ ಅಸ್ಯ ಕುಮಾರಸ್ಯ ಬೀಜಗರ್ಭಸಮುದ್ಭವೈನೋನಿಬರ್ಹಣೇನ ಬಲಾಯುರ್ವರ್ಚೋಭಿವೃದ್ಧಿದ್ವಾರಾ ಶ್ರೀಪರಮೇಶ್ವರಪ್ರೀತ್ಯರ್ಥಂ ಚೌಲಾಖ್ಯಂ ಕರ್ಮ ಕರಿಷ್ಯೇ ॥ ತದಂಗತಯಾ ಗಣಪತಿಪೂಜನ ಪುಣ್ಯಾಹವಾಚನ ಮಾತೃಕಾಪೂಜನನಾಂದೀಶ್ರಾದ್ಧಾನಿ ಕರಿಷ್ಯೇ ಇತಿ ಸಂಕಲ್ಪ್ಯ ತಾನಿ ಕೃತ್ವಾ ॥ ಚೌಲಕರ್ಮಕರ್ತುಂ ಸ್ಥಂಡಿಲಾದಿಕರ್ಮ ಕರಿಷ್ಯೇ ಇತ್ಯಾದಿ ಸಭ್ಯನಾಮಾಗ್ನಿಪ್ರತಿಷ್ಠಾಂತಂ ಕೃತ್ವಾ ॥ ಪುನರ್ದೇಶಕಾಲೌ ನಿರ್ದಿಶ್ಯ ಕ್ರಿಯಮಾಣೇ ಚೌಲಕರ್ಮಹೋಮೇ ದೇವತಾಪರಿಗ್ರಹಾರ್ಥಮನ್ವಾಧಾನಂ ಕರಿಷ್ಯೇ ॥ ಅಸ್ಮಿನ್ನನ್ವಾಹಿತೇಗ್ನಾವಿತ್ಯಾದಿ ಆಘಾರಾವಾಜ್ಯೇನೇತ್ಯಂತಮುಕ್ತ್ವಾ ॥ ತ್ರಿರಗ್ನಿಂ ಪವಮಾನಂ ಪ್ರಜಾಪತಿಂ ಚೈತಾಃ ಪ್ರಧಾನದೇವತಾ ಆಜ್ಯೇನ ಶೇಷೇಣ ಸ್ವಿಷ್ಟಕೃತಮಿತ್ಯಾದ್ಯುಕ್ತ್ವಾ ಸಮಿದ್ದ್ವಯಮಾದಾಯ ಅಗ್ನಾವಾಧಾಯ ಪೂರ್ಣಪಾತ್ರ-ನಿಧಾನಾಂತಂ ಷಟ್‌ಪಾತ್ರಪ್ರಯೋಗಾದಿ ತಂತ್ರಂ ಕೃತ್ವಾ ॥**

**ಅಗ್ನೇರುದಗಾಸ್ತೀರ್ಣೇಷು ದರ್ಭೇಷು ವ್ರೀಹಿಯವಮಾಷತಿಲೈಃ ಪೃಥಕ್ ಪೃಥಕ್ ಪೂರಿತಾನಿ ನವ ಶರಾವಾಣಿ ಚತ್ವಾರಿ ಕ್ರಮೇಣೈಕೈಕಶಃ ಪ್ರಾಕ್ಸಂಸ್ಥಾನ್ಯಾಸಾದಯೇತ್ ॥ ಮಾತಾ ಪ್ರತ್ಯಗಗ್ನೇರಾಸೀನಸ್ಯ ಕರ್ತುರ್ದಕ್ಷಿ-ಣತಃ ಕೃತ್ವಾಸೀತ ॥ ತತಃ ಕರ್ತಾ ಮಾತುಃ ಪುರಸ್ತಾತ್ ಪಶ್ಚಾಚ್ಚಾಗ್ನೇ-**

---

**ಚೂಡಾಕರ್ಮಪ್ರಯೋಗಃ–** ಯಜಮಾನನು ಸ್ನಾನಮಾಡಿದ ಕುಮಾರನನ್ನು ತನ್ನ ಬಲಬದಿಯಲ್ಲಿ ಕುಳಿತ ಪತ್ನಿಯ ಮಡಿಲಲ್ಲಿ ಕುಳ್ಳಿರಿಸಿ ದೇಶಕಾಲಗಳನ್ನು ಸ್ಮರಿಸಿ **"ಅಸ್ಯ ಕುಮಾರಸ್ಯ ... ನಾಂದೀಶ್ರಾದ್ಧಾನಿ ಕರಿಷ್ಯೇ"** ಎಂದು ಸಂಕಲ್ಪಮಾಡಿ ಅವುಗಳನ್ನು ಮಾಡಿದ ಮೇಲೆ, ಸ್ಥಂಡಿಲವನ್ನು ಮಾಡಿ **"ಸಭ್ಯ"** ಎಂಬ ಅಗ್ನಿಯನ್ನು ಪ್ರತಿಷ್ಠಾಪಿಸಿ ಮೇಲೆ ಹೇಳಿದಂತೆ ಅನ್ವಾಧಾನವನ್ನು ಮಾಡಿ ಆರು ಪಾತ್ರೆಗಳ ಪೂರ್ಣಪಾತ್ರ ಸ್ಥಾಪನೆಯ ಕರ್ಮವನ್ನು ಮಾಡಬೇಕು. ಬಳಿಕ ಅಗ್ನಿಯ ಉತ್ತರಕ್ಕೆ ಹರಡಿದ ದರ್ಭೆಗಳ ಮೇಲೆ ವ್ರೀಹಿ, ಯವ, ಉದ್ದು ಮತ್ತು ಎಳ್ಳುಗಳಿರುವ ನಾಲ್ಕು ಮಣ್ಣಿನ ಪಾತ್ರೆಗಳನ್ನು ಪೂರ್ವಮುಖವಾಗಿ ಇಡಬೇಕು. ಗಂಡನ ಬಲಬದಿಯಲ್ಲಿರುವ ತಾಯಿಯ ಮಡಿಲಲ್ಲಿ ಕುಮಾರನು ಕೂತಿರಬೇಕು. ಅವಳ ಮುಂಭಾಗದಲ್ಲಿ ಎತ್ತಿನ ಸೆಗಣಿ ಮತ್ತು ಶಮೀಪತ್ರಗಳಿರುವ ಒಂದು ಪಾತ್ರೆ ಇರಬೇಕು. ಬ್ರಹ್ಮನು ಇಪ್ಪತ್ತೊಂದು ದರ್ಭೆಗಳ ಒಂದು ಕಟ್ಟನ್ನು ಹಿಡಿದು ಅವಳ ಬಲಬದಿಯಲ್ಲಿ ನಿಲ್ಲಬೇಕು. ತಂದೆಯೇ ನಿಂತರೂ ಆಗಬಹುದು. ಆ ಪಕ್ಷದಲ್ಲಿ ಚೌಲಕರ್ಮವನ್ನು ಬೇರೆ ಯಾರಾದರೊಬ್ಬನು ಮಾಡಬೇಕು.

ರಾನಡುಹಗೋಮಯಯುತಂ ಶರಾವಂ ಶಮೀಪರ್ಣಯುತಂ ಶರಾವಂ ಚ ನಿದಧ್ಯಾತ್ ॥ ತತೋ ಬ್ರಹ್ಮಾ ಏಕವಿಂಶತಿ ಕುಶಪಿಂಜೂಲಾನ್ಯಾದಾಯ ಮಾತು-ರ್ದಕ್ಷಿಣತಸ್ತಿಷ್ಠೇತ್ ಪಿತಾ ವಾ ತಥಾ ತಿಷ್ಠೇತ್ ॥ ಅಸ್ಮಿನ್ ಪಕ್ಷೇ ಅನ್ಯ ಏವ ಚೌಲಕರ್ತಾ ॥

ತತಃ ಕುಮಾರೇಣಾನ್ವಾರಬ್ಧಃ ಕರ್ತಾ ಪುರಸ್ತನಾಘಾರಾಂತಂ ಕರ್ಮ ಕೃತ್ವಾ ॥ ಅಗ್ನ ಆಯೂಂಷೀತಿ ತಿಸೃಣಾಂ ಶತಂ ವೈಖಾನಸಾ ಋಷಯಃ ॥ ಅಗ್ನಿಃ ಪವಮಾನೋ ದೇವತಾ ॥ ಗಾಯತ್ರೀ ಛಂದಃ ॥ ಚೂಡಾಕರ್ಮ ಪ್ರಧಾನಾಜ್ಯಹೋಮೇ ವಿನಿಯೋಗಃ ॥ ಓಂ ಅಗ್ನ ಆಯೂಂಷಿ ಪವಸ ಆಸು-ವೋರ್ಜಮಿಷಂಚನಃ ॥ ಆರೇಬಾಧಸ್ವದುಚ್ಛುನಾಂಸ್ವಾಹಾ ॥ ೧ ॥ ಅಗ್ನಯೇ ಪವಮಾನಾಯೇದಂ ನಮಮ ॥ ಏವಮಗ್ರೇಪಿ ॥ ಓಂ ಅಗ್ನಿರ್ಋಷಿಃ ಪವಮಾನಃ ಪಾಂಚಜನ್ಯಃ ಪುರೋಹಿತಃ । ತಮೀಮಹೇಮಹಾಗಯಂ ಸ್ವಾಹಾ ॥ ೨ ॥ ಅಗ್ನಯೇ ಪವಮಾನಾಯೇದಂ ನಮಮ ॥ ಓಂ ಆಗ್ನೇಪವಸ್ವಸ್ವಪಾ-ಅಸ್ಮೇವರ್ಚಃ ಸುವೀರ್ಯಂ ॥ ದಧದ್ರಯಿಂ ಮಯಿಪೋಷಂ ಸ್ವಾಹಾ ॥ ೩ ॥ ಅಗ್ನಯೇ ... ನಮಮ ॥ ಪ್ರಜಾಪತೇ ಹಿರಣ್ಯಗರ್ಭಃ ಪ್ರಜಾಪತಿಸ್ತ್ರಿಷ್ಟುಪ್ ॥

---

ಬಳಿಕ ಕುಮಾರನ ಕೈಮುಟ್ಟಿ ಆಘಾರಹೋಮದ ವರೆಗಿನ ಕರ್ಮವನ್ನು ಮಾಡಿ "**ಅಗ್ನ ಆಯೂಂಷಿ**" ಇತ್ಯಾದಿ ಮೂರು ಮಂತ್ರಗಳು ಮತ್ತು "**ಪ್ರಜಾಪತೇ**" ಎಂಬ ಮಂತ್ರಗಳಿಂದ ಆಜ್ಯಾಹುತಿಗಳನ್ನು ಕೊಡಬೇಕು. ಆಮೇಲೆ ಕ್ರಮವಾಗಿ ಬಲ ಮತ್ತು ಎಡಗೈಗಳಲ್ಲಿ ತಣ್ಣೀರು ಮತ್ತು ಬಿಸಿನೀರಿನ ಪಾತ್ರೆಗಳನ್ನು ಹಿಡಿದು ಕುಮಾರನ ಪಶ್ಚಿಮಭಾಗದಲ್ಲಿ ನಿಂತು "**ಓಂ ಉಷ್ಣೇನ .... ನೇಹಿ**" ಈ ಮಂತ್ರವನ್ನು ಹೇಳುತ್ತ ಆ ಎರಡನ್ನೂ ಮತ್ತೊಂದು ಪಾತ್ರೆಯಲ್ಲಿ ಒಟ್ಟಿಗೆ ಹಾಕಬೇಕು. ಅದರಿಂದ ಸ್ವಲ್ಪ ನೀರನ್ನು ತೆಗೆದುಕೊಂಡು ಬೆಣ್ಣೆ ಅಥವಾ ಕೆನೆಮೊಸರನ್ನು ಬೆರೆಸಿ ಕುಮಾರನ ಎಡಕಿವಿಯಿಂದ ಆರಂಭಿಸಿ ಪ್ರದಕ್ಷಿಣಾಕಾರವಾಗಿ "**ಓಂ ಅದಿತಿಃ ...ವರ್ಚಸೇ**" ಎಂಬ ಮಂತ್ರವನ್ನು ಹೇಳುತ್ತ ತಲೆಯನ್ನು ಮೂರು ಬಾರಿ ಒದ್ದೆ ಮಾಡಬೇಕು. ಆಮೇಲೆ ಬ್ರಹ್ಮನು ಕೈಯಲ್ಲಿರುವ ಇಪ್ಪತ್ತೊಂದು ದರ್ಭೆಗಳಿಂದ ಮೂರನ್ನು ತೆಗೆದುಕೊಂಡು "**ಓಂ ಓಷಧೇ ...**" ಎಂಬ ಮಂತ್ರವನ್ನು ಹೇಳುತ್ತ ಪಶ್ಚಿಮಕ್ಕೆ ತುದಿ ಇರುವಂತೆ ಕುಮಾರನ ಬಲಕಿವಿಯ ಭಾಗದಲ್ಲಿಟ್ಟು "**ಓಂ ಸ್ವಧಿತೇ ....**" ಎಂಬ ಮಂತ್ರ ಹೇಳಿ ಅದರ ಮೇಲೆ ತಾಮ್ರದ ಕತ್ತಿಯನ್ನು ಇಡಬೇಕು.

**ಚೂಡಾಕರ್ಮಪ್ರಧಾನಾಜ್ಯ ಹೋಮೇ ವಿನಿಯೋಗಃ ॥ ಓಂ ಪ್ರಜಾಪತೇನತ್ವ ... ಸ್ವಾಹಾ ॥ ಪ್ರಜಾಪತಯ ಇದಂ ನಮಮ ॥**

**ತತಃ ಶೀತಮುಷ್ಣಂಚೋಭೇ ಜಲೇ ದಕ್ಷಿಣವಾಮಕರಾಭ್ಯಾಂ ಕ್ರಮೇಣ ಪಾತ್ರಯೋಃ ಪೃಥಕ್ ಗೃಹೀತ್ವಾ ಶಿಶೋಃ ಪಶ್ಚಿಮದೇಶೇ ಸ್ಥಿತ್ವಾ ತದುದಕದ್ವ-ಯಮನ್ಯಸ್ಮಿನ್ ಪಾತ್ರೇ ಪಾಣಿಭ್ಯಾಂ ಓಂ ಉಷ್ಣೇನ ವಾಯ ಉದಕೇನೇಹಿ ಇತಿ ಮಂತ್ರೇಣ ಯುಗಪನ್ನಿನೀಯ ತದೇಕದೇಶಂ ಗೃಹೀತ್ವಾ ನವನೀತೇನ ದಧಿ-ದ್ರಪ್ಸೇನ ವಾ ಮಿಶ್ರಯಿತ್ವಾ ಕುಮಾರಸ್ಯ ವಾಮಕರ್ಣಮಾರಭ್ಯ ಪ್ರದಕ್ಷಿಣಂ ಓಂ ಅದಿತಿಃ ಕೇಶಾನ್‌ವಪತ್ವಾಪಉಂದಂತು ವರ್ಚಸೇ ಇತಿ ಮಂತ್ರಾವೃತ್ಯಾ ಶಿರಃ ತ್ರಿವಾರಂ ಕ್ಲೇದಯೇತ್ ॥ ತತೋ ಬ್ರಹ್ಮಾ ಹಸ್ತಸ್ಥಿತೈಕವಿಂಶತಿ ಕುಶ ಪಿಂಜೂಲಮಧ್ಯೇ ತ್ರೀಣಿ ಕುಶಪಿಂಜೂಲಾನ್ಯಾದಾಯ ॥ ಓಂ ಓಷಧೇ ತ್ರಾಯ-ಸ್ವೈನಂ ಇತಿ ಕುಮಾರಾಭಿಮುಖಂ ಪಶ್ಚಿಮಾಗ್ರಾಣಿ ತಸ್ಯ ದಕ್ಷಿಣೇ ಕೇಶಭಾಗೇ ನಿಧಾಯ ॥ ಓಂ ಸ್ವಧಿತೇ ಮೈನಂ ಹಿಂಸೀಃ ಇತಿ ತೇಷು ತಾಮ್ರಮಯಂ ಕ್ಷುರಂ ನಿಧಾಯ ॥ ಓಂ ಯೇನಾವಪತ್ಸವಿತಾಕ್ಷುರೇಣಸೋಮಸ್ಯರಾಜ್ಞೋವರುಣ-**

---

"**ಓಂ ಯೇನಾವಪತ್ಸವಿತಾ...**" ಈ ಮಂತ್ರವನ್ನು ಹೇಳಿ ಕೂದಲು ಸಹಿತ ದರ್ಭೆಗಳನ್ನು ಕತ್ತರಿಸಿ ಪೂರ್ವಕ್ಕೆ ತುದಿ ಇರುವಂತೆ ಶಮೀಪತ್ರಗಳೊಡನೆ ಸೇರಿಸಿ ತಾಯಿಯ ಕೈಗೆ ಕೊಡಬೇಕು. ಅವಳು ಅವುಗಳನ್ನು ಪೂರ್ವಕ್ಕೆ ತುದಿಗಳಿರುವಂತೆ ಎತ್ತಿನ ಸೆಗಣಿಯಲ್ಲಿಡಬೇಕು. ಹೀಗೆ ಎರಡನೆಯ ಮೂರನೆಯ ಇತ್ಯಾದಿ ಛೇದಾದಿಗಳನ್ನು ಮಂತ್ರಗಳನ್ನು ಉಚ್ಚರಿಸುತ್ತ ಮಾಡಬೇಕು. ಛೇದನಮಂತ್ರ ಮಾತ್ರ ಬೇರೆಯಾಗಿದೆ. (2) **ಯೇನಧಾತಾ** ..... (3) **ಯೇನಭೂಯಃ** ..... (4) ಮೇಲಿನ ಮೂರೂ ಮಂತ್ರಗಳು. ಹೀಗೆ ಉತ್ತರಭಾಗದ ಕೂದಲುಗಳನ್ನು ಮೂರುಬಾರಿ ಕತ್ತರಿಸಬೇಕು. ನಾಲ್ಕನೆಯ ಬಾರಿ ಕೂಡದು. ಆಮೇಲೆ "**ಯತ್‌ಕ್ಷುರೇಣ**" ಎಂಬ ಮಂತ್ರವನ್ನು ಹೇಳಿ ಬುಡದಿಂದ ತುದಿಯ ವರೆಗೆ ಕ್ಷೌರದ ಕತ್ತಿಯನ್ನು ಉಜ್ಜಬೇಕು. ಬಳಿಕ ಕ್ಷೌರಿಕನನ್ನು ಕರೆದು, ಮೊದಲು ಮಿಶ್ರಮಾಡಿದ ತಣ್ಣೀರು, ಬಿಸಿನೀರನ್ನು ಅವನ ಕೈಗೆ ಕೊಟ್ಟು ಸರಿಯಾಗಿ ಕ್ಷೌರಕರ್ಮ ಮಾಡಿಸಬೇಕು. ಕುಲಾಚಾರಕ್ಕೆ ತಕ್ಕಂತೆ ಶಿಖೆಯನ್ನಿಟ್ಟು ಮಾಡಬೇಕು.

ಆಮೇಲೆ ಸ್ನಾನಮಾಡಿಸಿ ಅಲಂಕರಿಸಿ ಕುಮಾರನನ್ನು, ತಾಯಿಯ ಮಡಿಲಲ್ಲಿ ಕೂತುಕೊಳ್ಳಿಸಬೇಕು.

ಕ್ಷವಿದ್ವಾನ್ ॥ ತೇನಬ್ರಹ್ಮಾಣೋವಪತೇದಮಸ್ಯಾಯುಷ್ಮಾನ್‌ಜರದಷ್ಟಿರ್ಯ-ಥಾಸತ್ ॥ ಇತಿ ಮಂತ್ರೇಣ ಸಕೇಶಾನಿ ಕುಶಪಿಂಜೂಲಾನಿ ಛಿತ್ವಾ ಪ್ರಾಗಗ್ರಾಣಿ ಕೃತ್ವಾ ಶರಾವಸ್ಥಶಮೀಪರ್ಣೈರೇಕೀಕೃತ್ಯ ಮಾತುಃ ಕರೇ ದದ್ಯಾತ್ ॥ ಸಾ ಚ ತಾನಿ ಸಕೇಶಾನ್ಯಾನಡುಹೇ ಗೋಮಯೇ ಪ್ರಾಗಗ್ರಾಣಿ ನಿದಧ್ಯಾತ್ ॥ ಏವಂ ದ್ವಿತೀಯಾದಿಛೇದನೇಷು ಕುಶಪಿಂಜೂಲನಿಧಾನಾದಿ ಸಮಂತ್ರಕಂ ಕಾರ್ಯಂ ॥ ಛೇದನಮಂತ್ರೇತು ವಿಶೇಷಃ ॥ ಓಂ ಯೇನ ಧಾತಾ ಬೃಹಸ್ಪತೇರಗ್ನೇರಿಂದ್ರಸ್ಯಚಾ-ಯುಷೇವಪತ್ ॥ ತೇನತ ಆಯುಷೇವಪಾಮಿಸುಶ್ಲೋಕ್ಯಾಯ ಸ್ವಸ್ತಯೇ ॥ ಇತಿ ದ್ವಿತೀಯೇ ॥ ಓಂ ಯೇನ ಭೂಯಶ್ಚರಾತ್ರ್ಯಾಂಜ್ಯೋಕ್ಚಪಶ್ಯಾತಿಸೂರ್ಯಂ ॥ ತೇನತಆಯುಷೇ ...... ॥ ಇತಿ ತೃತೀಯೇ ॥ ಚತುರ್ಥೇ ತು ॥ ಯೇನಾವಪತ್ ..... ॥ ಯೇನ ಧಾತಾ ..... ॥ ಯೇನ ಭೂಯಶ್ಚೇತಿ ತ್ರಯೋಽಪಿ ಮಂತ್ರಾಃ ॥ ಏವಮೇವೋತ್ತರೇ ಭಾಗೇಽಪಿ ಆದ್ಯಾನಿ ತ್ರೀಣಿ ಛೇದನಾನಿ ಕುರ್ಯಾತ್ ॥ ನ ತು ಸರ್ವಮಂತ್ರೈಶ್ಚತುರ್ಥಂ ॥

ತತಃ ॥ ಓಂ ಯತ್‌ಕ್ಷುರೇಣಮರ್ಚಯತಾಸುಪೇಶಸಾವಪ್ತಾವಪಸಿಕೇಶಾನ್ ॥ ಶುಂಧಿ ಶಿರೋಮಾಸ್ಯಾಯುಃಪ್ರಮೋಷೀಃ ॥ ಇತಿ ಮಂತ್ರೇಣಾಗ್ರತ ಆರಭ್ಯ ಆಮೂಲಂ ಕ್ಷುರಧಾರಾಂ ನಿಮೃಜ್ಯ ನಾಪಿತಮಾಹೂಯ ಶೀತೋಷ್ಣಾಭಿ-ರದ್ಭಿರಬರ್ಥಂ ಕುರ್ವಾಣೋಽಕ್ಷಿಣ್ವನ್ ಕುಶಲೀಕುರು ಇತಿ ಪ್ರೈಷಣಾನುಶಾಸ್ಯ ತಂ ಪ್ರೈಷಾರ್ಥಂ ಚಾವಬೋಧ್ಯ ನಾಪಿತೇನ ಪೂರ್ವವಶೇಷಿತ ಶೀತೋಷ್ಣಾಂಬು-ಭಿರಾರ್ದ್ರೀಕೃತಂ ಕುಮಾರಶಿರೋ ಯಥಾ ಕುಲಾಚಾರಂ ಕಲ್ಪಿತಶಿಖಂ ವಾಪಯಿತ್ವಾ ಕುಮಾರಂ ಸ್ನಾಪಯಿತ್ವಾ ಭೂಷಯಿತ್ವಾ ಪೂರ್ವವತ್ ಮಾತುರು-ತ್ಸಂಗೇ ಅವಸ್ಥಾಪ್ಯ ॥

ಸ್ವಿಷ್ಟಕೃದಾದಿ ಹೋಮಶೇಷಂ ಸಮಾಪ್ಯ ವ್ರೀಹ್ಯಾದಿಪೂರ್ಣಶರಾವಚ-ತುಷ್ಟಯಂ ನಾಪಿತಾಯ ದದ್ಯಾತ್ ॥ ಭೂಯಸೀಂ ದಕ್ಷಿಣಾಂ ದತ್ವಾ ಬ್ರಾಹ್ಮಣೇಭ್ಯೋ ದಶಸಂಖ್ಯಾತೇಭ್ಯೋ ಭೋಜನಂ ಚ ಸಂಕಲ್ಪ್ಯ ಕರ್ಮ-

**ಸಂಪೂರ್ಣತಾಂ ವಾಚಯಿತ್ವಾ ॥ ಯಸ್ಯಸ್ಮೃತ್ಯೇತ್ಯುಕ್ತ್ವಾ ವಿಷ್ಣುಂ ನಮಸ್ಕೃತ್ಯ ಆಶಿಷೋ ಬ್ರಾಹ್ಮಣೋಕ್ತಾಃ ಸ್ವಯಂ ಕುಮಾರಶ್ಚ ಗೃಹ್ಣೀಯಾತ್ ॥ ಏತತ್ಸರ್ವಂ ಕುಮಾರ್ಯಾ ಅಪಿ ಅಮಂತ್ರಕಂ ॥ ಹೋಮಸ್ತು ಸಮಂತ್ರಕಃ ॥**

**॥ ಇತಿ ಚೂಡಾಕರ್ಮಸಂಸ್ಕಾರಪ್ರಯೋಗಃ ॥**

---

ಸ್ವಿಷ್ಟಕೃದಾದಿ ಹೋಮಶೇಷವನ್ನು ಮುಗಿಸಿ ಅಕ್ಕಿ ಮೊದಲಾದ ಧಾನ್ಯತುಂಬಿದ ನಾಲ್ಕು ಪಾತ್ರೆಗಳನ್ನು ಕ್ಷೌರಿಕನಿಗೆ ಕೊಡಬೇಕು. ಹತ್ತುಮಂದಿ ಬ್ರಾಹ್ಮಣರಿಗೆ ಭೋಜನ ಭೂರಿದಕ್ಷಿಣೆ ಇತ್ಯಾದಿಗಳನ್ನಿತ್ತು ಅವರಿಂದ ಆಶೀರ್ವಾದ ಪಡೆಯಬೇಕು. ಹೆಣ್ಣುಮಗುವಿಗೂ ಅಮಂತ್ರಕವಾಗಿಯೇ ಈ ಎಲ್ಲ ವಿಧಿಗಳನ್ನೂ ಮಾಡಬೇಕು. ಹೋಮವನ್ನು ಮಾತ್ರ ಮಂತ್ರಪೂರ್ವಕ ಮಾಡಬೇಕು.

॥ ಚೂಡಾಕರ್ಮಪ್ರಯೋಗ ಸಮಾಪ್ತ ॥

೩೭

# ॥ ಉಪನಯನಪೂರ್ವಾಂಗಕೃತ್ಯಂ ॥

**॥ ಶ್ರೀಃ ॥ ಉಪನಯನಕರ್ತಾ ಸಪತ್ನೀಕಃ ಕೃತನಿತ್ಯಕ್ರಿಯಃ ಕೃತ-ಮಾಂಗಲಿಕಸ್ನಾನಃ ಸ್ವಲಂಕೃತೋ ಬದ್ಧಶಿಖಃ ದ್ವಿರಾಚಮ್ಯ ಪ್ರಾಣಾನಾಯಮ್ಯ ಇಷ್ಟದೇವತಾಂ ಗುರ್ವಾದೀಂಶ್ಚ ನಮಸ್ಕೃತ್ಯ ದೇಶಕಾಲೌ ಸಂಕೀರ್ತ್ಯ ಮಮೋಪನೇತೃತ್ವಾಧಿಕಾರಸಿದ್ಧಯೇ ಕೃಚ್ಛ್ರತ್ರಯಪ್ರಾಯಶ್ಚಿತ್ತಂ ದ್ವಾದಶಸಹಸ್ರ ಗಾಯತ್ರೀಜಪಂ ಚ ಕರಿಷ್ಯೇ ॥ ಕುಮಾರಃ ಮಮ ಕಾಮಚಾರಕಾಮವಾದ-ಕಾಮಭಕ್ಷಣಾದಿ ದೋಷಾಪನೋದಾರ್ಥಂ ಕೃಚ್ಛ್ರತ್ರಯಪ್ರಾಯಶ್ಚಿತ್ತಂ ಪ್ರತಿಕೃಚ್ಛ್ರಂ ತತ್ಪ್ರತ್ಯಾಮ್ನಾಯಗೋನಿಷ್ಕ್ರಯೀಭೂತ ನಿಷ್ಕಾರ್ಧಪರಿಮಿತರಜತದ್ರವ್ಯದಾನೇನ ಅಥವಾ ಪ್ರತಿಕೃಚ್ಛ್ರಂ ತತ್ಪ್ರತ್ಯಾಮ್ನಾಯಗೋನಿಷ್ಕ್ರಯೀಭೂತಕಾರ್ಷಾಪಣಪರಿ**

---

**ಉಪನಯನದ ಪೂರ್ವಭಾವಿಯಾಗಿ ಮಾಡಬೇಕಾದ ಕೃತ್ಯಗಳು:-** ಉಪನಯನ ಮಾಡುವ ಕರ್ತನು ಪತ್ನಿಯೊಡನೆ ಸ್ನಾನ ನಿತ್ಯಕರ್ಮಾದಿಗಳನ್ನು ಮಾಡಿ ತನ್ನನ್ನು ಅಲಂಕರಿಸಿ ಶಿಖೆಯನ್ನು ಕಟ್ಟಿ ಎರಡು ಸಲ ಆಚಮನ ಮಾಡಿ, ಪ್ರಾಣಾಯಾಮ ಮಾಡಿ, ಇಷ್ಟದೇವತೆಯನ್ನೂ, ಗುರುಹಿರಿಯರನ್ನೂ ನಮಸ್ಕರಿಸಿ ದೇಶಕಾಲಗಳನ್ನು ಸ್ಮರಿಸಿ **"ಮಮ .... ಕರಿಷ್ಯೇ"** ಎಂದು ಸಂಕಲ್ಪ ಮಾಡಬೇಕು. ಪುನಃ **"ಕುಮಾರಃ ಮಮ .... ಅಹಮಾಚರಿಷ್ಯೇ" "ಪೂರ್ವತನ ಸಂಸ್ಕಾರಲೋಪೇ .... ಅಹಮಾಚರಿಷ್ಯೇ"** ಎಂದೂ ಸಂಕಲ್ಪ ಮಾಡಬೇಕು. ಉಪನಯನ ಅಧಿಕಾರ ಸಿದ್ಧಿಗೆ ಮೂರು ಕೃಚ್ಛ್ರಗಳನ್ನು ಕೊಡಬೇಕು ಮತ್ತು ಹನ್ನೆರಡುಸಾವಿರ ಗಾಯತ್ರೀಜಪ ಮಾಡಬೇಕು. ಕುಮಾರನಿಗೂ ತನಗೂ ಕಾಮಚಾರ ಕಾಮವಾದ ಇತ್ಯಾದಿ ದೋಷ ಪರಿಹಾರಕ್ಕೆ ಮೂರು ಕೃಚ್ಛ್ರ ಪ್ರಾಯಶ್ಚಿತ್ತ. ಕೃಚ್ಛ್ರವೆಂದರೆ ಸುಮಾರು ಒಂದು ದನದ ಕ್ರಯದ ಕಾಲುಭಾಗ ಇಲ್ಲವೆ ವ್ಯವಹಾರದಲ್ಲಿ ಚಲಾವಣೆಯಲ್ಲಿರುವ ಸಾಕಷ್ಟು ದ್ರವ್ಯ. ಗರ್ಭಾಧಾನಾದಿ ಒಂಭತ್ತು ಸಂಸ್ಕಾರಗಳು ಆಗದಿದ್ದಲ್ಲಿ ಅವುಗಳ ಪ್ರಾಯಶ್ಚಿತ್ತಕ್ಕೆ ಒಂದೊಂದು ಸಂಸ್ಕಾರಕ್ಕೆ ಒಂದೊಂದರಂತೆ **"ಓಂ ಭೂರ್ಭುವ ..."** ಮಂತ್ರದಿಂದ ಆಜ್ಯಾಹುತಿ ಮತ್ತು ಪ್ರತಿಯೊಂದು ಸಂಸ್ಕಾರಕ್ಕೆ ಕಾಲು ಕೃಚ್ಛ್ರ, ಚೌಲಕ್ಕೆ ಅರ್ಧ ಕೃಚ್ಛ್ರದಂತೆ ದ್ರವ್ಯವನ್ನು ಕೊಡಬೇಕು.

ಉಪನಯನದೊಂದಿಗೆ ಚೌಲವನ್ನೂ ಮಾಡುವುದಾದರೆ ಆ ಸಂಕಲ್ಪವನ್ನೂ ಹೇಳಿಕೊಳ್ಳಬೇಕು. ಇಲ್ಲಿ ಆಚಾರವಿದ್ದಂತೆ ಎಣ್ಣೆ ಅರಸಿನಗಳ ಮೇಲಿರುವ ಮಹಾಲಕ್ಷ್ಮಿಯನ್ನು **"ಸಕ್ತುಮಿವ ...."** ಎಂಬ ಮಂತ್ರದಿಂದ ಪೂಜಿಸಬೇಕು. ಆಮೇಲೆ ಗಣಪತಿಪೂಜೆಯಿಂದ ಮಂಡಪದೇವತಾ ಪ್ರತಿಷ್ಠೆಯ ವರೆಗಿನ ಎಲ್ಲ ಕರ್ಮಗಳನ್ನೂ ಮಾಡಬೇಕು. ಗ್ರಹಯಜ್ಞವನ್ನು ಆಮೇಲೆಯೂ ಮಾಡಬಹುದು.

ಮಿತ ತಾಮ್ರಮೂಲ್ಯವ್ಯಾವಹಾರಿಕದ್ರವ್ಯದಾನೇನ ಅಹಮಾಚರಿಷ್ಯೇ ॥ ಪೂರ್ವತನ-ಸಂಸ್ಕಾರಲೋಪೇಽಸ್ಯ ಗರ್ಭಾಧಾನ ಪುಂಸವನಸೀಮಂತವಿಷ್ಣುಬಲ ಜಾತಕರ್ಮ ನಾಮಕರಣನಿಷ್ಕ್ರಮಣಾನ್ನಪ್ರಾಶನಚೌಲಾಂತಾನಾಂ ನವ ಸಂಸ್ಕಾರಣಾಂ ಕಾಲಾತಿ-ಪಾತಪ್ರತ್ಯಯಪರಿಹಾರದ್ವಾರಾ ಶ್ರೀಪರಮೇಶ್ವರಪ್ರೀತ್ಯರ್ಥಂ ಪ್ರತಿಸಂಸ್ಕಾರಂ ಓಂ ಭೂರ್ಭುವಃ ಸ್ವಃ ಸ್ವಾಹೇತ್ಯೇಕೈಕಾಮಾಜ್ಯಾಹುತಿಂ ತಥಾ ಉಕ್ತಸಂಸ್ಕಾರಾಣಾಂ ಲೋಪಜನಿತಪ್ರತ್ಯವಾಯಪರಿಹಾರದ್ವಾರಾ ಶ್ರೀಪರಮೇಶ್ವರಪ್ರೀತ್ಯರ್ಥಂ ಪ್ರತಿಸಂಸ್ಕಾರಂ ಪಾದಕೃಚ್ಛ್ರಂ ಚೌಲಸ್ಯಾರ್ಧಕೃಚ್ಛ್ರಂ ಪ್ರತಿಪಾದಕೃಚ್ಛ್ರಮರ್ಧಕೃಚ್ಛ್ರಂಚ ತತ್ಪ್ರತ್ಯಾಮ್ನಾಯ-ದ್ರವ್ಯದಾನೇನ ಅಹಮಾಚರಿಷ್ಯೇ ॥ ತಾನಿ ಕೃತ್ವಾ ॥

ಅಸ್ಯ ಕುಮಾರಸ್ಯ ದ್ವಿಜತ್ವಸಿದ್ಧ್ಯಾ ವೇದಾಧ್ಯಯನಾಧಿಕಾರಸಿದ್ಧ್ಯರ್ಥಂ ಶ್ವಃ ಸದ್ಯೋ ವಾ ಉಪನಯನಂ ಕರಿಷ್ಯೇ ॥ ತದಂಗಭೂತಂ ಗಣಪತಿಪೂಜನ-ಪೂರ್ವಕಂ ಸ್ವಸ್ತಿವಾಚನಂ ಮಾತೃಕಾಪೂಜನಂ ನಾಂದೀಶ್ರಾದ್ಧಂ ಮಂಡಪ-ಪ್ರತಿಷ್ಠಾಂ (ಕುಲದೇವತಾಸ್ಥಾಪನಂ) ಪೂಜನಂ ಚ ಕರಿಷ್ಯೇ ॥ ಉಪನಯನೇನ ಸಹ ಚೌಲಕರಣಪಕ್ಷೇ ತದಪಿ ಸಂಕಲ್ಪೇ ಕೀರ್ತಯೇತ್ ॥ ಅತ್ರಾಚಾರಾತ್ತೈಲ ಹರಿದ್ರಾಧಿಷ್ಠಾತ್ರೀಂ ಮಹಾಲಕ್ಷ್ಮೀಂ ಸುಕ್ತುಮಿವೇತಿ ಸಂಪೂಜ್ಯ ತಂತ್ರೇಣ ಚ ಗಣಪತಿಪೂಜನ ಸ್ವಸ್ತಿವಾಚನ ಮಾತೃಕಾಪೂಜನ ನಾಂದೀಶ್ರಾದ್ಧಗ್ರಹಯಜ್ಞಾ-ದೀನಿ ಕೃತ್ವಾ ಮಂಡಪದೇವತಾಪ್ರತಿಷ್ಠಾ ಕಾರ್ಯಾ ॥ ಅನಂತರಂ ವಾ ಗ್ರಹಯಜ್ಞಃ ಕಾರ್ಯಃ ॥

---

# ॥ ಉಪನಯನಸಂಸ್ಕಾರಃ ॥

॥ ಅಥಾಪರೇದ್ಯುಃ ಕೃತನಿತ್ಯಕ್ರಿಯಃ ಕೃತಮಂಗಲಸ್ನಾನಮಲಂಕೃತಂ ಕುಮಾರಂ ಮಾತುರುತ್ಸಂಗೇ ಭೋಜಯಿತ್ವಾ ಕರ್ತಾ ದೇಶಕಾಲೌ ಸಂಕೀರ್ತ್ಯ ಅಸ್ಯ ಕುಮಾರಸ್ಯ ಉಪನಯನಂ ಕರ್ತುಂ ತತ್ಪೂರ್ವಾಂಗಭೂತಂ ವಾಪನಾದಿ ಕರಿಷ್ಯೇ ಇತಿ ಸಂಕಲ್ಪ್ಯ ಕೃತವಾಪನಂ ಸ್ನಾಪಿತಂ ಬದ್ಧಶಿಖಂ ಕುಮಾರಂ ಮಂಗಲತಿಲಕಂ ಕುರ್ಯುಃ ॥ ಅತ್ರ ಮೌಹೂರ್ತಿಕಂ ಸಂಪೂಜ್ಯ ತದುಕ್ತೇ ಶುಭಮುಹೂರ್ತೇ ಆಚಾರ್ಯೋ ವೇದ್ಯಾಂ ಪ್ರಾಙ್ಮುಖ ಉಪವಿಶ್ಯ ವಟುಂ ಪ್ರತ್ಯಙ್ಮುಖಂ ಸ್ಥಾಪಯೇತ್ ॥ ಅಂತರಾಪಟಂ ಧೃತ್ವಾ (ಮಂಗಲಾಷ್ಟಕಪದ್ಯ-ಪಾಠಪುರಸ್ಸರಂ) ತಂ ಸ್ವಸಮೀಪಮಾನೀಯ ತನ್ಮುಖಂ ಸಮ್ಯಗೀಕ್ಷೇತ ॥ ಕೃತನಮಸ್ಕಾರಂ ಚ ತಂ ಸ್ವಾಂಕೇ ಕುರ್ವೀತ ॥ ಅಥಾಚಾರತಃ ಯೇ ಯಜ್ಞೇನೇತಿ ಸೂಕ್ತೇನ ಬೃಹಸ್ಪತೇ ಪ್ರಥಮಮಿತ್ಯನೇನ ತದಸ್ತು ಗೃಹಾವ್ಣೈ ಇತಿ ಮಂತ್ರೈ ರ್ಬ್ರಾಹ್ಮಣಾ ಉಭಯೋಃ ಶಿರಸ ಹರಿದ್ರಾದಿಯುಕ್ತಾಕ್ಷತಾನ್ ಕ್ಷಿಪೇಯುಃ ॥

ತತಸ್ತಂ ಸ್ವದಕ್ಷಿಣತ ಉಪವೇಶ್ಯ ಸ್ಥಂಡಿಲೋಪಲೇಪನಾದಿ ಸಮುದ್ಭವ-ನಾಮಾಗ್ನಿಪ್ರತಿಷ್ಠಾಂತಂ ಕೃತ್ವಾ ॥ ಸಮಿದ್ದ್ವಯಮಾದಾಯ ಕ್ರಿಯಮಾಣೇ ಉಪನಯನಹೋಮೇ ದೇವತಾಪರಿಗ್ರಹಾರ್ಥಮನ್ವಾಧಾನಂ ಕರಿಷ್ಯೇ ॥

---

**ಉಪನಯನ ಸಂಸ್ಕಾರಃ–** ಅದೇ ದಿನ ಅಥವಾ ಮರುದಿನ ನಿತ್ಯ ಕರ್ಮಾದಿಗಳನ್ನು ಮುಗಿಸಿ ಸ್ನಾನಮಾಡಿ ಅಲಂಕೃತನಾದ ಕುಮಾರನನ್ನು ತಾಯಿಯ ಮಡಿಲಲ್ಲಿ ಕುಳ್ಳಿರಿಸಿ ಊಟಮಾಡಿಸಬೇಕು. ಆಮೇಲೆ ದೇಶಕಾಲ ಸ್ಮರಣೆಮಾಡಿ **"ಅಸ್ಯ ಕುಮಾರಸ್ಯ ... ಕರಿಷ್ಯೇ"** ಎಂದು ಸಂಕಲ್ಪಿಸಿ, ಅವನಿಗೆ ಕ್ಷೌರ ಮಾಡಿಸಿ, ಸ್ನಾನವಾದ ಮೇಲೆ ತಿಲಕವನ್ನಿಡಬೇಕು. ಆಮೇಲೆ ಜ್ಯೋತಿಷ್ಯರನ್ನು ಅರ್ಚಿಸಿ ಅವರು ಹೇಳಿದ ಶುಭ ಮುಹೂರ್ತದಲ್ಲಿ ಯಜಮಾನನು ಪೂರ್ವಮುಖವಾಗಿ ಕುಳಿತು ವಟುವನ್ನು ಪಶ್ಚಿಮಮುಖವಾಗಿ ನಿಲ್ಲಿಸಬೇಕು. ಇಬ್ಬರ ಮಧ್ಯದಲ್ಲಿ ಅಂತಃಪಟವನ್ನು ಹಿಡಿದು ಮಂಗಲಾಷ್ಟಕವನ್ನು ಹೇಳಿದ ನಂತರ ಅವನನ್ನು ಸಮೀಪಕ್ಕೆ ಬರಮಾಡಿ ಅವನ ಮುಖವನ್ನು ಸರಿಯಾಗಿ ನೋಡಬೇಕು. ನಮಸ್ಕಾರ ಮಾಡಿದ ಅವನನ್ನು ತನ್ನ ಮಡಿಲಲ್ಲಿ ಕುಳ್ಳಿರಿಸಬೇಕು. ಆಗ ಬ್ರಾಹ್ಮಣರು **"ಯೇ ಯಜ್ಞೇನ" "ಬೃಹಸ್ಪತೇ ಪ್ರಥಮಂ" "ತದಸ್ತು ಮಿತ್ರಾ" "ಗೃಹಾವ್ಣೈ"** ಇತ್ಯಾದಿ ಮಂತ್ರಗಳನ್ನು ಹೇಳಿ ಅವರ ತಲೆಯ ಮೇಲೆ ಕುಂಕುಮಾಕ್ಷತೆಗಳನ್ನು ಹಾಕಬೇಕು.

ಆ ಮೇಲೆ ಕುಮಾರನನ್ನು ತನ್ನ ಬಲಭಾಗದಲ್ಲಿ ಕುಳ್ಳಿರಿಸಿ ಸ್ಥಂಡಿಲಸಂಸ್ಕಾರಗಳನ್ನು ಮಾಡಿ **"ಸಮುದ್ಭವ"** ಎಂಬ ಹೆಸರಿನ ಅಗ್ನಿಯನ್ನು ಪ್ರತಿಷ್ಠಾಪಿಸಿ ಅನ್ವಾಧಾನ ಮಾಡಬೇಕು. ಆಜ್ಯಸಂಸ್ಕಾರದ ವರೆಗಿನ ಎಲ್ಲ ಕರ್ಮಗಳನ್ನು ಮಾಡಿದ ಬಳಿಕ ಆಚಾರ್ಯನು ಅಗ್ನಿಯ

ಅಸ್ಮಿನ್ನನ್ವಾಹಿತೇಗ್ನಾವಿತ್ಯಾಘಾರಾವಾಜ್ಯೇನೇತ್ಯಂತಮುಕ್ತ್ವಾ ॥ ಅತ್ರ ಪ್ರಧಾನಂ ತ್ರಿರಗ್ನಿಂ ಪವಮಾನಂ ಪ್ರಜಾಪತಿಂ ಚಾಜ್ಯೇನ ಶೇಷೇಣ ಸ್ವಿಷ್ಟಕೃತಮಿತ್ಯಾದ್ಯಾಜ್ಯ-ಸಂಸ್ಕಾರಾಂತಂ ಕೃತ್ವಾ ॥

ಆಚಾರ್ಯೋ ಅಗ್ನೇಃ ಪಶ್ಚಾದವಸ್ಥಾಪ್ಯ ಕುಮಾರಂ ಪ್ರಾಙ್ಮುಖಮವ-ಸ್ಥಾಪ್ಯ ಕೌಪೀನಾರ್ಥಂ ತ್ರಿವೃತ್ತಂ ಕಾರ್ಪಾಸಸೂತ್ರಂ ಕಟಾವಾಬಧ್ಯ ಕೌಪೀನಂ ಪರಿಧಾಪ್ಯ ॥ ಯುವಂ ವಸ್ತ್ರಾಣೀತ್ಯಸ್ಯೌಚಥ್ಯೋದೀರ್ಘತಮಾಮಿತ್ರಾವರುಣೌ ತ್ರಿಷ್ಟುಪ್ ॥ ವಾಸೋಧಾರಣೇ ವಿನಿಯೋಗಃ ॥ ಓಂ ಯುವಂ ವಸ್ತ್ರಾಣಿಪೀವ-ಸಾವಸಾಥೇಯುವೋರಚ್ಛಿದ್ರಾಮಂತವೋಹಸರ್ಗಾಃ ॥ ಅವಾತಿರತಮನೃತಾನಿ-ವಿಶ್ವಋತೇನಮಿತ್ರಾವರುಣಾಸಚೇಥೇ । ಇತಿ ಮಂತ್ರೇಣ ಶುಕ್ಲಂ ವಾಸಃ ಪರಿ-ಧಾಪ್ಯ ಅನ್ಯೇನ ಕಾಷಾಯವಾಸಸಾ ತೇನೈವ ಮಂತ್ರೇಣ ತಥೈವ ಪ್ರಾವಾರ-ಯೇತ್ ॥ ಮಿತ್ರಸ್ಯ ಚಕ್ಷುರಿತ್ಯಸ್ಯ ವಾಮದೇವೋಽಜಿನಂ ತ್ರಿಷ್ಟುಪ್ ॥ ಅಜಿನಧಾರಣೇ ವಿನಿಯೋಗಃ ॥ ಓಂ ಮಿತ್ರಸ್ಯಚಕ್ಷುರ್ಧರುಣಂ ಬಲೀಯಸ್ತೇಜೋ-ಯಶಸ್ವೀ ಸ್ಥವಿರಂ ಸಮಿದ್ಧಂ ॥ ಅನಾಹನಸ್ಯಂ ವಸನಂ ಜರಿಷ್ಣು ಪರೀದಂ ವಾಜ್ಯಜಿನಂ ದಧಸ್ವ ॥ ಇತ್ಯಜಿನಂಧಾರಾಯಿತ್ವಾ ॥

**ಯಜ್ಞೋಪವೀತಧಾರಣಂ:-** ತತೋ ಗಾಯತ್ರ್ಯಾ ದಶಕೃತ್ವೋಪಮಂತ್ರಿ-ತಾದ್ಭಿರುಪವೀತಂ ಪ್ರೋಕ್ಷ್ಯ ಧಾರಯೇತ್ ॥ ಯಜ್ಞೋಪವೀತಮಿತಿ ಮಂತ್ರಸ್ಯ

---

ಪಶ್ಚಿಮಭಾಗದಲ್ಲಿ ಕುಳಿತುಕೊಂಡು ವಟುವನ್ನು ಪೂರ್ವಕ್ಕೆ ಮುಖಮಾಡಿ ನಿಲ್ಲಿಸಿ, ಕೌಪೀನ ಧಾರಣೆ ಮಾಡುವುದಕ್ಕೆ ಹತ್ತಿಯ ದಾರವನ್ನು ಮೂರು ಸುತ್ತು ಸೊಂಟಕ್ಕೆ ತೊಡಿಸಬೇಕು. ಆಮೇಲೆ ಕೌಪೀನವನ್ನು ಉಡಿಸಬೇಕು. "**ಯುವಂ ವಸ್ತ್ರಾಣಿ**" ಎಂಬ ಮಂತ್ರವನ್ನು ಹೇಳಿ ಶುಭ್ರವಾದ ಬಿಳಿಬಟ್ಟೆಯನ್ನು ಉಡಿಸಬೇಕು. ಅದೇ ಮಂತ್ರದಿಂದ ಮತ್ತೊಂದು ಕಾಷಾಯವಸ್ತ್ರವನ್ನು ಉತ್ತರೀಯದಂತೆ ಹೊದಿಸಬೇಕು. "**ಮಿತ್ರಸ್ಯಚಕ್ಷು**" ಎಂಬ ಮಂತ್ರವನ್ನು ಹೇಳಿ ಕೃಷ್ಣಾಜಿನವನ್ನು ತೊಡಿಸಬೇಕು.

**ಯಜ್ಞೋಪವೀತವನ್ನು ಧರಿಸುವುದು:-** ಹತ್ತು ಗಾಯತ್ರಿಗಳನ್ನು ಹೇಳಿ, ಅಭಿಮಂತ್ರಿಸಿದ ನಂತರ ನೀರಿನಿಂದ ಪ್ರೋಕ್ಷಿಸಿ, "**ಯಜ್ಞೋಪವೀತಂ ಪರಮಂ ಪವಿತ್ರಂ...**" ಎಂಬ ಮಂತ್ರವನ್ನು ಹೇಳಿಸಿ, ಬಲತೋಳನ್ನು ಮೇಲೆತ್ತಿ ಯಜ್ಞೋಪವೀತವನ್ನು ತೊಡಿಸಬೇಕು. ಆಮೇಲೆ

**ಪರಬ್ರಹ್ಮಪರಮಾತ್ಮಾ ತ್ರಿಷ್ಟುಪ್ ॥ ಶ್ರೌತಸ್ಮಾರ್ತಕರ್ಮಾನುಷ್ಠಾನಸಿದ್ಧ್ಯರ್ಥಂ ಯಜ್ಞೋಪವೀತಧಾರಣೇ ವಿನಿಯೋಗಃ ॥ ಓಂ ಯಜ್ಞೋಪವೀತಂ ಪರಮಂ ಪವಿತ್ರಂ ಪ್ರಜಾಪತೇರ್ಯತ್ಸಹಜಂ ಪುರಸ್ತಾತ್ ॥ ಆಯುಷ್ಯಮಗ್ರ್ಯಂ ಪ್ರತಿಮುಂಚ ಶುಭ್ರಂ ಯಜ್ಞೋಪವೀತಂ ಬಲಮಸ್ತು ತೇಜಃ ॥ ಇತಿ ಮಂತ್ರಂ ವಾಚಯಿತ್ವಾ ದಕ್ಷಿಣಬಾಹುಮುದ್ಧಾರ್ಯ ಉಪವೀತಂ ಧಾರಯಿತ್ವಾ ಕುಮಾರ ಮಾತ್ಮನೋಽಗ್ನೇಶ್ಚ ಮಧ್ಯೇನ ಯಜ್ಞಪಾತ್ರೋತ್ತರಭಾಗಂ ಗಮಯಿತ್ವಾ ತತ್ರ ವಿಧಿವದಾಚಮ್ಯ ॥**

---

ಕುಮಾರನನ್ನು ತನ್ನ ಮತ್ತು ಅಗ್ನಿಯ ಮಧ್ಯಭಾಗದಿಂದ ಉತ್ತರಕ್ಕೆ ಕೊಂಡೊಯ್ದು ಅಲ್ಲಿ ಕುಳ್ಳಿರಿಸಿ ವಿಧಿಪ್ರಕಾರ ಆಚಮನ ಮಾಡಿಸಬೇಕು.

**ಆಚಮನ ವಿಧಿಃ-** 1. ಕೇಶವಾಯ ಸ್ವಾಹಾ. 2. ನಾರಾಯಣಾಯ ಸ್ವಾಹಾ 3. ಮಾಧವಾಯ ಸ್ವಾಹಾ. ಈ ಮೂರು ನಾಮಗಳನ್ನು ಹೇಳಿ ನೀರು ಕುಡಿಸಬೇಕು. 4. ಗೋವಿಂದಾಯ ನಮಃ, ಬಲಗೈಯನ್ನು ತೊಳೆಯುವುದು. 5. ವಿಷ್ಣವೇ ನಮಃ, ಕೆಳತುಟಿಯನ್ನು ಉಜ್ಜುವುದು. 6. ಮಧುಸೂದನಾಯ ನಮಃ, ಮೇಲಿನ ತುಟಿಯನ್ನು ಉಜ್ಜುವುದು 7. ತ್ರಿವಿಕ್ರಮಾಯ ನಮಃ, ಎರಡೂ ತುಟಿಗಳನ್ನು ಒಟ್ಟಾಗಿ ಉಜ್ಜುವುದು. 8. ವಾಮನಾಯ ನಮಃ, ಕೈಯಲ್ಲಿ ನೀರನ್ನು ತೆಕ್ಕೊಂಡು ಅಭಿಮಂತ್ರಿಸುವುದು. 9. ಶ್ರೀಧರಾಯ ನಮಃ, ಎಡಗೈಯನ್ನು ತೊಳೆಯುವುದು. 10. ಹೃಷೀಕೇಶಾಯ ನಮಃ, ಬಲ ಕಾಲನ್ನು ಮುಟ್ಟು ವುದು 11. ಪದ್ಮನಾಭಾಯ ನಮಃ, ಎಡ ಕಾಲನ್ನು ಮುಟ್ಟುವುದು. 12. ದಾಮೋದರಾಯ ನಮಃ, ತಲೆಯ ಮೇಲೆ ನೀರನ್ನು ಪ್ರೋಕ್ಷಿಸುವುದು. 13. ಸಂಕರ್ಷಣಾಯ ನಮಃ, ಬೆರಳುಗಳ ತುದಿಯಿಂದ ಮೇಲಿನ ತುಟಿಯನ್ನು ಮುಟ್ಟುವುದು. 14. ವಾಸುದೇವಾಯ ನಮಃ, ಹೆಬ್ಬೆರಳು ಮತ್ತು ತರ್ಜನಿಗಳಿಂದ ಬಲಮೂಗನ್ನು ಮುಟ್ಟುವುದು. 15. ಪ್ರದ್ಯುಮ್ನಾಯ ನಮಃ, ಅಂಗುಷ್ಠ ತರ್ಜನಿಗಳಿಂದ ಎಡಮೂಗನ್ನು ಮುಟ್ಟುವುದು. 16. ಅನಿರುದ್ಧಾಯ ನಮಃ, ಅಂಗುಷ್ಠ ಅನಾಮಿಕೆಗಳಿಂದ ಬಲಗಣ್ಣನ್ನು ಮುಟ್ಟುವುದು. 17. ಪುರುಷೋತ್ತಮಾಯ ನಮಃ, ಅಂಗುಷ್ಠ ಅನಾಮಿಕೆಗಳಿಂದ ಎಡ ಕಣ್ಣನ್ನು ಮುಟ್ಟುವುದು. 18. ಅಧೋಕ್ಷಜಾಯ ನಮಃ, ಅಂಗುಷ್ಠ ಕನಿಷ್ಠಿಕೆಗಳಿಂದ ಬಲ ಕಿವಿ ಮುಟ್ಟುವುದು. 19. ನಾರಸಿಂಹಾಯ ನಮಃ, ಅಂಗುಷ್ಠ ಕನಿಷ್ಠಿಕೆಗಳಿಂದ ಎಡ ಕಿವಿ ಮುಟ್ಟುವುದು. 20. ಅಚ್ಯುತಾಯ ನಮಃ, ಅಂಗುಷ್ಠ ಕನಿಷ್ಠಿಕೆಗಳಿಂದ ನಾಭಿಸ್ಪರ್ಶ, 21. ಜನಾರ್ದನಾಯ ನಮಃ, ಕೈಯ ತಳದಿಂದ ಹೃದಯಸ್ಪರ್ಶ. 22. ಉಪೇಂದ್ರಾಯ ನಮಃ, ಕೈಯಿಂದ ಹಣೆಯನ್ನು ಮುಟ್ಟುವುದು. 23. ಹರಯೇ ನಮಃ, ಬೆರಳ ತುದಿಗಳಿಂದ ದಕ್ಷಿಣ ಭುಜಸ್ಪರ್ಶ. 24. ಶ್ರೀಕೃಷ್ಣಾಯ ನಮಃ, ಬೆರಳ ತುದಿಗಳಿಂದ ಎಡಭುಜಸ್ಪರ್ಶ.

**ಪ್ರಧಾನ ಹೋಮಃ**– ಪುನಸ್ತಥೈವಾನೀಯ ಸ್ವದಕ್ಷಿಣತ ಉಪವೇಶ್ಯ ॥ ಬರ್ಹಿರಾಸ್ತರಣಾದ್ಯಾಘಾರಹೋಮಾಂತಂ ಕೃತ್ವಾ ॥ ಅಗ್ನ ಆಯೂಂಷೀತಿ ತಿಸೃಣಾಂ ಶತಂ ವೈಖಾನಸಾ ಋಷಯಃ ಅಗ್ನಿಃ ಪವಮಾನೋ ದೇವತಾ ॥ ಗಾಯತ್ರೀಛಂದಃ ॥ ಉಪನಯನಪ್ರಧಾನಾಜ್ಯಹೋಮೇ ವಿನಿಯೋಗಃ ॥ ಓಂ ಅಗ್ನ ಆಯೂಂಷಿ ಪವಸ ಆಸುವೋರ್ಜಮಿಷಂಚನಃ ॥ ಆರೇಬಾಧಸ್ವದು-ಚ್ಛುನಾಂ ಸ್ವಾಹಾ ॥ ಅಗ್ನಯೇ ಪವಮಾನಾಯೇದಂ ನಮಮ ॥ ಓಂ ಅಗ್ನಿ-ರ್ಋಷಿಃ ಪವಮಾನಃ ಪಾಂಚಜನ್ಯಃ ಪುರೋಹಿತಃ ॥ ತಮೀಮಹೇಮಹಾ-ಗಯಂ ಸ್ವಾಹಾ ॥ ಅಗ್ನಯೇ ಪವಮಾನಾಯೇದಂ... ॥ ಓಂ ಅಗ್ನೇಪವ-ಸ್ವಸ್ವಪಾ ಅಸ್ಮೇವರ್ಚಃ ಸುವೀರ್ಯಂ ॥ ದಧದ್ರಯಿಂ ಮಯಿಪೋಷಂ ಸ್ವಾಹಾ ॥ ಅಗ್ನಯೇಪವಮಾನಾಯೇದಂ ... ॥ ಪ್ರಜಾಪತೇ ಹಿರಣ್ಯಗರ್ಭಃ ಪ್ರಜಾಪತಿ-ಸ್ತ್ರಿಷ್ಟುಪ್ ॥ ಉಪನಯನಪ್ರಧಾನಾಜ್ಯಹೋಮೇ ವಿನಿಯೋಗಃ ॥ ಓಂ ಪ್ರಜಾ-ಪತೇನತ್ವದೇತಾನ್ಯನ್ಯೋವಿಶ್ವಾಜಾತಾನಿಪರಿಬತಾಭೂವ ॥ ಯತ್ಕಾಮಾಸ್ತೇಜುಹುಮ-ಸ್ತನ್ನೋ ಅಸ್ತು ವಯಂ ಸ್ಯಾಮ ಪತಯೋರಯೀಣಾಂ ಸ್ವಾಹಾ ॥ ಪ್ರಜಾಪತಯ ಇದಂ ನಮಮ ॥

**ಸೂರ್ಯಾವೇಕ್ಷಣಾದಿಕ್ರಿಯಾಃ**– ಅಥಾಚಾರ್ಯ ಉತ್ತರತೋಽಗ್ನೇಃ ಪ್ರಾಙ್ಮು-ಖಸ್ತಿಷ್ಠೇತ್ । ಕುಮಾರೋಪ್ಯಗ್ನ್ಯಾಚಾರ್ಯಯೋರ್ಮಧ್ಯೇನ ಗತ್ವಾಚಾರ್ಯಾ-ಭಿಮುಖಸ್ತಿಷ್ಠೇತ್ ॥ ಅಥಾಚಾರ್ಯಃ ಕುಮಾರಸ್ಯ ಶುಚಿತ್ವಸಿದ್ಧಯೇ

---

**ಪ್ರಧಾನಹೋಮಃ**– ಕುಮಾರನನ್ನು ಅದೇ ಮೊದಲಿನ ಕ್ರಮದಿಂದ ಹಿಂದಕ್ಕೆ ಕರೆದು ತನ್ನ ಬಲಭಾಗದಲ್ಲಿ ಕುಳ್ಳಿರಿಸಿ (1) **"ಅಗ್ನ ಆಯೂಂಷಿ......"** (2) **"ಅಗ್ನಿರ್ಋಷಿ..."** (3) **"ಅಗ್ನೇಪವಸ್ವ..."** (4) **"ಪ್ರಜಾಪತೇ"** ಈ ನಾಲ್ಕು ಮಂತ್ರಗಳಿಂದ ನಾಲ್ಕು ಆಜ್ಯಾಹುತಿಗಳನ್ನು ಕೊಡಬೇಕು.

**ಸೂರ್ಯಾವೇಕ್ಷಣ ಮೊದಲಾದ ಕ್ರಿಯೆಗಳು**:– ಆಚಾರ್ಯನು ಅಗ್ನಿಯ ಉತ್ತರದಲ್ಲಿ ಪೂರ್ವಕ್ಕೆ ಮುಖಮಾಡಿ ನಿಲ್ಲಬೇಕು. ಕುಮಾರನೂ ಅಗ್ನಿ ಮತ್ತು ಆಚಾರ್ಯನ ಮಧ್ಯದ ದಾರಿಯಿಂದ ಹೋಗಿ ಅವನಿಗೆ ಇದಿರಾಗಿ ನಿಲ್ಲಬೇಕು. ಆಗ ಆಚಾರ್ಯನು,

**ಸವಿತೃದೇವತಾತೃಪ್ತ್ಯರ್ಥೇಚಾಂಜಲಿಕ್ಷಾರಣಂ ಕರಿಷ್ಯೇ ॥ ಶುದ್ಧೋದಕೇನ ಶಿಷ್ಯಾಂಜಲಿಮಾಪೂರ್ಯ ಸ್ವಸ್ಯಾಂಜಲಿಮನ್ಯೇನ ಪೂರಯಿತ್ವಾ ॥ ತತ್ಸವಿತುರಿತ್ಯಸ್ಯ ಶ್ಯಾವಾಶ್ವಃ ಸವಿತಾನುಷ್ಟುಪ್ ॥ ಅವಕ್ಷಾರಣೇ ವಿನಿಯೋಗಃ ॥ ಓಂ ತತ್ಸವಿ-ತುರ್ವೃಣೀಮಹೇವಯಂ ದೇವಸ್ಯ ಭೋಜನಂ ॥ ಶ್ರೇಷ್ಠಂ ಸರ್ವಧಾತಮಂತುರಂ ಭಗಸ್ಯಧೀಮಹಿ ॥ ಅನೇನ ಸ್ವಾಂಜಲ್ಯುದಕಂ ಶಿಷ್ಯಾಂಜಲಾವವಕ್ಷಾರ್ಯ ತಜ್ಜಲಂ ಕುಮಾರಾಂಜಲಿನ್ಯೈವ ಕ್ಷಾರಯೇತ್ ॥**

**ತತಃ ಶಿಷ್ಯತ್ವಸಿದ್ಧ್ಯರ್ಥಂ ದಕ್ಷಿಣೇನ ಪಾಣಿನಾ ವಟೋರ್ದಕ್ಷಿಣಹಸ್ತಂ ಸಾಂಗುಷ್ಠಂ ಗೃಹ್ಣೀಯಾತ್ ॥ ತತ್ರ ಮಂತ್ರಃ ॥ ಓಂ ದೇವಸ್ಯತ್ವಾ ಸವಿತುಃ ಪ್ರಸವೇಶ್ವಿನೋರ್ಬಾಹುಭ್ಯಾಂ ಪೂಷ್ಣೋಹಸ್ತಾಭ್ಯಾಂ ಹಸ್ತಂ ಗೃಹ್ಣಾಮಿ ॥ ಅಮುಕ ಶರ್ಮನ್ ॥ ಪುನಃ ಪೂರ್ವವದುದಕಪೂರಣಾದ್ಯವಕ್ಷಾರಯೇತ್ ॥ ದ್ವಿತೀಯೇ ಹಸ್ತಗ್ರಹಣೇ ಮಂತ್ರವಿಶೇಷಃ ॥ ಓಂ ಸವಿತಾತೇ ಹಸ್ತಮಗ್ರಭೀತ್ ॥ ಅಮುಕಶರ್ಮನ್ ॥ ಪುನರಪಿ ಪೂರ್ವವತ್ ಪೂರಯಿತ್ವಾವಕ್ಷಾರ್ಯ ॥ ಓಂ ಅಗ್ನಿರಾಚಾರ್ಯಸ್ತವ ॥ ಅಮುಕಶರ್ಮನ್ ॥ ಇತಿ ತೃತೀಯೇ ॥ ಅಥಾಚಾರ್ಯೋ ಬ್ರಹ್ಮಚಾರಿಣಾ ಸಹ ನಿಷ್ಕ್ರಮ್ಯ ॥ ಓಂ ದೇವ ಸವಿತರೇಷ ತೇ ಬ್ರಹ್ಮಚಾರೀ ತಂ**

---

"**ಕುಮಾರಸ್ಯ ... ಕ್ಷಾರಣಂ ಕರಿಷ್ಯೇ**" ಎಂದು ಸಂಕಲ್ಪ ಮಾಡಿ ಶುದ್ಧವಾದ ನೀರಿನಿಂದ ವಟುವಿನ ಬೊಗಸೆಯನ್ನು ತುಂಬಿ ತನ್ನ ಬೊಗಸೆಯನ್ನೂ ನೀರಿನಿಂದ ತುಂಬಿಸಿಕೊಂಡು "**ಓಂ ತತ್ಸವಿತುರ್ವೃಣೀಮಹೇ ...**" ಎಂಬ ಮಂತ್ರದಿಂದ ಆ ನೀರನ್ನು ವಟುವಿನ ಬೊಗಸೆಗೆ ಹಾಕಿ ಅವನ ಕೈಗಳನ್ನು ಸರಿಯಾಗಿ ಶುಚಿಮಾಡಬೇಕು. ಆಮೇಲೆ ಶಿಷ್ಯತ್ವ ಸಿದ್ಧಿಗೆ ವಟುವಿನ ಬಲಗೈಯನ್ನು ಅಂಗುಷ್ಠಸಹಿತ ತನ್ನ ಬಲಗೈಯಿಂದ "**ಓಂ ದೇವಸ್ಯತ್ವಾ ...**" ಎಂಬ ಮಂತ್ರವನ್ನು ಹೇಳುತ್ತ ಹಿಡಿದು "**ಅಮುಕಶರ್ಮನ್**" ಎಂದು ಕರೆಯಬೇಕು. ಹಾಗೇ ಇನ್ನೆರಡು ಸಲ ಮಾಡಬೇಕು. ಎರಡನೆಯ ಸಲ "**ಓಂ ಸವಿತಾತೇ ...**" ಹಾಗೂ ಮೂರನೆಯ ಸಲ "**ಅಗ್ನಿರಾಚಾರ್ಯ ...**" ಎಂಬ ಮಂತ್ರವನ್ನು ಹೇಳಬೇಕು. ಆಚಾರ್ಯನು ಬ್ರಹ್ಮಚಾರಿಯನ್ನು ಕರಕೊಂಡು ಹೊರಗೆ ಹೋಗಿ "**ಓಂ ದೇವಸವಿತ...**" ಎಂಬ ಮಂತ್ರ ಹೇಳಿ, 'ಆದಿತ್ಯನಿಗೆ ವಟುವನ್ನು ರಕ್ಷಣೆಗೆ ಅರ್ಪಿಸುತ್ತೇನೆ' ಎಂದು ಮನಸ್ಸಿನಲ್ಲಿ ಭಾವಿಸಿ ವಟುವಿಗೆ ಆದಿತ್ಯದರ್ಶನ ಮಾಡಿಸ ಬೇಕು. ಆಮೇಲೆ ಇಬ್ಬರೂ ಅಗ್ನಿಯ ಉತ್ತರಭಾಗದಲ್ಲಿ ಇದಿರುಬದಿರಾಗಿ ನಿಂತು,

ಗೋಪಾಯ ಸಮಾಮೃತ ಇತ್ಯುಕ್ತ್ವಾ ॥ ಸಂರಕ್ಷಣಾರ್ಥಂ ವ್ರತಪತಯೇ ಆದಿತ್ಯಾಯ ವಟುಂ ದದಾಮೀತಿ ಮನಸಾ ಸ್ಮರನ್ ಬ್ರಹ್ಮಚಾರಿಣ ಮಾದಿತ್ಯಮೀಕ್ಷಯೇತ್ ॥ ತತೋ ಉಭಾವಪಿ ಪೂರ್ವವದುತ್ತರತೋಽಗ್ನೇರ-ನ್ಯೋನ್ಯಾಭಿಮುಖೌ ತಿಷ್ಠೇತಾಂ ॥ ಅಥಾಚಾರ್ಯಃ ಕಸ್ಯ ಬ್ರಹ್ಮಚಾರ್ಯಸಿ ಪ್ರಾಣಸ್ಯ ಬ್ರಹ್ಮಚಾರ್ಯಸಿ ಕಸ್ತ್ವಾಕಮುಪನಯತೇ ಕಾಯತ್ವಾಪರಿದದಾಮಿ ಇತಿ ಮಂತ್ರಂ ಜಪನ್ ಕುಮಾರಂ ಪ್ರಜಾಪತಯೇ ಮನಸಾ ಸಮರ್ಪ್ಯ ॥ ಯುವಾ ಸುವಾಸಾ ಇತ್ಯಸ್ಯ ಕೌಶಿಕೋ ವಿಶ್ವಾಮಿತ್ರೋ ಯೂಪಸ್ತ್ರಿಷ್ಟುಪ್ ॥ ಪೂರ್ವಾರ್ಧರ್ಚಸ್ಯ ಪ್ರದಕ್ಷಿಣಾವರ್ತನೇ ಉತ್ತರಾರ್ಧರ್ಚಸ್ಯ ಪಾಣಿಭ್ಯಾಂ ವಟೋ-ರ್ಹೃದಯಾಲಂಭನೇ ವಿನಿಯೋಗಃ ॥ ಓಂ ಯುವಾಸುವಾಸಾಃ ಪರಿವೀತ ಆಗಾತ್ಸಉಶ್ರೇಯಾನ್ ಭವತಿ ಜಾಯಮಾನಃ ॥ ಇತಿ ಪ್ರದಕ್ಷಿಣಮಾವರ್ತ-ನೇನ ಪ್ರಾಙ್ಮುಖಮವಸ್ಥಾಪ್ಯ ॥ ತದಂಸಯೋರುಪರಿ ಸ್ವಪಾಣೀ ನೀತ್ವಾ ॥ ಓಂ ತಂ ಧೀರಾಸಃ ಕವಯ ಉನ್ನಯಂತಿ ಸ್ವಾಧ್ಯೋ೩ ಮನಸಾ ದೇವ-ಯಂತಃ ॥ ಇತಿ ಪಾಣಿಭ್ಯಾಂ ವಟುಹೃದಯಂ ಸ್ಪೃಶೇತ್ ॥ ತತ ಆತ್ಮಾನಮಗ್ನಿಂಚಾತರಾ ವಟುಂ ನೀತ್ವಾ ಪ್ರತ್ಯಗಗ್ನೇಃ ಸ್ವಯಮುಪವಿಶ್ಯ ಸ್ವಸ್ಯ ದಕ್ಷಿಣತಃ ಪ್ರಾಙ್ಮುಖಂ ತಮುಪವೇಶಯೇತ್ ॥

ಬ್ರಹ್ಮಚಾರಿಣಃ ಅಗ್ನಿಕಾರ್ಯಂ:- ತತೋ ವಟುರಗ್ನೇಃ ಪರಿಸಮೂಹನ-ಪರ್ಯುಕ್ಷಣೇ ಕೃತ್ವಾ ॥ ಅಗ್ನಯೇ ಸಮಿಧಮಿತ್ಯಸ್ಯ ಹಿರಣ್ಯಗರ್ಭೋಽಗ್ನಿರ್ಬೃ-

---

ಆಚಾರ್ಯನು **"ಕಸ್ಯ ಬ್ರಹ್ಮಚಾರ್ಯಸಿ ... ಪರಿದದಾಮಿ"** ಎಂದು ಹೇಳಿ ಕುಮಾರನನ್ನು ಮಾನಸಿಕವಾಗಿ ಪ್ರಜಾಪತಿಗೆ ಸಮರ್ಪಿಸಬೇಕು. ಬಳಿಕ **"ಓಂ ಯುವಾಸುವಾಸಾ ..."** ಎಂದು ಅರ್ಧ ಮಂತ್ರವನ್ನು ಹೇಳಿ ಪ್ರದಕ್ಷಿಣಾಕಾರವಾಗಿ ವಟುವನ್ನು ತಿರುಗಿಸಿ ಪೂರ್ವಮುಖವಾಗಿ ನಿಲ್ಲಿಸಿ ತನ್ನ ಎರಡು ಕೈಗಳನ್ನು ಅವನ ಹೆಗಲಮೇಲೆ ಇಟ್ಟು, **"ತಂಧೀರಾಸಃ ...."** ಎಂಬ ಉಳಿದ ಅರ್ಧ ಮಂತ್ರವನ್ನು ಹೇಳಿ ಕೈಗಳಿಂದ ವಟುವಿನ ಹೃದಯವನ್ನು ಸ್ಪರ್ಶಿಸಬೇಕು. ಆಮೇಲೆ ತಾನು ಅಗ್ನಿಯ ಪಶ್ಚಿಮಭಾಗದಲ್ಲಿ ಕುಳಿತು, ತನ್ನ ಬಲಬದಿಯಲ್ಲಿ ವಟುವನ್ನು ಕೂತುಕೊಳ್ಳಿಸ ಬೇಕು. ನಂತರ ಬ್ರಹ್ಮಚಾರಿಯು ಅಗ್ನಿಕಾರ್ಯವನ್ನು ಮಾಡಬೇಕು. ಪ್ರಾತಃ, ಸಾಯಂ ಅಗ್ನಿಕಾರ್ಯದ ಕ್ರಮ ಮತ್ತು ವಿವರಗಳನ್ನು ಪ್ರತ್ಯೇಕವಾಗಿ ಆರಂಭದಲ್ಲಿ ಹೇಳಲಾಗಿದೆ. ಅದರಂತೆ ಮಾಡುವುದು.

ಹತೀ ಸಮಿಧಾದಾನೇ ವಿನಿಯೋಗಃ ॥ ಓಂ ಅಗ್ನಯೇ ಸಮಿಧಮಾಹಾರ್ಷಂ-ಬೃಹತೇಜಾತವೇದಸೇ ॥ ತಯಾತ್ವಮಗ್ನೇವರ್ಧಸ್ವಸಮಿಧಾ ಬ್ರಹ್ಮಣಾವಯಂ-ಸ್ವಾಹಾ ॥ ಅಗ್ನಯ ಇದಂ ನಮಮ ॥ ದಕ್ಷಿಣಂ ಪಾಣಿಂ ಪ್ರಕ್ಷಾಲ್ಯ ಅಗ್ನೌ ಪ್ರತಾಪ್ಯ ಓಂ ತೇಜಸಾಮಾಸಮನಜ್ಮಿ ॥ ಇತಿ ಮುಖಮವಾಜ್ ನಿಮೃಜ್ಯ ॥ ಪಾಣಿಂ ಪ್ರಕ್ಷಾಲ್ಯ ಏವಂ ಪುನರ್ದ್ವಿಃ ॥ ತತಸ್ತಿಷ್ಠನ್ ಪ್ರಣತಿಮುದ್ರಾಂ ಕೃತ್ವಾ ॥ ಮಯಿಮೇಧಾಮಿತಿ ಷಣ್ಣಾಂ ಹಿರಣ್ಯಗರ್ಭಋಷಿಃ ಪೂರ್ವೇಷಾಂ ತ್ರಯಾಣಾಂ ಅಗ್ನೀಂದ್ರಸೂರ್ಯಾ ದೇವತಾಃ ಉತ್ತರತ್ರಯಾಣಾಮಗ್ನಿರ್ದೇವತಾ ॥ ಗಾಯತ್ರೀಛಂದಃ ॥ ಅಗ್ನ್ಯುಪಸ್ಥಾನೇ ವಿನಿಯೋಗಃ ॥ ಓಂ ಮಯಿಮೇಧಾಂ ಮಯಿ ಪ್ರಜಾಂ ಮಯ್ಯಗ್ನಿಸ್ತೇಜೋದಧಾತು ॥ ಮಯಿಮೇಧಾಂ ಮಯಿಪ್ರಜಾಂ ಮಯೀಂದ್ರ ಇಂದ್ರಿಯಂ ದಧಾತು ॥ ಮಯಿ ಮೇಧಾಂ ಮಯಿಪ್ರಜಾಂ ಮಯಿ ಸೂರ್ಯೋ ಭ್ರಾಜೋ ದಧಾತು ॥ ಯತ್ತೇ ಅಗ್ನೇ ತೇಜಸ್ತೇನಾಹಂ ತೇಜಸ್ವೀ ಭೂಯಾಸಂ ॥ ಯತ್ತೇ ಅಗ್ನೇ ವರ್ಚಸ್ತೇನಾಹಂ ವರ್ಚಸ್ವೀ ಭೂಯಾಸಂ ॥ ಯತ್ತೇ ಅಗ್ನೇ ಹರಸ್ತೇನಾಹಂ ಹರಸ್ವೀ ಭೂಯಾಸಂ ॥ ಇತಿ ಷಣ್ಮಂತ್ರೈ-ರಗ್ನಿಮುಪಸ್ಥಾಯ ॥ ಮಾನಸ್ತೋಕ ಇತಿ ಕುತ್ಸೋ ರುದ್ರೋ ಜಗತೀ ವಿಭೂತಿಗ್ರಹಣೇ ವಿನಿಯೋಗಃ ॥ ಓಂ ಮಾನಸ್ತೋಕೇತನಯೇ ಮಾನ ಆಯೌ ಮಾನೋಗೋಷು ಮಾನೋ ಅಶ್ವೇಷು ರೀರಿಷಃ ॥ ವೀರಾನ್ಮಾನೋ ರುದ್ರ ಭಾಮಿತೋವಧೀರ್ಹವಿಷ್ಮಂತಃ ಸದಮಿತ್ವಾಹವಾಮಹೇ ॥ ಇತ್ಯನೇನ ಭಸ್ಮ ಆದಾಯ ಯಥಾಚಾರಂ ॥ ತ್ರ್ಯಾಯುಷಂ ಜಮದಗ್ನೇರಿತಿ ಲಲಾಟೇ ॥ ಕಶ್ಯಪಸ್ಯ ತ್ರ್ಯಾಯುಷಮಿತಿ ಕಂಠೇ ॥ ಅಗಸ್ತ್ಯಸ್ಯ ತ್ರ್ಯಾಯುಷಮಿತಿ ನಾಭೌ ॥ ಯದ್ದೇವಾನಾಂ ತ್ರ್ಯಾಯುಷಮಿತಿ ದಕ್ಷಿಣಸ್ಕಂಧೇ ॥ ತನ್ಮೇ ಅಸ್ತುತ್ರ್ಯಾಯುಷಮಿತಿ ವಾಮಸ್ಕಂಧೇ ॥ ಸರ್ವಮಸ್ತು ಶತಾಯುಷಮಿತಿ ಶಿರಸಿ ಧೃತ್ವಾ ॥ ಪುನಃ ಪರಿಸಮೂಹನಪರ್ಯು-ಕ್ಷಣೇ ಕೃತ್ವಾ ಕೃತಾಂಜಲಿಸ್ತಿಷ್ಠನ್ ॥ ಓಂ ಚಮೇಸ್ವರಶ್ಚಮೇ ಯಜ್ಞೋಪಚತೇ

**ನಮಶ್ಚ ॥ ಯತ್ತೇ ನ್ಯೂನಂ ತಸ್ಮೈತ ಉಪಯತ್ತೇತಿರಿಕ್ತಂ ತಸ್ಮೈತೇ ನಮಃ ॥ ಅಗ್ನಯೇ ನಮಃ ॥ ಓಂ ಸ್ವಸ್ತಿ ॥ ಶ್ರದ್ಧಾಂ ಮೇಧಾಂ ಯಶಃ ಪ್ರಜ್ಞಾಂ ವಿದ್ಯಾಂ ಬುದ್ಧಿಂ ಶ್ರಿಯಂ ಬಲಂ ॥ ಆಯುಷ್ಯಂ ತೇಜ ಆರೋಗ್ಯಂ ದೇಹಿ ಮೇ ಹವ್ಯವಾಹನ ॥ ಇತ್ಯಗ್ನಿಮುಪಸ್ಥಾಯ ॥**

**ಸಾವಿತ್ರ್ಯುಪದೇಶಃ:- ಅಗ್ನೇರುತ್ತರತೋ ಗತ್ವಾ ಪ್ರತ್ಯಙ್ಮುಖೀಭೂಯ ಆಚಾರ್ಯಾಭಿಮುಖೋ ಭೂತ್ವಾ ದಕ್ಷಿಣಂ ಜಾನುಃ ಭೂತಲೇ ನಿಧಾಯ ಪಾಣಿಭ್ಯಾಂ ಯಥಾ ಸವ್ಯದಕ್ಷಿಣಂ ಶ್ರೋತ್ರೇ ಸಂಸ್ಪೃಶ್ಯ ವ್ಯಸ್ತಪಾಣಿರಾಚಾರ್ಯಸ್ಯ ದಕ್ಷಿಣಪಾದಂ ಸ್ವದಕ್ಷಿಣಹಸ್ತೇನ ಸವ್ಯಂ ಚ ಸವ್ಯಹಸ್ತೇನ ಜಾನುಪ್ರಭೃತಿ ಪಾದಪರ್ಯಂತಂ ಸ್ಪೃಷ್ಟ್ವಾ ॥ ಅಮುಕಗೋತ್ರೋ ಅಮುಕಶರ್ಮಾ ಅಹಂ ಭೋ ಅಭಿವಾದಯೇ ॥ ಇತ್ಯಭಿವಾದಯೇತ್ ॥ ಆಚಾರ್ಯೇಣ ಆಯುಷ್ಮಾನ್**

---

**ಸಾವಿತ್ರೀ ಉಪದೇಶ:-** ವಟುವು ಅಗ್ನಿಯ ಉತ್ತರಕ್ಕೆ ಹೋಗಿ ಆಚಾರ್ಯನಿಗೆ ಇದಿರಾಗಿ ನಿಂತು ಬಲ ಮೊಣಕಾಲನ್ನು ನೆಲದ ಮೇಲಿಟ್ಟು ತನ್ನ ಎಡ-ಬಲ ಕೈಗಳಿಂದ ಎಡ-ಬಲ ಕಿವಿಗಳನ್ನು ಮುಟ್ಟಿ ಆಚಾರ್ಯನ ಬಲಕಾಲನ್ನು ತನ್ನ ಬಲಗೈಯಿಂದಲೂ ಎಡ ಕಾಲನ್ನು ಎಡಕೈಯಿಂದಲೂ ಮೊಣಕಾಲಿನಿಂದ ಪಾದದ ವರೇಗೆ ಮುಟ್ಟಿ ನಮಸ್ಕಾರ ಮಾಡಬೇಕು. "**.... ಗೋತ್ರೋ ... ಶರ್ಮಾ ಅಹಂ ಭೋ ಅಭಿವಾದಯೇ**" ಎಂದು ಹೇಳಬೇಕು. ಆಚಾರ್ಯನು "**ಆಯುಷ್ಮಾನ್ ...... ದೇವದತ್ತಾsss**"ಎಂದು ಆಶೀರ್ವದಿಸಬೇಕು. ಆಮೇಲೆ ಗಾಯತ್ರ್ಯುಪದೇಶವನ್ನು ಬಯಸುವ ಶಿಷ್ಯನು ಸಾವಿತ್ರೀಪೂಜೆಯನ್ನೂ ಗೋದಾನವನ್ನೂ ಮಾಡಿ, "**ಅಧೀಹಿ ಭೋಃ ... ಬ್ರೂಹಿ**" ಎಂದು ಆಚಾರ್ಯನನ್ನು ಪ್ರಾರ್ಥಿಸಿ, ತನ್ನ ಎಡಗೈಯ ಮೇಲೆ ಬಲಗೈಯನ್ನಿಟ್ಟು ಹೆಬ್ಬೆರಳುಗಳನ್ನು ಒತ್ತಿಹಿಡಿದು ಬ್ರಹ್ಮಾಂಜಲಿಮುದ್ರೆಯನ್ನು ಮಾಡಿ ಅದನ್ನು ತನ್ನ ಬಲತೊಡೆಯ ಮೇಲಿಟ್ಟು ಆಚಾರ್ಯನ ಹತ್ತಿರ ಕುಳಿತುಕೊಳ್ಳಬೇಕು. ಆಚಾರ್ಯನು ಶಿಷ್ಯನ ಅಂಜಲಿಯನ್ನು ಅವನ ಉತ್ತರೀಯದಿಂದ ಮುಚ್ಚಿ ತನ್ನ ಕೈಗಳಿಂದ ಆ ಅಂಜಲಿಯನ್ನು ಹಿಡಿದುಕೊಂಡು "**ಪ್ರಣವಸ್ಯ .... ವಿನಿಯೋಗಃ**" ಎಂದಿಷ್ಟು ಹೇಳಿ ಓಂಕಾರ ಹಾಗೂ ವ್ಯಾಹೃತಿ ಮೊದಲ್ಗೊಂಡು ಗಾಯತ್ರೀ ಮಂತ್ರವನ್ನು ಒಂದೊಂದೇ ಪದ ಅಥವಾ ಅರ್ಧಋಕ್ಕಿನಂತೆ ಇಲ್ಲವೆ ವಟುವಿಗೆ ಉಚ್ಚರಿಸಲು ಅನುಕೂಲವಾಗುವಂತೆ ಮೂರು ಸಲ ಉಪದೇಶಿಸಬೇಕು.

**ಭವ ಸೌಮ್ಯ ದೇವದತ್ತ ೩ ಇತಿ ಪ್ರಯುಕ್ತಾಶೀರ್ವಾದಃ ಸಾವಿತ್ರ್ಯುಪದೇಶಂ ಪ್ರಾಂಥನ್ ಶಿಷ್ಟಾಚಾರಪ್ರಾಪ್ತಂ ಸಾವಿತ್ರೀಪೂಜನಂ ಗೋಪ್ರದಾನಂ ಚ ಕೃತ್ವಾ ಅಧೀಹಿ ಭೋಃ ಸಾವಿತ್ರೀಂ ಭೋ ಅನುಬ್ರೂ ೩ ಹಿ ಇತ್ಯಾಚಾರ್ಯಮುಕ್ತ್ವಾ ಸ್ವವಾಮಪಾಣಿ-ಮುತ್ತಾನೀಕೃತ್ಯ ದಕ್ಷಿಣಪಾಣಿಂ ನ್ಯುಬ್ಜೀಕೃತ್ಯ ಸಂಧಾಯ ಪಾಣಿಪೃಷ್ಠಮಂಗುಲಿಂ ಚಾಂಗುಷ್ಠೌ ಚ ದೃಢೀಕೃತ್ಯ ಕೃತಂ ಬ್ರಹ್ಮಾಂಜಲಿಂ ದಕ್ಷಿಣಾಂಕೇ ನಿಧಾಯ ಆಚಾರ್ಯಾಂತಿಕಮಾಸೀತ ॥ ಅಥಾಚಾರ್ಯಸ್ತದಂಜಲಿಂ ತತ್ಪರಿಧಾನೀಯವಾಸಸಾ-ಚ್ಛಾದ್ಯ ಸ್ವಪಾಣಿಭ್ಯಾಂ ತದಂಜಲಿಂ ಪರಿಗೃಹ್ಯ ॥ ಪ್ರಣವಸ್ಯ ಪರಬ್ರಹ್ಮಋಷಿಃ ಪರಮಾತ್ಮಾ ದೇವತಾ ದೈವೀ ಗಾಯತ್ರೀ ಛಂದಃ ॥ ವ್ಯಾಹೃತೀನಾಂ ಪರಮೇಷ್ಠೀ ಪ್ರಜಾಪತಿಃ ಪ್ರಜಾಪತಿರ್ಬೃಹತೀ ॥ ಗಾಯತ್ರ್ಯಾ ವಿಶ್ವಾಮಿತ್ರಃ ಸವಿತಾ ಗಾಯತ್ರೀ ॥ ಉಪನಯನೋಪದೇಶೇ ವಿನಿಯೋಗಃ ॥ ಪ್ರಣವವ್ಯಾಹೃತಿ-ಪೂರ್ವಿಕಾಂ ಗಾಯತ್ರೀಂ ಪಚ್ಛೋರ್ಧರ್ಚಶಃ ಸರ್ವಾಂ ಅಶಕ್ತೌ ಯಥಾಶಕ್ತಿ ತ್ರಿವಾರಂ ಸ್ವಯಮುಕ್ತ್ವಾ ವಾಚಯೇತ್ ॥ ಓಂ ಭೂರ್ಭುವಃ ಸ್ವಃ ॥ ಓಂ ತತ್ಸವಿತುರ್ವ-ರೇಣ್ಯಂ ಭರ್ಗೋದೇವಸ್ಯ ಧೀಮಹಿ ॥ ಧಿಯೋಯೋನಃ ಪ್ರಚೋದಯಾತ್ ॥**

**ತತಃ ಮಮ ವ್ರತ ಇತ್ಯಸ್ಯ ಪ್ರಜಾಪತಿಸ್ತ್ರಿಷ್ಟುಪ್ ॥ ವಟೋರ್ಹೃದಯೇ ಊರ್ಧ್ವಾಂಗುಲಿಪಾಣಿನಿಧಾನೇ ವಿನಿಯೋಗಃ ॥ ಓಂ ಮಮವ್ರತೇ ಹೃದಯಂ ತೇ ದಧಾಮಿ ಮಮಚಿತ್ತಮನುಚಿತ್ತಂ ತೇ ಅಸ್ತು ॥ ಮಮವಾಚಮೇಕವ್ರತೋ-**

---

ಆಮೇಲೆ "**ಮಮವ್ರತೇ ಹೃದಯಂ ....**" ಎಂಬ ಮಂತ್ರವನ್ನು ಹೇಳಿ ವಟುವಿನ ಹೃದಯವನ್ನು ಬೆರಳುಗಳ ತುದಿಯನ್ನು ಮೇಲಕ್ಕೆ ಮಾಡಿದ ತನ್ನ ಕೈಯಿಂದ ಮುಟ್ಟಬೇಕು. ಬಳಿಕ ವಟುವಿನ ರಕ್ಷಣೆ ಹಾಗೂ ಶುದ್ಧಿಗೋಸ್ಕರ ಮೇಖಲೆ (ಮೌಂಜೀ)ಯನ್ನು ಸೊಂಟಕ್ಕೆ ಕಟ್ಟಬೇಕು. "**ಇಯಂ ದುರುಕ್ತಾ .....**" ಮತ್ತು "**ಋತಸ್ಯಗೋಪ್ತ್ರೀ ...**" ಈ ಎರಡು ಮಂತ್ರಗಳನ್ನು ಹೇಳಿ ಮೇಖಲೆಯನ್ನು ಸೊಂಟಕ್ಕೆ ಮೂರು ಸುತ್ತು ಇರುವಂತೆ ಸುತ್ತಿ ನಾಭಿ ಪ್ರದೇಶದಲ್ಲಿ ಮೂರು ಗಂಟುಗಳನ್ನು ಹಾಕಬೇಕು. ಆಗ ವಟುವು ತಾನು ರಹಸ್ಯಾಂಗಗಳೊಡಗೂಡಿದ ಮೂರು ವೇದಗಳಿಂದ ಆವೃತನಾದೆನೆಂದು ತಿಳಿಯಬೇಕು. ಆಮೇಲೆ ಆಚಾರ್ಯನು ವಟುವಿನ ಧರ್ಮದ ಯೋಗಕ್ಷೇಮಕ್ಕೂ, ಅಧರ್ಮನಿವೃತ್ತಿಗೂ ಉಪಯುಕ್ತವಾದ, ವಟುವಿನ ಕೇಶಗಳನ್ನು ಮುಟ್ಟಬಹುದಾದ (ಅಷ್ಟು ಎತ್ತರವಿರುವ) ಪಲಾಶದಂಡವನ್ನು

ಜುಷಸ್ವಬೃಹಸ್ಪತಿಷ್ಟ್ವಾನಿಯುನಕ್ತುಮಹ್ಯಂ ॥ ಇತಿ ಸ್ವಪಾಣಿಮೂರ್ಧ್ವಾಂಗುಲಿಂ ವಟುಹೃದಯೇ ನಿಧಾಯ ॥ ತಸ್ಯ ರಕ್ಷಾರ್ಥಂ ಶುದ್ಧ್ಯರ್ಥಂ ಚ ಮೇಖಲಾಮಾಬಧ್ನೀಯಾತ್ ॥ ಇಯಂ ದುರುಕ್ತಾದಿತಿ ದ್ವಯೋರ್ವಾಮದೇವೋ ಮೇಖಲಾ ತ್ರಿಷ್ಟುಪ್ ॥ ಮೇಖಲಾಬಂಧನೇ ವಿನಿಯೋಗಃ ॥ ಓಂ ಇಯಂ ದುರುಕ್ತಾತ್ ಪರಿಬಾಧಮಾನಾಚ್ಛರ್ಮವರೂಥಂಪುನತೀನಆಗಾತ್ ॥ ಪ್ರಾಣಾಪಾನಾಭ್ಯಾಂ ಬಲಮಾಭರಂತೀಪ್ರಿಯಾದೇವಾನಾಂ ಸುಭಗಾಮೇಖಲೇಯಂ ॥ ಋತಸ್ಯಗೋಪ್ತ್ರೀತಪಸಃ ಪರಸ್ವೀಘ್ನತೀರಕ್ಷಃ ಸಹಮಾನಾ ಅರಾತೀಃ ॥ ಸಾನಃ ಸಮಂತಮನುಪರೇಹಿಭದ್ರಯಾ ಭರ್ತಾರಸ್ತೇ ಮೇಖಲೇಮಾರಿಷಾಮ ॥ ಇತಿ ಮಂತ್ರಂ ವಾಚಯಿತ್ವಾ ಮೇಖಲಾಂ ತ್ರಿರಾವರ್ತ್ಯ ನಾಭಿಪ್ರದೇಶೇ ಗ್ರಂಥಿತ್ರಯಂ ಕುರ್ಯಾತ್ ॥ ತದಾ ವಟುಃ ಸರಹಸ್ಯಾಂಗಸಹಿತ ವೇದತ್ರಯೇಣಾವೃತೋಽಹಮಿತಿ ಮನ್ಯೇತ ॥ ತತ ಆಚಾರ್ಯಃ ॥ ತದ್ಧರ್ಮಸ್ಯಯೋಗಕ್ಷೇಮಾರ್ಥಮಧರ್ಮನಿವೃತ್ತಯೇ ಚ ಕೇಶಸಮ್ಮಿತಂ ಪಾಲಾಶದಂಡಂ ದದ್ಯಾತ್ ॥ ಸ್ವಸ್ತಿ ನ ಇತ್ಯಸ್ಯ ಸ್ವಸ್ತ್ಯಾತ್ರೇಯೋ ವಿಶ್ವೇದೇವಾಸ್ತ್ರಿಷ್ಟುಪ್ । ದಂಡದಾನೇ ವಿನಿಯೋಗಃ ॥ ಓಂ ಸ್ವಸ್ತಿನೋಮಿಮೀತಾಮಶ್ವಿನಾಭಗಃ ಸ್ವಸ್ತಿದೇವ್ಯದಿತಿರನರ್ವಣಃ ॥ ಸ್ವಸ್ತಿಪೂಷಾ ಅಸುರೋದಧಾತು ನಃ ಸ್ವಸ್ತಿದ್ಯಾವಾ ಪೃಥಿವೀಸುಚೇತುನಾ । ಇತಿ ಮಂತ್ರೇಣ ದಂಡಂ ದದ್ಯಾತ್ ॥ ತತೋ ವಟೋಸ್ತದ್ಗ್ರಹಣೇ ಮಂತ್ರಃ ॥ ಅದಾಂತಂ ದಮಯಿತ್ವಾ ಮಾಂ ಮಾರ್ಗೇ ಸಂಸ್ಥಾಪಯನ್ ಸ್ವಯಂ ॥ ದಂಡಃ ಕರೇ ಸ್ಥಿತೋ ಯಸ್ಮಾತ್ತಸ್ಮಾದ್ರಕ್ಷ ಯತೋಽಭಯಂ ॥ ಇತಿ ವಾಚಯೇತ್ ॥

ಬ್ರಹ್ಮಚರ್ಯವ್ರತೋಪದೇಶಃ- ತತಃ ಕುಮಾರಸ್ಯ ಆಚಾರಮಾದಿಶೇತ್ ॥ 1. ಬ್ರಹ್ಮಚಾರ್ಯಸಿ ॥ 2. ಅಪೋಽಶಾನ ॥ ಆಚಮನಂ ಕುರು ॥ ಮೂತ್ರಪುರೀಷಾದೌ ಶುದ್ಧ್ಯರ್ಥಮಿತ್ಯರ್ಥಃ ॥ 3. ಕರ್ಮ ಕುರು ॥ ಸಂಧ್ಯೋಪಾಸನಾದೀತ್ಯರ್ಥಃ ॥ 4. ದಿವಾ ಮಾಸ್ವಾಪ್ಸೀಃ ॥ 5. ಆಚಾರ್ಯಾಧೀನೋವೇದಮಧೀಷ್ವ ॥ ಸಾಯಂ ಪ್ರಾತರ್ಭಿಕ್ಷೇಥಾಃ ॥ ಪ್ರಾತಃ ಸುಮಿಧ ಮಾಧೇಹಿ ॥

**6. ದ್ವಾದಶವರ್ಷಾಣಿ ವೇದಗ್ರಹಣಾಂತಂ ವಾ ಬ್ರಹ್ಮಚರ್ಯಂ ಚರ ॥ ಪ್ರೈಷಾ-ರ್ಥಾನ್ಬೋಧಯೇತ್ ॥ 7. ಆಚಾರ್ಯಾಧೀನೋ ಭವಾನ್ಯತ್ರಾಧರ್ಮ-ಚರಣಾತ್ ॥ 8. ಕ್ರೋಧಾನೃತೇ ವರ್ಜಯ ॥ 9. ಮೈಥುನಂ ವರ್ಜಯ ॥ 10. ಉಪರಿಶಯ್ಯಾಂ ವರ್ಜಯ ॥ 11. ಕೌಶೀಲವ ಗಂಧಾಂಜನಾನಿ ವರ್ಜಯ ॥ 12. ಅತ್ಯಂತಂ ಸ್ನಾನಂ ಭೋಜನಂ ನಿದ್ರಾಂ ಜಾಗರಣಂ ನಿಂದಾ ಲೋಭ ಮೋಹ ಭಯ ಶೋಕಾನ್ ವರ್ಜಯ ॥ 13. ಪ್ರತಿದಿನಂ ರಾತ್ರೇಃ ಪಶ್ಚಿಮಯಾಮೇ ಚೋತ್ಥಾಯಾವಶ್ಯಕಂ ಕೃತ್ವಾ ದಂತಧಾವನಸ್ನಾನಸಂಧ್ಯೋಪಾಸನೇಶ್ವರಸ್ತುತಿ ಪ್ರಾರ್ಥನೋಪಾಸನಾಯೋಗಾಭ್ಯಾಸಾನ್ನಿತ್ಯಮಾಚರ ॥ 14. ಕ್ಷುರಕೃತ್ಯಂ ವರ್ಜಯ ॥ 15. ಮಧುಮಾಂಸಂ ವರ್ಜಯ ॥ 16. ಗವಾಶ್ವಹಸ್ತ್ಯುಷ್ಟ್ರಾದಿ ಯಾನಂ ವರ್ಜಯ ॥ 17. ಅಂತಃಗ್ರಾಮನಿವಾಸೋಪಾನಹಛತ್ರಧಾರಣಂ ವರ್ಜಯ ॥ 18. ತೈಲಾಭ್ಯಂಗಮರ್ದನಾತ್ಯಮ್ಲಾನಿತಿಕ್ತಕಷಾಯಕ್ಷಾರರೇಚನದ್ರವ್ಯಾಣಿ ಮಾ ಸೇವಸ್ವ ॥ 19. ನಿತ್ಯಂ ಯುಕ್ತಾಹಾರವಿಹಾರವಾನ್ ವಿದ್ಯೋಪಾರ್ಜನೇ ಚ ಯತ್ನವಾನ್ ಭವ ॥ 20. ಸುಶೀಲೋ ಮಿತಭಾಷೀ ಸಭ್ಯೋ ಭವ ॥ 21. ಮೇಖಲಾದಂಡಧಾರಣಭೈಕ್ಷ್ಯಚರ್ಯಸಮಿಧಾದಾನೋದಕೋಪಸ್ಪರ್ಶಾಃ ಅಭಿ-ವಾದಾ ಇತ್ಥಂ ತೇ ನಿತ್ಯಧರ್ಮಾಃ ॥**

---

"**ಸ್ವಸ್ತಿನೋಮಿಮಿಾತಾ...**" ಎಂಬ ಮಂತ್ರವನ್ನು ಹೇಳಿ "**ಅದಾಂತಂ ದಮಯಿತ್ವಾ...**" ಎಂಬ ಮಂತ್ರವನ್ನು ವಟುವಿನ ಬಾಯಿಯಿಂದ ಹೇಳಿಸಿ ಕೊಡಬೇಕು.

ಇಷ್ಟಾದ ಮೇಲೆ ವಟುವಿಗೆ ಬ್ರಹ್ಮಚರ್ಯವ್ರತೋಪದೇಶವನ್ನು ಮಾಡಬೇಕು:- 1. ನೀನು ಇಂದಿನಿಂದ ಬ್ರಹ್ಮಚಾರಿಯಾಗಿದ್ದಿ, 2. ಮೂತ್ರ ಮಲವಿಸರ್ಜನೆ ಮಾಡಿದ ಮೇಲೆ ತಪ್ಪದೆ ಆಚಮನ ಮಾಡು. 3. ಸಂಧ್ಯಾವಂದನೆ ಅಗ್ನಿಕಾರ್ಯ ಮುಂತಾದ ಕರ್ಮಗಳನ್ನು ತಪ್ಪದೆ ಮಾಡು. 4. ಹಗಲು ನಿದ್ರೆ ಮಾಡಬಾರದು. 5. ಗುರುವಿನ ಅಧೀನದಲ್ಲಿದ್ದು ವೇದಾಭ್ಯಾಸ ಮಾಡು, ಬೆಳಿಗ್ಗೆ ಸಂಜೆ ಭಿಕ್ಷಾಟನೆ ಮಾಡು, ಅಗ್ನಿಕಾರ್ಯ ಮಾಡು. 6. ಹನ್ನೆರಡು ವರ್ಷಗಳ ಕಾಲ ಅಥವಾ ವೇದಾಧ್ಯಯನ ಮಾಡುವಷ್ಟು ಕಾಲ ಬ್ರಹ್ಮಚಾರಿಯಾಗಿರು. 7. ಅಧರ್ಮ ಕಾರ್ಯಗಳನ್ನುಳಿದು ಇತರ ಎಲ್ಲ ಕಾರ್ಯಗಳಲ್ಲಿಯೂ ಗುರುವಿಗೆ ಅಧೀನವಾಗಿರು. 8. ಸಿಟ್ಟು ಮತ್ತು ಅನೃತಗಳನ್ನು ವರ್ಜಿಸು. 9. ಸ್ತ್ರೀಸಂಗವನ್ನು ವರ್ಜಿಸು. 10. ಗುರುಹಿರಿಯರಿಗಿಂತ ಎತ್ತರದ ಆಸನವನ್ನೂ, ಶಯ್ಯೆಯನ್ನೂ ವರ್ಜಿಸು. 11. ಕಲಾವಿಲಾಸಗಳನ್ನೂ ಸುಗಂಧಾದಿ ವಿಲಾಸೀವಸ್ತುಗಳನ್ನೂ ತ್ಯಜಿಸು. 12. ಸ್ನಾನ, ಊಟ, ನಿದ್ರೆ, ಜಾಗರಣೆ, ನಿಂದೆ, ಲೋಭ, ಮೋಹ, ಭಯ, ದುಃಖ ಇತ್ಯಾದಿಗಳಲ್ಲಿ ಅತಿಯನ್ನು ವರ್ಜಿಸು. 13. ರಾತ್ರಿಯ ಕೊನೆಯ ಜಾವದಲ್ಲಿ ಎದ್ದು ಪ್ರತಿದಿನವೂ ದಂತಧಾವನದಿಂದ ಮೊದಲ್ಗೊಂಡು ಎಲ್ಲ ಕರ್ಮಗಳನ್ನೂ

**ತತಃ ಸ್ವಿಷ್ಟಕೃದಾದಿ ಹೋಮಶೇಷಂ ಸಮಾಪ್ಯ ಅಗ್ನಿಂ ಮೇಧಾಜನನಾಂತಂ ರಕ್ಷೇತ್ ॥ ತತ್ರೈವ ಸಾಯಂ ಪ್ರಾತರಗ್ನಿಕಾರ್ಯಂ ಕುರ್ಯಾತ್ ॥ ತತೋನುಪ್ರ-ವಚನೀಯಹೋಮಬ್ರಾಹ್ಮಣಭೋಜನಪರ್ಯಾಪ್ತಾಂ ತುಂಡುಲರೂಪಾಂ ಭಿಕ್ಷಾಂ ಯಾಚಯೇತ್ ॥ ತತ್ರ ಕ್ರಮಃ ॥ ಭಿಕ್ಷಾಪಾತ್ರಮಾದಾಯ ಆದೌ ಮಾತರಂ ಭವತಿ ಭಿಕ್ಷಾಂ ದದಾತ್ವಿತಿ, ಭಿಕ್ಷಾಂ ಭವಾನ್ ದದಾತ್ವಿತಿ ವಾ ॥ ಪಿತರಂ ಮಾತುಸ್ವಸಾರಂ ಸ್ವಭಗಿನೀಂ ಅನ್ಯಾನಪಿ ಬಾಂಧವಾನಪ್ರತ್ಯಾಖ್ಯಾಯಿನೋಽಪ್ರತ್ಯಾಖ್ಯಾ-ಯಿನೀಶ್ಚ ಯಾಚಿತ್ವಾ ಭೈಕ್ಷ್ಯಮಾಚಾರ್ಯಾಯ ನಿವೇದ್ಯ ॥ ಅಸ್ಮಿನ್ ಕರ್ಮಣಿ ಶತಂ ಬ್ರಾಹ್ಮಣಾ ಭೋಜ್ಯಾಃ ॥**

**॥ ಇತಿ ಉಪನಯನಸಂಸ್ಕಾರಃ ॥**

---

ತಪ್ಪದೆ ಮಾಡು. 14. ಕ್ಷೌರವನ್ನು ವರ್ಜಿಸು. 15. ಮದ್ಯ - ಮಾಂಸಗಳನ್ನು ತ್ಯಜಿಸು. 16. ಎತ್ತು, ಕುದುರೆ, ಒಂಟೆ ಮುಂತಾದ ವಾಹನಯಾತ್ರೆಯನ್ನು ವರ್ಜಿಸು. 17. ಗ್ರಾಮದಲ್ಲಿ ಸಂಚರಿಸುವಾಗ ಪಾದರಕ್ಷೆ ಮತ್ತು ಛತ್ರಗಳನ್ನು ಉಪಯೋಗಿಸಬೇಡ. 18. ಎಣ್ಣೆಹಾಕಿ ಸ್ನಾನ, ಮರ್ದನ, ಹುಳಿ, ಖಾರ, ಉಪ್ಪು, ಇತ್ಯಾದಿಗಳನ್ನು ಅತಿಯಾಗಿ ಸೇವಿಸಬೇಡ 19. ಮಿತವಾದ ಆಹಾರವಿಹಾರಗಳಿದ್ದು ನಿತ್ಯವೂ ವಿದ್ಯೆಯಲ್ಲಿ ಆಸಕ್ತನಾಗಿರು. 20. ಉತ್ತಮ ಗುಣನಡತೆಯುಳ್ಳವನೂ, ಮಿತಭಾಷಿಯೂ ಸಭ್ಯನೂ ಆಗಿರು. 21. ಮೇಖಲೆ, ದಂಡ, ಭಿಕ್ಷೆ, ಅಗ್ನಿಕಾರ್ಯ, ಅಭಿವಾದನ ಇತ್ಯಾದಿಗಳನ್ನು ತಪ್ಪದೆ ಮಾಡು. ಆಮೇಲೆ ಸ್ವಿಷ್ಟಕೃದಾದಿ ಉಳಿದ ಹೋಮ ಕಾರ್ಯವನ್ನು ಮುಗಿಸಿ, ಆ ಅಗ್ನಿಯನ್ನು ಮೇಧಾಜನನದ ವರೆಗೆ ಉಳಿಸಬೇಕು. ಅದೇ ಅಗ್ನಿಯಲ್ಲಿ ಸಾಯಂ ಪ್ರಾತರಗ್ನಿಕಾರ್ಯ ಮಾಡಬೇಕು. ಆಮೇಲೆ ಅನುಪ್ರವಚನೀಯ ಹೋಮ ಹಾಗೂ ಬ್ರಾಹ್ಮಣಭೋಜನಕ್ಕೆ ಸಾಕಾಗುವಷ್ಟು ಅಕ್ಕಿಯನ್ನು ಭಿಕ್ಷೆಯಿಂದ ಪಡೆಯಬೇಕು. ಮೊದಲು ತಾಯಿಯಿಂದ **"ಭವತಿ... ದೇಹಿ"** ಅಥವಾ **"ಭಿಕ್ಷಾಂ ... ದದಾತು"** ಎಂದು ಹೇಳಿ, ಭಿಕ್ಷೆ ಪಡೆದ ಬಳಿಕ ಹಾಗೆಯೇ ತಂದೆಯಿಂದ **"ಭವಾನ್... ದದಾತು"** ಎಂದು ಹೇಳಿ, ಭಿಕ್ಷೆ ಪಡೆದ ಬಳಿಕ; ಚಿಕ್ಕಮ್ಮ, ಸಹೋದರಿ ಮುಂತಾದವರಿಂದಲೂ ಭಿಕ್ಷೆ ಪಡೆಯಬೇಕು. 'ಇಲ್ಲ' ಎಂದು ನಿರಾಕರಿಸುವವರನ್ನು ಕೇಳಕೂಡದು. ಭಿಕ್ಷೆ ಸಿಕ್ಕಿದ್ದನ್ನು ಆಚಾರ್ಯನಿಗೆ ಒಪ್ಪಿಸಬೇಕು. ನೂರು ಬ್ರಾಹ್ಮಣರಿಗೆ ಭೋಜನ ಕೊಡಬೇಕು.

## ೨೮

# ॥ ಅನುಪ್ರವಚನೀಯ ಹೋಮಃ ॥

॥ ಶ್ರೀಃ ॥ ಆಚಾರ್ಯೋ ಸಾಯಂ ಸಂಧ್ಯೋತ್ತರಂ ಕೃತೋಪನಯನ ಹೋಮಾಗ್ನೇಃ ಪಶ್ಚಿಮತೋ ದಕ್ಷಿಣತಃ ಬ್ರಹ್ಮಚಾರಿಣಾ ಸಹೋಪವಿಶ್ಯ ಆಚಮ್ಯ ಪ್ರಾಣಾನಾಯಮ್ಯ ದೇಶಕಾಲೌ ಸಂಕೀರ್ತ್ಯ ಉಪನಯನಾಂಗಭೂತಮನು-ಪ್ರವಚನೀಯಹೋಮಂ ಕರಿಷ್ಯೇ ॥ ಇತಿ ಸಂಕಲ್ಪ್ಯ ॥ ಅಗ್ನಿಂ ಧ್ಯಾತ್ವಾ ॥ ಸಮಿದ್ವಯಮಾದಾಯ ಕ್ರಿಯಮಾಣೇ ಅನುಪ್ರವಚನೀಯ ಹೋಮೇ ದೇವತಾ-ಪರಿಗ್ರಹಾರ್ಥಮಿತ್ಯಾದ್ಯಾಘಾರಾವಾಜ್ಯೇತ್ಯಂತಮುಕ್ತ್ವಾ ॥ ಅತ್ರ ಪ್ರಧಾನಂ ॥ ಸದಸಸ್ಪತಿಂ ಸವಿತಾರಂ ಋಷೀಂಶ್ಚ ಚರುದ್ರವ್ಯೇಣ ॥ ಶೇಷೇಣ ಸ್ವಿಷ್ಟಕೃತ ಮಿತ್ಯಾದಿ ಪೂರ್ಣಪಾತ್ರನಿಧಾನಾಂತಂ ಕೃತ್ವಾ ಭಿಕ್ಷಾನ್ನಸ್ಯ ದೇವತಾತ್ರಯಾರ್ಥಂ ತೂಷ್ಣೀಂ ಚತುರಶ್ಚತುರೋ ಮುಷ್ಟೀನ್ನಿರುಪ್ಯ ॥ ತಥೈವ ಪ್ರೋಕ್ಷ್ಯ ಹವಿಃಶ್ರ-ಪಣಾದ್ಯಾಘಾರಹೋಮಾಂತಂ ಕೃತ್ವಾ ಅವದಾನಧರ್ಮೇಣ ಚರುಮವದಾಯ ॥

ಸದಸಸ್ಪತಿಮಿತ್ಯಸ್ಯ ಕಾಣ್ವೋ ಮೇಧಾತಿಥಿಃ ಸದಸಸ್ಪತಿರ್ಗಾಯತ್ರೀ ॥ ಅನು-ಪ್ರವಚನೀಯ ಪ್ರಧಾನಚರುಹೋಮೇ ವಿನಿಯೋಗಃ ॥ ಓಂ ಸದಸಸ್ಪತಿ-ಮದ್ಭುತಂ ಪ್ರಿಯಮಿಂದ್ರಸ್ಯ ಕಾಮ್ಯಂ ॥ ಸನಿಂಮೇಧಾಮಯಾಸಿಷಂ ಸ್ವಾಹಾ ॥

---

ಆಚಾರ್ಯನು ಸಾಯಂ ಸಂಧ್ಯಾವಂದನೆಯಾದ ಮೇಲೆ ಉಪನಯನ ಹೋಮ ಮಾಡಿದ ಅಗ್ನಿಯ ಪಶ್ಚಿಮಭಾಗದಲ್ಲಿ ತನ್ನ ಬಲಬದಿಗೆ ವಟುವಿರುವಂತೆ ಕುಳಿತು ಆಚಮನ ಪ್ರಾಣಾಯಾಮ ದೇಶಕಾಲ ಸ್ಮರಣೆಗಳನ್ನು ಮಾಡಿ **"ಉಪನಯನಾಂಗ ... ಕರಿಷ್ಯೇ"** ಎಂದು ಸಂಕಲ್ಪಿಸಿ ಅಗ್ನಿಯ ಧ್ಯಾನಮಾಡಿ ಕ್ರಮದಂತೆ ಅನ್ವಾಧಾನ ಮಾಡಬೇಕು. ಮುಂದೆ ಪೂರ್ಣಪಾತ್ರವಿಡುವಲ್ಲಿವರೆಗಿನ ಕರ್ಮಗಳನ್ನು ಮಾಡಿ ಭಿಕ್ಷೆಯ ಅಕ್ಕಿಯಿಂದ ಮೂರು ದೇವತೆಗಳಿಗೆ ನಾಲ್ಕು ನಾಲ್ಕು ಮುಷ್ಟಿ ಅಕ್ಕಿಯನ್ನು ತೆಗೆದಿಟ್ಟು ಆಘಾರಹೋಮದ ವರೆಗೆ ಮಾಡಿ, **"ಸದಸಸ್ಪತಿ..."** **"ತತ್ಸವಿತು...."** ಮತ್ತು **"ಋಷಿಭ್ಯಃ"** ಎಂದು ಮೂರು ಚರುವಿನ ಆಹುತಿಗಳನ್ನಿತ್ತು ಸ್ವಿಷ್ಟಕೃದಾದಿ ಉಳಿದ ಹೋಮಕಾರ್ಯವನ್ನು ಮುಗಿಸಿ ಹವಿಃಶೇಷಾನ್ನ ಅಥವಾ ಇತರ ಅನ್ನದಿಂದ ಬ್ರಾಹ್ಮಣರಿಗೆ ಭೋಜನ ಕೊಡಬೇಕು. ಆ ರಾತ್ರಿ ಬ್ರಹ್ಮಚಾರಿಯು ಉಪ್ಪು, ಖಾರ ಇಲ್ಲದೆ ಊಟಮಾಡಿ ನೆಲದಲ್ಲಿ ಮಲಗಿರಬೇಕು.

ಸದಸಸ್ಪತಯ ಇದಂ ನಮಮ ॥ ತತ್ಸವಿತುರಿತ್ಯಸ್ಯ ಗಾಥಿನೋ ವಿಶ್ವಾಮಿತ್ರಃ ಸವಿತಾ ಗಾಯತ್ರೀ ॥ ಅನುಪ್ರವಚನೀಯಪ್ರಧಾನ ಚರುಹೋಮೇ ವಿನಿ-ಯೋಗಃ ॥ ಓಂ ತತ್ಸವಿತು... ಸ್ವಾಹಾ ॥ ಸವಿತ್ರ ಇದಂ ನಮಮ ॥ ಋಷಿಭ್ಯಃ ಸ್ವಾಹಾ ॥ ಋಷಿಭ್ಯ ಇದಂ ನಮಮ ॥ ಇತಿ ಚರ್ವಾಹುತಿತ್ರಯಂ ಹುತ್ವಾ ಸ್ವಿಷ್ಟಕೃದಾದಿ ಹೋಮಶೇಷಂ ಸಮಾಪ್ಯ ಹವಿಃ ಶೇಷೇಣಾನ್ಯೇನವಾನ್ನೇನ ತ್ರೀನ್ ತ್ರ್ಯವರಾನ್ ವಾ ಬ್ರಾಹ್ಮಣಾನ್ ಭೋಜಯೇತ್ ॥

॥ ಇತ್ಯನುಪ್ರವಚನೀಯ ಹೋಮಃ ॥

॥ ತತೋ ಬ್ರಹ್ಮಚಾರೀ ಅಕ್ಷಾರಾಲವಣಮನ್ನಂ ಭುಕ್ತ್ವಾ ಅಧಃಶಯಿತ ॥

---

# ೪೦

## ॥ ಮೇಧಾಜನನಪ್ರಯೋಗಃ ॥

**॥ ಶ್ರೀಃ ॥ ಚತುರ್ಥದಿವಸೇ ಆಚಾರ್ಯೋ ಗೃಹ ಐಶಾನ ದಿಗ್ಭಾಗೇ ಸರ್ವತೋ ದ್ವಾದಶಾಂಗುಲಾಂ ತ್ರಿಮೇಖಲಾಂ ವೇದಿಂ ಕೃತ್ವಾ ತಸ್ಯಾಂ ಪತ್ರಾಂಕುರ-ಸಮನ್ವಿತಾಮಾರ್ದ್ರಾಂ ಪಲಾಶಶಾಖಾಂ, ಸಮೂಲಂ ಕುಶಸ್ತಬಂ ವಾ ಪ್ರತಿಷ್ಠಾಪ್ಯ ॥ ಬ್ರಹ್ಮಚಾರಿಣಾನ್ವಾರಬ್ಧಃ ಸಂಕಲ್ಪಪೂರ್ವಕಂ ಪೂಜಾಂ ಕುರ್ಯಾತ್ ॥ ಆಚಮ್ಯ ಪ್ರಾಣಾನಾಯಮ್ಯ ದೇಶಕಾಲೌ ಸಂಕೀರ್ತ್ಯ ಮಮಾಸ್ಯ ಕುಮಾರಸ್ಯ ಉಪನಯನ ಸಮಾಪ್ತಿ ವೇದಗ್ರಹಣಸಾಮರ್ಥ್ಯಲಕ್ಷಣ ಮೇಧಾಸಿದ್ಧಿದ್ವಾರಾ ಶ್ರೀಪರಮೇಶ್ವರಪ್ರೀ-ತ್ಯರ್ಥಂ ಮೇಧಾಜನನಾಖ್ಯಂ ಕರ್ಮ ಕರಿಷ್ಯೇ ॥ ತತ್ರಾದೌ ಮೇಧಾಪರನಾಮಕ ಸಾವಿತ್ರೀ ಪೂಜಾಂ ಚ ಕರಿಷ್ಯೇ ॥**

**ವೇದ್ಯಾಂ ಪಲಾಶಶಾಖಾಯಾಂ ಮೇಧಾಯೈ ನಮಃ ಇತಿ ಮಂತ್ರೇಣಾ-ವಾಹನಾದ್ಯುಪಚಾರಾನ್ ಕೃತ್ವಾ ಯಾವಕಸಕ್ತುಮಿಶ್ರಮನ್ನಂ ಮೋದಕಾಂಶ್ಚ ನಿವೇದ್ಯ ಪುನಶ್ಚ ಪೂರ್ವವದಭ್ಯರ್ಚ್ಯ ಬ್ರಹ್ಮಚಾರಿಣಾ ಪ್ರಣಮಯ್ಯ ಶುದ್ಧಜಲ ಪಾತ್ರೋದಕೇನ ಸೇಚನಂ ಕುರ್ವತಾ ವಟುನಾ ತ್ರಿಃಪ್ರದಕ್ಷಿಣಂ ಕಾರಯನ್ ಮಂತ್ರಂ ವಾಚಯೇತ್ ॥ ಓಂ ಸುಶ್ರವಃ ಸುಶ್ರವಾ ಅಸಿ ಯಥಾ ತ್ವಂ ಸುಶ್ರವಃ ಸುಶ್ರವಾ ಅಸ್ಯೇವಂ ಮಾಂ ಸುಶ್ರವಃ ಸೌಶ್ರವಸಂ ಕುರು ॥ ಯಥಾ**

---

ನಾಲ್ಕನೆಯ ದಿನ ಯಜಮಾನನು ಮನೆಯ ಈಶಾನ್ಯ ದಿಕ್ಕಿನಲ್ಲಿ ಅಥವಾ ಉಪನಯನ ಮಾಡಿದ ಸ್ಥಳದಲ್ಲಿ ೧೨ ಅಂಗುಲ ವಿಸ್ತೀರ್ಣವಾದ ಮೂರು ಮೆಟ್ಟಿಲುಗಳಿರುವ ಮಣ್ಣಿನ ವೇದಿಯನ್ನು ನಿರ್ಮಿಸಿ ಅದರ ಮಧ್ಯದಲ್ಲಿ ಚಿಗುರೆಲೆಗಳುಳ್ಳ ಪಲಾಶದ ಕೊಂಬೆಯನ್ನು ಬುಡಸಹಿತ ಕಿತ್ತು ತಂದು ದರ್ಭೆಯನ್ನು ನೆಡಬೇಕು. ಆಮೇಲೆ ಬ್ರಹ್ಮಚಾರಿಯೊಂದಿಗೆ ಕುಳಿತು ಆಚಮನ ಪ್ರಾಣಾಯಾಮ ದೇಶಕಾಲ ಕೀರ್ತನ ಮಾಡಿ, "**ಮಮಾಸ್ಯ ... ಪೂಜಾಂ ಚ ಕರಿಷ್ಯೇ**" ಎಂದು ಸಂಕಲ್ಪ ಮಾಡಬೇಕು.

ವೇದಿಯಲ್ಲಿ ನೆಟ್ಟ ಪಲಾಶದ ಕೊಂಬೆಯಲ್ಲಿ "**ಮೇಧಾಯೈ ನಮಃ**" ಎಂಬ ಮಂತ್ರದಿಂದ ಆವಾಹನಾದಿ ಷೋಡಶೋಪಚಾರಪೂಜೆಯನ್ನು ಮಾಡಬೇಕು. ಹಿಟ್ಟು ಮೋದಕಗಳಿಂದ ಕೂಡಿದ

ತ್ವಂ ದೇವಾನಾಂ ಯಜ್ಞಸ್ಯ ನಿಧಿಪೋಸ್ಯೇವಮಹಂ ಮನುಷ್ಯಾಣಾಂ ವೇದಸ್ಯ ನಿಧಿಪೋ ಭೂಯಾಸಂ ॥ ಪ್ರತಿಪ್ರದಕ್ಷಿಣಂ ಮಂತ್ರಾವೃತ್ತಿಂ ಪ್ರದಕ್ಷಿಣಂ ಚ ಕಾರಯೇತ್ ॥ ತತೋ ಬ್ರಹ್ಮಚಾರೀ ಸ್ನಾತ್ವಾ ನವಾನ್ಯಜ್ಞೋಪವೀತಾಜಿನ-ಮೇಖಲಾದಂಡಾನುಪನಯನವತ್ ಸಮಂತ್ರಕಂ ಧೃತ್ವಾ ಪುರಾಣಾನಿ ಪಲಾಶ-ಸನ್ನಿಧೌ ವಿಸೃಜ್ಯ ಪೂರ್ವಧೃತವಾಸಸೀ ಗುರವೇ ದತ್ವಾ ಮೇಧಾಮಹ್ಯಮಿತಿ ಸೂಕ್ತಂ ವಿಪ್ರೈಃ ಪಾಠಯಿತ್ವಾ ॥

ಅಥ ಮೇಧಾಮಹ್ಯಮಿತಿ ಸೂಕ್ತಂ ॥ ಓಂ ಮೇಧಾಮಹ್ಯಮಂಗಿ-ರಸೋ ಮೇಧಾಂಸಪ್ತರ್ಷಯೋ ದದುಃ ॥ ಮೇಧಾಮಿಂದ್ರಶ್ಚಾಗ್ನಿಶ್ಚಮೇಧಾಂ ಧಾತಾ ದದಾತು ಮೇ ॥ ಮೇಧಾಂ ಮೇ ವರುಣೋ ರಾಜಾ ಮೇಧಾಂ ದೇವೀ ಸರಸ್ವತೀ ॥ ಮೇಧಾಂ ಮೇ ಅಶ್ವಿನೌ ದೇವಾವಾಧತ್ತಾಂ ಪುಷ್ಕರಸ್ರಜಾ ॥ ಯಾ ಮೇಧಾ ಅಪ್ಸರಸ್ಸು ಗಂಧರ್ವೇಷು ಚ ಯನ್ಮನಃ ॥ ದೈವೀ ಯಾ ಮಾನುಷೀ ಮೇಧಾ ಸಾಮಾಮಾವಿಶತಾದಿಮಾಂ ॥ ಯನ್ಮೇನೋಕ್ತಂ ತದ್ರಮ-ತಾಂಶಕೇಯಂಯದನುಬ್ರುವೇ ॥ ನಿಶಾಮತನ್ನಿಶಾಮಹ್ಯೇಮಯಿವ್ರತಂ ಸಹವ್ರ-ತೇಷುಭೂಯಾಸಂಬ್ರಹ್ಮಣಾಸಂಗಮೇಮಹಿ ॥ ಶರೀರಂ ಮೇ ವಿಚಕ್ಷಣಂ ವಾಙ್ ಮೇ ಮಧುಮದ್ದುಹಾ । ಅವೃಧಮಹಮಸೌ ಸೂರ್ಯೋ ಬ್ರಹ್ಮ-ಣಾನೀಸ್ಥಃ ಶ್ರುತಂ ಮೇ ಮಾ ಪ್ರಹಾಸೀಃ ॥ ಮೇಧಾಂದೇವೀಂ ಮನಸಾರೇ-

---

ಅನ್ನವನ್ನು ನೈವೇದ್ಯ ಮಾಡಿ ಮೊದಲಿನಂತೆ ಮತ್ತೊಮ್ಮೆ ಪೂಜಿಸಿ ಬ್ರಹ್ಮಚಾರಿಯಿಂದ ನಮಸ್ಕಾರ ಮಾಡಿಸಬೇಕು. ಆಮೇಲೆ ಪಾತ್ರೆಯಲ್ಲಿ ಶುದ್ಧವಾದ ನೀರನ್ನು ತುಂಬಿಕೊಂಡು "**ಓಂ ಸುಶ್ರವಃ...**" ಎಂಬ ಮಂತ್ರವನ್ನು ಒಂದೊಂದು ಪ್ರದಕ್ಷಿಣೆಗೆ ಒಂದೊಂದು ಸರ್ತಿಯಂತೆ ಬ್ರಹ್ಮಚಾರಿಯ ಬಾಯಿಯಿಂದ ಹೇಳಿಸಿ ನೀರೆರೆಯುತ್ತಾ ಮೂರು ಪ್ರದಕ್ಷಿಣೆ ಮಾಡಿಸಬೇಕು. ಆಮೇಲೆ ಬ್ರಹ್ಮಚಾರಿಯು ಸ್ನಾನಮಾಡಿ ಬಂದು ಉಪನಯನದಲ್ಲಿ ಮಾಡಿದಂತೆ ಮಂತ್ರಪೂರ್ವಕವಾಗಿ ಹೊಸ ಯಜ್ಞೋಪವೀತ, ಕೃಷ್ಣಾಜಿನ, ಮೇಖಲೆ, ದಂಡಗಳನ್ನು ಧರಿಸಬೇಕು. ಹಳತನ್ನು ಪಲಾಶದ ಬುಡದಲ್ಲಿ ವಿಸರ್ಜಿಸಬೇಕು. ಹೊಸಬಟ್ಟೆಗಳನ್ನು ತೊಟ್ಟು ಹಳತನ್ನು ಗುರುವಿಗೆ ಅರ್ಪಿಸಿ, ಬ್ರಾಹ್ಮಣರಿಂದ "**ಮೇಧಾಮಸ್ಯ...**" ಎಂಬ ಸೂಕ್ತವನ್ನು ಹೇಳಿಸಬೇಕು. "**ಮೇಧಾಮಹ್ಯಂ...**"

ಜಮಾನಾಂಗಂಧರ್ವಜುಷ್ಟಾಂ ಪ್ರತಿನೋಜುಷಸ್ವ ॥ ಮಹ್ಯಂ ಮೇಧಾಂ ವದ ಮಹ್ಯಂ ಶ್ರಿಯಂ ವದಮೇಧಾವೀ ಭೂಯಾಸಮಜರಾಜರಿಷ್ಣು ॥ ಸದಸಸ್ಪತಿ-ಮದ್ಭುತಂ ಪ್ರಿಯಮಿಂದ್ರಸ್ಯ ಕಾಮ್ಯಂ ॥ ಸನಿಂ ಮೇಧಾಮಯಾಸಿಷಂ ॥ ಯಾಂ ಮೇಧಾಂ ದೇವಗಣಾಃ ಪಿತರಶ್ಚೋಪಾಸತೇ ॥ ತಯಾ ಮಾ ಮೇಧಯಾ ಮೇ ಮೇಧಾವಿನಂ ಕುರು ॥ ಮೇಧಾವ್ಯ ೧ ಹಂ ಸುಮನಾಃ ಸುಪ್ರತೀಕಃ ಶ್ರದ್ಧಾ-ಮನಾಃ ಸತ್ಯಮತಿಃ ಸುಶೇವಃ ॥ ಮಹಾಯಶಾಧಾರಯಿಷ್ಣುಃ ಪ್ರವಕ್ತಾಭೂ-ಯಾಸಮಸ್ಯೇಶ್ವಧಯಾಪ್ರಯೋಗೇ ॥

ವಿಧಿವತ್ಸ್ವಸ್ತಿವಾಚನಂ ಕೃತ್ವಾ ಬ್ರಾಹ್ಮಣೇಭ್ಯೋ ದಕ್ಷಿಣಾಂ ಯಥಾಶಕ್ತಿ ದತ್ವಾ ತಾನ್ ಭೋಜಯಿತ್ವಾ ನಮಸ್ಕೃತ್ಯಾಶಿಷೋ ಗೃಹ್ಣೀಯಾತ್ ॥ ಅಸ್ಯ ಕರ್ಮಣಃ ಪುಣ್ಯಾಹಂ ಭವಂತೋ ಬ್ರುವಂತು ಇತಿ ಸ್ವಸ್ತಿವಾಚನಂ ಕುರ್ಯಾತ್ ॥

॥ ಇತಿ ಮೇಧಾಜನನಾಂತ ಉಪನಯನ ಪ್ರಯೋಗಃ ॥

---

ಎಂಬ ಸೂಕ್ತವನ್ನು ಬ್ರಾಹ್ಮಣರು ಹೇಳಿದ ಬಳಿಕ ವಿಧಿಪ್ರಕಾರ ಸ್ವಸ್ತಿವಾಚನವನ್ನು ಮಾಡಿ ಬ್ರಾಹ್ಮಣರಿಗೆ ಭೋಜನ ದಕ್ಷಿಣೆಗಳನ್ನಿತ್ತು ಅವರಿಂದ ಆಶೀರ್ವಾದ ಪಡೆದುಕೊಳ್ಳಬೇಕು. **"ಅಸ್ಯಕರ್ಮಣಃ ಪುಣ್ಯಾಹಂ ಭವಂತೋ ಬ್ರುವಂತು"** ಎಂದು ಪುಣ್ಯಾಹವಾಚನ ಮಾಡಬೇಕು.

॥ ಮೇಧಾಜನನಪ್ರಯೋಗ ಸಮಾಪ್ತ ॥

# ॥ ಬ್ರಹ್ಮಚಾರಿವ್ರತಲೋಪಪ್ರಾಯಶ್ಚಿತ್ತ ಪ್ರಯೋಗಃ ॥

॥ ಶ್ರೀಃ ॥ ಬ್ರಹ್ಮಚಾರೀ ದ್ವಿರಾಚಮ್ಯ ಪ್ರಾಣಾನಾಯಮ್ಯ ದೇಶಕಾಲೌ ಸಂಕೀರ್ತ್ಯ ಮಮ ಶೌಚಾಚಮನ ಸಂಧ್ಯಾವಂದನದರ್ಭಭಿಕ್ಷಾಗ್ನಿಕಾರ್ಯರಾಹಿ-ತ್ಯಶೂದ್ರಾದಿಸ್ಪರ್ಶನಕೌಪೀನಕಟಿಸೂತ್ರಯಜ್ಞೋಪವೀತಮೇಖಲಾದಂಡಾಜಿನತ್ಯಾಗದಿ-ವಾಸ್ವಾಪಛತ್ರಧಾರಣಪಾದುಕಾಧ್ಯಾರೋಹಣಮಾಲಾಧಾರಣೋದ್ವರ್ತನಾನುಲೇಪ-ನಾಂಜನಜಲಕ್ರೀಡಾ – ದ್ಯೂತನೃತ್ಯಗೀತವಾದ್ಯಾದ್ಯಭಿರತಿಪಾಖಂಡಾದಿಸಂಭಾಷಣಪ-ರ್ಯುಷಿತಭೋಜನಾದಿ ಬ್ರಹ್ಮಚಾರಿವ್ರತಲೋಪಜನಿತಸಕಲದೋಷ ಪರಿಹಾರಾರ್ಥಂ ಆಜ್ಯಹೋಮಪೂರ್ವಕಂ ಕೃಚ್ಛ್ರತ್ರಯಂ ಅಮುಕಪ್ರತ್ಯಾಮ್ನಾಯೇನಾಹಮಾ-ಚರಿಷ್ಯೇ ॥ ಅಥವಾ ಶೌಚಾಚಮನಾದಿ ಸರ್ವಬ್ರಹ್ಮಚರ್ಯನಿಯಮವ್ರತಲೋಪ-ಪ್ರಾಯಶ್ಚಿತ್ತದ್ವಾರಾ ಶ್ರೀಪರಮೇಶ್ವರಪ್ರೀತ್ಯರ್ಥಂ ಹೋಮಪೂರ್ವಕಂ ಕೃಚ್ಛ್ರತ್ರಯ ಮಾಚರಿಷ್ಯೇ ಇತಿ ವಾ ಸಂಕಲ್ಪ್ಯ ॥

ಸ್ಥಂಡಿಲಕರಣಾದಿ ಲೌಕಿಕಾಗ್ನಿ (ವಿಟ) ಪ್ರತಿಷ್ಠಾಂತಂ ಕೃತ್ವಾ ಅನ್ವಾಧಾನಂ ಕುರ್ಯಾತ್ ॥ ಕ್ರಿಯಮಾಣೇ ಬ್ರಹ್ಮಚರ್ಯವ್ರತಲೋಪಪ್ರಾಯಶ್ಚಿತ್ತ-ಹೋಮೇ ದೇವತಾಪರಿಗ್ರಹಾರ್ಥಮನ್ವಾಧಾನಂ ಕರಿಷ್ಯೇ ಇತ್ಯಾದಿ ಚಕ್ಷುಷೀ ಆಜ್ಯೇನೇತ್ಯಂತಮುಕ್ತ್ವಾ ಅತ್ರ ಪ್ರಧಾನಂ ಅಗ್ನಿಂ ವಾಯುಂ ಸೂರ್ಯಂ ಪ್ರಜಾಪತಿಂ ಅಗ್ನಿಂ ಪೃಥಿವೀಂ ಮಹಾಂತಂ ವಾಯುಮಂತರಿಕ್ಷಂ ಮಹಾಂತಂ ಆದಿತ್ಯಂ ದಿವಂ ಮಹಾಂತಂ ಚಂದ್ರಮಸಂ ನಕ್ಷತ್ರಾಣಿ ದಿಶೋಮಹಾಂತಂ ಅಗ್ನಿಂ ವಿಶ್ವವೇದಸಂ ವಿಭಾವಸುಂ ಶತಕ್ರತುಂ ದ್ವಿವಾರಮಗ್ನಿಂ ಅಗ್ನಿಂ ವಾಯುಂ

---

ಬ್ರಹ್ಮಚಾರಿಯು ಎರಡುಸಲ ಆಚಮನಮಾಡಿ, ಪ್ರಾಣಾಯಾಮ ದೇಶಕಾಲ ಕೀರ್ತನಗಳನ್ನು ಮಾಡಿದ ಮೇಲೆ, **"ಮಮ ... ನಾಹಮಾಚರಿಷ್ಯೇ"** ಎಂದು ಅಥವಾ **"ಮಮ ಶೌಚಾಚಮನಾದಿ ..... ಕೃಚ್ರ ತ್ರಯಮಾಚರಿಷ್ಯೇ"** ಎಂದಾಗಲಿ ಸಂಕಲ್ಪ ಮಾಡಬೇಕು.

ಸ್ಥಂಡಿಲ ಸಂಸ್ಕಾರವೇ ಮೊದಲಾಗಿ **"ವಿಟ"** ಎಂಬ ಅಗ್ನಿಯನ್ನು ಪ್ರತಿಷ್ಠಾಪಿಸಿ, **"ಕ್ರಿಯಮಾಣೇ...ಕರಿಷ್ಯೇ"** ಎಂದು **"ಚಕ್ಷುಷೀ ಆಜ್ಯೇನ"** ಎಂಬಲ್ಲಿ ವರೇಗೆ ಹೇಳಿ ಮುಂದೆ **"ಅತ್ರ ಪ್ರಧಾನಂ"** ಎಂಬಲ್ಲಿಂದ **"ಶೇಷೇಣ ಸ್ವಿಷ್ಟಕೃತಂ"** ಎಂಬಲ್ಲಿ ವರೇಗೆ ಹೇಳಿ "ಆಜ್ಯಭಾಗಾಂತಕರ್ಮಗಳನ್ನು ಸ್ಥಾಲೀಪಾಕದಲ್ಲಿ ಹೇಳಿದಂತೆ ಮಾಡಬೇಕು. ಆಮೇಲೆ ಹದಿನೈದು ಆಜ್ಯಾಹುತಿಗಳನ್ನು ಕೊಟ್ಟು ನಂತರ ಗೋದಾನ, ಸಹಸ್ರ ತಿಲಹೋಮ ಅಥವಾ ಹತ್ತುಸಾವಿರ ಗಾಯತ್ರೀಜಪ ಇವುಗಳಲ್ಲಿ ಒಂದನ್ನು ಮಾಡಬೇಕು. ಬಳಿಕ ಸ್ವಿಷ್ಟಕೃದಾದಿ ಹೋಮಶೇಷವನ್ನು ಮಾಡಿಮುಗಿಸಬೇಕು.

ಸೂರ್ಯಂ ಪ್ರಜಾಪತಿಂ ಚೈಕೈಕಯಾ ಆಜ್ಯಾಹುತ್ಯಾ ಶೇಷೇಣ ಸ್ವಿಷ್ಟಕೃತಮಿತ್ಯಾದ್ಯಾಜ್ಯಭಾಗಾಂತಂ ಕೃತ್ವಾ (ಸಂಸ್ಕಾರಲೋಪ ನಿಮಿತ್ತಕ ಪ್ರಾಯಶ್ಚಿತ್ತ-ಹೋಮಕ್ರಮೇಣ ಪ್ರಾಯಶ್ಚಿತ್ತಾಜ್ಯಾಹುತೀರ್ಹುತ್ವಾ) ಕೃಚ್ಛ್ರಪ್ರತ್ಯಾಮ್ನಾಯತ್ವೇನ ಕಲ್ಪಿತಗೋದಾನ ಸಹಸ್ರತಿಲಹೋಮ ಅಯುತಗಾಯತ್ರೀಜಪಾದಿಷ್ವನ್ಯ-ತಮಂ ಚರಿತ್ವಾ ಸ್ವಿಷ್ಟಕೃದಾದಿ ಹೋಮಶೇಷಂ ಸಮಾಪಯೇತ್ ॥

ಏಕಾನೇಕವ್ರತಲೋಪಸಾಧಾರಣಮೃಗ್ವಿಧಾನೇ:- ತಂವೋಧಿಯಾ ಜಪೇ-ನ್ಮಂತ್ರಂ ಲಕ್ಷಂ ಚೈತ್ರೇ ಶಿವಾಲಯೇ ॥ ಬ್ರಹ್ಮಚಾರೀ ಸ್ವಧರ್ಮಸ್ಯ ನೂನಂ ಚೇತ್ಪೂರ್ಣಮೇವ ತತ್ ॥ ಓಂ ತಂವೋಧಿಯಾ ಪರಮಯಾಪುರಾಜಾಮಜರ-ಮಿಂದ್ರಮಭ್ಯನೂಷ್ಯರ್ಕೈಃ ॥ ಬ್ರಹ್ಮಾಚಗಿರೋದಧಿರೇಸಮಸ್ಮಿನ್ ಮಹಾಂಶ್ಚ-ಸ್ತೋಮೋ ಅಧಿವರ್ಧದಿಂದ್ರೇ ॥ ಇತಿ ॥

ಮಹಾನಾಮ್ನ್ಯಾದಿ ವ್ರತಲೋಪಪಕ್ಷೇ ಪ್ರತ್ಯೇಕಂ ಗಾಯತ್ರ್ಯಾ ಶತಮ-ಷ್ಟಾವಿಂಶತಿಮಷ್ಟೌವಾಜ್ಯಾಹುತೀ ಹುತ್ವಾ ॥ ಏಕೈಕಂ ಕೃಚ್ಛ್ರಂ ಚರಿತ್ವಾ ಗುರವೇ ದಕ್ಷಿಣಾಂ ದತ್ವಾ ತದನುಜ್ಞಾತಃ ಸಮಾವರ್ತನಂ ಕುರ್ಯಾತ್ ॥

॥ ಇತಿ ಬ್ರಹ್ಮಚಾರಿವ್ರತಲೋಪಪ್ರಾಯಶ್ಚಿತ್ತಪ್ರಯೋಗಃ ॥

---

ಒಂದು ಅಥವಾ ಅನೇಕ ವ್ರತಗಳ ಲೋಪ ಉಂಟಾಗಿರುವ ಪಕ್ಷದಲ್ಲಿ, ಋಗ್ವಿಧಾನದಲ್ಲಿ **"ತಂವೋಧಿಯಾ..."** ಎಂಬ ಮಂತ್ರವನ್ನು ಬ್ರಹ್ಮಚಾರಿಯು ಶಿವಾಲಯದಲ್ಲಿ, ಚೈತ್ರಮಾಸದಲ್ಲಿ ಒಂದುಲಕ್ಷ ಆವೃತ್ತಿ ಜಪಮಾಡಬೇಕೆಂಬ ಪ್ರಾಯಶ್ಚಿತ್ತವಿಧಿಯನ್ನು ಹೇಳಲಾಗಿದೆ.

ಮಹಾನಾಮ್ನಿ ಮುಂತಾದ ವ್ರತಗಳ ಲೋಪವಾಗಿದ್ದಲ್ಲಿ ಒಂದೊಂದು ವ್ರತಲೋಪಕ್ಕೆ 108, 28 ಅಥವಾ 8 ಆಜ್ಯಾಹುತಿಗಳನ್ನಿತ್ತು (ಗಾಯತ್ರೀಮಂತ್ರದಿಂದ) ಒಂದೊಂದು ಕೃಚ್ಛ್ರ ಪ್ರಾಯಶ್ಚಿತ್ತವನ್ನಿತ್ತು ಗುರುವಿಗೆ ದಕ್ಷಿಣೆ ಕೊಟ್ಟು ಅವರ ಅನುಜ್ಞೆಯಂತೆ ಸಮಾವರ್ತನ ಸಂಸ್ಕಾರ ಮಾಡಬೇಕು.

॥ ಬ್ರಹ್ಮಚಾರಿವ್ರತಲೋಪಪ್ರಾಯಶ್ಚಿತ್ತ ಸಮಾಪ್ತ ॥

# ॥ ಸಮಾವರ್ತನಸಂಸ್ಕಾರಃ ॥

॥ ಶ್ರೀಃ ॥ ಬ್ರಹ್ಮಚಾರೀ ಕೃತನಿತ್ಯಕ್ರಿಯಃ ಕೃತಪ್ರಾತರಗ್ನಿಕಾರ್ಯಃ ಆಚಮ್ಯ ಪ್ರಾಣಾನಾಯಮ್ಯ ದೇಶಕಾಲೌ ಸಂಕೀರ್ತ್ಯ ಮಮ ಗೃಹಸ್ಥಾಶ್ರಮಾಂತರಪ್ರಾಪ್ತಿದ್ವಾರಾ ಶ್ರೀಪರಮೇಶ್ವರಪ್ರೀತ್ಯರ್ಥಂ ಸಮಾವರ್ತನಂ ಕರಿಷ್ಯೇ ॥ ತದಂಗಭೂತಂ ಗಣಪತಿಪೂಜನಂ ಪುಣ್ಯಾಹವಾಚನಂ ಮಾತೃಕಾಪೂಜನಂ ನಾಂದೀ ಶ್ರಾದ್ಧಂ ಚ ಕರಿಷ್ಯೇ ಇತಿ ಸಂಕಲ್ಪ್ಯ ನಾಂದೀಶ್ರಾದ್ಧಾಂತಂ ಕೃತ್ವಾ ಸಮಿಧಮುಪರಿ ನಿಧಾಯ ಸ್ಥಂಡಿಲೋಲ್ಲೇಖನಾದಿ ಸೂರ್ಯನಾಮಾಗ್ನಿಪ್ರತಿಷ್ಠಾಪನಾಂತಂ ಕೃತ್ವಾ ಪುನರ್ದೇಶಕಾಲೌ ನಿರ್ದಿಶ್ಯ ಕ್ರಿಯಮಾಣೇ ಸಮಾವರ್ತನಹೋಮೇ ದೇವತಾಪರಿಗ್ರಹಾರ್ಥಮಿತ್ಯಾದ್ಯಾಘಾರಾವಾಜ್ಯೇನೇತ್ಯಂತಮುಕ್ತ್ವಾ ॥ ಅತ್ರಪ್ರಧಾನಂ ತ್ರಿರಗ್ನಿಂ ಪವಮಾನಂ ಪ್ರಜಾಪತಿಂ ಚೈತಾಃ ಪ್ರಧಾನದೇವತಾ ಆಜ್ಯೇನ ಅಗ್ನಿಮೂರ್ಧ್ವಸಮಿಧಾ ವಿಶ್ವಾನ್ ದೇವಾನ್ ದಶಸಮಿದ್ಭಿಃ ಶೇಷೇಣ ಸ್ವಿಷ್ಟಕೃತಮಿತ್ಯಾದಿ ಪೂರ್ಣಪಾತ್ರನಿಧಾನಾಂತಂ ಕೃತ್ವಾ ॥

ಉದಗಗ್ನೇರಾಸ್ತೀರ್ಣೇಷು ದರ್ಭೇಷು ವ್ರೀಹಿಯವಮಾಷತಿಲೈಃ ಪೃಥಕ್ಪೂರಿತಾನಿ ಚತ್ವಾರಿ ಶರಾವಾಣಿ ಕ್ರಮೇಣೈಕೈಕಶಃ ಪ್ರಾಕ್ಸಂಸ್ಥಾನ್ಯಾಸಾದಯೇತ್ ॥ ಕ್ಷುರಾದಿ ಸಂಭಾರಾಂಶ್ಚ ಅಗ್ನೇರುತ್ತರತ ಆಸಾದಯೇತ್ ॥ ತತಃ ಪ್ರತ್ಯಗಗ್ನೇರಾಸೀನಸ್ಯ ಕರ್ತುರ್ದಕ್ಷಿಣತೋ ಮಾತಾ ಪ್ರಾಙ್ಮುಖ್ಯಾಸೀತ ॥ ತಸ್ಯಾಃ ಪುರತೋಗ್ನೇಃ ಪಶ್ಚಾದೇಕಸ್ಮಿನ್ ಶರಾವೇ ಶಮೀಪರ್ಣಾನ್ಯಪರಸ್ಮಿನ್ ಆನಡುಹಂ ಗೋಮಯಂ ಚಾಸಾದಯೇತ್ ॥ ಬ್ರಹ್ಮಾ ಏಕವಿಂಶತಿ ಕುಶಪಿಂಜೂಲಾನಿ ದಧಾನೋ ಮಾತು-ರ್ದಕ್ಷಿಣತಸ್ತಿಷ್ಠೇತ್ ॥ ತತೋ ಬ್ರಹ್ಮಚಾರೀ ಆಘಾರಾಂತಂ ಕೃತ್ವಾ ॥

---

ಬ್ರಹ್ಮಚಾರಿಯು ನಿತ್ಯಕರ್ಮಗಳನ್ನೂ ಪ್ರಾತರಗ್ನಿಕಾರ್ಯವನ್ನೂ ಮಾಡಿ ಆಚಮನ ಪ್ರಾಣಾಯಾಮ ದೇಶಕಾಲಸಂಕೀರ್ತನಗಳನ್ನು ಮಾಡಿ **"ಮಮ ಗೃಹಸ್ಥಾ ... ನಾಂದೀಶ್ರಾದ್ಧಂ ಚ ಕರಿಷ್ಯೇ"** ಎಂದು ಸಂಕಲ್ಪಮಾಡಿ ನಾಂದೀಶ್ರಾದ್ಧದ ವರೆಗಿನ ಕರ್ಮಗಳನ್ನು ಮಾಡಬೇಕು. ಒಂದು ಸಮಿಧೆಯನ್ನು ತಂದು ನೆಲಕ್ಕೆ ಮುಟ್ಟಿಸದೆ ಅದನ್ನು ಮೇಲೆ ಇಡಬೇಕು. ಬಳಿಕ ಸ್ಥಂಡಿಲಾದಿಗಳನ್ನು ಮಾಡಿ ಅನ್ವಾಧಾನ ಮಾಡಬೇಕು. **"ಸೂರ್ಯ"** ನಾಮಾಗ್ನಿಯನ್ನು ಪ್ರತಿಷ್ಠಾಪಿಸಬೇಕು. ಶೇಷೇಣ ಸ್ವಿಷ್ಟಕೃತಮಿತ್ಯಾದಿ ಹೇಳಿ ಪೂರ್ಣಪಾತ್ರವನ್ನಿಡುವಲ್ಲಿ ವರೆಗಿನ ಕರ್ಮಗಳನ್ನು ಮುಗಿಸಬೇಕು.

ಅಗ್ನಿಯ ಉತ್ತರದಲ್ಲಿ ಹಾಸಿದ ದರ್ಭೆಗಳ ಮೇಲೆ ವ್ರೀಹಿ, ಯವ, ಉದ್ದು ಮತ್ತು ಎಳ್ಳು ತುಂಬಿಸಿದ ನಾಲ್ಕು ಪಾತ್ರೆಗಳನ್ನಿಡಬೇಕು. ಹಾಗೆಯೇ ಕ್ಷೌರದ ಕತ್ತಿ, ಬಿಸಿನೀರು, ತಣ್ಣೀರು,

**ಅಗ್ನ ಆಯೂಂಷೀತಿ ತಿಸ್ರೃಣಾಂ ಶತಂ ವೈಖಾನಸಾ ಋಷಯಃ ಅಗ್ನಿಃ ಪವಮಾನೋ ದೇವತಾ ಗಾಯತ್ರೀಛಂದಃ ॥ ಸಮಾವರ್ತನಪ್ರಧಾನಾಜ್ಯ-ಹೋಮೇ ವಿನಿಯೋಗಃ ॥ ಓಂ ಅಗ್ನ ಆಯೂಂಷಿ ........ ಸ್ವಾಹಾ ॥ ಅಗ್ನಯೇ ಪವಮಾನಾಯೇದಂ ನಮಮ ॥ ಓಂ ಅಗ್ನಿರ್ಋಷಿಃ ... ಸ್ವಾಹಾ ॥ ಅಗ್ನಯೇ ...... ॥ ಓಂ ಅಗ್ನೇಪವಸ್ವ ...... ಸ್ವಾಹಾ ॥ ಅಗ್ನಯೇ ...... ॥ ಪ್ರಜಾಪತೇ ಹಿರಣ್ಯಗರ್ಭಃ ಪ್ರಜಾಪತಿಸ್ತ್ರಿಷ್ಟುಪ್ ॥ ಸಮಾವರ್ತನಪ್ರಧಾನಾ ...... ॥ ಓಂ ಪ್ರಜಾಪತೇನ ... ಸ್ವಾಹಾ ॥ ಪ್ರಜಾಪತಯ ಇದಂ ನಮಮ ॥**

---

ಬೆಣ್ಣೆ, ಮೊಸರು ಇತ್ಯಾದಿಗಳನ್ನೂ ಉತ್ತರದಲ್ಲಿಡಬೇಕು. ಅಗ್ನಿಯ ಪಶ್ಚಿಮಕ್ಕೆ ಕುಳಿತ ಕರ್ತೃವಿನ ಬಲಭಾಗದಲ್ಲಿ ತಾಯಿಯು ಕುಳಿತು ಅವಳ ಮುಂಭಾಗದಲ್ಲಿ ಅಗ್ನಿಯ ಪಶ್ಚಿಮಕ್ಕೆ ಒಂದು ಪಾತ್ರೆಯಲ್ಲಿ ಎತ್ತಿನ ಸೆಗಣಿಯನ್ನೂ ಮತ್ತೊಂದರಲ್ಲಿ ಶಮೀ ಎಲೆಗಳನ್ನೂ ಇಡಬೇಕು. ಆಮೇಲೆ ಬ್ರಹ್ಮನು ಕೈಯಲ್ಲಿ ಇಪ್ಪತ್ತೊಂದು ದರ್ಭೆಗಳುಳ್ಳ ಸೂಡಿಯನ್ನು ಹಿಡಿದು ತಾಯಿಯ ದಕ್ಷಿಣಕ್ಕೆ ನಿಲ್ಲಬೇಕು. ಬಳಿಕ ಬ್ರಹ್ಮಚಾರಿಯು ಆಘಾರಾಂತ ಹೋಮ ಮುಗಿಸಿ, **"ಅಗ್ನ ಆಯೂಂಷಿ..."** ಮುಂತಾಗಿ ಮೂರು ಮಂತ್ರಗಳು ಮತ್ತು **"ಪ್ರಜಾಪತೇ..."** ಈ ಮಂತ್ರ ಸಹಿತ ಒಟ್ಟು ನಾಲ್ಕು ಆಜ್ಯಾಹುತಿಗಳನ್ನು ಕೊಟ್ಟ ಮೇಲೆ ಬ್ರಹ್ಮನು ತಣ್ಣೀರು ಬಿಸಿನೀರುಗಳನ್ನು ಮಿಶ್ರಮಾಡಿ ಬೆಣ್ಣೆ ಅಥವಾ ಕೆನೆಮೊಸರನ್ನು ಸೇರಿಸಿ **"ಓಂ ಅದಿತಿಃ ಶ್ಮಶ್ರೂಣಿ"** ಎಂಬ ಮಂತ್ರದಿಂದ ವಟುವಿನ ಎಡಮೀಸೆಯಿಂದ ಆರಂಭಿಸಿ ಪ್ರದಕ್ಷಿಣಾಕಾರವಾಗಿ ಮೂರು ಬಾರಿ ಮೀಸೆಗಳನ್ನು ಒದ್ದೆಮಾಡಬೇಕು. ಆಮೇಲೆ ಮೂರು ದರ್ಭೆಗಳನ್ನು ವಟುವಿನ ಬಲ ಮೀಸೆಯ ಬಳಿಯಲ್ಲಿ ಪಶ್ಚಿಮಕ್ಕೆ ತುದಿಗಳಿರುವಂತೆ ಹಿಡಿಯಬೇಕು. ಆಗ ವಟುವು **"ಓಂ ಓಷಧೇ ... ॥"** ಇದನ್ನು ಜಪಿಸಬೇಕು. ಬ್ರಹ್ಮನು ಆ ದರ್ಭೆಗಳನ್ನು ಕತ್ತರಿಸಬೇಕು. ಆಗ ವಟುವು **"ಓಂ ಸ್ವಧಿತೇ ... ಹಿಂಸೀಃ"** ಎಂದು ಜಪಿಸಬೇಕು. ಹಾಗೆಯೇ **"ಓಂ ಯೇನಾ ವಪ ..."** ಎಂಬ ಮಂತ್ರವನ್ನೂ ಜಪಿಸಬೇಕು. ಬ್ರಹ್ಮನು ಮೀಸೆ ಸಹಿತ ದರ್ಭೆಗಳನ್ನು ಕತ್ತರಿಸಿ ಪೂರ್ವಕ್ಕೆ ತುದಿ ಇರುವಂತೆ ಶಮೀ ಎಲೆಗಳೊಡನೆ ಸೇರಿಸಿ ತಾಯಿಯ ಕೈಗೆ ಕೊಡಬೇಕು. ಅವಳು ಅದನ್ನು ಎತ್ತಿನ ಸೆಗಣಿಯಲ್ಲಿಡಬೇಕು. ಹೀಗೆ ಪುನಃ ಮೂರು ಸಲ ಮಾಡಬೇಕು. ಎರಡನೆಯ ಮತ್ತು ಮೂರನೆಯ ಬಾರಿಗೆ **"ಯೇನಧಾತಾ"** ಮತ್ತು **"ಯೇನ ಭೂಯಃ"** ಎಂಬ ಮಂತ್ರಗಳನ್ನೂ ನಾಲ್ಕನೆಯ ಬಾರಿಗೆ ಈ ಮೂರೂ ಮಂತ್ರಗಳನ್ನೂ ಹೇಳಬೇಕು.

ತತೋ ಬ್ರಹ್ಮಾ ಚೌಲವತ್ ಶೀತೋಷ್ಣಾಂಬುನೀ ಏಕೀಕೃತ್ಯ ನವನೀತೇನ ದಧಿದ್ರಪ್ಸೇನ ವಾ ಮಿಶ್ರಯಿತ್ವಾ ವಟೋರ್ವಾಮಶ್ಮಶ್ರುಪ್ರದೇಶಮಾರಭ್ಯ ಪ್ರದಕ್ಷಿಣಂ ॥ ಓಂ ಅದಿತಿಃ ಶ್ಮಶ್ರೂಣಿ ವಪತ್ವಾಪಉಂದಂತು ವರ್ಚಸೇ ॥ ಇತಿ ಮಂತ್ರಾವೃತ್ಯಾ ತ್ರಿವಾರಂ ಶ್ಮಶ್ರೂಣ್ಯೇವ ಕ್ಲೇದಯಿತ್ವಾ ಕುಶಪಿಂಜೂಲತ್ರಯಮಾದಾಯ ವಟೋರ್ದಕ್ಷಿಣಶ್ಮಶ್ರುಭಾಗೇ ಪಶ್ಚಿಮಾಗ್ರಂ ನಿದಧ್ಯಾತ್ ॥ ತದಾ ಬ್ರಹ್ಮಾ ತೇಷು ಕುಶಾಂಕುರೇಷು ಕ್ಷುರಂ ನಿದಧ್ಯಾತ್ ॥ ತದಾ ಬ್ರಹ್ಮಚಾರೀ ॥ ಓಂ ಸ್ವಧಿತೇ ಮಾಮಾಹಿಂಸೀಃ ॥ ಓಂ ಯೇನಾವಪತ್ಸವಿತಾಕ್ಷುರೇಣಸೋಮಸ್ಯರಾಜ್ಞೋವರುಣಸ್ಯವಿದ್ವಾನ್ ॥ ತೇನ ಬ್ರಹ್ಮಾಣೋವಪತೇ ದಮ ಆಯುಷ್ಮಾನ್ಜರದಷ್ಟಿರ್ಯಥಾಸಂ ॥ ಇತಿ ಜಪೇತ್ ॥ ತತೋ ಬ್ರಹ್ಮಾ ಸಶ್ಮಶ್ರುಕಾನ್ ತಾನ್ ಕುಶಾನ್ ಛಿತ್ವಾ ಪ್ರಾಗಗ್ರಾನ್ ಶಮಿಾಪರ್ಣೈಃ ಸಹ ಏಕೀಕೃತ್ಯ ಮಾತುಃ ಕರೇ ದದ್ಯಾತ್ ॥ ಸಾ ಚ ತಾನಾನಡುಹೇ ಗೋಮಯೇ ನಿದಧ್ಯಾತ್ ॥ ಏವಂ ಪುನಸ್ತ್ರಿಃ ॥ ಛೇದನಮಂತ್ರೇವಿಶೇಷಃ ॥ ಓಂ ಯೇನಧಾತಾಬೃಹಸ್ಪತೇರಗ್ನೇರಿಂದ್ರಸ್ಯಚಾಯುಷೇವಪತ್ ॥ ತೇ ನಮ ಆಯುಷೇ ವಪಾಮಿಸುಶ್ಲೋಕ್ಯಾಯ ಸ್ವಸ್ತಯೇ ॥ ಇತಿ ದ್ವಿತೀಯೇ ॥ ಓಂ ಯೇನ ಭೂಯಶ್ಚ ರಾತ್ರ್ಯಾಂ ಜ್ಯೋಕ್ಚಪಶ್ಯಾಮಿ ಸೂರ್ಯಂ ॥ ತೇನಮ ಆಯುಷೇ ..... ॥ ಇತಿ ತೃತೀಯೇ ॥ ಚತುರ್ಥೇತು ॥ ಯೇನಾವಪತ್ಸವಿತಾ ... ॥ ಯೇನಧಾತಾ ... ॥ ಯೇನಭೂಯಃ ... ॥ ಇತಿ ತ್ರಯೋಽಪಿ ಮಂತ್ರಾಃ ॥

---

ಹಾಗೆಯೇ ಉತ್ತರಭಾಗದ ಮೀಸೆಗಳನ್ನೂ ಕತ್ತರಿಸಬೇಕು. ನಾಲ್ಕನೆಯ ಬಾರಿ ಬೇಡ. **"ಓಂ ಯತ್ ಕ್ಷುರೇಣ..."** ಮಂತ್ರವನ್ನು ಹೇಳಿ ಕ್ಷೌರದ ಕತ್ತಿಯನ್ನು ಬುಡದಿಂದ ತುದಿಯ ವರೆಗೆ ಉಜ್ಜಬೇಕು. ಬಳಿಕ ಕ್ಷೌರಿಕನನ್ನು ಕರೆದು ಅವನ ಕೈಗೆ ಮೊದಲಿನ ಬಿಸಿನೀರು ತಣ್ಣೀರುಗಳನ್ನಿತ್ತು ಉತ್ತರಕ್ಕೆ ಮುಖವಾಗಿರುವಂತೆ ಎಚ್ಚರಿಕೆಯಿಂದ ಕ್ಷೌರಮಾಡೆಂದು ಹೇಳಿ, ಉಳಿದ ಅಂಶವನ್ನು ಅವನಿಂದ ಕ್ಷೌರಮಾಡಿಸಿಕೊಳ್ಳಬೇಕು ನಂತರ ಕರಂಜಿಬೀಜದ ಹಿಟ್ಟಿನಿಂದ ತಿಕ್ಕಿ ಮೈತೊಳೆದು ಸ್ನಾನಮಾಡಬೇಕು.

**ಏವಮೇವೋತ್ತರಶ್ಮಶ್ರುಭಾಗೇಪ್ಯಾದ್ಯಾನಿ ತ್ರೀಣಿ ಛೇದನಾನಿ ಕುರ್ಯಾತ್ ॥ ನ ತು ಸರ್ವೈರ್ಮಂತ್ರೈಶ್ಚತುರ್ಥಃ ॥ ತತಃ ಓಂ ಯತ್ ಕ್ಷುರೇಣಮರ್ಚಯರಾಸುಪೇಶಸಾವಪ್ತಾವಪಸಿಶ್ಮಶ್ರೂಣಿ ॥ ಶುಂಧಿಶಿರ್ಬೋಮುಖ ಮಾಮ ಆಯುಃ ಪ್ರಮೋಷೀಃ ॥ ಇತ್ಯಗ್ರತ ಆರಭ್ಯಾಮೂಲಂ ಕ್ಷುರಧಾರಾ ನಿಮೃಜ್ಯ ॥ ನಾಪಿತಮಾಹೂಯ ಶೀತೋಷ್ಣಾಭಿರದ್ಭಿರಬರ್ಧಂ ಕುರ್ವಾಣೋಕ್ಷಿಣ್ವನ್ ಕುಶಲೀ ಕೇಶಶ್ಮಶ್ರುಲೋಮನಖಾನ್ಯುದಕ್ಸಂಸ್ಥಾನಿ ಕುರ್ವಿತಿ ಪ್ರೈಷಣಾನುಶಾಸ್ಯ ತಂ ಪ್ರೈಷಾರ್ಥಂ ಚಾವಬೋಧ್ಯ ನಾಪಿತೇನ ಪೂರ್ವಾವಶೇಷಿತ ಶೀತೋಷ್ಣಾಂಬುಭಿರಾರ್ದ್ರೀಕೃತ್ಯ ಕೇಶಶ್ಮಶ್ರುಲೋಮನಖಾನ್ಯುದಕ್ಸಂಸ್ಥಾನಿ ವಾಪಯಿತ್ವಾ ಕರಂಜಬೀಜಪಿಷ್ಟೇನ ಸ್ವಶರೀರಮುದ್ವರ್ತ್ಯ ಶೀತೋಷ್ಣೈರುದಕೈಃ ಸ್ನಾತ್ವಾ ॥**

**ದ್ವಿರಾಚಮ್ಯ ಪುನರಗ್ನೇರಂತಿಕಂ ಗತ್ವಾ ವಸ್ತ್ರದ್ವಯಂ ಧಾರಯೇತ್ ॥ ತತ್ರಮಂತ್ರಃ ॥ ಯುವಂ ವಸ್ತ್ರಾಣೀತ್ಯಸ್ಯೌಚಥೋದೀರ್ಘತಮಾ ಮಿತ್ರಾವರುಣೌತ್ರಿಷ್ಟುಪ್ ॥ ವಾಸೋಧಾರಣೇ ವಿನಿಯೋಗಃ ॥ "ಓಂ ಯುವಂ ವಸ್ತ್ರಾಣಿ ..." ॥ ಇತಿ ಏಕಂ ವಸ್ತ್ರಂ ಸಮಂತ್ರಂ ಪರಿಧಾಯ ಮಂತ್ರಾವೃತ್ತ್ಯಾ ಅನ್ಯದ್ವಸ್ತ್ರಂ ಪ್ರಾವೃಣುಯಾತ್ ॥ ತತೋ ದ್ವಿರಾಚಮ್ಯ ಪಾಣಿನಾಂಜನಮಾದಾಯ ॥ ಓಂ ಅಶ್ಮನಸ್ತೇಜೋಽಸಿ ಚಕ್ಷುರ್ಮೇಪಾಹಿ ॥ ಇತಿ ಮಂತ್ರಾವೃತ್ತ್ಯಾ ಸವ್ಯದಕ್ಷಿಣೇ ಚಕ್ಷುಷೀ**

---

ಆಮೇಲೆ ಎರಡು ಸಲ ಆಚಮನ ಮಾಡಿ ಅಗ್ನಿಯ ಸಮೀಪ ಬಂದು, "**ಯುವಂ ವಸ್ತ್ರಾಣಿ**" ಎಂಬ ಮಂತ್ರವನ್ನು ಎರಡುಸಲ ಪ್ರತ್ಯೇಕವಾಗಿ ಹೇಳಿ ಒಂದು ಬಟ್ಟೆಯನ್ನು ಉಟ್ಟು ಇನ್ನೊಂದನ್ನು ಉತ್ತರೀಯ ಹಾಕಬೇಕು. ಪುನಃ ಎರಡುಸಲ ಆಚಮನ ಮಾಡಿ ಕೈಯಲ್ಲಿ ಕಾಡಿಗೆ ತೆಕ್ಕೊಂಡು "**ಅಶ್ಮನಃ**" ಈ ಮಂತ್ರವನ್ನು ಎರಡು ಸಲ ಹೇಳಿ ಎರಡು ಕಣ್ಣುಗಳಿಗೆ ಕಾಡಿಗೆ ಹಚ್ಚಬೇಕು. ಹಾಗೇ "**ಅಶ್ಮನಃ ...**" **(ಶ್ರೋತ್ರಂ)** ಮಂತ್ರವನ್ನು ಎರಡು ಸಲ ಹೇಳಿ ಕುಂಡಲ ತೊಟ್ಟುಕೊಳ್ಳಬೇಕು. ಕುಂಕುಮಾದಿಗಳನ್ನು ಮೈಗೆ ಲೇಪಿಸಿ ಕೈತೊಳೆದು, "**ಓಂ ಅನಾರ್ತಾ**" ತಲೆಗೆ ಮಾಲೆ; "**ಓಂ ದೇವಾನಾಂ**" ಜೋಡು; "**ಓಂ ದಿವಃ**" ಛತ್ರ; "**ಓಂ ವೇಣು**" ದಂಡ "**ಆಯುಷ್ಯ**" ಸೂಕ್ತವನ್ನು ಹೇಳಿ ಕುತ್ತಿಗೆಯಲ್ಲಿ ಮಣಿಯನ್ನೂ ಧರಿಸಬೇಕು.

ಕ್ರಮೇಣಾಂಕ್ತ್ವಾ ॥ ಓಂ ಆಶ್ಮನಸ್ತೇಜೋಽಸಿ ಶ್ರೋತ್ರಂ ಮೇ ಪಾಹಿ ॥ ಅತ್ರ ದಕ್ಷಿಣಂ ಪೂರ್ವಂ ಪಶ್ಚಾತ್ಸವ್ಯಂ ಮಂತ್ರಾವೃತ್ಯೋಕ್ತ್ವಾ ಕುಂಡಲೇ ಧೃತ್ವಾ ಕುಂಕು-ಮಾದ್ಯನುಲಿಪ್ತಪಾಣಿಭ್ಯಾಂ ಮುಖಾದಿ ಸರ್ವಾಂಗಾನ್ಯನುಲಿಪ್ಯ ಕರೌ ಪ್ರಕ್ಷಾಲ್ಯ ॥ ಓಂ ಅನಾರ್ತಾಸ್ಯನಾರ್ತೋಽಹಂ ಭೂಯಾಸಂ ಇತ್ಯನೇನ ಶಿರಸಿ ಸ್ರಜಂ ಬದ್ಧ್ವಾ ॥ ಓಂ ದೇವಾನಾಂ ಪ್ರತಿಷ್ಠೇಸ್ಥಃ ಸರ್ವತೋ ಮಾ ಪಾತಂ ಇತ್ಯುಪಾನಹಾ-ವಾರುಹ್ಯ ॥ ಓಂ ದಿವಶ್ಛದ್ಮಾಸಿ ಇತಿ ಮಂತ್ರೇಣ ಛತ್ರಂ ಧೃತ್ವಾ ॥ ಓಂ ವೇಣುರಸಿ ವಾನಸ್ಪತ್ಯೋಽಸಿ ಸರ್ವತೋ ಮಾ ಪಾಹಿ ಇತಿ ವೈಣವಂ ದಂಡಂ ಗೃಹೀತ್ವಾ ॥ ಆಯುಷ್ಯಮಿತಿ ಸೂಕ್ತೇನ ಸುವರ್ಣಮಣಿಂ ಕಂಠೇ ಬಧ್ನೀಯಾತ್ ॥

ತತಃ ಪ್ರಾದಕ್ಷಿಣ್ಯೇನ ಉಷ್ಣೀಷೇಣ ಶಿರಃ ಸಂವೇಷ್ಟ್ಯ ಉಪಾನಹೌ ಸಂತ್ಯಜ್ಯ ಉಪರಿ ನಿಹಿತಾಂ ಪ್ರಾಗುಕ್ತಾಂ ಸಮಿಧಂ ಗೃಹೀತ್ವಾ ತಿಷ್ಠನ್ನೇವ ॥ ಸ್ಮೃತಂ ಚಮ ಇತ್ಯಾದಿ ಮಂತ್ರಾಣಾಂ ಪ್ರಜಾಪತಿರ್ಋಷಿಃ ಅಗ್ನಿರ್ದೇವತಾ ಅಷ್ಟೀಛಂದಃ ॥ ಸಮಿಧಾದಾನೇ ವಿನಿಯೋಗಃ ॥ ಓಂ ಸ್ಮೃತಂ ಚ ಮೇ ಅಸ್ಮೃತಂ ಚ ಮೇ ತನ್ಮ ಉಭಯವ್ರತಂ ॥ ನಿಂದಾ ಚ ಮೇ ಅನಿಂದಾ ಚ ಮೇ ತನ್ಮ ಉ ... ॥ ವಿದ್ಯಾ ಚ ಮೇ ಅವಿದ್ಯಾ ಚ ಮೇ ತನ್ಮಉ .... ॥ ಶ್ರದ್ಧಾಚ ಮೇ ಅಶ್ರದ್ಧಾ ಚ ಮೇ ತನ್ಮ ಉ .... ॥ ಪ್ರಜ್ಞಾ ಚ ಮೇ ಅಪ್ರಜ್ಞಾ ಚ ಮೇ ತನ್ಮ ಉ ... ॥ ಇಷ್ಟಂ ಚ ಮೇ ಅನಿಷ್ಟಂ ಚ ಮೇ ತನ್ಮ ಉ ... ॥ ದತ್ತಂ ಚ ಮೇ ಅದತ್ತಂ ಚ ಮೇ ತನ್ಮ ಉ .... ॥ ಅಧೀತಂ ಚ ಮೇ ಅನಧೀತಂ ಚ ಮೇ ತನ್ಮ ಉ .... ॥ ಕೃತಂ ಚ ಮೇ ಅಕೃತಂ ಚ ಮೇ ತನ್ಮ ಉ .... ॥ ಸತ್ಯಂ ಚ ಮೇ ಅಸತ್ಯಂ ಚ ಮೇ ತನ್ಮ ಉ ... ॥ ಶ್ರುತಂ ಚ ಮೇ ಅಶ್ರುತಂ ಚ ಮೇ ತನ್ಮ ... ॥ ವ್ರತಂ ಚ ಮೇ ಅವ್ರತಂ ಚ ಮೇ ತನ್ಮ ... ॥ ಯದಗ್ನೇಸೇಂದ್ರಸ್ಯ ಸಪ್ರಜಾಪತಿಕಸ್ಯ ಸಋುಷಿಕಸ್ಯ ಸಋುಷಿ ರಾಜನ್ಯಸ್ಯ ಸಪಿತೃಕಸ್ಯ ಸಪಿತೃರಾಜನ್ಯಸ್ಯ ಸಮನುಷ್ಯಸ್ಯ ಸಮನುಷ್ಯ ರಾಜನ್ಯಸ್ಯ ಸಾಕಾಶ್ಯಸ್ಯ ಸಾತೀಕಾಶಸ್ಯ ಸಾನೂಕಾಶಸ್ಯ ಸಪ್ರತೀಕಾಶಸ್ಯ ಸದೇವಮನುಷ್ಯಸ್ಯ ಸಗಂಧರ್ವಾಪ್ಸರಸ್ಕಸ್ಯ ಸಹಾರಣ್ಯೈಶ್ಚಪಶುಭಿರ್ಗ್ರಾಮ್ಯೈಶ್ಚ ಯನ್ಮ ಆತ್ಮಾನ ಆತ್ಮವ್ರತಂ ತನ್ಮೇ ಸರ್ವವ್ರತ-ಮಿದಮಹಮಗ್ನೇ ಸರ್ವವ್ರತೋ ಭವಾಮಿ ಸ್ವಾಹಾ ಅಗ್ನಯ ಇದಂ ನಮಮ ॥

---

ಆಮೇಲೆ ಪ್ರದಕ್ಷಿಣಾಕಾರವಾಗಿ ತಲೆಗೆ ಮುಂಡಾಸು ಕಟ್ಟಿ, ಕಾಲಿಗೆ ಹಾಕಿದ ಪಾದರಕ್ಷೆಗಳನ್ನು ಕಳಚಿ ಮೊದಲು ಹೇಳಿದ, ಮೇಲೆ ಇಟ್ಟ ಸಮಿಧೆಯನ್ನು ತೆಕ್ಕೊಂಡು ನಿಂತುಕೊಂಡು **"ಓಂ ಸ್ಮೃತಂ ಚ ಮೇ..."** ಎಂಬ ಮಂತ್ರವನ್ನು ಪೂರ್ತಿ ಹೇಳಿ **"ಸ್ವಾಹಾ"** ಎಂದು ಹೋಮ ಮಾಡಬೇಕು. ಬಳಿಕ ಕುಳಿತುಕೊಂಡು ಹತ್ತು ಸಮಿಧೆಗಳನ್ನು **"ಮಮಾಗ್ನೇ ವರ್ಚಃ..."** ಎಂಬ ಹತ್ತು ಋಕ್ಕುಗಳನ್ನು ಹೇಳುತ್ತ ಋಕ್ಕಿಗೊಂದರಂತೆ ಅಗ್ನಿಯಲ್ಲಿ ಹಾಕಿ **"ಸ್ವಾಹಾ"** ಎಂದು ಹೇಳಬೇಕು.

ಇತಿ ಹುತ್ವಾ ॥ ಉಪವಿಶ್ಯಾನ್ಯಾಃ ದಶಸಮಿಧೋ ಮಮಾಗ್ನೇ ಇತಿ ಸೂಕ್ತೇನ ಪ್ರತ್ಯೃಚಮೃಗಂತೇಗ್ನಾವಾದಧ್ಯಾತ್ ಪಶ್ಚಾತ್ ಸ್ವಾಹಾಕಾರಮುಚ್ಚಾರಯೇತ್ ॥ ಮಮಾಗ್ನೇ ಇತಿ ದಶರ್ಚಸ್ಯ ಸೂಕ್ತಸ್ಯ ವಿಹವ್ಯಋಷಿಃ ವಿಶ್ವೇದೇವಾ ದೇವತಾ ತ್ರಿಷ್ಟುಪ್‌ಛಂದಃ ಅಂತ್ಯಾ ಜಗತೀ ॥ ಸಮಿಧಾದಾನೇ ವಿನಿಯೋಗಃ ॥ ಓಂ ಮಮಾಗ್ನೇವರ್ಚೋವಿಹವೇಷ್ವಸ್ತುವಯಂತ್ವೇಂಧಾನಾಸ್ತನ್ವಂಪುಷೇಮ ॥ ಮಹ್ಯಂ ನಮಂತಾಂ ಪ್ರದಿಶಶ್ಚತಸ್ರಸ್ತ್ವಯಾಧ್ಯಕ್ಷೇಣಪೃತನಾಜಯೇಮ ಸ್ವಾಹಾ ॥ ವಿಶ್ವೇಭ್ಯೋ ದೇವೇಭ್ಯ ಇದಂ ನಮಮ ॥ ೧ ॥ ವಿವಮಗ್ರೇಪಿ ಸರ್ತತ್ರ ॥ ಓಂ ಮಮದೇವಾವಿಹವೇ ಸಂತು ಸರ್ವ ಇಂದ್ರವಂತೋಮರುತೋ ವಿಷ್ಣುರಗ್ನಿಃ ॥ ಮಮಾಂತರಿಕ್ಷಮುರುಲೋಕಮಸ್ತುಮಹ್ಯಂವಾತಃ ಪವತಾಂಕಾಮೇ ಅಸ್ಮಿನ್ ಸ್ವಾಹಾ ॥ ೨ ॥ ಓಂ ಮಯಿ ದೇವಾದ್ರವಿಣಮಾಯಜಂತಾಂ ಮಯ್ಯಾಶೀರಸ್ತು ಮಯಿ ದೇವ ಹೂತಿಃ ॥ ದೈವ್ಯಾಹೋತಾರೋವನುಷಂತಪೂರ್ವೇರಿಷ್ಟಾಃಸ್ಯಾಮತನ್ವಾಸುವೀರಾಃ ಸ್ವಾಹಾ ॥ ೩ ॥ ಓಂ ಮಹ್ಯಂ ಯಜಂತುಮಮಯಾನಿಹವ್ಯಾಕೂತಿಃ ಸತ್ಯಾಮನಸೋ ಮೇ ಅಸ್ತು ॥ ವಿನೋಮಾನಿಗಾಂಕತಮಚ್ಚನಾಹಂ ವಿಶ್ವೇದೇವಾಸೋ ಅಧಿವೋಚತಾನಃ ಸ್ವಾಹಾ ॥ ೪ ॥ ಓಂ ದೇವೀಃ ಷಳುರ್ವೀರುರುನಃ ಕೃಣೋತ ವಿಶ್ವೇದೇವಾಸ ಇಹ ವೀರಯಧ್ವಂ ॥ ಮಾಹಾಸ್ಮಹಿಪ್ರಜಯಾ ಮಾತನೂಭಿರ್ಮಾರಧಾಮದ್ವಿಷತೇ ಸೋಮರಾಜನ್ ಸ್ವಾಹಾ ॥ ೫ ॥ ಓಂ ಅಗ್ನೇ ಮನ್ಯುಂ ಪ್ರತಿನುದನ್ಪರೇಷಾಮದಬ್ಧೋಗೋಪಾಃ ಪರಿಪಾಹಿನಸ್ತ್ವಂ ॥ ಪ್ರತ್ಯಂಚೋಯಂತು ನಿಗುತಃ ಪುನಃಸ್ತೇ ೩ ಮೈಷಾಂ ಚಿತ್ತಂ ಪ್ರಬುಧಾಂ ವಿನೇಶತ್ ಸ್ವಾಹಾ ॥ ೬ ॥ ಓಂ ಧಾತಾಧಾತೄಣಾಂ ಭುವನಸ್ಯಯಸ್ಪತಿರ್ದೇವಂತ್ರಾತಾರಮಭಿಮಾತಿಷಾಹಂ ॥ ಇಮಂ ಯಜ್ಞಮಶ್ವಿನೋಭಾಬೃಹಸ್ಪತಿರ್ದೇವಾಃ ಪಾಂತು ಯಜಮಾನಂನ್ಯರ್ಥಾತ್ ಸ್ವಾಹಾ ॥ ೭ ॥ ಓಂ ಉರುವ್ಯಚಾನೋಮಹಿಷಃ ಶರ್ಮ-

ಯಂಸದಸ್ಮಿನ್ ಹವೇಪುರುಹೂತಃ ಪುರುಕ್ಷು ॥ ಸ ನಃ ಪ್ರಜಾಯೈಹ ಹರ್ಯಶ್ವಮೃಳಯೇಂದ್ರಮಾನೋರೀರಿಷೋಮಾಪರಾದಾಃ ಸ್ವಾಹಾ ॥ ೮ ॥ ಓಂ ಯೇನಃ ಸಪತ್ನಾಅಪತೇಭವಂತ್ವಿಂದ್ರಾಗ್ನಿಭ್ಯಾಮವಬಾಧಾಮಹೇತಾನ್ ॥ ವಸವೋರುದ್ರಾ ಆದಿತ್ಯಾ ಉಪರಿಸ್ಪೃಶಂ ಮೋಗ್ರಂಚೇತ್ತಾರಮಧಿರಾಜಮಕ್ರನ್ ಸ್ವಾಹಾ ॥ ೯ ॥ ಓಂ ಅರ್ವಾಂಚಮಿಂದ್ರಮಮುತೋಹವಾಮಹೇಯೋಗೋಜಿದ್ಧನಜಿದಶ್ವಜಿದ್ಯಃ ॥ ಇಮಂನೋ ಯಜ್ಞಂವಿಹವೇಜುಷಸ್ವಾಸ್ಯಕುರ್ಮೋಹರಿವೋಮೇದಿನಂತ್ವಾ ಸ್ವಾಹಾ ॥ ೧೦ ॥

ತತಃ ಸ್ವಿಷ್ಟಕೃದಾದಿ ಹೋಮಶೇಷಂ ಸಮಾಪಯೇತ್ ॥ ತತಃ ಸ್ನಾತಕೋ ನೈಮಿತ್ತಿಕಂ ವಿನಾ ನಕ್ತಂ ನಗ್ನಶ್ಚ ನ ಸ್ನಾಸ್ಯಾಮಿ ನಗ್ನಾಂ ಸ್ತ್ರಿಯಂ ನೇಕ್ಷಿಷ್ಯೇ ಅನ್ಯತ್ರ ಮೈಥುನಾತ್ ವರ್ಷತಿ ನ ಧಾವಿಷ್ಯಾಮಿ ವೃಕ್ಷಂ ನಾರೋಕ್ಷ್ಯಾಮಿ ಕೂಪಂ ನಾವರೋಕ್ಷ್ಯಾಮಿ ನ ಬಾಹುಭ್ಯಾಂ ನದೀಂ ತರಿಷ್ಯಾಮಿ ಪ್ರಾಣಸಂಶಯಂ ನಾಭ್ಯಾಪತ್ಸ್ಯೇ ಇತ್ಯೇವ ಸಂಕಲ್ಪಯೇತ್ ॥ ತತಃ ಕೌಪೀನ ಮೇಖಲಾಂ ಚ ವಿಸೃಜೇತ್ ॥ (ಸಮಾವರ್ತನಾನಂತರಂ ಪೂರ್ವಮೃತಾನಾಂ ತ್ರಿರಾತ್ರಮಾಶೌಚಂ)

॥ ಇತಿ ಸಮಾವರ್ತನಸಂಸ್ಕಾರಃ ॥

---

ಬಳಿಕ ಸ್ವಿಷ್ಟಕೃದಾದಿ ಹೋಮಶೇಷವನ್ನು ಮಾಡಿ ಮುಗಿಸಿ ಈ ಕೆಳಗಿನಂತೆ ಪ್ರತಿಜ್ಞೆ ಮಾಡಬೇಕು:- 1. ನೈಮಿತ್ತಿಕ ಕರ್ಮ ಹೊರತು ಇತರ ಸಂದರ್ಭಗಳಲ್ಲಿ ರಾತ್ರಿಹೊತ್ತು ಸ್ನಾನಮಾಡುವುದಿಲ್ಲ. 2. ನಗ್ನನಾಗಿದ್ದು ಸ್ನಾನಮಾಡುವುದಿಲ್ಲ. 3. ಮೈಥುನ ಹೊರತು ಇತರ ಸಂದರ್ಭದಲ್ಲಿ ನಗ್ನಳಾದ ಸ್ತ್ರೀಯನ್ನು ನೋಡುವುದಿಲ್ಲ. 4. ಮಳೆಯಲ್ಲಿ ಓಡುವುದಿಲ್ಲ. 5. ಮರ ಹತ್ತುವುದಿಲ್ಲ. 6. ಬಾವಿಗೆ ಇಳಿಯುವುದಿಲ್ಲ. 7. ಕೈಗಳಿಂದ ಹೊಳೆ ದಾಟುವುದಿಲ್ಲ. 8. ಪ್ರಾಣಾಪಾಯವಿರುವ ಯಾವ ಕೆಲಸವನ್ನೂ ಮಾಡುವುದಿಲ್ಲ. ಆಮೇಲೆ ಕೌಪೀನವನ್ನೂ ಮೇಖಲೆಯನ್ನೂ ತ್ಯಜಿಸಬೇಕು.

॥ ಸಮಾವರ್ತನಸಂಸ್ಕಾರ ಸಮಾಪ್ತ ॥

# ॥ ವಾಗ್ದಾನ ಪ್ರಯೋಗಃ ॥

**॥ ಶ್ರೀಃ ॥ ಅಥ ಮುಖ್ಯಬ್ರಾಹ್ಮವಿವಾಹಾಂಗಭೂತವಾಗ್ದಾನವಿಧಿರ್ಗೃಹ್ಯಪರಿಶಿಷ್ಟಾಚಾರಸಂಮತ್ಯೋಚ್ಯತೇ ॥ ಜ್ಯೋತಿರ್ವಿದಾದಿಷ್ಟೇ ವಿವಾಹನಕ್ಷತ್ರಾದಿಯುತೇ ಶುಭಕಾಲೇ ವರೇಣ ತತ್ಪಿತಾದಿನಾ ವಾ ಪ್ರಹಿತಾಶ್ಚತ್ವಾರೋ ಅಷ್ಟೌ ವಾ ಪ್ರಶಸ್ತವೇಷಾಃ ಪುರಂಧ್ರಿಭಿಃ ಮಂಗಲಗೀತತೂರ್ಯೈಶ್ಚ ಸಹ ಶಕುನದರ್ಶನಪೂರ್ವಂ ಕನ್ಯಾಗೃಹಮೇತ್ಯ ಶುಭೇ ಸವಸ್ತ್ರಪೀಠಾಸನೇ ಪ್ರಾಙ್ಮುಖೀಂ ಸಾಲಂಕಾರಾಂ ಸುವೇಷಾಂ ಕನ್ಯಾಮುಪವೇಶ್ಯ ತದ್ಧಸ್ತೇ ಫಲತಾಂಬೂಲಾದಿ ದತ್ವಾ ತತ್ಪಿತ್ರಾದಿಪುರತಃ ಶ್ರೀಗಣಪತ್ಯಾದಿಸ್ಮರಣಪೂರ್ವಕಂ ಪ್ರಾಙ್ಮುಖಾಃ ಪ್ರತ್ಯಙ್ಮುಖಾ ವಾ ಅಮುಕಪ್ರವರಾನ್ವಿತಾಯಾಮುಕಗೋತ್ರೋತ್ಪನ್ನಾಯಾಮುಕಪ್ರಪೌತ್ರಾಯಾಮುಕಪೌತ್ರಾಯಾಮುಕಪುತ್ರಾಯಾಮುಕನಾಮ್ನೇ ವರಾಯ ಅಮುಕಪ್ರವರೋಪೇತಾಂ ಅಮುಕಗೋತ್ರೋತ್ಪನ್ನಾಂ ಅಮುಕಪ್ರಪೌತ್ರೀಂ ಅಮುಕಪುತ್ರೀಂ ಅಮುಕನಾಮ್ನೀಂ ಕನ್ಯಾಂ ಭಾರ್ಯಾತ್ವಾಯ ವೃಣೀಮಹೇ ಇತಿ ಬ್ರೂಯುಃ ॥**

---

ಎಂಟು ವಿಧದ ವಿವಾಹಗಳಲ್ಲಿ ಮುಖ್ಯವಾದ 'ಬ್ರಾಹ್ಮ' ವಿವಾಹದ ಅಂಗಭೂತವಾದ ವಾಗ್ದಾನ ಪ್ರಯೋಗವನ್ನು ಹೇಳಲಾಗುತ್ತದೆ. ಆಶ್ವಲಾಯನಗೃಹ್ಯಸೂತ್ರ ಅಥವಾ ಗೃಹ್ಯ ಪರಿಶಿಷ್ಟದಲ್ಲಿ ಹೇಳಿದ ವಿಧಿ ಇದು. ಶಿಷ್ಟಾಚಾರದಲ್ಲಿ ಸೇರಿರುವುದರಿಂದ ಇದನ್ನು ಅವಶ್ಯವಾಗಿ ಮಾಡಲೇಬೇಕು.

ಜ್ಯೋತಿಷ್ಕರು ಹೇಳಿದ ಶುಭಮುಹೂರ್ತದಲ್ಲಿ, ವರನಿಂದ ಅಥವಾ ವರನ ತಂದೆಯಿಂದ ಕಳುಹಿಸಲ್ಪಟ್ಟ ನಾಲ್ಕು ಅಥವಾ ಎಂಟು ಮಂದಿ ಪುರುಷರು ಉತ್ತಮವಾದ ಉಡುಪನ್ನು ಧರಿಸಿ ಮುತ್ತೈದೆಯರಿಂದಲೂ ಮಂಗಲವಾದ್ಯಘೋಷದಿಂದಲೂ ಒಡಗೂಡಿದವರಾಗಿ ಶುಭಶಕುನಗಳನ್ನು ನೋಡುತ್ತ ಕನ್ಯಾಗೃಹಕ್ಕೆ ಬರಬೇಕು. ಅಲ್ಲಿ ಬಟ್ಟೆ ಹಾಸಿದ ಆಸನದ ಮೇಲೆ ಅಲಂಕೃತಳಾಗಿ ಪೂರ್ವಕ್ಕೆ ಮುಖಮಾಡಿ ಕುಳಿತ ಕನ್ಯೆಯ ಕೈಗೆ ಫಲ ತಾಂಬೂಲಾದಿಗಳನ್ನಿತ್ತು ಅವಳ ತಂದೆ ಮೊದಲಾದವರ ಸಮ್ಮುಖದಲ್ಲಿ ಮೂಡು ಅಥವಾ ಪಡುಮುಖವಾಗಿ ಕುಳಿತು ಗಣಪತಿ ಸ್ಮರಣೆ ಇತ್ಯಾದಿಗಳನ್ನು ಮಾಡಿ. **"ಅಮುಕಪ್ರವರಾನ್ವಿತಾಂ... ವೃಣೀಮಹೇ"** ಎಂದು ಹೇಳಬೇಕು. ಆಗ ಕನ್ಯಾದಾತೃವು ತನ್ನ ಪತ್ನಿ ಮತ್ತು ಇತರ ಬಂಧುಗಳ ಅನುಮತಿಯನ್ನು ಪಡೆದು "ವೃಣೀಧ್ವಂ ಎಂದು ಹೇಳಬೇಕು. ಇನ್ನೆರಡುಸಲ ಹಾಗೆಯೇ ಎರಡು ಕಡೆಯವರೂ ಹೇಳಬೇಕು. ಕನ್ಯಾಪಿತೃವು **"ಪ್ರದಾಸ್ಯಾಮಿ"** ಎಂದು ಗಟ್ಟಿಯಾಗಿ ಮೂರು ಸಲ ಹೇಳಬೇಕು. ಆಮೇಲೆ ವರನ ತಂದೆಯೇ ಮೊದಲಾದವರು ಗಂಧಾಕ್ಷತೆ ವಸ್ತ್ರಾದಿಗಳಿಂದ ವಧುವನ್ನು ಪೂಜಿಸಬೇಕು.

ಅಥ ದಾತಾ ಭಾರ್ಯಾಜ್ಞಾತಿಬಂಧ್ವನುಮತಿಂ ಕೃತ್ವಾ ವೃಣೀಧ್ವಮಿತಿ ವದೇತ್ ॥ ಏವಂ ಪುನರ್ದ್ವಿಃ ಪ್ರಯುಜ್ಯ ಪ್ರದಾಸ್ಯಾಮೀತಿ ಚೋಚ್ಚೈಸ್ತ್ರಿರ್ವದೇತ್ ॥ ತತೋ ವರಪಿತ್ರಾದಿರ್ಗಂಧಾಕ್ಷತಶುಭವಸ್ತ್ರ ಯುಗ್ಮಭೂಷಣತಾಂಬೂಲ-ಪುಷ್ಪಾದಿಭಿಃ ಕನ್ಯಾಂ ಪೂಜಯೇತ್ ಸಂಪ್ರದಾಯಾಗತಮಂತ್ರೈಃ ॥

ತತಃ ಕನ್ಯಾದಾತಾ ಪ್ರಾಙ್ಮುಖಃ ಕನ್ಯಾವಾಮತ ಉಪವಿಶ್ಯ ಆಚಮ್ಯ ದೇಶಕಾಲೌ ಸ್ಮೃತ್ವಾ ಕರಿಷ್ಯಮಾಣ ವಿವಾಹಾಂಗಭೂತಂ ವಾಗ್ದಾನಮಹಂ ಕರಿಷ್ಯೇ ॥ ತದಂಗಂ ಗಣಪತಿಪೂಜನಂ ವರುಣಪೂಜನಂ ಚ ಕರಿಷ್ಯೇ ಇತಿ ಸಂಕಲ್ಪ್ಯ ಗಣಾನಾಂತ್ವೇತಿ ಗಣಪತಿಂ ಪೂಜಯಿತ್ವಾ ಮಹೀದ್ಯೌರಿತ್ಯಾದಿಮಂತ್ರೈಃ ಯಥಾಚಾರಕಲಶಪೂಜನಾದಿ ಚ ಕೃತ್ವಾ ಸ್ವಸ್ಥಾನೇ ಕನ್ಯಾಪೂಜಯಿತಾರಮುಪವೇಶ್ಯ ಸ್ವಯಂ ತತ್ಪ್ರಾಚ್ಯಾಂ ಪ್ರತ್ಯಙ್ಮುಖ ಉಪವಿಶ್ಯ ತಂ ಗಂಧತಾಂಬೂಲಾದಿನಾಪೂಜಯೇತ್ ಸ ಚ ದಾತಾರಂ ॥ ತತೋ ದಾತಾ ಆಚಾರತೋ ಹರಿದ್ರಾಖಂಡಂ ಪಂಚ ದೃಢಪೂಗಫಲಾನಿ ಚ ಗಂಧಾಕ್ಷತಾ-ಲಂಕೃತಾನಿ ಗೃಹೀತ್ವಾ ಅಮುಕಪ್ರವರಾನ್ವಿತಾಯಾಮುಕಗೋತ್ರೋತ್ಪನ್ನಾಯಾಮುಕ-ಪ್ರಪೌತ್ರಾಯಾಮುಕಪೌತ್ರಾಯಾಮುಕಪುತ್ರಾಯಾಮುಕನಾಮ್ನೇ ವರಾಯ ಅಮುಕ-ಪ್ರವರಾನ್ವಿತಾಮಮುಕಗೋತ್ರೋತ್ಪನ್ನಾಮಮುಕಪ್ರಪೌತ್ರೀಮಮುಕಪೌತ್ರೀಮಮುಕಸ್ಯ ಮಮ ಪುತ್ರೀಮಮುಕನಾಮ್ನೀಮಿಮಾಂ ಕನ್ಯಾಂ ಜ್ಯೋತಿರ್ವಿದಾದಿಷ್ಟೇ ಸುಮುಹೂರ್ತೇ ದಾಸ್ಯೇ ಇತಿ ವಾಚಾ ಸಂಪ್ರದದೇ ಇತಿ ಚೋಕ್ತ್ವಾ ॥ ಅವ್ಯಂಗೇಽ-ಪತಿತೇಽಕ್ಲೀಬೇ ದಶದೋಷವಿವರ್ಜಿತೇ ॥ ಇಮಾಂ ಕನ್ಯಾಂ ಪ್ರದಾಸ್ಯಾಮಿ-

---

ಬಳಿಕ ಕನ್ಯಾದಾನ ಮಾಡುವವನು ಕನ್ಯೆಯ ಎಡಬದಿಯಲ್ಲಿ ಪೂರ್ವಕ್ಕೆ ಮುಖ ಮಾಡಿ ಕುಳಿತು ಆಚಮನಮಾಡಿ ದೇಶಕಾಲಾದಿಗಳನ್ನು ಸ್ಮರಿಸಿ, **"ಕರಿಷ್ಯಮಾಣ... ಪೂಜನಂ ಚ ಕರಿಷ್ಯೇ"** ಎಂದು ಸಂಕಲ್ಪಿಸಿ ಗಣಪತಿಪೂಜೆ ಹಾಗೂ **"ಮಹೀದ್ಯೌಃ"** ಮುಂತಾದ ಮಂತ್ರಗಳಿಂದ ಕಲಶಪೂಜೆಯನ್ನೂ ಮಾಡಿ ವರನ ಪಕ್ಷದ ಮುಖ್ಯಸ್ಥನನ್ನು ತಾನು ಕುಳಿತ ಸ್ಥಳದಲ್ಲಿ ಕುಳ್ಳಿರಿಸಿ, ತಾನು ಅವನ ಮುಂದೆ ಪಡುಮುಖವಾಗಿ ಕುಳಿತು, ಅವನನ್ನು ಗಂಧಪುಷ್ಪಾದಿಗಳಿಂದ ಪೂಜಿಸಬೇಕು. ಅವನು ದಾತೃವನ್ನೂ ಪೂಜಿಸಬೇಕು. ಆಮೇಲೆ ಕನ್ಯಾದಾನ ಮಾಡುವವನು ಒಂದು ಅರಸಿನ ತುಂಡು ಮತ್ತು ಐದು ಇಡೀ ಅಡಿಕೆಗಳನ್ನೂ ಗಂಧಾಕ್ಷತಾದಿಗಳಿಂದ ಅಲಂಕರಿಸಿ ತೆಕ್ಕೊಂಡು **"ಅಮುಕಪ್ರವರಾ .... ವಾಚಾ ಸಂಪ್ರದದೇ"** ಎಂದು ಹೇಳಿ **"ಅವ್ಯಂಗೇ ... ಸನ್ನಿಧೌ"** ಎಂದು ಹೇಳಿ, ವರನ ತಂದೆಯ ವಸ್ತ್ರದಲ್ಲಿ ಅವುಗಳನ್ನು ಹಾಕಬೇಕು. ಬಳಿಕ **"ತದಸ್ತು"** ಎಂಬ ಮಂತ್ರದಿಂದ ಪ್ರತಿಷ್ಠಾಪಿಸಿ ಗಂಟು ಕಟ್ಟಿ ಆ ಗಂಟನ್ನು ಚಂದನದಿಂದ ಅಲಂಕರಿಸಬೇಕು. ನಂತರ ವರನ ತಂದೆಯು ಹಾಗೆಯೇ ಅರಸಿನ ತುಂಡು ಮತ್ತು ಅಡಿಕೆಗಳನ್ನು ತೆಕ್ಕೊಂಡು **"ಅಮುಕಗೋತ್ರಾ...ಭವಂತು"** ಎಂದು ಹೇಳಿ ದಾತೃವಿನ ಬಟ್ಟೆಯಲ್ಲಿ ಹಾಕಬೇಕು.

**ದೇವಾಗ್ನಿದ್ವಿಜಸನ್ನಿಧೌ ॥ ಇತಿ ವರಪಿತ್ರಾದಿವಸ್ತ್ರಪ್ರಾಂತೇ ತಾನಿ ಪೂಗೀಫಲಾನಿ ಪ್ರಕ್ಷಿಪ್ಯ ಪ್ರತಿಷ್ಠಾಮಂತ್ರೇಣ ತದಸ್ತ್ವಿತ್ಯಾದಿನಾ ವಸ್ತ್ರೇ ಬಧ್ವಾ ಗ್ರಂಥಿಂ ಚಂದನೇನ ಚರ್ಚಯೇದಿತ್ಯಾಚಾರಪ್ರಾಪ್ತಂ ॥**

**ತತೋ ಹರಿದ್ರಾಖಂಡಪಂಚಪೂಗಫಲಾನಿ ತಥೈವ ವರಪಿತ್ರಾದಿರ್ಗೃಹೀತ್ವಾ ಅಮುಕಗೋತ್ರಾಮುಕವರವಿಷಯೇ ಭವಂತೋ ನಿಶ್ಚಿತಾ ಭವಂತು ಇತಿ ದಾತೃವಸ್ತ್ರಪ್ರಾಂತೇ ಪ್ರಕ್ಷೇಪಾದಿ ಕುರ್ಯಾತ್ ॥**

**ತತೋ ದಾತಾ ॥ ವಾಚಾ ದತ್ತಾ ಮಯಾ ಕನ್ಯಾ ಪುತ್ರಾರ್ಥಂ ಸ್ವೀಕೃತಾ ತ್ವಯಾ ॥ ಕನ್ಯಾವಲೋಕನವಿಧೌ ನಿಶ್ಚಿತಸ್ತ್ವಂ ಸುಖೀ ಭವ ॥ ಇತಿ ವರಪಿತರಂ ಪ್ರತಿ ಪಠೇತ್ ॥ ಸ ಚ ॥ ವಾಚಾ ದತ್ತಾ ತ್ವಯಾ ಕನ್ಯಾ ಪುತ್ರಾರ್ಥಂ ಸ್ವೀಕೃತಾ ಮಯಾ ॥ ವರಾವಲೋಕನವಿಧೌ ನಿಶ್ಚಿತಸ್ತ್ವಂ ಸುಖೀ ಭವ ॥ ಇತಿ ದಾತಾರಂ ಪ್ರತಿ ಪಠೇತ್ ॥ ಭ್ರಾತ್ರಾದೌ ಸ್ವೀಕರ್ತರಿ ಭ್ರಾತ್ರರ್ಥಂ ಮಿತ್ರಾರ್ಥಮಿತ್ಯಾದ್ಯೂಹಃ ಕಾರ್ಯಃ ॥ ತತೋ ಬ್ರಾಹ್ಮಣಾಃ ॥ ಶಿವಾ ಆಪಃ ಸಂತು ॥ ಸೌಮನಸ್ಯ-ಮಸ್ತು ॥ ಅಕ್ಷತಂ ಚಾರಿಷ್ಟಂ ಚಾಸ್ತು ॥ ದೀರ್ಘಮಾಯುಃಶ್ರೇಯಃ ಶಾಂತಿಃ**

---

ಆಮೇಲೆ ಕನ್ಯಾದಾನ ಮಾಡುವವನು "**ವಾಚಾ ದತ್ತಾ ... ಸುಖೀ ಭವ**" ಎಂದು ವರನ ತಂದೆಯನ್ನು ಕುರಿತು ಹೇಳಬೇಕು. ವರನ ತಂದೆಯು "**ವಾಚಾ ದತ್ತಾ ತ್ವಯಾ ... ಸುಖೀ ಭವ**" ಎಂದು ಪ್ರತಿವಚನವನ್ನು ಹೇಳಬೇಕು. ಅಣ್ಣನೋ ಅಥವಾ ಬೇರೆ ಯಾರಾದರೂ ಕನ್ಯೆಯನ್ನು ಕೊಡುವ, ಸ್ವೀಕರಿಸುವ ಸಂದರ್ಭದಲ್ಲಿ "**ಭ್ರಾತ್ರರ್ಥಂ**" "**ಮಿತ್ರಾರ್ಥಂ**" ಎಂದು ಮೊದಲಾಗಿ ಬೇಕಾದಂತೆ ಅಳವಡಿಸಿಕೊಳ್ಳಬೇಕು. ಆಮೇಲೆ ಬ್ರಾಹ್ಮಣರು "**ಶಿವಾ ಆಪಃ ಸಂತು .... ಏತದ್ವಃ ಸತ್ಯಮಸ್ತು**" ಎಂಬಲ್ಲಿ ವರೆಗೆ ಹೇಳಬೇಕು. ಬಳಿಕ "**ಸಮಾನೀವ ಆಕೂತಿಃ ...**" "**ಪ್ರಸುಗ್ಮಂತಾ ...**" ಎಂಬ ಎರಡು ಮಂತ್ರಗಳನ್ನೂ ಹೇಳಬೇಕು.

ಬಳಿಕ ಕನ್ಯಾದಾತೃವು ಒಂದು ಪಾತ್ರೆಯಲ್ಲಿ ರಾಶಿ ಹಾಕಿ ಹರಡಿದ ಅಕ್ಕಿಯ ರಾಶಿಯ ಮೇಲೆ ಶಚಿಯನ್ನು ಅವಾಹಿಸಿ ಷೋಡಶೋಪಚಾರಗಳಿಂದ ಪೂಜಿಸಬೇಕು. ಕನ್ಯೆಯು "**ದೇವೇಂದ್ರಾಣಿ ... ದೇಹಿ ಮೇ**" ಎಂದು ಶಚೀದೇವಿಯನ್ನು ಪ್ರಾರ್ಥಿಸಬೇಕು. ಬಳಿಕ ಸ್ತ್ರೀಯರು ಮಂಗಳಾರತಿ ಮುಂತಾದ ಶುಭಕರ್ಮಗಳನ್ನು ಮಾಡಿದ ಮೇಲೆ ಗಂಧತಾಂಬೂಲಾದಿಗಳಿಂದ ಅರ್ಚಿಸಲ್ಪಟ್ಟ ಬ್ರಾಹ್ಮಣರು ಮುಂದಿನ ಆಶೀರ್ವಾದ ಮಂತ್ರಗಳನ್ನು ಪಠಿಸಬೇಕು.

ಪುಷ್ಟಿಸ್ತುಷ್ಟಿಶ್ಚಾಸ್ತು ॥ ಏತದ್ವಃ ಸತ್ಯಮಸ್ತು ॥ ಇತ್ಯುಕ್ತ್ವಾ ॥ ಓಂ ಸಮಾನೀವ ಆಕೂತಿಃ ಸಮಾನಾ ಹೃದಯಾನಿ ವಃ ॥ ಸಮಾನಮಸ್ತುವ್ರೋಮನೋಯಥಾವಃ ಸುಸಹಾಸತಿ ॥ ಓಂ ಪ್ರಸುಗ್ಮಂತಾಧಿಯಸಾನಸ್ಯಸಕ್ಷಣಿರ್ವರೇಭಿರ್ವರಾಂ ಅಭಿಷು ಪ್ರಸೀದತಃ ॥ ಅಸ್ಮಾಕಮಿಂದ್ರಉಭಯಂಜುಜೋಷತಿಯತ್ಸೋಮ್ಯಸ್ಯಾಂಧ ಸೋಬು ಬೋಧತಿ ॥ ಇತಿ ಮಂತ್ರಂ ಪಠೇಯುಃ ॥

ತತೋ ದಾತಾ ಪಾತ್ರಸ್ಥಸಿತತಂದುಲಪುಂಜೇ ಶಚೀಮಾವಾಹ್ಯ ಷೋಡಶೋ- ಪಚಾರೈಃ ಪೂಜಯೇತ್ತಾಂ ಚ ಕನ್ಯೈವಂ ಪ್ರಾರ್ಥಯೇತ್ ॥ ದೇವೇಂ- ದ್ರಾಣಿ ನಮಸ್ತುಭ್ಯಂ ದೇವೇಂದ್ರಪ್ರಿಯಭಾಮಿನಿ ॥ ವಿವಾಹಂ ಭಾಗ್ಯಮಾರೋಗ್ಯಂ ಪುತ್ರಲಾಭಂ ಚ ದೇಹಿ ಮೇ ॥ ಇತಿ ॥ ತತಃ ಪುರಂಧ್ರೀಭಿಃ ನೀರಾಜನಾದಿ ಮಾಂಗಲಿಕಂ ಕಾರ್ಯಂ ॥ ವಿಪ್ರಾಶ್ಚ ಗಂಧತಾಂಬೂಲಾದಿನಾ ಪೂಜಿತಾಃ ಆಶೀರ್ಮಂತ್ರಾನ್ ಪಠೇಯುಃ ॥

ತೇ ಚ ॥ ಓಂ ಹಿಂಕೃಣ್ವತೀವಸುಪತ್ನೀವಸೂನಾಂ ವತ್ಸಮಿಚ್ಛಂತೀ- ಮನಸಾಭ್ಯಾಗಾತ್ ॥ ದುಹಾಮಶ್ವಿಭ್ಯಾಂ ಪಯೋ ಅಘ್ನೇಯಂ ಸಾವರ್ಧತಾಂ- ಮಹತೇ ಸೌಭಗಾಯ ॥ ಓಂ ಸಮಿದ್ಧಸ್ಯಶ್ರಯಮಾಣಃ ಪುರಸ್ತಾದ್ ಬ್ರಹ್ಮವನ್ವಾನೋ ಅಜರಂ ಸುವೀರಂ ॥ ಆರೇಅಸ್ಮದಮತಿಂಬಾಧಮಾನಉಚ್ಛ್ರಯಸ್ವ ಮಹತೇ ಸೌಭಗಾಯ ॥ ಓಂ ವನಸ್ಪತೇ ಶತವಲ್ ಶೋವಿರೋಹಸಹಸ್ರವಲ್ಶಾ- ವಿವಯಂರುಹೇಮ ॥ ಯಂತ್ವಾಮಯಂಸ್ವಧಿತಿಸ್ತೇಜಮಾನಃಪ್ರಣಿನಾಯಮಹತೇ ಸೌಭಗಾಯ । ಓಂ ಇಂದುರ್ದೇವಾನಾಮುಪಸಖ್ಯಮಾಯನ್‌ತ್ಸಹಸ್ರಧಾರಃಪವ- ತೇಮದಾಯ ॥ ನೃಭಿಸ್ತವಾನೋ ಅನುಧಾಮಪೂರ್ವಮಗನ್ನಿಂದ್ರಂಮಹತೇ ಸೌಭಗಾಯ ॥ ಓಂ ಅಸ್ಯಪಿಬಕ್ಷುಮತಃ ಪ್ರಸ್ಥಿತಸ್ಯೇಂದ್ರಸೋಮಸ್ಯವರಮಾಸು- ತಸ್ಯ ॥ ಸ್ವಸ್ತಿದಾಮನಸಾಮಾದಯಸ್ವಾರ್ವಾಚೀನೋರೇವತೇ ಸೌಭಗಾಯ ॥

---

ಈ ಮೇಲಿನ ಆಶೀರ್ವಾದ ಮಂತ್ರಗಳನ್ನು ಹೇಳಿ ಕನ್ಯೆಯ ತಲೆಯ ಮೇಲೆ ಅಕ್ಷತೆಗಳನ್ನು ಹಾಕಿ ಆಚಾರದಂತೆ ಇಬ್ಬರೂ ಮನೆಗಳಿಗೆ ಹೋಗುವುದು.

ಓಂ ಘೃತಾದುರ್ಲುಪ್ತಂ ಮಧುಮತ್ಸುವರ್ಣಂ ಧನಂಜಯಂಧರುಣಂಧಾರ-ಯಿಷ್ಣು ॥ ಋಣಕ್ಸಪತ್ನಾದಧರಾಂಶ್ಚಕೃಣ್ವದಾರೋಹ ಮಾಂ ಮಹತೇ ಸೌಭ-ಗಾಯ ॥ ಇತಿ ಸೌಭಗಾಯ ಪದಾಂತಾಃ ಷಟ್ ॥ ಓಂ ತದಸ್ತುಮಿತ್ರಾ ... ॥ ಇತಿ ಮಂತ್ರೈಃ ಕನ್ಯಾಶಿರಸ್ಯಾಕ್ಷತಪ್ರಕ್ಷೇಪಣಾಶೀರ್ದಾನಂ ಕುರ್ಯುಃ ಆಚಾ-ರಾದುಭೌ ಸಂಮಿಲ್ಯ ಗೃಹಾನ್ ಗಚ್ಛೇಯುಃ ॥

॥ ಇತಿ ವಾಗ್ದಾನ ಪ್ರಯೋಗಃ ॥

---

# ॥ ವಿವಾಹಪೂರ್ವಕೃತ್ಯಂ ॥

॥ ಶ್ರೀಃ ॥ ವಧೂಪಿತಾ ವರಪಿತಾ ಚ ವಿವಾಹದಿನಾತ್ ಪೂರ್ವೇದ್ಯುಃ ವಿವಾಹದಿನ ಏವ ವಾ ಪೂರ್ವಾಹ್ಣೇ ಸಪತ್ನೀಕಃ ಸಂಸ್ಕಾರ್ಯೇಣ ಸಹ ಕೃತಾಭ್ಯಂಗಸ್ನಾನೋ ಧೃತಮಾಂಗಲಿಕವೇಷಃ ಕೃತೋಪಲೇಪನರಂಗಮಾಲಿಕೇ ಪ್ರಾಂಗಣೇ ವಸ್ತ್ರಾಚ್ಛಾದಿತೇ ಶುಭಾಸನೇ ಪ್ರಾಙ್ಮುಖ ಉಪವಿಶ್ಯ ಸ್ವದಕ್ಷಿಣೇ ಪತ್ನೀಂ ತದ್ದಕ್ಷಿಣೇ ಸಂಸ್ಕಾರ್ಯಮುಪವೇಶ್ಯ ಆಚಮ್ಯ ಪ್ರಾಣಾನಾಯಮ್ಯ ಇಷ್ಟದೇವತಾಂ ಗುರ್ವಾದೀಂಶ್ಚ ನಮಸ್ಕೃತ್ಯ ದೇಶಕಾಲೌ ಸಂಕೀರ್ತ್ಯ

ಕನ್ಯಾದಾತಾ:- (ಪೂರ್ವಸಂಸ್ಕಾರಲೋಪೇ ತು) ಅಮುಕನಾಮ್ನ್ಯಾಃ ಮಮಾಸ್ಯಾಃ ಕನ್ಯಕಾಯಾಃ ಜಾತಕರ್ಮನಾಮಕರಣಸೂರ್ಯಾವಲೋಕನನಿಷ್ಕ್ರಮಣೋಪವೇಶ-ನಾನ್ನಪ್ರಾಶನಚೌಲಸಂಸ್ಕಾರಾಣಾಂ ಲೋಪಜನ್ಯಪ್ರತ್ಯವಾಯಪರಿಹಾರಾರ್ಥಂ ಪ್ರತಿ-ಸಂಸ್ಕಾರಂ ಪಾದಕೃಚ್ಛ್ರಂ ಪ್ರಾಯಶ್ಚಿತ್ತಂ ಚೂಡಾಕರ್ಮಣಿ ಅರ್ಧಕೃಚ್ಛ್ರಂ ತತ್ಪ್ರತ್ಯಾಮ್ನಾಯ ಗೋನಿಷ್ಕ್ರಯೀಭೂತ ಯಥಾಶಕ್ತಿರಜತದಾನೇನಾಹಮಾಚರಿಷ್ಯೇ ॥ (ಗರ್ಭಾಧಾನಸೀಮಂತಯೋರ್ಲೋಪೇತಯೋರಪ್ಯೂಹಃ) ತಥಾ ಮಮಾಸ್ಯಾಃ ಕನ್ಯ-ಕಾಯಾಃ ಭರ್ತ್ರಾ ಸಹ ಧರ್ಮಪ್ರಜೋತ್ಪಾದನಗೃಹ್ಯ ಪರಿಗ್ರಹ ಧರ್ಮಾಚರಣೇಷ್ವ ಧಿಕಾರಸಿದ್ಧಿದ್ವಾರಾ

ವರಪಿತಾ:- ಮಮಾಸ್ಯ ಅಮುಕಶರ್ಮಣಃ ಪುತ್ರಸ್ಯ ದೈವಪಿತೃಋಣಾಪಾಕ-ರಣಹೇತುಭೂತ ಧರ್ಮಪ್ರಜೋತ್ಪಾದನಸಿದ್ಧಿದ್ವಾರಾ

---

**ವಿವಾಹಪೂರ್ವದಿನ ಅಥವಾ ವಿವಾಹಕ್ಕೆ ಮೊದಲು ಮಾಡಬೇಕಾದ ಕೆಲಸಗಳು:-** ವಧುವಿನ ತಂದೆ ಮತ್ತು ವರನ ತಂದೆ ವಿವಾಹದ ಹಿಂದಿನ ದಿನ ಅಥವಾ ಅದೇದಿನ ಪೂರ್ವಾಹ್ಣ ಪತ್ನಿಯೊಡನೆ ಮತ್ತು ಸಂಸ್ಕಾರ್ಯನೊಡನೆ ಮಂಗಲಸ್ನಾನಮಾಡಿ ಮಂಗಲವೇಷವನ್ನು ಧರಿಸಿ ಬಟ್ಟೆಹಾಸಿದ ಆಸನದ ಮೇಲೆ ಪೂರ್ವಮುಖವಾಗಿ ಬಲಬದಿಯಲ್ಲಿ ಪತ್ನಿಯನ್ನೂ, ಅವಳ ಬಲಭಾಗದಲ್ಲಿ ಸಂಸ್ಕಾರ್ಯನನ್ನೂ ಕುಳ್ಳಿರಿಸಿ ಆಚಮನಾದಿಗಳನ್ನು ಮಾಡಿ, ಇಷ್ಟದೇವತೆ, ಗುರು, ಮೊದಲಾದವರನ್ನು ನಮಸ್ಕರಿಸಿ-

**ವಧುವಿನ ತಂದೆಯು:- "ಅಮುಕನಾಮ್ನ್ಯಾಃ... ಸಿದ್ಧಿದ್ವಾರಾ"** ಎಂದೂ,

**ವರನ ತಂದೆಯು:- "ಮಮಾಸ್ಯ ... ಸಿದ್ಧಿದ್ವಾರಾ"** ಎಂದೂ ಹೇಳಿ **"ಶ್ರೀಪರಮೇಶ್ವರ ... ಕರಿಷ್ಯೇ"** ಎಂದು ಸಂಕಲ್ಪ ಮಾಡಬೇಕು. ಪೂರ್ವ ಸಂಸ್ಕಾರಗಳು ನಡೆಯದೆ ಲೋಪವಾಗಿದ್ದರೆ

**ಶ್ರೀಪರಮೇಶ್ವರಪ್ರೀತ್ಯರ್ಥಂ ವಿವಾಹಸಂಸ್ಕಾರಾಖ್ಯಂ ಕರ್ಮ ಕರಿಷ್ಯೇ ॥ ತದಂಗಭೂತಮದ್ಯ ಗಣಪತಿಪೂಜನಂ ಸ್ವಸ್ತಿಪುಣ್ಯಾಹವಾಚನಂ ಮಾತೃಕಾಪೂಜನಂ ನಾಂದೀಶ್ರಾದ್ಧಂ ಗ್ರಹಾನುಕೂಲ್ಯಾರ್ಥಂ ಗ್ರಹಯಜ್ಞಂ ಮಂಡಪಪ್ರತಿಷ್ಠಾ ಕುಲದೇವತಾಸ್ಥಾಪನಂ ಪೂಜನಂ ಚ ಕರಿಷ್ಯೇ ॥ ತೈಲಹರಿದ್ರಾಧಿಷ್ಠಾತ್ರೀಂ ಚ ಪೂಜಯಿಷ್ಯೇ ಇತಿ ಸಂಕಲ್ಪ್ಯ ಉಕ್ತರೀತ್ಯಾ ಕುರ್ಯಾತ್ ॥**

**॥ ಇತಿ ವಿವಾಹಪೂರ್ವಕೃತ್ಯಂ ॥**

---

ಒಂದೊಂದು ಸಂಸ್ಕಾರಕ್ಕೆ ಕಾಲು ಕೃಚ್ಛ್ರ ಅಥವಾ ಗೋವಿನ ಕ್ರಯಕ್ಕೆ ಸಾಕಾಗುವಷ್ಟು ಬೆಳ್ಳಿಯ ನಾಣ್ಯಗಳನ್ನಿತ್ತು ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು. ಚೂಡಾಕರ್ಮಲೋಪಕ್ಕೆ ಅರ್ಧಕೃಚ್ಛ್ರ ಪ್ರಾಯಶ್ಚಿತ್ತ; ಗರ್ಭಾಧಾನ ಸೀಮಂತಗಳಾಗದಿದ್ದರೆ ಪ್ರಾಯಶ್ಚಿತ್ತ ಸಂಕಲ್ಪದಲ್ಲಿ ಅವುಗಳನ್ನೂ ಸೇರಿಸಿಕೊಳ್ಳಬೇಕು. "**ತದಂಗಭೂತಮದ್ಯ .... ಚ ಪೂಜಯಿಷ್ಯೇ**" ಎಂದು ಸಂಕಲ್ಪ ಮಾಡಿ ಉಪನಯಸ ಮುಂತಾದ ಸಂಸ್ಕಾರಗಳ ಪೂರ್ವಭಾವಿಯಾಗಿ ಮಾಡಿದಂತೆ ಗಣಪತಿಪೂಜನ ಮುಂತಾದ ಎಲ್ಲ ಕರ್ಮಗಳನ್ನೂ ಮಾಡಬೇಕು.

# ॥ ಸೀಮಾಂತಪೂಜನಂ ॥

**ಅಥ ಕನ್ಯಾದಾತಾ ವರಗೃಹಮಾಗತಃ ಆಚಮ್ಯ ಪ್ರಾಣಾನಾಯಮ್ಯ ದೇಶಕಾಲೌ ಸಂಕೀರ್ತ್ಯ ಕರಿಷ್ಯಮಾಣ ಕನ್ಯಾವಿವಾಹಾಂಗತ್ವೇನ ವರಸ್ಯ ಸೀಮಾಂತಪೂಜನಂ ಕರಿಷ್ಯೇ ಇತಿ ಸಂಕಲ್ಪ್ಯ ಗಣೇಶ ವರುಣ ಪೂಜನೇ ಕೃತ್ವಾ ಅಸ್ಮಿನ್ ರಾಷ್ಟ್ರೇ ಶ್ರಿಯಂ ... ಇತಿ ಪತ್ನೀ ಪ್ರಕ್ಷಿಪ್ತ ಜಲೇನ ತದೀಯ ದಕ್ಷಿಣವಾಮಪಾದೌ ಪ್ರಕ್ಷಾಲ್ಯ ಆಚಮಯ್ಯ ಗಂಧ ಪುಷ್ಪ ನೀರಾಜನವಸ್ತ್ರೈರ್ಯಥಾಸಂಭವಂ ಸಂಪೂಜ್ಯ ಯಥಾಚಾರಂ ದುಗ್ಧಾದಿಪ್ರಾಶನಂ ಕಾರಯೇತ್ ॥**

**॥ ಇತಿ ಸೀಮಾಂತಪೂಜಾ ॥**

---

ಕನ್ಯಾದಾತೃವು ವರನ ಮನೆಗೆ ಹೋಗಿ ಆಚಮನ ಪ್ರಾಣಾಯಾಮ ಮುಂತಾದವುಗಳನ್ನು ಮಾಡಿ **"ಕರಿಷ್ಯಮಾಣ ... ಕರಿಷ್ಯೇ"** ಎಂದು ಸಂಕಲ್ಪಿಸಿ ಗಣೇಶ ಮತ್ತು ವರುಣನ ಪೂಜೆ ಮಾಡಿ **"ಅಸ್ಮಿನ್ ರಾಷ್ಟ್ರೇ ಶ್ರಿಯಂ ..."** ಎಂಬ ಮಂತ್ರವನ್ನು ಹೇಳುತ್ತ ಹೆಂಡತಿಯು ಎರೆದ ನೀರಿನಿಂದ ವರನ ಬಲ ಮತ್ತು ಎಡಕಾಲುಗಳನ್ನು ತೊಳೆದು ಆಚಮನಕ್ಕೆ ನೀರು ಕೊಟ್ಟು ಗಂಧ ಪುಷ್ಪ ನೀರಾಜನ ವಸ್ತ್ರ ಮೊದಲಾದವುಗಳಿಂದ ವರನನ್ನು ಪೂಜಿಸಿ ಕುಡಿಯಲು ಹಾಲು ಮುಂತಾದವನ್ನು ಕೊಡಬೇಕು.

[ಇದು ವಿವಾಹಾಂಗವಾದ ಅನಿವಾರ್ಯಕರ್ಮವೆಂದು ಪರಿಗಣಿಸಲ್ಪಡದಿರುವುದರಿಂದ ಅನೇಕರು ಇದನ್ನು ಮಾಡುವುದಿಲ್ಲ, ಮಾಡದಿದ್ದರೂ ದೋಷವಿಲ್ಲ.]

# ॥ ವರಸ್ಯ ವಧೂಗೃಹಗಮನಂ ॥

**ಶ್ರೀಃ ॥ ವರಃ ಕೃತನಿತ್ಯಕ್ರಿಯೋ ವಿಧಿವತ್ಕೃತಸ್ವಸ್ತಿವಾಚನಃ ಬ್ರಾಹ್ಮಣೈಃ ಸಹ ಸಾತ್ವಿಕಾಹಾರಂ ಭುಕ್ತ್ವಾ ಅಭುಕ್ತ್ವಾ ವಾ ಈಷದ್ಧೌತನವಂ ಶ್ವೇತಂ ಸದಶಂ ಪರೇಣಾಧೃತಂ ವಸ್ತ್ರಯುಗಲಂ ಧೃತ್ವಾ ಅಲಂಕೃತಃ ಸ್ರಗ್ವೀ ಇಷ್ಟದೇವತಾಂ ಪಿತ್ರಾದೀಂಶ್ಚ ನಮಸ್ಕೃತ್ಯ ತೈರನುಮೋದಿತೋ ಯಥಾ ವಿಭವಮಶ್ವಾದಿಯಾನಮಾರುಹ್ಯ ಧೃತಸಿತಚ್ಛತ್ರಃ ಸ್ವರ್ಚಿತೈರ್ಜ್ಞಾತಿಬಾಂಧವೈಃ ಕನಿಕ್ರದಜ್ಜನುಷಮಿತಿ ಸುಮಂಗಲ-ಸೂಕ್ತಪಠನಪರೈರ್ಬ್ರಾಹ್ಮಣೈಃ ಪುರಂಧ್ರೀಭಿಃ ಪೂರ್ಣ ಕಲಶದರ್ಪಣ ಕನ್ಯಾ ಪುಷ್ಪಾಕ್ಷತಾದೀಪಮಾಲಾಧ್ವಜಲಾಜೈರ್ಮಂಗಲಗೀತತೂರ್ಯೈಶ್ಚ ಸಹ ವಧೂಗೃಹಂ ಗತ್ವಾ ತದ್ದ್ವಾರದೇಶೇ ಪ್ರಾಙ್ಮುಖಃ ಸ್ಥಿತೋ ನೀರಾಜನಪೂರ್ಣಕುಂಭಯುತೈಃ ಪುರಂಧ್ರೀಜನೈಃ ಪ್ರತ್ಯುದ್ಯಾತೋ ನೀರಾಜಿತೋಂತರ್ಗೃಹಂ ಪ್ರವಿಶ್ಯ ತದಂಗಣೇ ಮಂಡಪಾಧಃ ಸೋತ್ತರಚ್ಛದೇ ಹರಿತದರ್ಭಾಸ್ತೀರ್ಣೇ ಚತುಷ್ಪಾದಭದ್ರಪೀಠೇ ಪ್ರಾಙ್ಮುಖ ಉಪವಿಶೇತ ॥**

**॥ ಇತಿ ವರಸ್ಯ ವಧೂಗೃಹಗಮನಂ ॥**

---

ವರನು ತನ್ನ ನಿತ್ಯಕರ್ಮಗಳನ್ನೆಲ್ಲ ಮಾಡಿ, ಸ್ವಸ್ತಿವಾಚನಮಾಡಿಸಿಕೊಂಡು ಬ್ರಾಹ್ಮಣರೊಂದಿಗೆ ಸಾತ್ವಿಕವಾದ ಆಹಾರವನ್ನು ಸ್ವೀಕರಿಸಿ (ಆಹಾರ ಸ್ವೀಕಾರಮಾಡದಿದ್ದರೂ ಆಗಬಹುದು). ಹೊಸತಾದ, ಒಮ್ಮೆ ಒಗೆದ ಬಿಳಿಬಟ್ಟೆಯನ್ನುಟ್ಟು (ಅಂಚುಗಳಿರುವ ಬೇರೆಯವರು ಧರಿಸದಿರುವ) ಮತ್ತೊಂದನ್ನು ಉತ್ತರೀಯವಾಗಿ ಹಾಕಿ ತನ್ನನ್ನು ಚೆನ್ನಾಗಿ ಶೃಂಗರಿಸಿಕೊಂಡು, ಮಾಲೆಯನ್ನು ಹಾಕಿಕೊಂಡು ಇಷ್ಟದೇವತೆಯನ್ನೂ ತಂದೆ ಮೊದಲಾದ ಹಿರಿಯರನ್ನೂ ವಂದಿಸಿ ಅವರಿಂದ ಅನುಮತಿ ಪಡೆದು, ತನಗೆ ಅನುಕೂಲವಿದ್ದಂತೆ ಕುದುರೆ ಮುಂತಾಗಿ ಯಾವುದಾದರೂ ವಾಹನವನ್ನೇರಿ ಬಿಳಿಕೊಡೆಯನ್ನು ಹಿಡಿದುಕೊಂಡು, ಚೆನ್ನಾಗಿ ಸತ್ಕರಿಸಲ್ಪಟ್ಟ ತನ್ನ ಬಂಧುಬಾಂಧವರೊಡನೆ **"ಕನಿಕ್ರದಜ್ಜನುಷಂ"** ಮುಂತಾದ ಮಂಗಲ ಸೂಕ್ತಗಳನ್ನು ಹೇಳುವ ಬ್ರಾಹ್ಮಣರೊಡನೆ, ಪೂರ್ಣಕುಂಭ, ಕನ್ನಡಿ, ಪುಷ್ಪ, ಅಕ್ಷತೆ, ದೀಪ, ಮಾಲೆ, ಧ್ವಜ, ಅರಳು ಮುಂತಾದ ಮಂಗಲದ್ರವ್ಯಗಳನ್ನು ಹಿಡಿದು ಮುತ್ತೈದೆಯರನ್ನೊಳಗೊಂಡು ಮಂಗಲವಾದ್ಯ ಘೋಷದಿಂದ ವಧುವಿನ ಮನೆಗೆ ಬಂದು ಹೊರದ್ವಾರದಲ್ಲಿ ಪೂರ್ವಾಭಿಮುಖವಾಗಿ ನಿಲ್ಲಬೇಕು. ಅಲ್ಲಿ ಪೂರ್ಣಕುಂಭ ಆರತಿ ಇತ್ಯಾದಿಗಳಿಂದ ಮುತ್ತೈದೆಯರು ಇದಿರ್ಗೊಂಡು ಅವನನ್ನು ಮನೆಯೊಳಗೆ ಕರೆದೊಯ್ದು ಮೇಲೆ ಅಂಗಳದಲ್ಲಿ ವಿವಾಹಮಂಟಪದ ಕೆಳಗೆ ಪ್ರಶಸ್ತವಾದ ಸ್ಥಳದಲ್ಲಿ ಹಸಿರು ದರ್ಭೆಗಳನ್ನು ಹಾಸಿದ ನಾಲ್ಕು ಕಾಲುಗಳುಳ್ಳ ಭದ್ರವಾದ ಆಸನದ ಮೇಲೆ ಪೂರ್ವಮುಖವಾಗಿ ಕುಳಿತುಕೊಳ್ಳಬೇಕು.

॥ ವಧೂಗೃಹಗಮನ ಸಮಾಪ್ತ ॥

# ॥ ಮಧುಪರ್ಕಃ ॥

**ಶ್ರೀಃ ॥ ಪಾದ್ಯಾರ್ಥಂ ಅರ್ಘ್ಯಾರ್ಥಂ ಮಂತ್ರವತ್ತ್ರಿರಾಚಮನೀಯಾರ್ಥಂ ಶುದ್ಧಾಷ್ಟಾಚಮನೀಯಾರ್ಥಂ ಚ ಜಲಪಾತ್ರಚತುಷ್ಟಯಂ ಮಧುಪರ್ಕಂ ಕಾಂಸ್ಯಪಾತ್ರಗಂ ಪಂಚವಿಂಶತಿದರ್ಭೈರವಾಗಗ್ರಂ ವಾಮಾವರ್ತೇನ ಕೃತಂ ವಿಷ್ಟರಂ ಚ ಸಂಪಾದ್ಯ ಕರ್ತಾ ಆಚಮ್ಯ ಪ್ರಾಣಾನಾಯಮ್ಯ ದೇಶಕಾಲೌ ಸ್ಮೃತ್ವಾ ಕನ್ಯಾರ್ಥಿನೇ ಗೃಹಾಗತಾಯಾಸ್ಮೈ ಸ್ನಾತಕಾಯ ವರಾಯ ಕನ್ಯಾದಾನಾಂಗಭೂತಂ ಮಧುಪರ್ಕಂ ಕರಿಷ್ಯೇ ॥ ಪ್ರಾಗುಕ್ತಲಕ್ಷಣಂ ದರ್ಭಮಯಂ ಕೂರ್ಚಂ ವಿಷ್ಟರೋ ವಿಷ್ಟರೋ ವಿಷ್ಟರ ಇತಿ ವರಹಸ್ತೇ ದದ್ಯಾತ್ ॥ ವರಸ್ತು ॥ ಅಹಂ ವರ್ಷ್ಮೇ ತ್ಯಸ್ಯ ವಾಮದೇವೋ ವಿಷ್ಟರೋನುಷ್ಟುಪ್ ॥ ವಿಷ್ಟರೋಪವೇಶನೇ ವಿನಿಯೋಗಃ ॥**

---

ಕನ್ಯಾಪಿತನು ವರನಿಗೆ ಮಧುಪರ್ಕ ಪೂಜೆ ಮಾಡಲು ಶುದ್ಧವಾದ ನೀರುತುಂಬಿದ ಪಾದ್ಯ, ಅರ್ಘ್ಯ, ಮಂತ್ರಯುಕ್ತವಾದ ಮೂರು ಆಚಮನ ಹಾಗೂ ಎಂಟು ಆಚಮನಗಳಿಗಾಗಿ ನಾಲ್ಕು ಪಾತ್ರೆಗಳನ್ನೂ, ಕಂಚಿನ ಪಾತ್ರೆಯಲ್ಲಿ ಮಧುಪರ್ಕವನ್ನೂ ಎಡಬದಿಗೆ ಹುರಿಮಾಡಿ ಹಣೆದ ಕೆಳಕ್ಕೆ ತುದಿಗಳಿರುವ ಇಪ್ಪತ್ತೈದು ದರ್ಭೆಗಳ ವಿಷ್ಟರ (ಆಸನ)ವನ್ನೂ ಸಂಗ್ರಹಿಸಿ ಕುಳಿತು ಆಚಮನ ಪ್ರಾಣಾಯಾಮಾದಿಗಳನ್ನು ಮಾಡಬೇಕು. ಮೊಸರು ಮತ್ತು ಜೇನನ್ನು ಒಂದುಗೂಡಿಸಿದರೆ ಮಧುಪರ್ಕವಾಗುತ್ತದೆ.

**"ಸರ್ವತ್ರ ಪ್ರಾಙ್ಮುಖೋದಾತಾ ಪ್ರತಿಗ್ರಾಹೀಹ್ಯುದಙ್ಮುಖಃ । ಕನ್ಯಾದಾನೇ ವಿಪರ್ಯಾಸೋ ಮಧುಪರ್ಕಸ್ತು ಪಶ್ಚಿಮಃ" ॥** ಇತರ ಎಲ್ಲ ಕಡೆಗಳಲ್ಲಿಯೂ ಕೊಡುವವನು ಪೂರ್ವಕ್ಕೆ ಮುಖವುಳ್ಳವನೂ, ತೆಕ್ಕೊಳ್ಳುವವನು ಉತ್ತರಕ್ಕೆ ಮುಖವುಳ್ಳವನೂ ಆಗಿರುತ್ತಾನೆ. ಆದರೆ ಕನ್ಯಾದಾನದಲ್ಲಿ ಸ್ವೀಕರಿಸುವವನು ಪೂರ್ವಕ್ಕೆ ಮುಖವುಳ್ಳವನೂ, ಕೊಡುವವನು ಉತ್ತರಕ್ಕೆ ಮುಖಮಾಡಿದವನೂ ಆಗಿರಬೇಕು. ಮಧುಪರ್ಕದಲ್ಲಿ ಕೊಡುವವನು ಪಶ್ಚಿಮಕ್ಕೆ ಮುಖಮಾಡಿರಬೇಕು **"ಕನ್ಯಾರ್ಥಿನೇ ಗೃಹಾಗತಾಯ ... ಕರಿಷ್ಯೇ"** ಎಂದು ಸಂಕಲ್ಪ ಮಾಡಬೇಕು. ವರನಿಗೆ ಎರಡನೆಯ ಮದುವೆ ಎಂದಾದರೆ **'ಸ್ನಾತಕಾಯ'** ಎಂಬುದನ್ನು ಬಿಡಬೇಕು. **"ವಿಷ್ಟರೋ ..."** ಎಂದು ಮೂರು ಬಾರಿ ಹೇಳಿ ಹಿಂದೆ ಹೇಳಿದ ಕೂರ್ಚವನ್ನು ವರನ ಕೈಗೆ ಕೊಡಬೇಕು. ವರನು **"ಅಹಂವರ್ಷ್ಮ ... "** ಎಂಬ ಮಂತ್ರಪೂರ್ವಕ ಉತ್ತರಕ್ಕೆ ತುದಿಗಳಿರುವ ಅದರ ಮೇಲೆ ಕುಳಿತುಕೊಳ್ಳಬೇಕು. ಬಳಿಕ ಅರ್ಚಕನು **"ಪಾದ್ಯಂ ..."** ಎಂದು ಮೂರು ಬಾರಿ ಹೇಳಿ ಹೆಂಡತಿಯು ಎರೆದ ನೀರಿನಿಂದ ವರನ ಬಲ-ಎಡ ಕಾಲುಗಳನ್ನು ತೊಳೆಯಬೇಕು.

ಓಂ ಅಹಂ ವರ್ಷ್ಮಸಜಾತಾನಾಂ ವಿದ್ಯುತಾಮಿವ ಸೂರ್ಯಃ ॥ ಇದಂ ತಮಧಿತಿಷ್ಠಾಮಿಯೋ ಮಾಕಶ್ಚಾಭಿದಾಸತಿ ॥ ಇತ್ಯುದಗಗ್ರೇ ವಿಷ್ಟರ ಉಪ-ವಿಶೇತ್ ॥ ವಿಷ್ಟರಂ ಮಂತ್ರೇಣ ಪದ್ಭ್ಯಾಮಾಕ್ರಮ್ಯವಾಸೀತ್ ॥ ತತೋರ್ಚಕೇನ ಪಾದ್ಯಂ ಪಾದ್ಯಂ ಪಾದ್ಯಮಿತಿ ತ್ರಿರ್ನಿವೇದಿತಂ ಪಾದ್ಯಂ ವರೋ ಗೃಹ್ಣೀಯಾತ್ ॥ ತತೋರ್ಚಕಸ್ತೇನೋದಕೇನ ಪತ್ನೀಪ್ರಕ್ಷಿಪ್ತೇನ ವರಸ್ಯ ದಕ್ಷಿಣಸವ್ಯ ಪಾದೌ ಪ್ರಕ್ಷಾಲ-ಯೇತ್ ॥ ತತ್ರ ಮಂತ್ರಾಃ ॥

ಅಸ್ಮಿನ್ ರಾಷ್ಟ್ರೇ ಶ್ರಿಯಮಾವೇಶಯಾಮ್ಯತೋ ದೇವೀಃ ಪ್ರತಿಪಶ್ಯಾ-ಮ್ಯಾಪಃ ದಕ್ಷಿಣಂಪಾದಮವನೇ ನಿಜೇಸ್ಮಿನ್ ರಾಷ್ಟ್ರ ಇಂದ್ರಿಯಂ ದಧಾಮಿ ॥ ಸವ್ಯಪಾದಮವನೇ ನಿಜೇಸ್ಮಿನ್ ರಾಷ್ಟ್ರ ಇಂದ್ರಿಯಂ ವರ್ಧಯಾಮಿ ॥ ಪೂರ್ವ-ಮನ್ಯಮಪರಮನ್ಯಂ ಪಾದಾವವನೇ ನಿಜೇ ॥ ದೇವಾ ರಾಷ್ಟ್ರಸ್ಯ ಗುಪ್ತಾ ಅಭವಸ್ತ್ಯಾವರುದ್ಧ್ಯೈ ॥ ಆಪಃ ಪಾದಾವವನೇಜನೀರ್ದ್ವಿಷಂತಂ ನಿರ್ದಹಂತು ಮೇ ॥ ತತೋ ವರೋ ಲೌಕಿಕೋದಕೇನಾಚಮ್ಯ ಅರ್ಘ್ಯಮರ್ಘ್ಯಮರ್ಘ್ಯ ಮಿತಿ ಪೂರ್ವವತ್ ತ್ರಿರ್ನಿವೇದಿತಂ ಗಂಧಮಾಲ್ಯಫಲಯುತಮರ್ಘ್ಯಮಂಜಲಿನಾ ಪ್ರತಿಗೃಹ್ಯ ಆಚಮನೀಯಮಾಚಮನೀಯಮಾಚಮನೀಯಮಿತಿ ತ್ರಿರ್ನಿವೇದಿತಂ ಪಾತ್ರಂ ಭೂಮೌ ನಿಧಾಯ ತಸ್ಯೈಕದೇಶಂ ಗೃಹೀತ್ವಾ ॥ ಓಂ ಅಮೃತೋಪಸ್ತ-

---

"**ಅಸ್ಮಿನ್ ರಾಷ್ಟ್ರೇ ...**" ಈ ಮಂತ್ರಗಳನ್ನು "**ನಿರ್ದಹಂತು ಮೇ**" ಎಂಬಲ್ಲಿ ವರೆಗೆ ಪಾದ್ಯಮಾಡುವಾಗ ಹೇಳಬೇಕು. ಪಾದ್ಯದ ಬಳಿಕ ವರನು ಸಾಮಾನ್ಯ ಜಲದಿಂದ ಆಚಮನ ಮಾಡಬೇಕು. ಕನ್ಯಾಪಿತನು "**ಅರ್ಘ್ಯಂ...**" ಎಂದು ಮೂರು ಬಾರಿ ಹೇಳಿ ಕೊಟ್ಟ ಗಂಧ ಮಾಲ್ಯ ಫಲ ಇತ್ಯಾದಿಗಳಿಂದ ಕೂಡಿದ ಅರ್ಘ್ಯವನ್ನು ಅಂಜಲಿಯಲ್ಲಿ ಸ್ವೀಕರಿಸಬೇಕು. ಬಳಿಕ "**ಆಚಮ ನೀಯಂ ...**" ಎಂದು ಮೂರು ಬಾರಿ ಹೇಳಿ ಕೊಟ್ಟ, ನೀರಿನ ಪಾತ್ರೆಯನ್ನು ನೆಲದ ಮೇಲಿಟ್ಟು, ಅದರಿಂದ ಸ್ವಲ್ಪ ನೀರನ್ನು ತೆಗೆದು, "**ಅಮೃತೋ.... ಸ್ವಾಹಾ**" ಎಂದು ಕುಡಿದು ಆಚಮನ ಮಾಡಿ ಕನ್ಯಾಪಿತನು ಮುಂದೆ ಹಿಡಿದ ಮಧುಪರ್ಕವನ್ನು "**ಓಂ ಮಿತ್ರಸ್ಯ ... ಪ್ರತೀಕ್ಷೇ**" ಎಂದು ನೋಡಬೇಕು. ಆಮೇಲೆ "**ಮಧುಪರ್ಕೋ...**" ಎಂದು ಮೂರು ಬಾರಿ ಹೇಳಿ ಕೈಗೆ ಕೊಟ್ಟ ಮಧುಪರ್ಕವನ್ನು "**ದೇವಸ್ಯತ್ವಾ...**" ಎಂಬ ಮಂತ್ರ ಹೇಳಿ ಅಂಜಲಿಯಲ್ಲಿ ಹಿಡಿದು "**ಮಧುವಾತಾ... ಭವಂತು ನಃ**" ಎಂಬ ಮಂತ್ರವನ್ನು ಹೇಳಿ ಸರಿಯಾಗಿ ನೋಡಬೇಕು.

ರಣಮಸಿ ಇತಿ ಪೀತ್ವಾ ಲೌಕಿಕೋದಕೇನಾಚಮ್ಯ ॥ ಆನೀಯಮಾನಂ ಮಧುಪರ್ಕಂ ವರಃ ॥ ಓಂ ಮಿತ್ರಸ್ಯ ತ್ವಾ ಚಕ್ಷುಷಾ ಪ್ರತೀಕ್ಷೇ ॥ ಇತ್ಯವೇಕ್ಷ್ಯ ॥ ದಾತ್ರಾ ಮಧುಪರ್ಕೋ೯ ಮಧುಪರ್ಕೋ೯ ಮಧುಪರ್ಕ ಇತಿ ತ್ರಿರ್ನಿವೇದಿತಂ ಮಧುಪರ್ಕಂ ॥ ಓಂ ದೇವಸ್ಯ ತ್ವಾ ಸವಿತುಃ ಪ್ರಸವೇಶ್ವಿನೋರ್ಬಾಹುಭ್ಯಾಂ ಪೂಷ್ಣೋಹಸ್ತಾಭ್ಯಾಂ ಪ್ರತಿಗೃಹ್ಣಾಮಿ ॥ ಇತ್ಯಂಜಲಿನಾ ಪ್ರತಿಗೃಹ್ಯ ಅಂಜಲಿಸ್ಥಮೇವ ॥ ಮಧುವಾತಾ ಇತಿ ತಿಸೃಣಾಂ ರಾಹೂಗಣೋ ಗೋತಮೋ ವಿಶ್ವೇದೇವಾ ಗಾಯತ್ರೀ ॥ ಮಧುಪರ್ಕಾವೇಕ್ಷಣೇ ವಿನಿಯೋಗಃ ॥ ಓಂ ಮಧುವಾತಾಋತಾಯತೇ ಮಧುಕ್ಷರಂತಿ ಸಿಂಧವಃ । ಮಾಧ್ವೀರ್ನಃ ಸಂತ್ವೋಷಧೀಃ ॥ ಮಧುನಕ್ತಮುತೋಷಸಿಮಧುಮತ್ಪಾರ್ಥಿವಂ ರಜಃ ॥ ಮಧುದ್ಯೌರಸ್ತುನಃ ಪಿತಾ ॥ ಮಧುಮಾನ್ನೋವನಸ್ಪತಿರ್ಮಧುಮಾಁ ಅಸ್ತು ಸೂರ್ಯಃ ॥ ಮಾಧ್ವೀರ್ಗಾವೋ ಭವಂತು ನಃ ॥ ಇತ್ಯವೇಕ್ಷ್ಯ ॥

ತತ್ಪಾತ್ರಂ ಸವ್ಯಹಸ್ತೇ ಗೃಹೀತ್ವಾ ಅಂಗುಷ್ಠೋಪಕನಿಷ್ಠಿಕಾಭ್ಯಾಂ ಮಧುಪರ್ಕಂ ತ್ರಿಃ ಪ್ರದಕ್ಷಿಣಮಾಲೋಡ್ಯ ಅಂಗುಲಿಗತಂ ಮಧುಪರ್ಕಲೇಪಂ ॥ ಓಂ ವಸವಸ್ತ್ವಾ ಗಾಯತ್ರೇಣ ಛಂದಸಾ ಭಕ್ಷಯಂತು॥ ಇತಿ ಪುರಸ್ತಾನ್ನಿಮೃಜೇತ್ ॥ ಓಂ ರುದ್ರಾಸ್ತ್ವಾ ತ್ರೈಷ್ಟುಭೇನ ಛಂದಸಾ ಭಕ್ಷಯಂತು ॥ ಇತಿ ದಕ್ಷಿಣತಃ ॥ ಓಂ ಆದಿತ್ಯಾಸ್ತ್ವಾ ಜಾಗತೇನ ಛಂದಸಾ ಭಕ್ಷಯಂತು ॥ ಇತಿ ಪಶ್ಚಾತ್ ॥ ಓಂ ವಿಶ್ವೇತ್ವಾ ದೇವಾ ಅನುಷ್ಟುಭೇನ ಛಂದಸಾ ಭಕ್ಷಯಂತು ॥

---

ಮಧುಪರ್ಕದ ಪಾತ್ರೆಯನ್ನು ಎಡಗೈಯಲ್ಲಿ ಹಿಡಿದು ಅಂಗುಷ್ಠ ಮತ್ತು ಅನಾಮಿಕಾ ಬೆರಳುಗಳನ್ನು ಒಂದುಗೂಡಿಸಿ ಪಾತ್ರೆಯೊಳಗಿರುವ ಮಧುಪರ್ಕವನ್ನು ಪ್ರದಕ್ಷಿಣಾಕಾರವಾಗಿ ಮೂರು ಸಲ ತಿರುವಬೇಕು. ಬೆರಳುಗಳಿಗೆ ಅಂಟಿದ ಮಧುಪರ್ಕವನ್ನು ಕ್ರಮವಾಗಿ **1) "ವಸವಸ್ತ್ವಾ..." 2) "ರುದ್ರಾಸ್ತ್ವಾ ..." 3) "ಆದಿತ್ಯಾಸ್ತ್ವಾ ..." 4) "ವಿಶ್ವೇತ್ವಾ...."** ಈ ನಾಲ್ಕು ಮಂತ್ರಗಳನ್ನು ಉಚ್ಚರಿಸುತ್ತ ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ ದಿಕ್ಕುಗಳಿಗೆ ಸಿಂಪಡಿಸಬೇಕು. [ಒಂದು ಸಲ ಬೆರಳುಗಳಿಗೆ ಅಂಟಿದ್ದನ್ನು ಮಾತ್ರ ನಾಲ್ಕು ಬಾರಿ ಸಿಂಪಡಿಸಬೇಕೇ ಹೊರತು ಪುನಃ ಮಧುಪರ್ಕದಲ್ಲಿ ಕೈ ಮುಳುಗಿಸಬಾರದು. ಮುಂದೆ ಮೂರು ಬಾರಿ

**ಇತ್ಯುತ್ತರೇ ನಿಮೃಜ್ಯ ॥ ಭೂತೇಭ್ಯಸ್ತ್ವಾ ಭೂತೇಭ್ಯಸ್ತ್ವಾ ಭೂತೇಭ್ಯಸ್ತ್ವಾ ॥ ಇತಿ ಮಧ್ಯಾತ್ ಕಿಂಚಿತ್ ಕಿಂಚಿತ್ ಗೃಹೀತ್ವಾ ತ್ರಿರೂರ್ಧ್ವಂ ಕ್ಷಿಪ್ತ್ವಾ ಮಧು-ಪರ್ಕಪಾತ್ರಂ ಭೂಮೌ ನಿಧಾಯ ಮಧುಪರ್ಕೈಕದೇಶಂ ಗೃಹೀತ್ವಾ ॥ ಓಂ ವಿರಾಜೋದೋಹೋಸಿ ॥ ಇತಿ ಪ್ರಾಶ್ಯ ಲೌಕಿಕೋದಕೇನಾಚಮ್ಯ ಪುನರ್ಗೃ-ಹೀತ್ವಾ ॥ ಓಂ ಮಯಿ ದೋಹಃ ಪದ್ಯಾಯೈ ವಿರಾಜಃ ಇತಿ ಪ್ರಾಶ್ಯ ಪೂರ್ವವದಾಚಮ್ಯ ॥ ಮಧುಪರ್ಕಶೇಷಮುದಗುಪವಿಷ್ಟಾಯ ಬ್ರಾಹ್ಮಣಾಯ ದದ್ಯಾತ್ ॥ ಲೋಕವಿದ್ವಿಷ್ಟತ್ವಾದಪ್ಸು ವಾ ಕ್ಷಿಪೇತ್ ॥ ತತಃ ಪೂರ್ವನಿವೇದಿ-ತಾಚಮನೀಯೈಕದೇಶಂ ॥ ಓಂ ಅಮೃತಾಪಿಧಾನಮಸಿ ॥ ಇತಿ ಪೀತ್ವಾ ಲೌಕಿ-ಕೋದಕೇನ ಆಚಮ್ಯ ಆಚಮನೀಯಜಲಶೇಷಂ ಸರ್ವಂ ಗೃಹೀತ್ವಾ ॥ ಓಂ ಸತ್ಯಂ ಯಶಃ ಶ್ರೀರ್ಮಯಿ ಶ್ರೀಃ ಶ್ರಯತಾಂ ॥ ಇತಿ ಪ್ರಾಶ್ಯ ಲೌಕಿಕೋದ ಕೇನ ದ್ವಿರಾಚಾಮೇತ್ ॥ ತತೋ ದಾತ್ರಾ ಗೌರ್ಗೌರ್ಗೌರಿತಿ ತ್ರಿರ್ನಿವೇದಿತಾಂ ಗಾಂ ನಿಷ್ಕ್ರಯಂ ವಾ ॥ ಮಾತಾ ರುದ್ರಾಣಾಮಿತ್ಯಸ್ಯ ಭಾರ್ಗವೋ ಜಮದಗ್ನಿ-ರ್ಗೌಸ್ತ್ರಿಷ್ಟುಪ್ ಗೋರುತ್ಸರ್ಜನೇ ವಿನಿಯೋಗಃ ॥ ಓಂ ಮಾತಾರುದ್ರಾಣಾಂ ದುಹಿತಾ ವಸೂನಾಂ ಸ್ವಸಾದಿತ್ಯಾನಾಮಮೃತಸ್ಯನಾಭಿಃ ॥ ಪ್ರನುವೋಚಂ**

---

ಸಿಂಪಡಿಸುವಾಗ ಪ್ರತಿಸಲವೂ ಬೆರಳುಗಳನ್ನು ಅದ್ದಿ ತೆಗೆಯಬೇಕು] **"ಭೂತೇಭ್ಯಸ್ತ್ವಾ..."** ಎಂದು ಮೂರು ಬಾರಿ ಹೇಳಿ ಮೇಲ್ಭಾಗಕ್ಕೆ ಸಿಂಪಡಿಸಿ ಪಾತ್ರೆಯನ್ನು ನೆಲದ ಮೇಲಿಟ್ಟು ಅದನ್ನು ಬಗ್ಗಿಸಿ, ಕೈಯಲ್ಲಿ ಸ್ವಲ್ಪ ತೆಕ್ಕೊಂಡು **"ಓಂ ವಿರಾಜೋ ..."** ಎಂದು ಕುಡಿದು ಆಚಮನ ಮಾಡಬೇಕು. ಹಾಗೆಯೇ ಮುಂದೆ **"ಓಂ ವಿರಾಜೋ ...ಯ"** **"ಓಂ ಮಯಿ ..."** ಎಂದು ಹೇಳಿ ಕುಡಿದು ಆಚಮನ ಮಾಡಬೇಕು. ಉಳಿದ ಮಧುಪರ್ಕವನ್ನು ಬಡಗು ದಿಕ್ಕಿನಲ್ಲಿ ಕುಳಿತ ಬ್ರಾಹ್ಮಣನಿಗೆ ಕೊಡಬೇಕು. ಅದರೆ ಹಾಗೆ ಕೊಡುವುದು ಲೋಕಸಮ್ಮತವಲ್ಲದ್ದರಿಂದ ನೀರಿನಲ್ಲಿ ಚೆಲ್ಲಿಬಿಡಬೇಕು. ಮೊದಲು ಹೇಳಿದ ಆಚಮನೀಯ ಜಲದಿಂದ ಸ್ವಲ್ಪ ತೆಗೆದು **"ಅಮೃತಾ...ಸಿ"** ಎಂದು ಕುಡಿದು ಆಚಮನ ಮಾಡಿ ಉಳಿದ ಎಲ್ಲ ನೀರನ್ನೂ **"ಓಂ ಸತ್ಯಂ ..."** ಎಂದು ಹೇಳಿ ಕುಡಿದು ಎರಡು ಸಲ ಆಚಮನ ಮಾಡಬೇಕು.

ಆ ಬಳಿಕ ಕನ್ಯಾಪಿತನು **"ಗೌರ್ಗೌರ್ಗೌ"** ಎಂದು ಮೂರು ಬಾರಿ ಹೇಳಿ ಒಪ್ಪಿಸಿದ ಹಸು ಅಥವಾ ಅದಕ್ಕೆ ಬದಲಾಗಿ ಕೊಟ್ಟ ದ್ರವ್ಯವನ್ನು **"ಮಾತಾರುದ್ರಾಣಾಂ ..."** ಎಂಬ

**ಚಿಕಿತುಷೇಜನಾಯಮಾಗಾಮನಾಗಾಮದಿತಿಂ ವಧಿಷ್ಟ ॥ ಓಂ ಉತ್ಸೃಜತ ಇತಿ ವಿಸೃಜೇತ್ ॥ ತತೋ ದಾತಾ ಗಂಧಮಾಲ್ಯವಸ್ತ್ರಯುಗೋಪವೀತಯುಗಾಭರಣಾದಿಭಿರ್ಯಥಾವಿಭವಂ ವರಂ ಪೂಜಯೇತ್ ತತೋ ವರೇಣ ಸಹಾಗತಾನ್ ತದ್ಬಂಧೂನಪಿ ಪೂಜಯೇತ್ ॥**

**॥ ಇತಿ ಮಧುಪರ್ಕಃ ॥**

---

ಮಂತ್ರವನ್ನು ಹೇಳಿ ತ್ಯಾಗಮಾಡಬೇಕು. ನಂತರ ಕನ್ಯಾಪಿತನು ಗಂಧ ಮಾಲ್ಯ, ಎರಡು ವಸ್ತ್ರ, ಎರಡು ಯಜ್ಞೋಪವೀತ, ಆಭರಣ ಮುಂತಾದವುಗಳನ್ನಿತ್ತು ವರನನ್ನು ಸತ್ಕರಿಸಬೇಕು. ಬಳಿಕ ವರನ ಸಂಗಡ ಬಂದ ಬಂಧುಬಾಂಧವರನ್ನೆಲ್ಲ ಯಥೋಚಿತವಾಗಿ ಸತ್ಕರಿಸಬೇಕು.

॥ ಮಧುಪರ್ಕ ಸಮಾಪ್ತ ॥

# ॥ ಗೌರೀಹರ ಪೂಜಾ ॥

**॥ ಶ್ರೀಃ ॥ ಅಥ ಕನ್ಯಾ ಸ್ನಾತಾ ಪರಿಹಿತಾಹತವಸ್ತ್ರಾ ಗೃಹಾಂತಃ ಸೂತ್ರವೇಷ್ಟಿತೋಪಲಸಹಿತದೃಷದುಪರಿಹರಿದ್ರಾನಿರ್ಮಿತೌ ಗೌರೀಹರೌ ಸೌಭಾಗ್ಯಾದಿಕಾಮನಯಾ ಪೂಜಯಿತ್ವಾ ॥ ಅವಿಚ್ಛಿನ್ನಸೌಭಾಗ್ಯಶುಭಸಂತತಿಧನ-ಧಾನ್ಯಾದಿಸಿದ್ಧ್ಯರ್ಥೇ ಗೌರೀಹರೌ ಪೂಜಯಿಷ್ಯೇ ಇಂದ್ರಾಣೀಂ ಚ ತತ್ರೈವಾ-ಕ್ಷತಪುಂಜೇ ಪೂಜಯಿತ್ವಾ ಪ್ರಾರ್ಥಯೇತ್ ॥ ದೇವೇಂದ್ರಾಣಿ ನಮಸ್ತುಭ್ಯಂ ದೇವೇಂದ್ರಪ್ರಿಯಭಾಮಿನಿ ॥ ವಿವಾಹಂ ಭಾಗ್ಯಮಾರೋಗ್ಯಂ ಪುತ್ರಲಾಭಂ ಚ ದೇಹಿ ಮೇ ॥ ಇತಿ ತತೋ ಗೌರೀಂ ಸೌಭಾಗ್ಯಾದಿಪ್ರಾರ್ಥಯಮಾನಾ ತತ್ರೈವ ತಿಷ್ಠೇತ್ ॥**

**॥ ಇತಿ ಗೌರೀಹರ ಪೂಜಾ ॥**

---

ಕನ್ಯೆಯು ಸ್ನಾನಮಾಡಿ ಶುಚಿಯಾದ ಬಟ್ಟೆಯನ್ನು ಧರಿಸಿ ಮನೆಯ ಒಳಗೆ ದೇವರ ಕೋಣೆಯಲ್ಲಿ ಅಥವಾ ಪ್ರಶಸ್ತವಾದ ಬೇರೆ ಸ್ಥಳದಲ್ಲಿ ಚಪ್ಪಟೆ ಹಾಗೂ ಗುಂಡುಕಲ್ಲುಗಳ ಮೇಲೆ ಅರಸಿನದಿಂದ ಚಿತ್ರ ಬರೆದು ಗೌರೀಹರರ ಪೂಜೆ ಮಾಡಬೇಕು. "**ಅವಿಚ್ಛಿನ್ನ .... ಕರಿಷ್ಯೇ**" ಎಂದು ಸಂಕಲ್ಪ ಮಾಡಿ ಅಕ್ಕಿಯ ರಾಶಿಯ ಮೇಲೆ ಇಂದ್ರಾಣಿಯನ್ನೂ ಪೂಜಿಸಿ "**ದೇವೇಂದ್ರಾಣಿ... ದೇಹಿ ಮೇ**" ಎಂದು ಪ್ರಾರ್ಥಿಸಬೇಕು.

೪೯

# ॥ ವಧೂವರಯೋಃ ಪರಸ್ಪರನಿರೀಕ್ಷಣಂ ॥

**॥ ಶ್ರೀಃ ॥ ಅಥ ಬ್ರಾಹ್ಮಣಾಃ ಸ್ವಲಂಕೃತೇ ವೇಶ್ಮನಿ ಸುಮಂಗಲಗೀತ-ತೂರ್ಯಾದಿನಿರ್ಘೋಷೇ ಕ್ರಿಯಮಾಣೇ ಪೂರ್ವಾಪರಭಾಗಯೋರ್ಹಸ್ತಾಂತ-ರಾಲಂ ವಿಹಾಯ ಪ್ರತ್ಯೇಕಂ ಪ್ರಸ್ಥಮಿತಸಿತತಂದುಲೈರ್ದ್ವೌರಾಶೀ ಕೃತ್ವಾ ಮಧ್ಯೇ ಕುಂಕುಮಾದಿಕೃತಸ್ವಸ್ತಿಕಾಂಕಿತಮಂತಃಪಟಮುದಗ್ದಶಂ ಧಾರಯಿತ್ವಾ ಪೂರ್ವರಾಶೌ ಪ್ರತ್ಯಙ್ಮುಖಂ ವರಂ ಪಶ್ಚಿಮರಾಶೌ ಪ್ರಾಙ್ಮುಖೀಂ ಕನ್ಯಾಂ ತಂಡುಲಗುಡ-ಜೀರಕಯುತಾಂಜಲೀ ಉಭಾವವಸ್ಥಾಪ್ಯ ದ್ವಿಜಾಃ ಸತ್ಯೇನೋತ್ತಭಿತೇತಿ ಸೂಕ್ತಂ ಪಠೇಯುಃ ॥ ಪುರಂಧ್ರ್ಯೋ ಮಂಗಲಗೀತಿಃ ಕುರ್ಯುಃ ॥ ವಧೂವರೌ ಚ ಮನಸೇಷ್ಟದೇವತಾಂ ಧ್ಯಾಯಂತೌ ಸ್ವಸ್ತಿಕಾಲೋಕನಪರೌಸಮಾಹಿತೌ ತಿಷ್ಠೇತಾಂ ॥ ಅಥ ಜ್ಯೌತಿಷಿಕೇಣ ಮಂಗಲಪದ್ಯಪಾಠಪೂರ್ವಕಂ ಸ್ವೋಕ್ತ-ಕಾಲೇ ತದೇವ ಲಗ್ನಮಿತಿ ಪಠಿತ್ವಾ ಸುಮುಹೂರ್ತಮಸ್ತು ಓಂ ಪ್ರತಿಷ್ಠೇತ್ಯುಕ್ತೇ ಸದ್ಯೋಂತಃಪಟಮುದಗಪಸಾರ್ಯ ಕನ್ಯಾವರಾಭ್ಯಾಂ ಪರಸ್ಪರ-**

---

**ವಧೂವರರ ಪರಸ್ಪರ ನಿರೀಕ್ಷಣ:-** ಚೆನ್ನಾಗಿ ಅಲಂಕರಿಸಿ ವಿವಾಹಮಂಟಪದಲ್ಲಿ ಬ್ರಾಹ್ಮಣರು, ಮಂಗಲಗೀತೆ ವಾದ್ಯಘೋಷ ಮುಂತಾದವುಗಳು ನಡೆಯುತ್ತಿರುವಾಗ, ಪೂರ್ವ ಮತ್ತು ಪಶ್ಚಿಮ ಭಾಗಗಳಲ್ಲಿ ಒಂದು ಮೊಳದಷ್ಟು ಅಂತರ ಬಿಟ್ಟು ಒಂದೊಂದು ಸೇರು ಅಕ್ಕಿಯನ್ನು ಸುರಿದು ಎರಡು ರಾಶಿ ಮಾಡಬೇಕು. ಎರಡೂ ಬದಿಗಳಲ್ಲಿ ಕುಂಕುಮದಿಂದ ಸ್ವಸ್ತಿಕ ಚಿಹ್ನೆಯನ್ನು ಬರೆದು ಅಂತಃಪಟವನ್ನು ದಕ್ಷಿಣೋತ್ತರವಾಗಿ ಆ ಅಕ್ಕಿರಾಶಿಗಳ ಮಧ್ಯಭಾಗಕ್ಕೆ ಸರಿಯಾಗುವಂತೆ ಎತ್ತಿ ಹಿಡಿಯಬೇಕು. ಪೂರ್ವದ ಕಡೆಯ ರಾಶಿಯ ಮೇಲೆ ಪಶ್ಚಿಮಕ್ಕೆ ಮುಖ ಮಾಡಿ ವರನನ್ನೂ, ಪಶ್ಚಿಮದ ರಾಶಿಯ ಮೇಲೆ ಪೂರ್ವಕ್ಕೆ ಮುಖಮಾಡಿ ವಧುವನ್ನೂ ಅವರ ಕೈಯಲ್ಲಿ ಅಕ್ಕಿ ಬೆಲ್ಲ ಮತ್ತು ಜೀರಿಗೆಯನ್ನು ಮಿಶ್ರಮಾಡಿಕೊಟ್ಟು ನಿಲ್ಲಿಸಬೇಕು. ಬ್ರಾಹ್ಮಣರು **"ಸತ್ಯೇನೋತ್ತಭಿತಾ"** ಎಂಬ ಸೂಕ್ತವನ್ನೂ, ಮುತ್ತೈದೆಯರು ಮಂಗಲ ಗೀತೆಗಳನ್ನೂ ಹೇಳ ಬೇಕು. ವಧೂವರರು ತಮ್ಮ ಇಷ್ಟ ದೇವತೆಯನ್ನು ಧ್ಯಾನಿಸುತ್ತ ಏಕಾಗ್ರಚಿತ್ತರಾಗಿರಬೇಕು. ಸ್ವಸ್ತಿಕ ಚಿಹ್ನೆಯನ್ನೇ ನೆಟ್ಟ ದೃಷ್ಟಿಯಿಂದ ನೋಡುತ್ತಿರಬೇಕು. ನಂತರ ಜ್ಯೋತಿಷ್ಕರು ಮಂಗಲಾಷ್ಟಕ ಇತ್ಯಾದಿಗಳನ್ನು ಹೇಳಿ ತಾವು ಸೂಚಿಸಿದ ಸುಮುಹೂರ್ತಕಾಲವು ಬಂದಾಗ **"ತದೇವ ಲಗ್ನ"** ಎಂದು ಹೇಳಿ **''ಸುಮುಹೂರ್ತಮಸ್ತು ಓಂ ಪ್ರತಿಷ್ಠಾ''** ಎಂದು ಹೇಳಿದಾಗ ಅಂತಃಪಟವನ್ನು ಉತ್ತರದಿಕ್ಕಿಗೆ ಸರಿಸಬೇಕು. ಆಗ ವಧೂವರರು ತಮ್ಮ ಕೈಯಲ್ಲಿರುವ ಅಕ್ಷತಾದಿಗಳನ್ನು ಪರಸ್ಪರ ಒಬ್ಬರಿಗೊಬ್ಬರು ತಲೆಯ ಮೇಲೆ ಹಾಕಬೇಕು ಮತ್ತು ಇಬ್ಬರೂ ಪರಸ್ಪರ ಮುಖವನ್ನು ನೋಡಬೇಕು.

**ಶಿರಸಿ ಅಂಜಲಿಸ್ಥತಂದುಲಾದ್ಯವಕಿರಣಂ ಪರಸ್ಪರನಿರೀಕ್ಷಣಂ ಚ ಕಾರಣೀಯಂ ॥ ತದಾ ವರಃ ॥ ಓಂ ಅಭ್ರಾತೃಘ್ನೀಂ ವರುಣಾಪತಿಘ್ನೀಂ ಬೃಹಸ್ಪತೇ ॥ ಇದ್ರಾ-ಪುತ್ರಘ್ನೀಂ ಲಕ್ಷ್ಮ್ಯಂ ತಾಮಸ್ಯೈಸವಿತುಃಸುವ ॥ ಇತಿ ಜಪನ್ ಕನ್ಯಾಂ ವೀಕ್ಷೇತ್ ॥ ಓಂ ಅಘೋರಚಕ್ಷುರಪತಿಘ್ನ್ಯೇಧಿ ಶಿವಾಪಶುಭ್ಯಃ ಸುಮನಾಃ ಸುವರ್ಚಾಃ ॥ ವೀರಸೂರ್ದೇವಕಾಮಾಸ್ಯೋನಾಶಂನೋಭವ ದ್ವಿಪದೇಶಂ ಚತುಷ್ಪದೇ ॥ ಇತಿ ಜಪಿತ್ವಾ ದರ್ಭಾಗ್ರೇಣ ತಸ್ಯಾ ಭ್ರುವೋರ್ಮಧ್ಯಂ ಓಂ ಭೂರ್ಭುವಃ ಸ್ವರಿತಿ ಪರಿಮೃಜ್ಯ ದರ್ಭಂ ನಿರಸ್ಯ ಅಪಉಪಸ್ಪೃಶೇತ್ ॥ ತತಸ್ತ್ರಿ-ವಾರಂ ಪಂಚವಾರಂ ವಾ ಪರಸ್ಪರಂ ಶಿರಸಿ ಋಕ್ಕವಾ ಇದಮಗ್ರೇ .... ಇತ್ಯಾದಿ ಖಂಡವಾಕ್ಯಾಂತೇ ವಧೂಪೂರ್ವಕಮಕ್ಷತಾರೋಪಣಂ ಕಾರಣೀಯಂ ॥**

**॥ ಇತಿ ವಧೂವರಯೋಃ ಪರಸ್ಪರನಿರೀಕ್ಷಣಂ ॥**

---

---

"**ಸತ್ಯೇನೋತ್ತಭಿತಾ ...**" ಸೂಕ್ತ ಹಾಗೂ "**ಮಂಗಲಾಷ್ಟಕ**" ಇತ್ಯಾದಿಗಳನ್ನು ಬೇರೆ ಕಡೆ ಕೊಡಲಾಗಿದೆ. ಆಮೇಲೆ ವರನು "**ಓಂ ಅಭ್ರಾತೃಘ್ನೀಂ....**" ಎಂದು ಜಪಿಸುತ್ತ ಕನ್ಯೆಯನ್ನು ನೋಡಬೇಕು. ನಂತರ "**ಅಘೋರಚಕ್ಷು...**" ಎಂಬ ಮಂತ್ರವನ್ನು ಹೇಳಿ ದರ್ಭೆಯ ತುದಿಯಿಂದ ಕನ್ನಿಕೆಯ ಹುಬ್ಬುಗಳ ಮಧ್ಯಭಾಗವನ್ನು "**ಓಂ ಭೂರ್ಭುವಃ ಸ್ವಃ**" ಎಂದು ಹೇಳುತ್ತ ಒರಸಿ ದರ್ಭೆಯನ್ನು ಬಿಸುಟು ಕೈತೊಳೆಯ ಬೇಕು. ನಂತರ "**ಋಕ್ಷವಾ ಇದಮಗ್ರೇ ...**" ಇತ್ಯಾದಿ ಖಂಡವಾಕ್ಯಗಳನ್ನು ಹೇಳುತ್ತ ಮೂರು ಅಥವಾ ಐದು ಬಾರಿ ವಧು ಮೊದಲ್ಗೊಂಡು ಅಕ್ಷತಾರೋಪಣ ಮಾಡಬೇಕು.

# ॥ ಕನ್ಯಾದಾನ ಪ್ರಯೋಗಃ ॥

**॥ ಶ್ರೀಃ ॥ ತತಃ ಓಂ ಅನೃಕ್ಷರಾಋಜವಃ ಸಂತುಪಂಥಾಯೇಭಿಃ ಸಖಾಯೋಯಂತಿನೋವರೇಯಂ ॥ ಸಮರ್ಯಮಾಸಂಭಗೋನೋನಿನೀಯಾ- ತ್ಸಂಜಾಸ್ಪತ್ಯಂಸುಯಮಮಸ್ತುದೇವಾಃ ॥ ಇತಿ ವರಂ ಪ್ರಾಙ್ಮುಖಂ ವಧೂಂಚ ಪ್ರತ್ಯಙ್ಮುಖೀಂ ಕೃತ್ವಾ ದಾತಾ ತದ್ದಕ್ಷಿಣತಃ ಸಪತ್ನೀಕಃ ಉದಙ್ಮುಖ ಉಪವಿಶ್ಯ ಆಚಮ್ಯ ಪ್ರಾಣಾನಾಯಮ್ಯ ದೇಶಕಾಲೌ ಸಂಕೀರ್ತ್ಯ ಅಮುಕ ಪ್ರವರಾನ್ವಿತೋ- ಮುಕಗೋತ್ರೋಮುಕ ಶರ್ಮಾಹಂ ಮಮ ಸಮಸ್ತಪಿತೃಣಾಂ ನಿರತಿಶಯಸಾ- ನಂದಬ್ರಹ್ಮಲೋಕಾವಾಪ್ತ್ಯಾದಿ ಕನ್ಯಾದಾನಕಲ್ಪೋಕ್ತ ಫಲಾವಾಪ್ತಯೇ ಅನೇನ ವರೇಣಾಸ್ಯಾಂ ಕನ್ಯಾಯಾಮುತ್ಪಾದಯಿಷ್ಯಮಾಣಸಂತತ್ಯಾ ದ್ವಾದಶಾವರಾನ್ ದ್ವಾದ- ಶಾಪರಾಂಶ್ಚ ಪುರುಷಾನ್ ಪವಿತ್ರೀಕರ್ತುಮಾತ್ಮನಶ್ಚ ಶ್ರೀಲಕ್ಷ್ಮೀನಾರಾಯಣಪ್ರೀತಯೇ ಬ್ರಾಹ್ಮವಿವಾಹವಿಧಿನಾ ಕನ್ಯಾದಾನಮಹಂ ಕರಿಷ್ಯೇ ಇತಿ ಕುಶಾಕ್ಷತಯುತಜಲೇನ ಸಂಕಲ್ಪ್ಯ ॥**

**ತತ್ರ ಜಲಶುದ್ಧ್ಯರ್ಥಂ ವರುಣಪೂಜಾಂ ಉದಕಾಭಿಮಂತ್ರಣಂ ಚ ಕರಿಷ್ಯೇ ॥ ಪ್ರಾಗಗ್ರಾನುದಗಗ್ರಾನ್ ವಾ ದರ್ಭಾನಾಸ್ತೀರ್ಯ ತೇಷು ಜಲಪೂರ್ಣ-**

---

"**ಅನೃಕ್ಷರಾಋಜವಃ....**" ಎಂಬ ಮಂತ್ರವನ್ನು ಹೇಳಿ ವರನನ್ನು ಪೂರ್ವಕ್ಕೆ ಮುಖವಾಗುವಂತೆಯೂ, ವಧುವನ್ನು ಪಶ್ಚಿಮಕ್ಕೆ ಮುಖವಾಗುವಂತೆಯೂ ನಿಲ್ಲಿಸಿ ಕನ್ಯಾಪಿತನು ಅವರ ದಕ್ಷಿಣಭಾಗದಲ್ಲಿ ಕುಳಿತು ಆಚಮನ ಪ್ರಾಣಾಯಾಮಾದಿಗಳನ್ನು ಮಾಡಿ "**ಅಮುಕಪ್ರವರಾ ... ಕನ್ಯಾದಾನಮಹಂ ಕರಿಷ್ಯೇ**" ಎಂದು ದರ್ಭೆ ಮತ್ತು ಅಕ್ಷತೆಗಳಿಂದ ಕೂಡಿದ ನೀರಿನಿಂದ ಸಂಕಲ್ಪ ಮಾಡಬೇಕು.

ಜಲಶುದ್ಧಿಗೋಸ್ಕರ "**ಜಲಶುದ್ಧ್ಯರ್ಥಂ .... ಕರಿಷ್ಯೇ**" ಎಂದು ಸಂಕಲ್ಪಿಸಿ ಮೂಡು ಅಥವಾ ಬಡಗು ದಿಕ್ಕಿಗೆ ತಲೆ ಇರುವ ದರ್ಭೆಗಳನ್ನು ಹಾಸಿ, ಅವುಗಳ ಮೇಲೆ ಒಂದು ಕಲಶ ಸ್ಥಾಪನೆ ಮಾಡಿ; ಭತ್ತ, ಗೋದಿ ಇತ್ಯಾದಿಗಳನ್ನು ಹಾಕಿ, ಗಂಧಪುಷ್ಪಾಕ್ಷತಾದಿಗಳಿಂದ ಅಲಂಕರಿಸಿ ದೂರ್ವೆ ಮತ್ತು ಪಲ್ಲವಗಳಿಂದ ಅದರ ಮುಖವನ್ನು ಆವರಿಸಿ, ಜಲಸಂಬಂಧೀ ಮಂತ್ರಗಳಿಂದ ಅಭಿಮಂತ್ರಿಸಬೇಕು. ಅದರಲ್ಲಿ ವರುಣನನ್ನು ಪೂಜಿಸಬೇಕೆಂಬ ಶಿಷ್ಟಾಚಾರವಿದೆ.

**ಕಲಶಂ ನಿಧಾಯ ವ್ರೀಹಿಯವಾನೋಪ್ಯ ಗಂಧಪುಷ್ಪಾದಿಭಿರಲಂಕೃತ್ಯ ದೂರ್ವಾ-ಪಲ್ಲವೈರ್ಮುಖಮವಸ್ತೀರ್ಯಾಬ್ಲಿಂಗಾಭಿಃ ಋಗ್ಭಿರಭಿಮಂತ್ರಯೇತ್ ॥ ತತ್ರ ವರುಣಂ ಪೂಜಯೇದಿತಿ ಶಿಷ್ಟಾಚಾರಃ ॥**

**ತತಃ ಸಪತ್ನೀಕ ಉತ್ಥಾಯ ಉದಙ್ಮುಖ ಏವ ಕನ್ಯಾಂ ಸಂಪ್ರಗೃಹ್ಯ ॥ ಕನ್ಯಾಂ ಕನಕಸಂಪನ್ನಾಂ ಕನಕಾಭರಣೈರ್ಯುತಾಂ ॥ ದಾಸ್ಯಾಮಿ ವಿಷ್ಣವೇ ತುಭ್ಯಂ ಬ್ರಹ್ಮಲೋಕಜಿಗೀಷಯಾ ॥ ವಿಶ್ವಂಭರಃ ಸರ್ವಭೂತಃ ಸಾಕ್ಷಿಣ್ಯಃ ಸರ್ವದೇವತಾಃ ॥ ಇಮಾಂ ಕನ್ಯಾಂ ಪ್ರದಾಸ್ಯಾಮಿ ಪಿತೄಣಾಂ ತಾರಣಾಯ ಚ ॥ ಇತ್ಯುಕ್ತ್ವಾ ಸ್ವದಕ್ಷಿಣಸ್ಥಭಾರ್ಯಾದತ್ತಪೂರ್ವಕಲ್ಪಿತಜಲಧಾರಾಮವಿಚ್ಛಿನ್ನಾಂ ನವಕಾಂಸ್ಯಪಾತ್ರೋಪರಿಧೃತಕನ್ಯಾಂಜಲ್ಯುಪರಿಸ್ಥವರಾಂಜಲಿದಕ್ಷಿಣಹಸ್ತೇ ಕ್ಷಿಪನ್ ವದೇತ್ ॥ ಕನ್ಯಾ ತಾರಯತು ॥ ಪುಣ್ಯಂ ವರ್ಧತಾಂ ॥ ಶಿವಾ ಆಪಃ ಸಂತು ॥ ಸೌಮನಸ್ಯಮಸ್ತು ॥ ಅಕ್ಷತಂ ಚಾರಿಷ್ಟಂ ಚಾಸ್ತು ॥ ದೀರ್ಘ-ಮಾಯುಃ ಶ್ರೇಯಃ ಶಾಂತಿಃ ಪುಷ್ಟಿಸ್ತುಷ್ಟಿಶ್ಚಾಸ್ತು ॥ ಯಚ್ಛ್ರೇಯಸ್ತದಸ್ತು ॥ ಯತ್ಪಾಪಂ ತತ್ಪ್ರತಿಹತಮಸ್ತು ॥ ಪುಣ್ಯಾಹಂ ಭವಂತೋ ಬ್ರುವಂತು ॥ ಸ್ವಸ್ತಿ ಭವಂತೋ ಬ್ರುವಂತು ॥ ಋದ್ಧಿಂ ಭವಂತೋ ಬ್ರುವಂತು ॥ ಶ್ರೀರಸ್ತ್ವಿತಿ ಭವಂತೋ ಬ್ರುವಂತು ॥ ಅಮುಕಪ್ರವರಾನ್ವಿತಾಮುಕಗೋತ್ರೋಽಮುಕಶ-ರ್ಮಾಹಂ ಮಮ ಸಮಸ್ತೇತ್ಯಾದಿ ಪ್ರೀತಯೇ ಇತ್ಯಂತ ಮುಕ್ತ್ವಾ ॥ ಅಮುಕ ಪ್ರವರಾನ್ವಿತಾಮುಕಗೋತ್ರೋತ್ಪನ್ನಾಯಾಮುಕಪ್ರಪೌತ್ರಾಯಾಮುಕಪೌತ್ರಾಯಾಮು-ಕಪುತ್ರಾಯಾಮುಕಶರ್ಮಣೇ ಶ್ರೀಧರರೂಪಿಣೇ ಕನ್ಯಾರ್ಥಿನೇ ವರಾಯ ॥ ಅಮುಕಪ್ರವರೋಪೇತಾಮುಕಗೋತ್ರೋತ್ಪನ್ನಾಮಮುಕಪ್ರಪೌತ್ರೀಮಮುಕಪೌತ್ರೀ-ಮಮುಕಶರ್ಮಣೋ ಮಮ ಪುತ್ರೀಮಮುಕನಾಮ್ನೀಂ ಕನ್ಯಾಂ ಶ್ರೀರೂಪಿಣೀಂ ಪ್ರಜಾಪತಿದೈವತ್ಯಾಂ ಪ್ರಜೋತ್ಪಾದನಾರ್ಥಂ ತುಭ್ಯಮಹಂ ಸಂಪ್ರದದೇ ನ ಮಮ ॥ ಕನ್ಯಾಂ ಪ್ರತಿಗೃಹ್ಣಾತು ಭವಾನ್ ॥ ಇತಿ ವರಹಸ್ತೇ ಸಕುಶಾಕ್ಷತಜಲಂ ಕ್ಷಿಪನ್ ಪ್ರಜಾಪತಿಃ ಪ್ರೀಯತಾಮಿತಿ ಮನಸಾ ಸ್ಮರೇತ್ ॥ ಏವಂ ಪುನಃ ಕನ್ಯಾ ತಾರಯತ್ವಿತ್ಯಾದಿ ದ್ವಿಃ ॥**

---

ಬಳಿಕ ಪತ್ನಿಯೊಡನೆ ಎದ್ದು ನಿಂತು ಉತ್ತರಕ್ಕೆ ಮುಖಮಾಡಿ, ಕನ್ಯೆಯ ಹೆಗಲು ಮುಟ್ಟಿ "**ಕನ್ಯಾಂ ಕನಕ .. ತಾರಣಾಯ ಚ**" ಎಂದು ಹೇಳಬೇಕು. ನಂತರ ತನ್ನ ಬಲಭಾಗದಲ್ಲಿ ನಿಂತಿರುವ ಪತ್ನಿಯು, ಮೊದಲು ಅಭಿಮಂತ್ರಿಸಿ ಇಟ್ಟ ಕಲಶೋದಕವನ್ನು ಧಾರಾಕಾರವಾಗಿ, ಕಂಚಿನ ಹೊಸ ಬಟ್ಟಲಿನ ಮೇಲೆ ಹಿಡಿದಿರುವ ಕನ್ಯೆಯ ಅಂಜಲಿ, ಅದರ ಮೇಲಿರುವ ವರನ ಅಂಜಲಿ, ಅದರ ಮೇಲೆ ಹಿಡಿದಿರುವ ಕನ್ಯಾಪಿತನ ಅಂಜಲಿಯಲ್ಲಿ ಬೀಳುವಂತೆ, ಆ ನೀರು ವರನ ಅಂಜಲಿಯ ಬಲಗೈ ಮೇಲೆ ಬೀಳುವಂತೆ ಸುರಿಯಬೇಕು. ಆಗ ಕನ್ಯಾಪಿತನು "**ಕನ್ಯಾತಾರಯತು.... ಬ್ರುವಂತು**" ಎಂದು ಹೇಳಿ "**ಅಮುಕ ಪ್ರವರಾ ... ಅಹಂ, ಮಮ**

ತತೋ ವರಃ ಓಂ ಸ್ವಸ್ತೀತ್ಯುಕ್ತ್ವಾ ಕನ್ಯಾಯಾ ದಕ್ಷಿಣಾಂಸಮಭಿಮೃಶ್ಯ ॥ ಓಂ ಕ ಇದಂ ಕಸ್ಮಾ ಅದಾತ್ಕಾಮಃ ಕಾಮಾಯಾದಾತ್ಕಾಮೋದಾತಾಕಾಮಃ ಪ್ರತಿಗ್ರಹೀತಾಕಾಮಂ ಸಮುದ್ರಮಾವಿಶಕಾಮೇನತ್ವಾ ಪ್ರತಿಗೃಹ್ಣಾಮಿಕಾಮೈತತ್ತೇವೃಷ್ಟಿರಸಿದೌಸ್ತ್ವಾದದಾತು ಪೃಥಿವೀ ಪ್ರತಿ ಗೃಹ್ಣಾತು ॥ ಧರ್ಮಪ್ರಜಾಸಿದ್ಧ್ಯರ್ಥಂ ಕನ್ಯಾಂ ಪ್ರತಿಗೃಹ್ಣಾಮೀತಿ ವದೇತ್ ॥ ತತೋ ದಾತಾ ॥ ಗೌರೀಂ ಕನ್ಯಾಮಿಮಾಂ ವಿಪ್ರ ಯಥಾಶಕ್ತಿವಿಭೂಷಿತಾಂ ॥ .... ಗೋತ್ರಾಯ .... ಶರ್ಮಣೇ ತುಭ್ಯಂ ದತ್ತಾಂ ವಿಪ್ರ ಸಮಾಶ್ರಯ ॥ ಕನ್ಯೇ ಮಮಾಗ್ರತೋ ಭೂಯಾಃ ಕನ್ಯೇ ಮೇ ದೇವಿ ಪಾರ್ಶ್ವಯೋಃ । ಕನ್ಯೇ ಮೇ ಪೃಷ್ಠತೋ ಭೂಯಾಃ ತ್ವದ್ದಾನಾನ್ಮೋಕ್ಷಮಾಪ್ನುಯಾಂ ॥ ಮಮ ವಂಶ ಕುಲೇ ಜಾತಾ ಪಾಲಿತಾ ವತ್ಸರಾಷ್ಟಕಂ ॥ ತುಭ್ಯಂ ವಿಪ್ರ ಮಯಾದತ್ತಾ ಪುತ್ರಪೌತ್ರಪ್ರವರ್ಧಿನೀ ॥ ಧರ್ಮೇ ಚಾರ್ಥೇ ಚ ಕಾಮೇ ಚ ನಾತಿಚರಿತವ್ಯಾ ತ್ವಯೇಯಂ ॥ ವರಃ ॥ ನಾತಿಚರಾಮೀತಿ ವದೇತ್ ॥ ತತೋ ದಾತಾ ಉಪವಿಶ್ಯ ಕೃತಸ್ಯ ಕನ್ಯಾದಾನಸ್ಯ ಪ್ರತಿಷ್ಠಾಸಂಸಿದ್ಧ್ಯರ್ಥಮಿದಂ ಸುವರ್ಣಮಗ್ನಿದೈವತಂ ದಕ್ಷಿಣಾತ್ವೇನ ತುಭ್ಯಮಹಂ

---

... **ಪ್ರೀತಯೇ**" ಎಂದೂ "**ಅಮುಕಪ್ರವರಾನ್ವಿತಾಯ ... ತುಭ್ಯಮಹಂ ಸಂಪ್ರದದೇ ನಮಮ**" ಹೇಳಬೇಕು. "**ಕನ್ಯಾಂ ... ಭವಾನ್**" ಎಂದು ಹೇಳಿ ವರನ ಕೈಯಲ್ಲಿ ಕುಶ ಅಕ್ಷತೆ ಮತ್ತು ನೀರನ್ನು ಬಿಡಬೇಕು. ಹೀಗೆಯೇ ಇನ್ನೆರಡು ಸಲ ಮಾಡಬೇಕು. ಬಳಿಕ ವರನು "**ಓಂ ಸ್ವಸ್ತಿ**" ಎಂದು ಹೇಳಿ ಕನ್ಯೆಯ ಬಲ ಹೆಗಲನ್ನು ಮುಟ್ಟಿ, "**ಕ ಇದಂ ಕಸ್ಮಾ ...**" ಎಂಬ ಮಂತ್ರ ಹೇಳಿ "**ಧರ್ಮಪ್ರಜಾ....ಗೃಹ್ಣಾಮಿ**" ಎಂದು ಹೇಳಬೇಕು. ನಂತರ ದಾತನು "**ಗೌರೀಂ ಕನ್ಯಾಂ ... ತ್ವಯೇಯಂ**" ಎಂದು ಹೇಳಿದಾಗ ವರನು "**ನಾತಿಚರಾಮಿ**" ಎಂದು ಪ್ರತ್ಯುತ್ತರ ಕೊಡಬೇಕು. ಆಮೇಲೆ ಕನ್ಯಾಪಿತನು ಕುಳಿತು "**ಕೃತಸ್ಯ ಕನ್ಯಾದಾನಸ್ಯ ... ಸಂಪ್ರದದೇ**" ಎಂದು ಹೇಳಿ ಸುವರ್ಣದಾನ ಕೊಟ್ಟು, ವರನು "**ಓಂ ಸ್ವಸ್ತಿ**" ಎಂದ ಮೇಲೆ ನೀರಿನ ಪಾತ್ರೆ, ಭೋಜನ ಸಾಮಗ್ರಿ, ಹಸು ಎಮ್ಮೆ, ಕುದುರೆ, ಆನೆ, ದಾಸಿ, ದಾಸ, ಭೂಮಿ, ವಾಹನ, ಆಭರಣ ಮುಂತಾದವುಗಳನ್ನು ಯಥಾಸಾಧ್ಯ ಸಂಕಲ್ಪಿಸಿ ವರನಿಗೆ ಕೊಡಬೇಕು.

"**.... ಗೋತ್ರಾಯ .... ಶರ್ಮಣೇ**" ಎಂಬಲ್ಲಿ ಗೋತ್ರ ಮತ್ತು ಹೆಸರನ್ನು ಸೇರಿಸಿ ಹೇಳಬೇಕು.

**ಸಂಪ್ರದದೇ ॥ ಇತಿ ಸಜಲಂ ಸುವರ್ಣಂ ವರಹಸ್ತೇ ದತ್ವಾ ನ ಮಮೇತಿ ವದೇತ್ ॥ ವರಃ ಓಂ ಸ್ವಸ್ತಿ ॥ ತತೋ ದಾತಾ ಜಲಭಾಜನಭೋಜನ-ಗೋಮಹಿಷ್ಯಾಶ್ವಗಜದಾಸೀದಾಸಭೂವಾಹನಾಲಂಕಾರಾದಿ ಯಥಾವಿಭವಂ ಸಂಕಲ್ಪ-ಪೂರ್ವಕಂ ವರಾಯ ದದ್ಯಾತ್ ॥**

**ಅಥವರಃ ॥ ಯತ್ಕಕ್ಷೀವಾಂಸಂವನನಂ ವಿಶ್ವೇದೇವಾ ಅನುಷ್ಟುಪ್ ॥ ವಧೂಕುಕ್ಷ್ಯಭಿಮರ್ಶನೇ ವಿನಿಯೋಗಃ ॥ ಓಂ ಯತ್ಕಕ್ಷೀವಾಂಸಂವನನಂ ಪುತ್ರೋ ಅಂಗಿರಸಾಭವೇತ್ ॥ ತೇನನೋದ್ಯವಿಶ್ವೇದೇವಾಃ ಸಂಪ್ರಿಯಾಂಸಮಜೀಜನನ್ ॥ ಇತ್ಯನೇನ ವಧೂದಕ್ಷಿಣಕುಕ್ಷಿಮಭಿಮೃಶೇತ್ ॥**

**ಅಥ ಪುರೋಧಾಃ ಪೂರ್ವಾಭಿಮಂತ್ರಿತಕಲಶಜಲಂ ಕಾಂಸ್ಯಪಾತ್ರೇ ಆಸಿಚ್ಯ ॥ ಅನಾಧೃಷ್ಟಮಿತ್ಯಸ್ಯ ವಾಮದೇವ ಆಪೋ ಬೃಹತೀ ॥ ಉದಕಾಭಿ-ಮಂತ್ರಣೇ ವಿನಿಯೋಗಃ ॥ ಓಂ ಅನಾಧೃಷ್ಟಮಸ್ಯನಾಧೃಷ್ಯಂದೇವಾನಾಮೋ-ಜೋಅಭಿಶಸ್ತಿಪಾಃ ॥ ಅನಭಿಶಸ್ತ್ಯಂ ಚಸಾಸತ್ಯಮುಪಗೇಷಾಂಸ್ವಿತೇಮಾಧಾಃ ॥ ಇತ್ಯುದಕಮಭಿಮಂತ್ರ್ಯ ಸಹಿರಣ್ಯಪವಿತ್ರಯಾ ಸಕುಶದೂರ್ವಾಪಲ್ಲವಯಾ ಔದುಂಬರ್ಯಾರ್ದ್ರಯಾ ಶಾಖಯಾ ವಧೂವರಾವಭಿಷಿಂಚೇತ್ ॥ ತತ್ರ ಮಂತ್ರಾಃ ॥ ಆನಃ ಪ್ರಜಾಮಿತಿ ಸೂರ್ಯಾಸಾವಿತ್ರೀ ಸೂರ್ಯಾಸಾವಿತ್ರೀ ಜಗತೀ ॥**

---

ಆ ನಂತರ ವರನು **"ಯತ್ಕಕ್ಷೀವಾಂಸಂವನನಂ ... "** ಎಂಬ ಮಂತ್ರದಿಂದ ವಧುವಿನ ಬಲಹೊಟ್ಟೆಯನ್ನು ಸ್ಪರ್ಶಿಸಬೇಕು. ಆಮೇಲೆ ಪುರೋಹಿತನು ಮೊದಲು ಅಭಿಮಂತ್ರಿಸಿದ ಕಲಶೋದಕವನ್ನು ಕಂಚಿನ ಪಾತ್ರೆಯಲ್ಲಿ ಸುರಿದು **"ಅನಾಧೃಷ್ಟಂ ..."** ಎಂಬ ಮಂತ್ರದಿಂದ ಅದನ್ನು ಅಭಿಮಂತ್ರಿಸಿ, ಹಿರಣ್ಯಪವಿತ್ರ ದೂರ್ವೆ ಪಲ್ಲವಗಳಿಂದ ಕೂಡಿದ ಉದುಂಬರದ ಹಸಿ ಟೊಂಗೆಯಿಂದ ವಧೂವರರನ್ನು **ಆನಃಪ್ರಜಾಂ ..... (4) ಸಮುದ್ರ ಜ್ಯೇಷ್ಠಾ ..... (4) ಆಪೋಹಿಷ್ಠಾಮ .... (3) ದೇವಸ್ಯತ್ವಾ ...** ಈ ಮಂತ್ರಗಳಿಂದ ಅಭಿಷೇಕಮಾಡಬೇಕು. ಅಭಿಷೇಕದ ನಂತರ ಹಾಲಿನಲ್ಲಿ ಅದ್ದಿದ ಎರಡೆಳೆ ಬಿಳಿದಾರವನ್ನು ವಧೂವರರ ಕಂಠ ಹಾಗೂ ಕಟಿಪ್ರದೇಶದಲ್ಲಿ ಈಶಾನ್ಯದಿಂದ ತೊಡಗಿ ಐದು ಅಥವಾ ನಾಲ್ಕು ಸುತ್ತು ಪ್ರದಕ್ಷಿಣಾಕಾರವಾಗಿ **"ಪರಿತ್ವಾಗಿರ್ವಣೋ"** ಇತ್ಯಾದಿ ಮಂತ್ರಗಳಿಂದ ಸುತ್ತಬೇಕು.

ದ್ವಿತೀಯಾ ತ್ರಿಷ್ಟುಪ್ ಅಂತ್ಯೇ ದ್ವೇ ಅನುಷ್ಟುಭೌ ಅಭಿಷೇಕೇ ವಿನಿಯೋಗಃ ॥ ಓಂ ಆನಃಪ್ರಜಾಂ ಜನಯತು ಪ್ರಜಾಪತಿರಾಜ ರಸಾಯಸಮನ ಕ್ತ್ವರ್ಯಮಾ ॥ ಅದುರ್ಮಂಗಲೀಃ ಪತಿಲೋಕಮಾವಿಶಶನ್ನೋಭವ ದ್ವಿಪದೇ ಶಂ ಚತುಷ್ಪದೇ ॥ ಓಂ ಅಘೋರಚಕ್ಷು ...... ॥ ಓಂ ಇಮಾಂತ್ವಮಿಂದ್ರ ...... ॥ ಓಂ ಸಮ್ರಾಜ್ಞೀಶ್ವಶುರೇಭವ ...... ॥ ಸಮುದ್ರಜ್ಯೇಷ್ಠಾ ಇತಿ ಚತಸೃಣಾಂ ವಸಿಷ್ಠ ಆಪಸ್ತ್ರಿಷ್ಟುಪ್ ॥ ಅಭಿಷೇಕೇ ವಿನಿಯೋಗಃ ॥ ಓಂ ಸಮುದ್ರಜ್ಯೇಷ್ಠಾ .... ॥ ಆಪೋಹಿಷ್ಠೇತಿ ತಿಸೃಣಾಂ ಅಂಬರೀಷಃ ಸಿಂಧುದ್ವೀಪ ಆಪೋ ಗಾಯತ್ರೀ ॥ ಅಭಿಷೇಕೇ ವಿನಿಯೋಗಃ ॥ ಓಂ ಆಪೋಹಿಷ್ಠಾ-ಮಯೋ ..... ॥ ಓಂ ದೇವಸ್ಯತ್ವಾ ಸವಿತುಃ ...... ॥ ಭೂರ್ಭುವಃ ಸ್ವಃ ಅಮೃತಾಭಿಷೇಕೋ ಅಸ್ತು ॥

ತತೋ ದುಗ್ಧಾಕ್ತೇನ ದ್ವಿಗುಣಶುಕ್ಲಸೂತ್ರೇಣ ದಂಪತೀಕಂಠದೇಶೇ ಕಟದೇಶೇಚೈಶಾನೀಮಾರಭ್ಯ ಪಂಚವಾರಂ ಚತುರ್ವಾರಂ ವಾ ಪ್ರದಕ್ಷಿಣಂ ವೇಷ್ಟಯೇತ್ ಪುರೋಧಾ ಏತೈರ್ಮಂತ್ರೈಃ ॥ ಓಂ ಪರಿತ್ವಾಗಿರ್ವಣೋ .... ॥

ತತಃ ಕಂಠದೇಶಸ್ಥಂ ಸೂತ್ರಮಧೋ ನಿಷ್ಕಾಸ್ಯ ಕುಂಕುಮಾತ್ತಮೂರ್ಣಾ-ಯುಕ್ತಂ ಚ ಕೃತ್ವಾ ತೇನ ಹರಿದ್ರಾಖಂಡಂ ಬದ್ಧ್ವಾ ತದ್ವಧೂವಾಮಹಸ್ತ-ಪ್ರಕೋಷ್ಠೇ ವರೋ ಬಧ್ನೀಯಾತ್ ॥ ಓಂ ನೀಲಲೋಹಿತಂ ಭವತಿ

---

ಆ ಮೇಲೆ ಕಂಠದೇಶದಲ್ಲಿ ಸುತ್ತಿದ ನೂಲನ್ನು ಕೆಳಭಾಗಕ್ಕೆ ಜಾರಿಸಿ ತೆಗೆದು ಅದಕ್ಕೆ ಕುಂಕುಮವನ್ನು ಲೇಪಿಸಿ, ಅದರೊಂದಿಗೆ ಉಣ್ಣೆಯನ್ನೂ ಸೇರಿಸಿ ಅದರಲ್ಲಿ ಅರಸಿನದ ತುಂಡನ್ನು ಕಟ್ಟಿ "**ನೀಲಲೋಹಿತಂ ...**" ಎಂಬ ಮಂತ್ರದಿಂದ ವರನು ಅದನ್ನು ವಧುವಿನ ಎಡಗೈಯ ಮಣಿಗಂಟಿನಲ್ಲಿ ಕಟ್ಟಬೇಕು. ಹಾಗೆಯೇ ಸೊಂಟದ ಭಾಗದಲ್ಲಿ ಸುತ್ತಿದ ನೂಲನ್ನು ಮೇಲಕ್ಕೆ ತೆಗೆದು ಮೊದಲಿನಂತೆ ತಯಾರಿಸಿ ಅದೇ ಮಂತ್ರದಿಂದ ವಧುವು ವರನ ಬಲಗೈಯಲ್ಲಿ ಕಟ್ಟಬೇಕು.

ಕೃತ್ಯಾಸಕ್ತಿರ್ವ್ಯಜ್ಯತೇ ॥ ಏಧಂತೇ ಅಸ್ಯಾಜ್ಞಾತಯಃ ಪತಿರ್ಬಂಧೇಷು ಬಧ್ಯತೇ ॥ ಇತಿ ಮಂತ್ರೇಣ ॥ ತತಃ ಕಟದೇಶಸ್ಥಂ ಸೂತ್ರಮುಪರಿನಿಷ್ಕಾಸ್ಯ ತಾದೃಶಂ ಕೃತ್ವಾ ವರದಕ್ಷಿಣಹಸ್ತಪ್ರಕೋಷ್ಠೇ ವಧೂರ್ಬಧ್ನೀಯಾತ್ತೇನೈವ ಮಂತ್ರೇಣ ॥

॥ ಇತಿ ಕನ್ಯಾದಾನ ಪ್ರಯೋಗಃ ॥

---

# ॥ ಅಕ್ಷತಾರೋಪಣಂ ॥

ಅಥ ವಧೂವರೌ ಪರಸ್ಪರ ಮೂರ್ಧನಿ ಆಯುರ್ವರ್ಧನಕರಮಕ್ಷತಾ-ರೋಪಣಂ ಕುರ್ಯಾತಾಂ ॥ ತತಃ ತೈಜಸಪಾತ್ರೇ ಗವ್ಯಕ್ಷೀರೇ ಘೃತಮಾಸಿಚ್ಯ ಪಾತ್ರಾಂತರೇಣಾರ್ದ್ರಶುಕ್ಲತಂದುಲಾನಾದಾಯ ವರಃ ಪ್ರಕ್ಷಾಲಿತಪಾಣಿಃ ಪ್ರಕ್ಷಾಲಿತ-ವಧ್ವಂಜಲೌ ಕ್ಷೀರಘೃತಂ ಹಸ್ತದ್ವಯಾಂಗುಲಿಭಿರ್ದ್ವಿರುಪಸ್ತೀರ್ಯ ದ್ವಿವಾರಂ ತಂಡುಲಾನೋಪ್ಯ ತೇನ ತಥೈವ ದ್ವಿರಭಿಘಾರಯೇತ್ ॥ ತತೋ ವರಾಂಜಲಾವ-ಪ್ಯೇವಮೇವ ದಾತ್ರಾನ್ಯೇನ ವಾ ಪೂರಿತೇ ದಾತಾ ತದಂಜಲ್ಯೋಃ ಸುವರ್ಣಂ ನಿಧಾಯ ವರಾಂಜಲಿಂ ಕನ್ಯಾಂಜಲ್ಯುಪರಿ ನಿಧಾಯ ಕನ್ಯಾ ತಾರಯತು ॥ ದಕ್ಷಿಣಾಃ ಪಾಂತು ॥ ಬಹುದೇಯಂ ಚಾಸ್ತು ॥ ಪುಣ್ಯಂ ವರ್ಧತಾಂ ॥ ಶಾಂತಿಃ ಪುಷ್ಟಿಸ್ತುಷ್ಟಿಶ್ಚಾಸ್ತು ॥ ತಿಥಿಕರಣಮೂಹೂರ್ತನಕ್ಷತ್ರಸಂಪದಸ್ತು ॥ ಇತ್ಯುಚ್ಚಾರ್ಯ ವಧೂಮುತ್ಥಾಪ್ಯ ತಯಾಂಜಲಿಸ್ಥಾನಕ್ಷತಾನ್ ಭಗೋ ಮೇ ಕಾಮಃ ಸಮೃಧ್ಯತಾಂ ॥ ಇತಿ ವರಮೂರ್ಧನ್ಯಾರೋಪಯೇತ್ ॥

ತತೋ ವರಃ ಸ್ವಾಂಜಲಿಸ್ಥಾನ್ ಯಜ್ಞೋ ಮೇ ಕಾಮಃ ಸಮೃಧ್ಯತಾಂ ಇತಿ ವಧೂಶಿರಸಿ ಕ್ಷಿಪೇತ್ ॥ ಏವಂ ಪುನರ್ದ್ವಿಃ ॥ ತತ್ರ ದ್ವಿತೀಯೇ ಶ್ರಿಯೋ ಮೇ ಕಾಮಃ ಸಮೃಧ್ಯತಾಂ ಇತಿ ವಧೂಃ ॥ ಧರ್ಮೋ ಮೇ ಕಾಮಃ ಸಮೃ-ಧ್ಯತಾಂ ಇತಿ ವರಃ ॥ ತೃತೀಯೇ ಪ್ರಜಾ ಮೇ ಕಾಮಃ ಸಮೃಧ್ಯತಾಂ ॥ ಇತಿ ವಧೂಃ ॥ ಯಶೋ ಮೇ ಕಾಮಃ ಸಮೃಧ್ಯತಾಂ ॥ ಇತಿವರಃ ॥ ತತಃ ಕನ್ಯಾ ವರಾಂಜಲೌ ದ್ವಿರುಪಸ್ತೀರ್ಯ ದ್ವಿಸ್ತಂಡುಲಾನೋಪ್ಯ ದ್ವಿರಭಘಾರಯೇತ್ ॥ ತತೋ ದಾತ್ರಾನ್ಯೇನ ವಾ ಪೂರ್ವವತ್ಕನ್ಯಾಂಜಲಾವಾಪೂರಿತೇ ದಾತಾ ಪೂರ್ವವದ್ಧಿರಣ್ಯಂ ನಿಧಾಯ ಕನ್ಯಾಂಜಲಿಂ ವರಾಂಜಲೌ ನಿಧಾಯ ಪೂರ್ವವ-

---

ಒಂದು ಪಾತ್ರೆಯಲ್ಲಿ ಹಾಲು ಮತ್ತು ತುಪ್ಪವನ್ನು ಬೆರಸಿ ಇಡಬೇಕು. ಇನ್ನೊಂದರಲ್ಲಿ ತೋಯಿಸಿದ ಬಿಳಿ ಅಕ್ಕಿ ಇಡಬೇಕು. ವಧೂವರರು ತಮ್ಮ ಕೈಗಳನ್ನು ತೊಳೆದು ಕೊಳ್ಳಬೇಕು. ಬಳಿಕ ವರನು ತನ್ನ ಎರಡು ಬೆರಳುಗಳಿಂದ ಎರಡು ಸಲ ವಧುವಿನ ಅಂಜಲಿಯಲ್ಲಿ ಹಾಲುತುಪ್ಪದ ಮಿಶ್ರಣವನ್ನು ಸವರಬೇಕು. ಎರಡು ಸಲ ಅಕ್ಕಿಯನ್ನು ಹಾಕಬೇಕು. ಪುನಃ ಎರಡು ಸಲ ಮಿಶ್ರಣವನ್ನು ಸವರಬೇಕು. ದಾತಾ ಅಥವಾ ಇನ್ನಾರಾದರೂ ಹೀಗೆಯೇ ವರನ ಅಂಜಲಿಯಲ್ಲಿ ಮಾಡಬೇಕು. ಬಳಿಕ ದಾತನು ಇಬ್ಬರ ಬೊಗಸೆಗಳಲ್ಲೂ ಸುವರ್ಣವನ್ನಿಟ್ಟು ಕನ್ಯಾಂಜಲಿಯ ಮೇಲೆ ವರಾಂಜಲಿಯನ್ನಿಟ್ಟು **"ಕನ್ಯಾ ತಾರಯತು ಸಂಪದಸ್ತು"** ಎಂದು ಹೇಳಿ ವಧುವನ್ನು ಎಬ್ಬಿಸಬೇಕು. ಅವಳು **"ಭಗೋ ಮೇ ... ಧ್ಯತಾಂ"** ಎಂದು ಹೇಳುತ್ತ ವರನ ತಲೆಯ ಮೇಲೆ ಅಕ್ಷತೆಯನ್ನು ಹಾಕಬೇಕು.

**ತ್ಕನ್ಯಾ ತಾರಯತ್ವಿತ್ಯಾದಿ ವಾಕ್ಯಷಟ್ಕಂ ವದೇತ್ ॥ ತತೋ ವರಃ ಯಚ್ಛೋ ಮೇ ಕಾಮಃ ಸಮೃಧ್ಯತಾಂ ॥ ವಧೂ ತು ಭಗೋ ಮೇ ಕಾಮಃ ಸಮೃಧ್ಯತಾಂ ಇತಿ ॥ ಏವಂ ಪುನರ್ದ್ವಿಃ ॥ ತತ್ರ ದ್ವಿತೀಯೇ ಧರ್ಮೋ ಮೇ ಕಾಮಃ ಸಮೃ- ಧ್ಯತಾಂ ಇತಿ ವರಃ ॥ ಶ್ರಿಯೋ ಮೇ ಕಾಮಃ ಸಮೃಧ್ಯತಾಂ ಇತಿ ವಧೂಃ ॥ ತೃತೀಯೇ ಯಶೋ ಮೇ ಕಾಮಃ ಸಮೃಧ್ಯತಾಂ ಇತಿ ವರಃ ॥ ಪ್ರಜಾ ಮೇ ಕಾಮಃ ಸಮೃಧ್ಯತಾಂ ಇತಿ ವಧೂಃ ॥ ಅಥ ವರೋ ವಧ್ವಂಜಲಿಂ ಪೂರ್ವ ವದಾಪೂರ್ಯ ಸ್ವಾಂಜಲಿಮನ್ಯೇನ ಪೂರಯಿತ್ವಾ ಉಭೌ ವಧೂಪೂರ್ವಕಂ ಕ್ಷೀರಘೃತೇನಾಪ್ಲಾವ್ಯ ತೇನ ಕನ್ಯಾಲಲಾಟೇ ತಿಲಕಂ ಕುರ್ಯಾತ್ ॥ ಸಾಪಿ ಸ್ವಶಿರಃ ಪುಷ್ಪೇಣ ತಥೈವ ವರಲಲಾಟೇ ತಿಲಕಂ ಕೃತ್ವಾ ॥ ಪುಷ್ಪಮಾಲಾಂ ವರಕಂಠೇ ನಿದಧ್ಯಾತ್ ವರೋಽಪಿ ಕನ್ಯಾಕಂಠೇ ॥**

**ಮಂಗಲಸೂತ್ರಬಂಧನಂ:- ತತೋ ವರಪಕ್ಷಸುವಾಸಿನ್ಯಃ ವಧೂವರೌ ಪ್ರಾಙ್ಮುಖಾವುಪವೇಶ್ಯಾಚಾರಪ್ರಾಪ್ತಂ ಅಷ್ಟಪುತ್ರೀಸಂಜ್ಞಕಂ ವಸ್ತ್ರದ್ವಯಂ ಸಕಂ- ಚುಕಂ ಕೃಷ್ಣಮಣಿಸೂತ್ರಯುತಂ ವಧ್ವೈ ಸಮರ್ಪ್ಯ ತಾಮೇಕಂ ಪರಿಧಾಪ್ಯ ಅಪರ- ಮುತ್ತರೀಯಂ ಕುರ್ಯಾತ್ ॥ ತತೋ ವರಸ್ತತ್ಸೂತ್ರಂ ॥ ಮಾಂಗಲ್ಯತಂತುನಾನೇನ ಭರ್ತೃಜೀವನಹೇತುನಾ ॥ ಕಂಠೇ ಬಧ್ನಾಮಿ ಸುಭಗೇ ಸಾಜೀವ ಶರದಃ ಶತಂ ॥ ಇತಿ ಮಂತ್ರೇಣೇಷ್ಟದೇವತಾಂ ಸ್ಮರನ್ ವಧೂಕಂಠೇ ಬಧ್ನೀಯಾತ್ ॥ ಭೂಷಣೈಶ್ಚ ಆಯುಷ್ಯಂ ವರ್ಚಸ್ಯಮಿತಿ ಸೂಕ್ತಂ ಪಠನ್ ಭೂಷಯೇತ್ ॥ ತತೋ**

---

ವರನು ತನ್ನ ಕೈಯಲ್ಲಿರುವ ಅಕ್ಷತೆಗಳನ್ನು "**ಯಚ್ಛೋ ಮೇ ...**" ಎಂದು ವಧುವಿನ ತಲೆಯ ಮೇಲೆ ಹಾಕಬೇಕು. ಹೀಗೆ ಇನ್ನೆರಡು ಸಲ ಅಕ್ಷತಾರೋಪಣ ಮಾಡಬೇಕು. ಎರಡನೆಯ ಸಲ ವಧುವು "**ಶ್ರಿಯೋ**" ಎಂದೂ ವರನು "**ಧರ್ಮೋ ...**" ಎಂದೂ ಮೂರನೆಯ ಸಲ ವಧು "**ಪ್ರಜಾ**" ವರ "**ಯಶೋ**" ಎಂದು ಹೇಳಬೇಕು. ಆಮೇಲೆ ಮೊದಲಿನಂತೆ ಕನ್ಯೆಯು ವರನ ಅಂಜಲಿಯನ್ನೂ, ಕನ್ಯೆಯ ಅಂಜಲಿಯನ್ನು ಬೇರೆ ಯಾರಾದರೊಬ್ಬನು ತುಂಬಿಸಿ, ಕನ್ಯೆಯ ಅಂಜಲಿಯನ್ನು, ವರನ ಅಂಜಲಿಯ ಮೇಲಿಟ್ಟು "**ಕನ್ಯಾ ತಾರಯತು**" ಇತ್ಯಾದಿಗಳನ್ನು ಹೇಳಿ ವರನು **1) ಭಗೋ ಮೇ ... 2) ಶ್ರಿಯೋ ಮೇ ... 3) ಪ್ರಜಾ ಮೇ ...** ಎಂದೂ ಹೇಳಬೇಕು. ನಂತರ ಮತ್ತೊಮ್ಮೆ ವರನು ಮೊದಲಿನಂತೆ ವಧುವಿನ ಅಂಜಲಿಯನ್ನು ತುಂಬಿಸಿ, ತನ್ನ ಅಂಜಲಿಯನ್ನು ಇತರರಿಂದ ತುಂಬಿಸಿ ಇಬ್ಬರೂ ಮಂತ್ರವಿಲ್ಲದೆ ಅಕ್ಷತೆಗಳನ್ನು ಹಾಕಬೇಕು. ಮೊದಲು ವಧು, ಆಮೇಲೆ ವರ. ಬಳಿಕ ವರನು ತನ್ನ ತಲೆಯ ಮೇಲಿಂದ ಒಂದೂ ಹೂ ತೆಗೆದು ಹಾಲಿನಲ್ಲಿ ಅದ್ದಿ ಅದರಿಂದ ವಧುವಿನ ಹಣೆಗೆ ತಿಲಕವಿಡಬೇಕು. ಹಾಗೆಯೇ ವಧುವೂ ಮಾಡಿ ವರನ ಕುತ್ತಿಗೆಗೆ ಮಾಲೆ ಹಾಕಬೇಕು. ವರನು ವಧುವಿನ ಕಂಠಕ್ಕೆ ಮಾಲೆ ಹಾಕಬೇಕು.

**ವಿವಾಹವ್ರತನಿರ್ವಿಘ್ನತಾರ್ಥಂ ವಧೂವರೌ ಗಣಾನಾಂತ್ವಾ ... ಇತಿ ಮಂತ್ರೇಣ ಹರಿದ್ರಾಖಂಡಯುತಪಂಚಪೂಗೀಫಲಾನಿ ಲಡ್ಡುಕಾದಿ ನಿಧಾಯ ಷೋಡಶೋಪ-ಚಾರೈಃ ಸಂಪೂಜ್ಯ ಪುನಃಪೂರ್ವೋಕ್ತಮಂತ್ರೇಣ ದಂಪತ್ಯೋರುತ್ತರೀಯಾಂತಯೋಃ ಪೃಥಗ್ಬಧ್ನೀಯಾತ್ ॥ ತತಃ ಪುರೋಧಾಃ ನೀಲಲೋಹಿತಮಿತಿ ಮಂತ್ರೇಣ ತಯೋರುತ್ತರೀಯಾಂತೌ ಮಿಥೋ ಬಧ್ನೀಯಾತ್ ॥ ತತಃ ಸಭಾರ್ಯೋ ದಾತಾ ವೃದ್ಧಾಃ ಪುರಂಧ್ರ್ಯೋ ಜ್ಞಾತಿಬಾಂಧವಾಶ್ಚ ಕ್ರಮಾದಾಶೀರ್ಭಿರಾದ್ರಾಕ್ಷತಾರೋಪಣಂ ಕುರ್ಯುಃ (ಅತ್ರ ಕೌಸ್ತುಭೇ ಪ್ರಯೋಗರತ್ನೇ ಚ ಮಹಾಲಕ್ಷ್ಮ್ಯಾದಿ ಪೂಜನಪೂರ್ವಂ ವಾಯನದಾನಾದ್ಯುಕ್ತಮಸ್ತಿ) ತತೋ ವಧೂವರೌ ಪರಸ್ಪರಹಸ್ತಧಾರಣೇನೋಕ್ತ-ಲಕ್ಷಣಾಂ ವೇದಿಂ ಮಂತ್ರಘೋಷೇಣ ಗಚ್ಛೇತಾಂ ॥**

**॥ ಇತಿ ಅಕ್ಷತಾರೋಪಣಂ ಸಮಾಪ್ತಂ ॥**

---

**ಮಂಗಲಸೂತ್ರಬಂಧನ:-** ಬಳಿಕ ವರನ ಕಡೆಯ ಮುತ್ತೈದೆಯರು ವಧೂವರರನ್ನು ಪೂರ್ವಕ್ಕೆ ಮುಖಮಾಡಿ ಕುಳ್ಳಿರಿಸಿ, ವಧುವಿಗೆ ಅಷ್ಟಪುತ್ರೀ ಸಂಕೇತದ ಎರಡು ಸೀರೆಗಳನ್ನೂ, ಒಂದು ಕುಪ್ಪಸವನ್ನೂ, ಕರಿಮಣಿಗಳುಳ್ಳ ಒಂದು ಮಂಗಲಸೂತ್ರವನ್ನೂ ಒಪ್ಪಿಸಿ, ಒಂದು ಸೀರೆಯನ್ನು ಉಡಿಸಿ, ಕುಪ್ಪಸ ತೊಡಿಸಿ, ಮತ್ತೊಂದನ್ನು ಉತ್ತರೀಯದಂತೆ ಮೈಮೇಲೆ ಹೊದಿಸಬೇಕು. ಆಮೇಲೆ ವರನು **"ಮಾಂಗಲ್ಯತಂತುನಾ ... ಶತಂ"** ಎಂದು ಹೇಳಿ ತನ್ನ ಇಷ್ಟದೇವತೆಯನ್ನು ಸ್ಮರಿಸುತ್ತ ವಧುವಿನ ಕುತ್ತಿಗೆಗೆ ಕಟ್ಟಬೇಕು. **"ಆಯುಷ್ಯಂ ವರ್ಚಸ್ಯಂ ..."** ಎಂಬ ಸೂಕ್ತವನ್ನು ಹೇಳಿ ಆಭರಣಗಳನ್ನು ತೊಡಿಸಬೇಕು. ಬಳಿಕ ವಿವಾಹವ್ರತನಿರ್ವಿಘ್ನತೆಗೆಂದು **"ಗಣಾನಾಂತ್ವಾ...."** ಎಂಬ ಮಂತ್ರದಿಂದ ಅರಸಿನ ತುಂಡು, ಐದು ಅಡಿಕೆ ಮತ್ತು ಲಾಡು ಮುಂತಾಮವುಗಳನ್ನಿಟ್ಟು ಷೋಡಶೋಪಚಾರಗಳಿಂದ ಗಣಪತಿ ಪೂಜೆಯನ್ನು ಮಾಡಿ ಮೊದಲು ಹೇಳಿದ ಮಂತ್ರಗಳಿಂದ ಅರಿಸಿನ, ಅಡಿಕೆ ಇತ್ಯಾದಿಗಳನ್ನು ದಂಪತಿಗಳ ಸೆರಗಿನ ತುದಿಗೆ ಗಂಟುಕಟ್ಟಬೇಕು. ಆಮೇಲೆ ಪುರೋಹಿತನು **"ನೀಲಲೋಹಿತಂ..."** ಎಂಬ ಮಂತ್ರವನ್ನು ಹೇಳಿ ಆ ಸೆರಗಿನ ತುದಿಗಳನ್ನು ಒಂದು ಮಾಡಿ ಕಟ್ಟಬೇಕು. ಆಮೇಲೆ ಪತ್ನೀಸಮೇತನಾದ ದಾತೃವು ಮತ್ತು ವೃದ್ಧರು, ಮುತ್ತೈದೆಯರು, ಬಂಧುಬಾಂಧವರು ಆಶೀರ್ವಾದಪೂರ್ವಕ ಆದ್ರಾಕ್ಷತೆಗಳನ್ನು ಹಾಕಬೇಕು. (ಇಲ್ಲಿ ಕೌಸ್ತುಭ ಮತ್ತು ಪ್ರಯೋಗರತ್ನದ ಪ್ರಕಾರ ಮಹಾಲಕ್ಷ್ಮೀ, ಪಾರ್ವತೀ ಶಚೀಮುಂತಾದವರನ್ನು ಷೋಡಶೋಪಚಾರಗಳಿಂದ ಪೂಜಿಸಿ ವಧುವು ಸುವಾಸಿನಿಯರಿಗೆ ವಾಯನದಾನಗಳನ್ನು ಕೊಡಬೇಕೆಂದು ಹೇಳಿದೆ.) ಬಳಿಕ ವಧೂವರರು ಪರಸ್ಪರ ಕೈ ಹಿಡಿದು ಮಂತ್ರಘೋಷಣೆಯೊಂದಿಗೆ ವೇದಿಕೆಯ ಬಳಿಗೆ ಹೋಗಬೇಕು.

# ॥ ವಿವಾಹ ಹೋಮಃ ॥

ಶ್ರೀಃ ॥ ವರೋ ವೇದ್ಯಾಂ ಪ್ರಾಙ್ಮುಖ ಉಪವಿಶ್ಯ ಸ್ವದಕ್ಷಿಣತೋ ನಿಯಮಿತವಾಚಂ ವಧೂಂ ಚ ಉಪವೇಶ್ಯ ದ್ವಿರಾಚಮ್ಯ ಪ್ರಾಣಾನಾಯಮ್ಯ ದೇಶಕಾಲೌ ಸಂಕೀರ್ತ್ಯ ಪ್ರತಿಗೃಹೀತಾಯಾಮಸ್ಯಾಂ ವಧ್ವಾಂ ಭಾರ್ಯಾತ್ವ-ಸಿದ್ಧಯೇ ಗೃಹಾಗ್ನಿಸಿದ್ಧಯೇ ಚ ವಿವಾಹಹೋಮಂ ಕರಿಷ್ಯೇ ॥ ತದಂಗ ಸ್ಥಂಡಿಲೋಲ್ಲೇಪನಾದಿ ಯೋಜಕನಾಮಾಗ್ನಿಪ್ರತಿಷ್ಠಾಪನಾಂತಂ ಕೃತ್ವಾ ಅಗ್ನೇಃ ಪ್ರತ್ಯಗ್ ದೃಷದಂ ಸೋಪಲಾಂ ಪ್ರತಿಷ್ಠಾಪ್ಯ ಪ್ರಾಗುದೀಚ್ಯಾಂ ಧಾನ್ಯರಾಶೇರು-ಪರಿ ಉದಕಪೂರ್ಣಂ ಕುಂಭಂ ನಿಧಾಯ ತಂ ಪಲ್ಲವೈರಪಿಧಾಯ ಗಂಧಪುಷ್ಪೈ-ರಲಂಕೃತ್ಯ ಉದಗಗ್ನೇಃ ಪ್ರಾಕ್ಸಂಸ್ಥಂ ಸಪ್ತತಂಡುಲರಾಶೀನುಪಕಲ್ಪ್ಯ ಸಮಿದ್ವಯ-ಮಾದಾಯ ಕ್ರಿಯಮಾಣೇ ವಿವಾಹಹೋಮೇ ದೇವತಾಪರಿಗ್ರಹಾರ್ಥಮಿತ್ಯಾ-ದ್ಯಾಘಾರಾವಾಜ್ಯೇನ ॥ ಅತ್ರ ಪ್ರಧಾನಂ ತ್ರಿರಗ್ನಿಂ ಪವಮಾನಂ ಸಕೃದಗ್ನಿಂ ಪ್ರಜಾಪತಿಂ ಚಾಜ್ಯೇನ ಅರ್ಯಮಾಗ್ನಿಂ ವರುಣಾಗ್ನಿಂ ಪೂಷಾಗ್ನಿಂ ಪ್ರಜಾಪತಿಂ ಚ ಲಾಜದ್ರವ್ಯೇಣ ಶೇಷೇಣ ಸ್ವಿಷ್ಟಕೃತಮಿತ್ಯಾದಿ ಷಟ್ ಪಾತ್ರಾಸಾದನಾಂತಂ ಕೃತ್ವಾ ಪಾತ್ರಪಶ್ಚಿಮತೋ ಲಾಜಶೂರ್ಪಮಾಸಾದ್ಯ ಆಜ್ಯಾಧಿಶ್ರಪಣಾಂತಂ ಕೃತ್ವಾ

---

**ವಿವಾಹ ಹೋಮಃ**:- ವರನು ಹೋಮವೇದಿಯ ಬಳಿಯಲ್ಲಿ ಪೂರ್ವಮುಖವಾಗಿ ವಧುವಿನೊಡನೆ ಕುಳಿತು ಆಚಮನಾದಿಗಳನ್ನು ಮಾಡಿ, **"ಪ್ರತಿಗೃಹೀತಾಯಾಂ .... ಕರಿಷ್ಯೇ"** ಎಂದು ಸಂಕಲ್ಪ ಮಾಡಿ, ಸ್ಥಂಡಿಲಸಂಸ್ಕಾರಾದಿಗಳನ್ನು **"ಯೋಜಕ"** ಅಗ್ನಿಪ್ರತಿಷ್ಠಾಪನಾಪೂರ್ವಕಮಾಡಿ ಅಗ್ನಿಯ ಪಶ್ಚಿಮದಲ್ಲಿ ಅಗಲವಾದ ಒಂದು ಕಲ್ಲು ಮತ್ತು ಒಂದು ಗುಂಡುಕಲ್ಲು, ಈಶಾನ್ಯದಿಕ್ಕಿನಲ್ಲಿ ಅಕ್ಕಿರಾಶಿಯ ಮೇಲೆ ನೀರು ತುಂಬಿದ ಕೊಡವನ್ನಿಟ್ಟು ಗಂಧಪುಷ್ಪಾದಿಗಳಿಂದ ಅಲಂಕರಿಸಿ ಪಲ್ಲವಗಳಿಂದ ಅದರ ಬಾಯಿಮುಚ್ಚಿ, ಅಗ್ನಿಯ ಉತ್ತರದಿಕ್ಕಿನಲ್ಲಿ ಏಳು ಅಕ್ಕಿಯ ರಾಶಿಗಳನ್ನು ನಿರ್ಮಿಸಿ, **"ಕ್ರಿಯಮಾಣೇ"** ಎಂದು ಮೊದಲಾಗಿ ಅನ್ವಾಧಾನ ಮಾಡಬೇಕು. **"ಅತ್ರ ಪ್ರಧಾನಂ"** ಎಂದು ಪ್ರಧಾನ ಹೋಮವನ್ನೂ ಹೇಳಿ ಶೇಷೇಣ ಸ್ವಿಷ್ಟಕೃತವೆಂದು ಮೊದಲ್ಗೊಂಡು ಆರು ಪಾತ್ರೆಗಳಿರುವ ಪಾತ್ರಾಸಾದನದ ವರೆಗಿನ ಕರ್ಮಭಾಗವನ್ನು ಸ್ಥಾಲೀಪಾಕದಲ್ಲಿ ಹೇಳಿದಂತೆ ಮಾಡಿ; ಆ ಪಾತ್ರೆಗಳ ಪಡುಭಾಗದಲ್ಲಿ ಅರಳುತುಂಬಿದ ಶೂರ್ಪವನ್ನಿಟ್ಟು, ಆಜ್ಯಸಂಸ್ಕಾರಾದಿಗಳನ್ನು ಪೂರಯಿಸಿ ಅರಳಿನೊಂದಿಗೆ ಆಜ್ಯವನ್ನೂ ಮೂರು ಸಲ ಪರ್ಯಗ್ನಿಕರಣಮಾಡಿ, ಆಜ್ಯೋತ್ಪವನವನ್ನೂ ಮಾಡಿ ಅರಳನ್ನು ಮೂರು ಸಲ ಪ್ರೋಕ್ಷಿಸಿ, ವಧುವು ವರನ ಹಸ್ತವನ್ನು ಮುಟ್ಟುತ್ತಿದ್ದಂತೆ ಬರ್ಹಿಯನ್ನು ಹರಡುವಲ್ಲಿಂದ ಅಘಾರಹೋಮದವರೆಗೆ ಮಾಡಬೇಕು. ಆಮೇಲೆ ಈ ಮುಂದಿನ ಮಂತ್ರಗಳಿಂದ ಪ್ರಧಾನಹೋಮವನ್ನು ಮಾಡಬೇಕು.

**ಆಜ್ಯಂ ಲಾಜೈಃ ಸಹ ತ್ರಿಃ ಪರ್ಯಗ್ನಿಕೃತ್ವಾಜ್ಯೋತ್ಪವನೇಕೃತೇ ಲಾಜಾಂಸ್ತ್ರಿಃ ಪ್ರೋಕ್ಷ್ಯ ವಧ್ವಾನ್ವಾರಬ್ಧ ಬರ್ಹಿರಾಸ್ತರಣಾದ್ಯಾಘಾರಹೋಮಾಂತಂ ಕೃತ್ವಾ ॥ ಆಜ್ಯಭಾಗೌ ನ ಸ್ತಃ ॥ ಅತ್ರಪ್ರಧಾನ ಹೋಮಃ ॥**

**ಅಗ್ನ ಆಯೂಂಷೀತಿ ತಿಸೃಣಾಂ ಶತಂ ವೈಖಾನಸಾ ಋಷಯಃ ಅಗ್ನಿಃ ಪವಮಾನೋ ದೇವತಾ ಗಾಯತ್ರೀಛಂದಃ ವಿವಾಹಪ್ರಧಾನಾಜ್ಯಹೋಮೇ ವಿನಿಯೋಗಃ ॥ ಓಂ ಅಗ್ನ ಆಯೂಂಷಿ ... ಸ್ವಾಹಾ ॥ ಅಗ್ನಯೇ ಪವಮಾನಾಯೇದಂ ನ ಮಮ ॥ ಓಂ ಅಗ್ನಿರ್ಋಷಿಃ ... ಸ್ವಾಹಾ ॥ ಅಗ್ನಯೇ ..... ನ ಮಮ ॥ ಓಂ ಅಗ್ನೇ ಪವಸ್ವ ....... ಸ್ವಾಹಾ ॥ ಅಗ್ನಯೇ ...... .... ನ ಮಮ ॥ ತ್ವಮರ್ಯಮಾ ವಸುಶ್ರುತೋಗ್ನಿಸ್ತ್ರಿಷ್ಟುಪ್ ॥ ವಿವಾಹಪ್ರಧಾನಾಜ್ಯ-ಹೋಮೇವಿನಿಯೋಗಃ ॥ ಓಂ ತ್ವಮರ್ಯಮಾಭವಸಿಯತ್ಕನೀನಾಂ ನಾಮ-ಸ್ವಧಾವನ್ಗುಹ್ಯಂಬಿಭರ್ಷಿ ॥ ಅಂಜಂತಿಮಿತ್ರಂ ಸುಧಿತನ್ನಗೋಭಿರ್ಯದ್ದಂಪತೀ ಸಮನಸಾಕೃಣೋಷಿ ಸ್ವಾಹಾ ಅಗ್ನಯ ಇದಂ ನ ಮಮ ॥ ಪ್ರಜಾಪತೇ ಹಿರಣ್ಯಗರ್ಭಃ ಪ್ರಜಾಪತಿಸ್ತ್ರಿಷ್ಟುಪ್ ॥ ವಿವಾಹಪ್ರಧಾನಾ ... ॥ ಓಂ ಪ್ರಜಾಪತೇನ ... ಸ್ವಾಹಾ ॥ ಪ್ರಜಾಪತಯ ಇದಂ ನ ಮಮ ॥ ಏವಂ ಪಂಚಾಜ್ಯಾಹುತೀರ್ಹುತ್ವಾ ॥ ಪಾಣಿಗ್ರಹಃ ॥ ಪ್ರಾಙ್ಮುಖೋಪವಿಷ್ಟಾಯಾಃ**

---

**"ಅಗ್ನ ಆಯೂಂಷಿ ..."** ಎಂಬಲ್ಲಿಂದ **"ಪ್ರಜಾಪತೇ ....."** ಎಂಬಲ್ಲಿ ವರೆಗೆ ಐದು ಆಜ್ಯಾಹುತಿಗಳನ್ನು ಹೋಮಮಾಡಿದ ಮೇಲೆ ಮೂಡುಮುಖವಾಗಿ ಕುಳಿತ ಪತ್ನಿಯ ಮುಂದೆ ಪಡುಮುಖವಾಗಿ ನಿಂತು **"ಗೃಭ್ಣಾಮಿ ತೇ ..."** ಎಂಬ ಮಂತ್ರದಿಂದ ಅವಳ ಮೇಲ್ಮುಖಿ ವಾಗಿರುವ ಬಲಗೈಯನ್ನು ಹೆಬ್ಬೆರಳು ಸಹಿತ ತನ್ನ ಮೇಲ್ಮುಖವಾದ ಕೈಯಿಂದ ಹಿಡಿಯಬೇಕು. ನಂತರ ಮೊದಲಿದ್ದಲ್ಲಿಗೆ ಬಂದು ಪತ್ನಿಯನ್ನು ಎದ್ದುನಿಲ್ಲಿಸಿ ಅವಳ ಕೈತೊಳೆದು ಬೊಗಸೆಮಾಡಿ ಅದರಲ್ಲಿ ಸ್ರುವದಿಂದ ಅಭಿಘಾರಮಾಡಿ ಅವಳ ಸಹೋದರ ಅಥವಾ ಇತರ ಯಾರಾದರೊಬ್ಬನಿಂದ ಶೂರ್ಪದಿಂದ ಎರಡು ಸಲ ಒಂದೊಂದು ಮುಷ್ಟಿ ಅರಳನ್ನು ಹಾಕಿಸಬೇಕು. ತಾನು ಪಂಚಪ್ರವರದವನಾದರೆ ಮೂರು ಸಲ ಹಾಕಿಸಬೇಕು. ಅಂಜಲಿಯಲ್ಲಿರುವ ಅರಳನ್ನೂ, ಶೂರ್ಪದಲ್ಲಿರುವುದನ್ನೂ ಅಭಿಘಾರ ಮಾಡಿ.

ಪುರತಃ ಪ್ರತ್ಯಙ್ಮುಖಸ್ತಿಷ್ಠನ್ ॥ ಗೃಭ್ಣಾಮೀತಿ ಸೂರ್ಯಾಸಾವಿತ್ರೀ ಸೂರ್ಯಾ-ಸಾವಿತ್ರೀ ತ್ರಿಷ್ಟುಪ್ ॥ ವಧೂಪಾಣಿಗ್ರಹಣೇವಿನಿಯೋಗಃ ॥ ಓಂ ಗೃಭ್ಣಾಮಿ ತೇ ಸೌಭಗತ್ವಾಯಹಸ್ತಂ ಮಯಾಪತ್ಯಾಜರದಷ್ಟಿರ್ಯಥಾಸಃ ॥ ಭಗೋಅರ್ಯಮಾಸ-ವಿತಾಪುರಂಧಿರ್ಮಹ್ಯಂತ್ವಾದುರ್ಗಾರ್ಹಪತ್ಯಾಯದೇವಾಃ ॥ ಇತಿ ಮಂತ್ರೇಣ ಭಾರ್ಯಾಯಾ ಉತ್ತಾನಂ ಸಾಂಗುಷ್ಠಂ ದಕ್ಷಿಣಪಾಣಿಮುತ್ತಾನೇನ ದಕ್ಷಿಣ ಹಸ್ತೇನ ಗೃಹ್ಣೀಯಾತ್ ॥

ಲಾಜಹೋಮಃ– ಪರಿಣಯನಂ-ಅಶ್ಮಾರೋಹಶ್ಚ ॥ ತತೋ ವಧೂ-ಮುತ್ಥಾಪ್ಯ ತಯಾ ಕರೌ ಕ್ಷಾಲಯಿತ್ವಾ ಅಂಜಲಿಂ ಕಾರಯಿತ್ವಾ ಪ್ರಾಙ್ಮುಖ್ಯಾಃ ತಸ್ಯಾ ಅಂಜಲೌ ವರಃ ಸ್ರುವೇಣಾಜ್ಯಮುಪಸ್ತೀರ್ಯ ವಧೂಭ್ರಾತ್ರಾ ತತ್ ಸ್ಥಾನೀಯೇನ ಪಿತೃವ್ಯಪುತ್ರಾದಿನಾ ವಾ ತಿಷ್ಠತಾ ಶೂರ್ಪಸ್ಥಾನ್ ಲಾಜಾನ್ ಮುಷ್ಟ್ಯಾ ದ್ವಿರೋಪ್ಯ ಸ್ವಯಂ ಪಂಚಾವತ್ತೀ ಚೇತ್ ತ್ರಿವಾರಮೋಪ್ಯ ಶೂರ್ಪಸ್ಥಾನಭಿಘಾರ್ಯ ಅಂಜಲಿ-ಸ್ಥಾನಪಿ ಸಕೃದಭಿಘಾರ್ಯ ॥

ಅರ್ಯಮಣಂ ನು ವಾಮದೇವೋಽರ್ಯಮಾಗ್ನಿರನುಷ್ಟುಪ್ ॥ ವಿವಾಹ-ಪ್ರಧಾನಲಾಜಹೋಮೇ ವಿನಿಯೋಗಃ ॥ ಓಂ ಅರ್ಯಮಣಂ ನು ದೇವಂಕನ್ಯಾ-ಅಗ್ನಿಮಯಕ್ಷತ ॥ ಸ ಇಮಾಂದೇವೋಅರ್ಯಮಾ ಪ್ರೇತೋಮುಂಚಾತುನಾಮುತ-ಸ್ವಾಹಾ ॥ ಇತಿ ಮಂತ್ರಂ ಪಠನ್ ತಿಷ್ಠನ್ ತಿಷ್ಠಂತ್ಯಾ ಧೃತಾಂಜಲಿ ರಂಜಲ್ಯವಿಚ್ಛೇದೇನಾಂಗುಲ್ಯಗ್ರೈರಂಗುಲಿಪಾರ್ಶ್ವೇಣ ವಾ ಹಾವಯೇತ್ ॥ ವರಃ ॥

---

"**ಅರ್ಯಮಣಂ ನು**" ಎಂಬ ಮಂತ್ರವನ್ನು ಹೇಳುತ್ತ ವರನು ತಾನು ನಿಂತು ಕೊಂಡು, ನಿಂತಿರುವ ವಧುವಿನ ಅಂಜಲಿಯನ್ನು ಹಿಡಿದು ಅವಳ ಬೆರಳ ತುದಿಗಳಿಂದ ಲಾಜಾಹುತಿಯು ಅಗ್ನಿಯಲ್ಲಿ ಬೀಳುವಂತೆ ಮಾಡಿ, "**ಅರ್ಯಮ್ಣೇ ... ನಮಮ**" ಎಂದು ಹೇಳಬೇಕು. ಬಳಿಕ ಅಗ್ನಿಯ ಬಳಿ ಇಟ್ಟ ಕಲ್ಲುಗಳನ್ನು ಬಿಟ್ಟು ಅಗ್ನಿ ಉದಕುಂಭ ಇತ್ಯಾದಿಗಳಿಗೆ ತಾನು ಮುಂದೆ ಹೋಗುತ್ತ ವಧುವು ಪ್ರದಕ್ಷಿಣೆ ಬರುವಂತೆ ಮಾಡುತ್ತ "**ಓಂ ಅಮೋಹಮಸ್ಮಿ...ಶರದಃ ಶತಂ**" ಎಂಬ ಮಂತ್ರವನ್ನು ಜಪಿಸಬೇಕು. ಆಮೇಲೆ "**ಓಂ ಇಮಮಶ್ಮಾನಂ ....**" ಎಂಬ ಮಂತ್ರವನ್ನು ಹೇಳುತ್ತ ವಧುವನ್ನು ಎರಡೂ ಕಾಲುಗಳು ಕಲ್ಲಿನ ಮೇಲಿರುವಂತೆ ಅದರ ಮೇಲೆ ಹತ್ತಲು ಹೇಳಬೇಕು.

**ಅರ್ಯಮ್ಣೇಗ್ನಯ ಇದಂ ನ ಮಮ । ತತೋ ದೃಷದುಪಲವರ್ಜಮಗ್ನಿ-ಮುದಕುಂಭಪಾತ್ರಾಣಿ ಚ ವಧೂಂ ಪ್ರದಕ್ಷಿಣಂ ಪರಿಣಯನ್ ಸ್ವಯಮಗ್ರೇ ಗಚ್ಛನ್ ಜಪೇತ್ ॥ ಓಂ ಅಮೋಹಮಸ್ಮಿ ಸಾ ತ್ವಂ ಸಾತ್ವಮಸ್ಯಮೋಹಂ ದ್ಯೌರಹಂ ಪೃಥಿವೀ ತ್ವಂ ಸಾಮಾಹಮೃಕ್ತ್ವಂ ತಾವೇಹವಿವಹಾವಹೈ ॥ ಪ್ರಜಾಂ ಪ್ರಜನಯಾವಹೈ ಸಂಪ್ರಿಯೌ ರೋಚಿಷ್ಣೂ ಸುಮನಸ್ಯಮಾನೌ ಜೀವೇವ ಶರದಃ ಶತಂ ॥ ತತೋ ವಧೂಂ ಪ್ರಾಙ್ಮುಖೀಂ ದ್ವಾಭ್ಯಾಮಪಿ ಪಾದಾಭ್ಯಾಂ ॥ ದೃಷದಂ ಇಮಮಶ್ಮಾನಂ ವಾಮ ದೇವೋ ವಧೂರನುಷ್ಟುಪ್ ॥ ಅಶ್ಮಾರೋಹಣೇ ವಿನಿಯೋಗಃ ॥ ಓಂ ಇಮಮಶ್ಮಾನಮಾರೋಹಾಶ್ಮೇವ ತ್ವಂ ಸ್ಥಿರಾ ಭವ ॥ ಸಹಸ್ವಪೃತನಾಯಶೋಭಿತಿಷ್ಠಪೃತನ್ಯತಃ ॥ ಇತಿ ಮಂತ್ರೇಣಾರೋಹಯೇತ್ ॥ ಪುನಃ ಪೂರ್ವವದಂಜಲ್ಯುಪಸ್ತರಣಾದಿ ಕೃತ್ವಾ ॥ ವರುಣಂನು ವಾಮದೇವೋ ವರುಣಾಗ್ನಿರನುಷ್ಟುಪ್ ॥ ವಿವಾಹಪ್ರಧಾನಲಾಜಹೋಮೇ ವಿನಿಯೋಗಃ ॥ ಓಂ ವರುಣಂನು ದೇವಂಕನ್ಯಾಅಗ್ನಿಮಯಕ್ಷತ ॥ ಸ ಇಮಾಂದೇವೋವರುಣಃ ಪ್ರೇತೋ ಮುಂಚಾತುನಾಮುತಸ್ವಾಹಾ ॥ ಇತಿ ಪೂರ್ವವದ್ಧಾವಯಿತ್ವಾ ವರುಣಾಗ್ನಯ ಇದಂ ನ ಮಮ ॥ ಪುನರಮೋಹಮಸ್ಮೀತಿ ಪೂರ್ವವತ್ಪರಿಣೀಯ ಇಮಮಶ್ಮಾನಮಿತ್ಯಶ್ಮಾನಮಾರೋಹಯೇತ್ ॥ ಪುನಃ ಪೂರ್ವವದಂಜಲ್ಯುಪ-ಸ್ತರಣಾದಿ ॥ ಪೂಷಣಂ ನು ವಾಮದೇವಃ ಪೂಷಾಗ್ನಿರನುಷ್ಟುಪ್ ವಿವಾಹ-ಪ್ರಧಾನಲಾಜಹೋಮೇ ವಿನಿಯೋಗಃ ॥ ಓಂ ಪೂಷಣಂನು ದೇವಂ ಕನ್ಯಾ**

---

ಪುನಃ ಮೊದಲಿನಂತೆ ಅಂಜಲಿಗೆ ಅಭಿಘಾರ ಇತ್ಯಾದಿಗಳನ್ನು ಮಾಡಿ ಅರಳನ್ನು ಬೊಗಸೆಯಲ್ಲಿ ಹಾಕಿಸಿ, ಅಭಿಘಾರ ಮಾಡಿ, "**ಓಂ ವರುಣಂನು...**" ಎಂಬ ಮಂತ್ರವನ್ನು ಹೇಳಿ, ವಧುವಿನ ಅಂಜಲಿಯಿಂದ ಆಹುತಿ ಮಾಡಿಸಿ, "**ವರುಣಾಗ್ನಯ ....**" ಎಂದು ಹೇಳಿ ಮೊದಲಿನಂತೆ ಮಂತ್ರಗಳನ್ನು ಹೇಳುತ್ತ ಪ್ರದಕ್ಷಿಣೆ-ಅಶ್ಮಾರೋಹಣ ಮುಂತಾದವನ್ನು ಮಾಡಿಸಬೇಕು.

ಮೂರನೆಯ ಸಲ "**ಪೂಷಣಂ ನು .....**" ಎಂಬ ಮಂತ್ರವನ್ನು ಹೇಳಿ, ಅರಳಿನ ಆಹುತಿಯನ್ನು ಮೊದಲಿನಂತೆ ಮಾಡಿಸಿ ಪ್ರದಕ್ಷಿಣೆ, ಅಶ್ಮಾರೋಹಗಳನ್ನು ಮಾಡಿಸಬೇಕು, ಬಳಿಕ

ಅಗ್ನಿಮಯಕ್ಷತ ॥ ಸ ಇಮಾಂ ದೇವಃ ಪೂಷಾಪ್ರೇತೋಮುಂಚಾತುನಾಮುತ-ಸ್ವಾಹಾ ॥ ಇತಿ ಪೂರ್ವವದ್ಧಾವಯಿತ್ವಾ ॥ ಪೂಷಣೇಗ್ನಯ ಇದಂ ನ ಮಮ ॥ ಪೂರ್ವವದಮೋಹಮಸ್ಮೀತ್ಯಾದ್ಯಶ್ಮಾರೋಹಣಂ ಚ ॥ ತತೋ ವರೋ ಅವಶಿ-ಷ್ಟಾಂಲ್ಲಾಜಾನಾತ್ಮಾಭಿಮುಖಂ ಶೂರ್ಪಕೋಣೇನ ಜುಹುಯಾತ್ ॥ ಪ್ರಜಾ-ಪತಯೇ ಇತಿ ಸ್ಮೃತ್ವಾ ಸ್ವಾಹಾ ಇತ್ಯುಚ್ಚಾರ್ಯ ಪ್ರಜಾಪತಯ ಇದಂ ನ ಮಮ ಇತ್ಯುಕ್ತ್ವಾ ॥ ಅತ್ರ ಪರಿಣಯನಾಶ್ಮಾರೋಹಣೇ ನ ಸ್ತಃ ॥

**ಸಪ್ತಪದೀ:-** ಅಥಾಗ್ನೇರುದೀಚ್ಯಾಂ ಸಪ್ತ ತಂಡುಲರಾಶೀನ್ ಪಶ್ಚಿಮತೋ ವಧ್ವಾ ದಕ್ಷಿಣಪಾದೇನ ವರಃ ಕ್ರಮೇಣಾಭ್ಯುತ್ಕ್ರಮಯೇತ್ ಮಂತ್ರೈಃ ॥ ಓಂ ಇಷ ಏಕಪದೀ ಭವ ॥ ಸಾಮಾಮನುವ್ರತಾ ಭವ ॥ ಪುತ್ರಾನ್ ವಿಂದಾವಹೈ ಬಹೂಂಸ್ತೇಸಂತುಜರದಷ್ಟಯಃ ॥ ಇತಿ ಪ್ರಥಮಂ ॥ ಊರ್ಜೇ ದ್ವಿಪದೀ ಭವ ಇತ್ಯಾದಿ ದ್ವಿತೀಯಂ ॥ ರಾಯಸ್ಪೋಷಾಯ ತ್ರಿಪದೀಭವ ಇತ್ಯಾದಿ ತೃತೀಯಂ ॥ ಮಾಯೋ ಭವ್ಯಾಯ ಚತುಷ್ಪದೀ ಭವ ಇತ್ಯಾದಿ ಚತುರ್ಥಂ ॥ ಪ್ರಜಾಭ್ಯಃ ಪಂಚಪದೀ ಭವ ಇತ್ಯಾದಿ ಪಂಚಮಂ ॥ ಋತುಭ್ಯಃ ಷಟ್ಪದೀ ಭವ ॥ ಇತ್ಯಾದಿ ಷಷ್ಠಂ ॥ ಸಖಾ ಸಪ್ತಪದೀ ಭವ ಇತ್ಯಾದಿ ಸಪ್ತಮಂ ರಾಶಿಂ ॥ ಭವೇತ್ಯಾದೇಃ ಸರ್ವತ್ರಾನುಷಂಗಃ ॥

---

ವರನು ಶೂರ್ಪದಲ್ಲಿ ಉಳಿದ ಎಲ್ಲ ಅರಳನ್ನೂ ಆ ಶೂರ್ಪವನ್ನು ಸ್ವಸ್ತಿಕಾಕೃತಿಯ ತನ್ನ ಎರಡೂ ಕೈಗಳಿಂದ ತನ್ನ ಇದಿರಾಗಿ ಹಿಡಿದು **"ಪ್ರಜಾಪತಯೇ"** ಎಂದು ಮನಸ್ಸಿನಲ್ಲೇ ಸ್ಮರಿಸಿ **"ಸ್ವಾಹಾ"** ಎಂದು ಗಟ್ಟಿಯಾಗಿ ಹೇಳಿ ಆಹುತಿಕೊಟ್ಟು **"ಪ್ರಜಾಪತಯ ಇದಂ ನಮಮ"** ಎಂದು ಹೇಳಬೇಕು, ಈ ಆಹುತಿಯಾದ ಮೇಲೆ ಪ್ರದಕ್ಷಿಣೆ ಅಶ್ಮಾರೋಹಣಗಳಿಲ್ಲ.

**ಸಪ್ತಪದೀ:-** ಅಗ್ನಿಯ ಉತ್ತರಭಾಗದಲ್ಲಿ ಅಕ್ಕಿಯ ಏಳು ರಾಶಿಗಳನ್ನು ಮಾಡಬೇಕು. ಅವುಗಳ ಪಡುಭಾಗದಲ್ಲಿ ಪೂರ್ವಕ್ಕೆ ಮುಖಮಾಡಿ ವಧುವನ್ನು ನಿಲ್ಲಿಸಿ ತಾನು ಇದಿರಾಗಿ ನಿಂತು; ಮೊದಲು ಬಲಗಾಲನ್ನು ಎತ್ತಿ ಇಡುವಂತೆ **"ಇಷ ಏಕಪದೀ..."** ಮುಂತಾಗಿ ಏಳು ಮಂತ್ರಗಳನ್ನು ಹೇಳುತ್ತ ಕ್ರಮವಾಗಿ ಒಂದೊಂದೇ ರಾಶಿಯ ಮೇಲೆ ನಡೆಸಿಕೊಂಡು ಬರಬೇಕು. ಮೊದಲಿನ ಮಂತ್ರದಲ್ಲಿದ್ದಂತೆ, ಪ್ರತಿ ಮಂತ್ರಕ್ಕೂ **"ಸಾಮಾಮನುವ್ರತಾ ... ಜರದಷ್ಟಯಃ"** ಎಂದು ಸೇರಿಸಿ ಹೇಳಬೇಕು.

**ಅಭಿಷೇಕ ಧ್ರುವಾರುಂಧತೀ ಸಪ್ತರ್ಷಿದರ್ಶನಂ:- ತತಃ ಪೂರ್ವಸ್ಥಾಪಿತ-ಮುದಕುಂಭಂ ಕೇನಚಿದಾನಾಯ್ಯ ತತ್ರಸ್ಥ ಏವ ವರಃ ಸ್ವಶಿರಸಾ ವಧೂಶಿರಃ ಸಂಯೋಜ್ಯ ಕಲಶಸ್ಥಮುದಕಮಾದಾಯ ಆದೌ ಆತ್ಮಶಿರಃ ಪಶ್ಚಾದ್ವಧೂಶಿರಶ್ಚ ಶಾಂತಿರಸ್ತ್ವಿತ್ಯಾದಿ ಪಂಚದಶ ಮಂತ್ರೈರಭಿಷಿಚ್ಯ ಸ್ವಾಸನೇ ಉಪವಿಶ್ಯ ಆಜ್ಯೇನ ಸ್ವಿಷ್ಟಕೃದಾದಿ ಹೋಮಶೇಷಂ ಸಮಾಪ್ಯ ಪೂರ್ವಬದ್ಧೋತ್ತರೀಯಾಂತೌ ತೂಷ್ಣೀಂ ವಿಸೃಜ್ಯ ॥ ಧ್ರುವಾರುಂಧತೀ ಸಪ್ತರ್ಷಿ ಪ್ರಭೃತೀನ್ ವಧ್ವಾ ಸಹ ದೃಷ್ಟ್ವಾ ॥ ಜೀವಪತ್ನೀ ಪ್ರಜಾಂ ವಿಂದೇಯ ॥ ಇತಿ ವಧ್ವಾವಾಚಯೇತ್ ॥ ತತೋ ವಧೂವಾಙ್ ನಿಯಮಂ ವಿಸೃಜೇತ್ ॥ ದಿನ ವಿವಾಹೇ ಸಾಯಂ ಸಂಧ್ಯಾಮುಪಾಸ್ಯ ರಾತ್ರಿವಿವಾಹೇ ಸಾಯಂ ಸಂಧ್ಯಾಮನುಪಾಸ್ಯೈವ ಧ್ರುವಾದಿದರ್ಶನಂ ॥ ಏತದಾದಿ ವಿವಾಹಾಗ್ನಿಂ ರಕ್ಷೇತ್ ॥**

**॥ ಇತಿ ವಿವಾಹ ಹೋಮಃ ॥**

---

**ಅಭಿಷೇಕ ಧ್ರುವಾರುಂಧತೀ ಸಪ್ತರ್ಷಿದರ್ಶನ:-** ಆಮೇಲೆ ಮೊದಲು ಸ್ಥಾಪಿಸಿದ ಕಲಶವನ್ನು ಯಾರಾದರೊಬ್ಬನನ್ನು ಕರೆದು ತರಿಸಿ, ವರನು ಅಲ್ಲೇ ನಿಂತುಕೊಂಡು ತನ್ನ ಮತ್ತು ವಧುವಿನ ತಲೆಯನ್ನು ಒಂದಕ್ಕೊಂದು ತಾಗುವಂತೆ ಜೋಡಿಸಿ **"ಶಾಂತಿರಸ್ತು"** ಮೊದಲ್ಗೊಂಡು ಹದಿನೈದು ಮಂತ್ರಗಳನ್ನು ಹೇಳುತ್ತ ತಲೆಗಳ ಮೇಲೆ ಅಭಿಷೇಕ ಮಾಡಿಸಿ ಅಲ್ಲಿಂದ ಬಂದು ಅಗ್ನಿಯ ಪಶ್ಚಿಮಭಾಗದಲ್ಲಿ ವಧೂಸಹಿತನಾಗಿ ಮೊದಲಿನಂತೆ ಕುಳಿತುಕೊಳ್ಳಬೇಕು, ಬಳಿಕ ಸ್ವಿಷ್ಟಕೃದಾದಿ ಹೋಮಶೇಷವನ್ನು ಮಾಡಿ ಮಂತ್ರವಿಲ್ಲದೆ ಮೌನವಾಗಿ ಮೊದಲು ಪರಸ್ಪರ ಕಟ್ಟಿಕೊಂಡ ಉತ್ತರೀಯಗಳ ಗಂಟನ್ನು ಬಿಚ್ಚಿ, ವಧುವಿನೊಂದಿಗೆ ಧ್ರುವ ಅರುಂಧತಿ ಸಪ್ತರ್ಷಿಮಂಡಲ ಮುಂತಾದುವನ್ನು ನೋಡಬೇಕು. **"ಜೀವಪತ್ನೀ ... ವಿಂದೇಯ"** ಎಂದು ವಧುವಿನ ಬಾಯಿಯಿಂದ ಹೇಳಿಸಬೇಕು. ಆಗ ವಧುವು ಮೊದಲು ಕೈಗೊಂಡ ಮೌನವ್ರತವನ್ನು ತ್ಯಜಿಸಬೇಕು. ಹಗಲು ಮದುವೆಯಾದರೆ ಸಾಯಂಸಂಧ್ಯಾವಂದನೆ ಮಾಡಿದ ಮೇಲೆ ಧ್ರುವಾದಿದರ್ಶನ ಮಾಡಬೇಕು. ರಾತ್ರಿ ವಿವಾಹವಾದರೆ ಸಾಯಂಸಂಧ್ಯಾವಂದನೆ ಮಾಡದೆಯೇ ಈ ದರ್ಶನವನ್ನು ಮಾಡಬೇಕು. ಈ ವಿವಾಹಾಗ್ನಿಯು ಆರಿಹೋಗದಂತೆ ಮುಂದೆ ರಕ್ಷಿಸಿಕೊಂಡು ಬರಬೇಕು.

॥ ವಿವಾಹ ಹೋಮ ಸಮಾಪ್ತ ॥

# ॥ ಗೃಹಪ್ರವೇಶನೀಯಹೋಮಃ ॥

॥ ಶ್ರೀಃ ॥ ವರಃ ದೇಶಕಾಲೌ ಸಂಕೀರ್ತ್ಯ ಮಮ ವಿವಾಹಾಗ್ನೇರ್ಗೃಹ್ಯತ್ವಸಿದ್ಧಿದ್ವಾರಾ ಶ್ರೀಪರಮೇಶ್ವರ ಪ್ರೀತ್ಯರ್ಥಂ ಗೃಹಪ್ರವೇಶನೀಯಹೋಮಂ ಕರಿಷ್ಯೇ ಇತಿ ಸಂಕಲ್ಪ್ಯ ॥ ಸ್ಥಂಡಿಲಕರಣಾದ್ಯಗ್ನಿಪ್ರತಿಷ್ಠಾಂತಂ ಕೃತ್ವಾ ॥ ಶ್ವಶುರಗೃಹೇ ವಿವಾಹಹೋಮಾನಂತರಮೇವೈತತ್ಕರಣೇ ಅಗ್ನೇಃ ಸ್ಥಾಪಿತತ್ವಾತ್ ಸಂಕಲ್ಪಮಾತ್ರಂ ಕೃತ್ವಾ ॥ ಪ್ರತ್ಯಗಗ್ನೇಃ ಸ್ವದಕ್ಷಿಣದೇಶೇ ಪ್ರಾಗ್ಗ್ರೀವಮುಪರಿಲೋಮಕಮಾನಡುಹಂ ಚರ್ಮಾಸ್ತೀರ್ಯ ತಸ್ಮಿನ್ವಧೂಮುಪವೇಶ್ಯ ತಯಾನ್ವಾರಬ್ಧಃ ಕ್ರಿಯಮಾಣೇ ಗೃಹಪ್ರವೇಶನೀಯಹೋಮೇ ದೇವತಾಪರಿಗ್ರಹಾರ್ಥಮಿತ್ಯಾದಿ ಚಕ್ಷುಷೀ ಆಜ್ಯೇನೇತ್ಯಂತಮುಕ್ತ್ವಾ ॥ ಸೂರ್ಯಾಸಾವಿತ್ರೀಂ ಚತುರ್ವಾರಮಾಜ್ಯೇನ ಶೇಷೇಣ ಸ್ವಿಷ್ಟಕೃತಮಿತ್ಯಾದಿ ಪತ್ನ್ಯಾನ್ವಾರಬ್ಧ ಆಜ್ಯಭಾಗಾಂತಂ ಕೃತ್ವಾ ॥ ಆನಃ ಪ್ರಜಾಮಿತಿ ಚತಸೃಣಾಂ ಸೂರ್ಯಾಸಾವಿತ್ರೀ ಸೂರ್ಯಾಸಾವಿತ್ರೀ ಆದ್ಯಾ ಜಗತೀ ದ್ವಿತೀಯಾ ತ್ರಿಷ್ಟುಪ್ ಅಂತ್ಯೇ ದ್ವೇ ಅನುಷ್ಟುಭೌ ॥ ಗೃಹಪ್ರವೇಶನೀಯ ಪ್ರಧಾನಾಜ್ಯಹೋಮೇ ವಿನಿಯೋಗಃ ॥ ಓಂ ಆನಃಪ್ರಜಾಂ .... ಚತುಷ್ಪದೇ ಸ್ವಾಹಾ ॥ ಸರ್ವತ್ರ ಸೂರ್ಯಾ ಸಾವಿತ್ರ್ಯಾ ಇದಂ ನ ಮಮ ॥ ಓ ಅಘೋರಚಕ್ಷು .... ಸ್ವಾಹಾ ॥ ಸೂರ್ಯಾ ..... ॥ ಓಂ ಇಮಾಂತ್ವಮಿಂದ್ರ .... ಸ್ವಾಹಾ ॥ ಸೂರ್ಯಾ ...॥ ಓಂ ಸಮ್ರಾಜ್ಞೀ ...

---

ವರನು ದೇಶಕಾಲಗಳನ್ನು ಸ್ಮರಿಸಿ "**ಮಮ...ಕರಿಷ್ಯೇ**" ಎಂದು ಸಂಕಲ್ಪ ಮಾಡಿ, ಸ್ಥಂಡಿಲ ಸಂಸ್ಕಾರಾದಿಗಳನ್ನು ಮಾಡಿ (ವಿವಾಹಹೋಮ ಆದ ಕೂಡಲೇ ಮಾಡುವುದಾದರೆ ಅಗ್ನಿಪ್ರತಿಷ್ಠಾದಿಗಳು ಮೊದಲೇ ಆಗಿರುವುದರಿಂದ ಪುನಃ ಮಾಡುವ ಅಗತ್ಯವಿಲ್ಲ) ಅಗ್ನಿಯ ಪಶ್ಚಿಮದಲ್ಲಿ ತನ್ನ ಬಲಭಾಗದಲ್ಲಿ ಎತ್ತಿನ ಚರ್ಮದ ಮೇಲೆ ಪತ್ನಿಯನ್ನು ಕೂತು ಕೊಳ್ಳಿಸಿ ಅನ್ವಾಧಾನ ಮಾಡಬೇಕು. ಸ್ಥಾಲೀಪಾಕದಲ್ಲಿ ಹೇಳಿದಂತೆ ಆಜ್ಯಭಾಗಾಂತದ ವರೆಗೆ ಮಾಡಿ "**ಆನಃ ಪ್ರಜಾಂ...**" ಮುಂತಾಗಿ ನಾಲ್ಕು ಮಂತ್ರಗಳಿಂದ ನಾಲ್ಕು ಆಜ್ಯಾಹುತಿಗಳನ್ನು ಕೊಡಬೇಕು.

**ಸ್ವಾಹಾ ॥ ಸೂರ್ಯಾ .... ॥ ಇತಿ ಚತಸ್ರ ಆಜ್ಯಾಹುತೀ ಹುತ್ವಾ ॥ ಸಮಂಜಂತ್ವಿತ್ಯಸ್ಯ ಸೂರ್ಯಾಸಾವಿತ್ರೀ ಸೂರ್ಯಾಸಾವಿತ್ರ್ಯನುಷ್ಟುಪ್ ॥ ಆಜ್ಯಶೇಷೇಣ ಹೃದಯಾಂಜನೇ ವಿನಿಯೋಗಃ ॥ ಓಂ ಸಮಂಜಂತುವಿಶ್ವೇದೇವಾಃ ಸಮಾಪೋ ಹೃದಯಾನಿನೌ ॥ ಸಂಮಾತರಿಶ್ವಾಸಂಧಾತಾ ಸಮುದೇಷ್ಟ್ರೀದಧಾತು ನೌ ॥ ಓಂ ಇತಿ ಹುತಶಿಷ್ಟ ಆಜ್ಯೇನ ಸ್ವಸ್ಯ ಪತ್ನ್ಯಾಶ್ಚ ಹೃದಯಾಂಜನಂ ಕಾರ್ಯಂ ॥ ತತೋ ಹಸ್ತಂ ಪ್ರಕ್ಷಾಲ್ಯ ಸ್ವಿಷ್ಟಕೃದಾದಿ ಹೋಮಶೇಷಂ ಸಮಾಪ್ಯ ಪತಿಪುತ್ರವತೀಭಿಃ ಕೃತನೀರಾಜನೌ ದಂಪತೀ ದ್ವಿಜಾಶಿಷೋ ಗೃಹೀತ್ವಾ ಮುದಿತೌ ತಿಷ್ಠೇತಾಂ ॥**

**॥ ಇತಿ ಗೃಹಪ್ರವೇಶನೀಯಹೋಮಃ ॥**

---

ನಂತರ **"ಸಮಂಜಂತು..."** ಎಂಬ ಮಂತ್ರದಿಂದ ಹೋಮಮಾಡಿ ಉಳಿದ ಆಜ್ಯದಿಂದ ತನ್ನ ಮತ್ತು ಪತ್ನಿಯ ಹೃದಯಕ್ಕೆ ಅಂಜನ ಹಚ್ಚಬೇಕು. ನಂತರ ಕೈತೊಳೆದು ಸ್ವಿಷ್ಟಕೃದಾದಿ ಹೋಮಶೇಷವನ್ನು ಮಾಡಿ, ನೀರಾಜನಾದಿಗಳನ್ನು ಮಾಡಿಸಿ ದಂಪತಿಗಳು ಬ್ರಾಹ್ಮಣರ ಆಶೀರ್ವಾದ ಪಡೆಯಬೇಕು.

॥ ಗೃಹಪ್ರವೇಶನೀಯ ಹೋಮ ಸಮಾಪ್ತ ॥

# ॥ ವಿವಾಹಚತುರ್ಥದಿನಕೃತ್ಯಂ ॥

**॥ ಶ್ರೀಃ ॥ ತತೋ ವಿವಾಹಾಚ್ಚತುರ್ಥದಿನರಾತ್ರೌ ತತ್ರ ಭದ್ರಾದಿ-ಸಂಭವೇ ದಿನ ಏವ ವಾ ಕನ್ಯಾದಾತಾ ಸಭಾರ್ಯೋ ದೇಶಕಾಲೌ ಸಂಕೀರ್ತ್ಯ ವಿವಾಹಸ್ಯ ಸಂಪೂರ್ಣಫಲಾವಾಪ್ತಯೇ ವರಸ್ಯ ತತ್ಪಿತೃಮಾತ್ರಾದೀನಾಂ ತತ್ಪಕ್ಷೀ-ಯಾಣಾಂ ಚ ಯಥಾವಿಭವಂ ಪಟ್ಟಪಟೀದುಕೂಲವಸ್ತ್ರಾದಿಭಿಃ ಪೂಜ-ಯೇತ್ ತತೋ ವರಪಿತಾ ಕನ್ಯಾಂ ಪೂಜಯೇತ್ ॥ ಅಭಿವಸ್ತ್ರೇತಿ ಪಟ್ಟದು-ಕೂಲಾದಿ ದತ್ವಾ ಆಯುಷ್ಯಮಿತಿ ಸೂಕ್ತೇನ ಸುವರ್ಣಾಲಂಕಾರಾದಿ ಯಾಃಫಲಿ-ನೀರಿತಿ ಪುಷ್ಪಮಾಲಾದಿ ದತ್ವಾ ॥ ಓಂ ಸುಮಂಗಲೀರಿಯಂವಧೂರಿಮಾಂ-ಸಮೇತಪಶ್ಯತ ॥ ಸೌಭಾಗ್ಯಮಸ್ಯೈದತ್ವಾಯಾಥಾಸ್ತಂ ವಿಪರೇತನ ॥ ಇತಿ ಸೀಮಂತೇ ಸಿಂದೂರಂ ನಿಕ್ಷಿಪ್ಯ ॥ ಮಾಂಗಲ್ಯತಂತುನಾನೇನ ಭರ್ತೃಜೀವನಹೇತುನಾ ॥ ಕಂಠೇ ಬಧ್ನಾಮಿ ಸುಭಗೇ ಸಾಜೀವ ಶರದಃ ಶತಂ ॥ ಇತಿ ಕಂಠೇ ಮಂಗಲಸೂತ್ರಂ ಬಧ್ನೀಯಾತ್ ॥**

**ತತಃ ಕನ್ಯಾಪಿತಾ ಐರಿಣೀಪೂಜನಂ ಕುರ್ಯಾತ್ ॥ ಅದ್ಯ ಶುಭತಿಥೌ ಮಮ ಉಮಾಮಹೇಶ್ವರಪ್ರೀತಿದ್ವಾರಾ ಕನ್ಯಾದಾನಫಲಸಂಪೂರ್ಣತಾವಾಪ್ತಯೇ**

---

ವಿವಾಹವಾದ ನಂತರ ನಾಲ್ಕನೆಯ ರಾತ್ರಿಯಲ್ಲಿ, ಭದ್ರಾದಿ ದೋಷಗಳಿದ್ದರೆ ಹಗಲಿನಲ್ಲಿ ಕನ್ಯಾದಾತನು ಪತ್ನಿಯೊಡನೆ ದೇಶಕಾಲಾದಿಗಳನ್ನು ಸ್ಮರಿಸಿ, **"ವಿವಾಹಸ್ಯ...ಅಹಂ ಕರಿಷ್ಯೇ"** ಎಂದು ಸಂಕಲ್ಪ ಮಾಡಿ ವರನಿಗೆ ಅವನ ಮಾತಾಪಿತೃಗಳಿಗೆ ಇತರ ಬಂಧುಗಳಿಗೆ ಯಥಾಸಾಧ್ಯ ವಸ್ತ್ರಾದಿಗಳನ್ನು ಕೊಟ್ಟು ಸತ್ಕರಿಸಬೇಕು. ಬಳಿಕ ವರನ ತಂದೆಯು ಕನ್ಯೆಯನ್ನು ಪೂಜಿಸಬೇಕು. **"ಅಭಿವಸ್ತ್ರ..."** ಎಂಬ ಮಂತ್ರದಿಂದ ಪಟ್ಟೆಯ ಸೀರೆ, **"ಆಯುಷ್ಯಂ..."** ಸೂಕ್ತದಿಂದ ಆಭರಣಗಳು, **"ಯಾಃಫಲಿನೀ..."** ಎಂಬ ಮಂತ್ರದಿಂದ ಫಲಪುಷ್ಪಾದಿಗಳನ್ನು ಕೊಟ್ಟು, **"ಸುಮಂಗಲೀರಿಯಂ....."** ಎಂಬ ಮಂತ್ರ ಹೇಳಿ ಹಣೆಯಲ್ಲಿ ಕುಂಕುಮವನ್ನಿಡಬೇಕು. **"ಮಾಂಗಲ್ಯತಂತುನಾ..."** ಎಂದು ಹೇಳಿ ವರನು ಕುತ್ತಿಗೆಯಲ್ಲಿ ಮಂಗಲಸೂತ್ರವನ್ನು ಕಟ್ಟಬೇಕು.

**ವಂಶಾಭಿವೃದ್ಧಯೇ ಚ ಐರಿಣೀಪೂಜನಂ ವರಮಾತ್ರೇ ಐರಿಣೀದಾನಂ ಚ ಕರಿಷ್ಯೇ ॥ ಐರಿಣಿ ತ್ವಮುಮಾದೇವೀ ಮಹೇಶೋ ಗಿರಿಜಾಪತಿಃ ॥ ಅತಸ್ತ್ವಾಂ ಪೂಜಯಿಷ್ಯಾಮಿ ಐರಿಣೀಂ ಸರ್ವಕಾಮದಾಂ ॥ ಸವಸ್ತ್ರಾಂ ಚ ಸದೀಪಾಂ ಚ ಶೂರ್ಪೈಃ ಷೋಡಶಭಿರ್ಯುತಾಂ ॥ ವರಮಾತ್ರೇ ಪ್ರದಾಸ್ಯಾಮಿ ಕನ್ಯಾದಾನಸ್ಯ-ಸಿದ್ಧಯೇ ॥ ಇತಿ ಸಂಕಲ್ಪ್ಯ ॥**

**ತತ್ರ ಉಮಾಮಹೇಶ್ವರೌ ಷೋಡಶೋಪಚಾರೈಃ ಪೂಜಯಿತ್ವಾ ಇದಂ ಐರಿಣ್ಯಾಖ್ಯಂ ವಂಶಪಾತ್ರಂ ಷೋಡಶಶೂರ್ಪಯುತಂ ವರಮಾತ್ರೇ ತತ್ ಸ್ಥಾನಾಪ-ನ್ನಾಯೈ ವಾ ಸಂಪ್ರದದೇ ನ ಮಮೇತ್ಯುಕ್ತ್ವಾ ವರಮಾತೃಹಸ್ತೇ ಜಲಂ ಸಿಂಚೇತ್ ॥ ವಂಶಪಾತ್ರಂ ದತ್ವಾ ಮಂತ್ರಾನ್ ಪಠೇತ್ ॥ ವಂಶೋವಂಶಕರಃ ಶ್ರೇಷ್ಠೋ ವಂಶೋ ವಂಶಸಮುದ್ಭವಃ ॥ ಅನೇನ ವಂಶದಾನೇನ ತುಷ್ಟ್ಯಾ ಋದ್ಧಿಂ ಕರೋತು ಮೇ ॥ ವಂಶಪಾತ್ರಮಿದಂ ಪುಣ್ಯಂ ವಂಶಜಾತಸಮು-ದ್ಭವಂ ॥ ವಂಶಾನಾಮುತ್ತಮಂ ದಾನಂ ಅತಃಶಾಂತಿಂ ಪ್ರಯಚ್ಛ ಮೇ ॥ ವಂಶಪಾತ್ರಾಣಿ ಸರ್ವಾಣಿ ಮಯಾ ಸಂಪಾದಿತಾನಿ ವೈ ॥ ಉಮಾಕಾಂತಾಯ ದತ್ತಾನಿ ಮಮ ಗೋತ್ರಾಭಿವೃದ್ಧಯೇ ॥ ವಂಶವೃದ್ಧಿಕರಂ ದಾನಂ ಸೌಭಾಗ್ಯಾ-ದಿಸಮನ್ವಿತಂ ॥ ವಸ್ತ್ರೇಣಾಚ್ಛಾದಿತಂ ಪೂಗಫಲಹೇಮಸಮನ್ವಿತಂ ॥ ಸರ್ವ-ಪಾಪಕ್ಷಯಕರಂ ನಾನಾದ್ರವ್ಯೈಸ್ತುಪೂರಿತಂ ॥ ದಾನಾನಾಮುತ್ತಮಂ ದಾನ-ಮತಃ ಶಾಂತಿಂ ಪ್ರಯಚ್ಛ ಮೇ ॥ ಇತಿ ॥ ತತಃ ಕನ್ಯಾಂ ವರಪಿತೃಮಾತ್ರು-ತ್ಸಂಗಯೋಃ ಪೃಥಗುಪವೇಶ್ಯ ಪೃಥಕ್ತೌ ಪ್ರಾರ್ಥಯೇತ್ ॥ ಪೂರ್ಣವ-ರ್ಷಾಣ್ಯಿಯಂ ಕನ್ಯಾ ಪುತ್ರವತ್ಪಾಲಿತಾ ಮಯಾ ॥ ಇದಾನೀಂ ತವ ಪುತ್ರಾಯ ದತ್ತಾ ಸ್ನೇಹೇನ ಪಾಲ್ಯತಾಂ ॥ ಸೌಭಾಗ್ಯಾದಿವೃದ್ಧಯೇ ಬ್ರಾಹ್ಮಣಸುವಾಸಿನೀಭ್ಯೋ ವಾಯನಾನಿ ದತ್ವಾ ಬ್ರಾಹ್ಮಣೇಭ್ಯೋ ಯಥಾಶಕ್ತಿ ಭೂಯಸೀಂ ದಕ್ಷಿಣಾಂ ಚ ದತ್ವಾ**

---

ನಂತರ **"ಅದ್ಯ ಶುಭತಿಥೌ ....ಕರಿಷ್ಯೇ"** ಎಂದು ಸಂಕಲ್ಪ ಮಾಡಿ ಕನ್ಯಾಪಿತನು ಐರಿಣೀಪೂಜೆಯನ್ನು ಮಾಡಬೇಕು. **"ಐರಿಣಿ ತ್ವಮುಮಾದೇವೀ ....ಕನ್ಯಾದಾನಸ್ಯಸಿದ್ಧಯೇ"** ಎಂದು ಪ್ರಾರ್ಥಿಸಬೇಕು.

ನಂತರ ಷೋಡಶೋಪಚಾರಗಳಿಂದ ಉಮಾಮಹೇಶ್ವರರನ್ನು ಪೂಜಿಸಿ, **"ಇದಂ ಐರಿಣ್ಯಾಖ್ಯಂ ವಂಶಪಾತ್ರಂ ...ವರಮಾತ್ರೇ (ತತ್ ಸ್ಥಾನಾಪನ್ನಾಯೈ) ಸಂಪ್ರದದೇ"** ಎಂದು ಹೇಳಿ ವರನ ತಾಯಿಯ ಕೈಯ ಮೇಲೆ ನೀರು ಬಿಡಬೇಕು. ಆಮೇಲೆ ಬಿದಿರಿನ ಆ ಪಾತ್ರೆಯನ್ನು ಕೊಟ್ಟು **"ವಂಶೋ ವಂಶಕರಃ ...ಪ್ರಯಚ್ಛ ಮೇ ॥"** ಎಂಬಲ್ಲಿವರೆಗೆ ಹೇಳಬೇಕು. ಆ ಬಳಿಕ ಕನ್ಯೆಯನ್ನು ಬೇರೆ ಬೇರೆಯಾಗಿ ವರನ ತಂದೆ ಮತ್ತು ತಾಯಿಯ ಮಡಿಲಲ್ಲಿ ಕೂತುಕೊಳ್ಳಿಸಿ ಅವರಿಬ್ಬರಲ್ಲಿಯೂ **"ಪೂರ್ಣವರ್ಷಾಣ್ಯಿಯಂ...ಪಾಲ್ಯತಾಂ"** ಎಂದು ಪ್ರಾರ್ಥಿಸಿ ಕೊಳ್ಳಬೇಕು. ನಂತರ ಸೌಭಾಗ್ಯಾದಿ ಅಭ್ಯುದಯಕ್ಕೋಸ್ಕರ ಬ್ರಾಹ್ಮಣಸುವಾಸಿನಿಯರಿಗೆ

**ಕರ್ಮ ಉಮಾಮಹೇಶ್ವರಾರ್ಪಣಂ ಕುರ್ಯಾತ್ ॥ ಇದಮ್ಮೈರಿಣೀದಾನಂ ವಧೂ-ಪಿತೃಭ್ಯಾಮಭುಕ್ತವದ್ಭ್ಯಾಂ ಕೃತ್ವಾ ಭೋಜನಂ ಕಾರ್ಯಂ ॥**

**॥ ಇತಿ ವಿವಾಹಚತುರ್ಥದಿನಕೃತ್ಯಂ ॥**

---

ವಾಯನದಾನಗಳನ್ನೂ ಬ್ರಾಹ್ಮಣರಿಗೆ ತುಂಬ ದಕ್ಷಿಣೆಯನ್ನೂ ಕೊಟ್ಟು ಉಮಾಮಹೇಶ್ವರಾರ್ಪಣ ಮಾಡಬೇಕು.

॥ ವಿವಾಹಚತುರ್ಥದಿನಕೃತ್ಯ ಸಮಾಪ್ತ ॥

# ॥ ವಧೂಸಹಗೃಹಪ್ರವೇಶಃ ಲಕ್ಷ್ಮೀಪೂಜನಂ ॥

**॥ ಶ್ರೀಃ ॥ ಜ್ಯೋತಿಃ ಶಾಸ್ತ್ರೋಕ್ತೇ ಪ್ರತಿಶುಕ್ರಾದಿವರ್ಜಿತೇ ಶುಭಕಾಲೇ ನವೋಢಯಾ ವಧ್ವಾ ಮಂಗಲತೂರ್ಯೈಃ ಸಹ ಕನಿಕ್ರದದಿತ್ಯಾದಿ ಮಾಂಗಲಿಕ-ಮಂತ್ರಘೋಷಕೈರ್ದ್ವಿಜೈಃ ಸಹ ಶುಭೇ ಮುಹೂರ್ತೇ ವಧೂಂ ಪಾಣೌ ಗೃಹೀತ್ವಾ ॥ ಓಂ ಇಹ ಪ್ರಿಯಂ ಪ್ರಜಯಾತೇಸಮೃಧ್ಯತಾಮಸ್ಮಿನ್ ಗೃಹೇ-ಗಾರ್ಹಪತ್ಯಾಯ ಜಾಗೃಹಿ ॥ ಏನಾಪತ್ಯಾತನ್ವಂ ೧ ಸಂಸೃಜಸ್ವಾಧಾಜಿವ್ರೀವಿ ದಥಮಾವದಾರ್ಥಃ ॥ ಇತಿ ಮಂತ್ರೇಣ ಗೃಹಂ ಪ್ರವಿಶ್ಯ ಪ್ರಶಸ್ತೇ ಆಸನೇ ಪ್ರಾಙ್ಮುಖಾವುಪವಿಶತಃ ॥ ತತಃ ಸವಧೂಕೋ ವರಃ ಆಚಮ್ಯ ಪ್ರಾಣಾನಾಯಮ್ಯ ದೇಶಕಾಲೌ ಸಂಕೀರ್ತ್ಯ ಅನಯಾ ನವೋಢಯಾ ವಧ್ವಾ ಸಹ ಕೃತ ಗೃಹ-ಪ್ರವೇಶಾಂಗಭೂತಂ ಗಣಪತಿಪೂಜನಪೂರ್ವಕಂ ಸ್ವಸ್ತಿಪುಣ್ಯಾಹವಾಚನಂ ಚ ಕೃತ್ವಾ ಕಾಂಸ್ಯಪಾತ್ರೇ ಸಿತತಂಡುಲಾನ್ ಪ್ರಸಾರ್ಯ ತತ್ರ ಸ್ವರ್ಣಶಲಾಕಯಾ ಕುಲದೇವತಾ ನಾಮ ಸ್ವೇಷ್ಟಂ ಪತ್ನ್ಯಾಃ ಸ್ಥಾಪನೀಯಂ ನಾಮ ಚ ವಿಲಿಖ್ಯ ತದಸ್ತು... ಗೃಹಾವೈ... ಇತ್ಯಾದಿಭಿಃ ಪ್ರತಿಷ್ಠಾಪ್ಯ ॥ ಓಂ ನಾಮಾನಿ ತೇ ಶತಕ್ರತೋವಿಶ್ವಾಭಿರ್ಗೀರ್ಭಿರೀಮಹೇ ॥ ಇಂದ್ರಾಭಿಮಾತಿಷಾಹ್ಯೇ ॥ ಭೂರ್ಭುವಃ ಸ್ವಃ ನಾಮಾಧಿಷ್ಠಾತ್ರ್ಯೈ ಮಹಾಲಕ್ಷ್ಮ್ಯೈ ನಮ ಇತಿ**

---

ಜ್ಯೋತಿಷ್ಕರು ಹೇಳಿದ ಶುಭದಿನದಲ್ಲಿ ಶುಭಮುಹೂರ್ತದಲ್ಲಿ ನೂತನವಾಗಿ ವಿವಾಹಿತಳಾದ ವಧುವಿನೊಂದಿಗೆ, ಬ್ರಾಹ್ಮಣರು "**ಕನಿಕ್ರದಜ್ಜನುಷಂ...**" ಮುಂತಾದ ಮಾಂಗಲಿಕ ಮಂತ್ರಗಳನ್ನು ಹೇಳುತ್ತಿದ್ದಂತೆ ವರನು ಮಂಗಲವಾದ್ಯಘೋಷದೊಂದಿಗೆ ವಧುವಿನ ಕೈಹಿಡಿದುಕೊಂಡು "**ಓಂ ಇಹಪ್ರಿಯಂ....**" ಎಂಬ ಮಂತ್ರವನ್ನು ಹೇಳುತ್ತ ತನ್ನ ಮನೆಯನ್ನು ಪ್ರವೇಶಿಸಬೇಕು. ಅಲ್ಲಿ ಪ್ರಶಸ್ತವಾದ ಆಸನದ ಮೇಲೆ ವಧುವಿನೊಂದಿಗೆ ಕುಳಿತು ಆಚಮನ ಪ್ರಾಣಾಯಾಮ ದೇಶಕಾಲ ಕೀರ್ತನಾದಿಗಳನ್ನು ಮಾಡಿ, ಗೃಹಪ್ರವೇಶಾಂಗವಾದ ಗಣಪತಿ ಪೂಜನ, ಪುಣ್ಯಾಹವಾಚನಗಳನ್ನು ಮಾಡಿ, ಕಂಚಿನ ಪಾತ್ರೆಯಲ್ಲಿ ಅಕ್ಕಿಯನ್ನು ಹರಡಿ, ಅದರ

# ॥ ದೇವಕೋತ್ಥಾಪನ ಮಂಡಪೋದ್ವಾಸನೇ ॥

॥ ಶ್ರೀಃ ॥ ಕರ್ತಾ ಉಕ್ತಕಾಲೇ ಮಂಡಪಾಂತಃ ಸಪತ್ನೀಕ ಉಪವಿಶ್ಯ ಆಚಮ್ಯ ಪ್ರಾಣಾನಾಯಮ್ಯ ದೇಶಕಾಲೌ ಸಂಕೀರ್ತ್ಯ ॥ ವಿವಾಹಾಂಗತ್ವೇನ-ಸ್ಥಾಪಿತದೇವತಾನಾಮುತ್ಥಾಪನಂ ಮಂಡಪೋದ್ವಾಸನಂ ತದಂಗಂ ಗಣಪತಿ-ಪೂಜನಂ ಪುಣ್ಯಾಹವಾಚನಂ ಚ ಕರಿಷ್ಯೇ ಇತಿ ಸಂಕಲ್ಪ್ಯ ॥ ಸರ್ವಾಃ ದೇವತಾಃ ಪ್ರತ್ಯೇಕಂ ಪ್ರತ್ಯಹವತ್ಪೂಜಯಿತ್ವಾ ॥ ಓಂ ಉತ್ತಿಷ್ಠಬ್ರಹ್ಮಣಸ್ಪತೇದೇವಯಂತ-ಸ್ತ್ವೇಮಹೇ ॥ ಉಪಪ್ರಯಂತು ಮರುತಃಸುದಾನವಇಂದ್ರಪ್ರಾಶೂರ್ಭವಾ-ಸಚಾ ॥ ಓಂ ಅಭ್ಯಾರಮಿದದ್ರಯೋನಿಷಿಕ್ತಂ ಪುಷ್ಕರೇಮಧು ॥ ಅವತಸ್ಯ-ವಿಸರ್ಜನೇ ॥ ಇತಿ ವಿಸೃಜ್ಯ ಭಗವತ್ಯಾದೀನಾಂ ಮಂಡಪಾಂತಃ ತೈಲಾಭ್ಯಂಗೋ-ದ್ವರ್ತನೋಷ್ಣೋದಕಸ್ನಾನಪೂರ್ವಕಂ ಪೂಜನಂ ವಿಧಾಯ ॥ ವೇಷ್ಟನಸೂತ್ರ-ಮುನ್ಮುಚ್ಯ ಸ್ವಸ್ತಿವಾಚನಂ ಕುರ್ಯಾತ್ ॥ ತತೋ ದ್ವಿಜೈರಭಿಷೇಕಃ ಕಾರ್ಯಃ ॥ ತತ್ರಾಭಿಷೇಕಾಂತೇ ಪುರೋಧಾಸ್ತಚ್ಛಾಖಾದಿ ವಂಶಪಾತ್ರೇ ನಿಧಾಯ ತದುಪರಿ ಪ್ರಕ್ಷಿಪ್ತಾಭಿಷೇಕಜಲಂ ಸಕುಟುಂಬಯಜಮಾನಶಿರಸಿ ಕಿಂಚಿತ್ ಸ್ರಾವಯೇತ್ ॥

---

**ದೇವಕೋತ್ಥಾಪನ ಮಂಡಪೋದ್ವಾಸನವಿಧಿ:-** ಯಜಮಾನನು ಉಕ್ತಕಾಲದಲ್ಲಿ ಮಂಡಪದಲ್ಲಿ ಪತ್ನಿಯೊಡನೆ ಕುಳಿತು ಆಚಮನ ಪ್ರಾಣಾಯಾಮ ದೇಶಕಾಲಕೀರ್ತನಾದಿಗಳನ್ನು ಮಾಡಿ "**ವಿವಾಹಾಂಗತ್ವೇನ ...ಚ ಕರಿಷ್ಯೇ**" ಎಂದು ಸಂಕಲ್ಪ ಮಾಡಿ ಪ್ರತಿದಿನದಂತೆ ಎಲ್ಲ ದೇವತೆಗಳನ್ನೂ ಪ್ರತ್ಯೇಕವಾಗಿ ಪೂಜಿಸಬೇಕು. ಆಮೇಲೆ "**ಉತ್ತಿಷ್ಠಬ್ರಹ್ಮಣಸ್ಪತೇ...**" ಎಂದು ಅಕ್ಷತೆ ಹಾಕಿ ವಿಸರ್ಜಿಸಿ ಭಗವತೀ ಮುಂತಾದ ದೇವತೆಗಳಿಗೆ ತೈಲಾಭ್ಯಂಗ ಬಿಸಿನೀರಿನ ಸ್ನಾನ ಮುಂತಾದವುಗಳನ್ನು ಮಾಡಿಸಿ ಪೂಜೆಮಾಡಿ, ಸುತ್ತಿಕಟ್ಟಿದ ಸೂಲನ್ನು ಬಿಚ್ಚಿ ಸ್ವಸ್ತಿವಾಚನ ಮಾಡಬೇಕು. ಆಮೇಲೆ ಬ್ರಾಹ್ಮಣರು ಅಭಿಷೇಕ ಮಾಡಬೇಕು. ಅಭಿಷೇಕಾನಂತರ ಪುರೋಹಿತನು ಆ ಪಲ್ಲವಶಾಖೆಗಳನ್ನು ಒಂದು ಬಿದಿರಿನ ಪಾತ್ರೆಯಲ್ಲಿಟ್ಟು ಅದರ ಮೇಲೆ ಅಭಿಷೇಕಜಲವನ್ನು ಸುರಿಯಬೇಕು. ಹಾಗೆ ಸುರಿದ ನೀರನ್ನು ಕುಟುಂಬಸಮೇತನಾಗಿ ಕುಳಿತ ಯಜಮಾನನ ತಲೆಯ ಮೇಲೆ "**ಪ್ರೇತಿಚೇತಿ...**" ಎಂಬ ವಚನಮಂತ್ರವನ್ನು ಮೂರು ಬಾರಿ ಹೇಳಿ ಸಿಂಪಡಿಸಬೇಕು.

**ಓಂ ಪ್ರೇತಿಚೇತಿಚೇತ್ಯೇತದ್ಧ್ವೈ ಸರ್ವಂ ಸ್ವಸ್ತ್ಯಯನಂ ಯತ್ಪ್ರೇತಿಚೇತಿತದ್ಯೋ ಸ್ಯಪ್ರಿಯಸ್ಯಾತ್ತಮೇತೇನಾನುಮಂತ್ರಯೇತ ಪ್ರೇತಿಚೇತಿಚೇತಿಸ್ವಸ್ತ್ಯೇವಗಚ್ಛತಿ ಸ್ವಸ್ತಿಪುನ-ರಾಗಚ್ಛತೀತಿ ಬ್ರಾಹ್ಮಣಂ ಪಠೇತ್ ॥ ಏವಂ ತ್ರಿಃ ಕುರ್ಯಾತ್ ॥ ತತಃ ಕರ್ತಾ ಸ್ವಶಿರಸಿ ಬದ್ಧಾಂಜಲಿರಸ್ಮದ್ಗೋತ್ರೇ ಷಟ್ಸು ಷಟ್ಸು ಮಾಸೇಷು ಶೋಭನಮಸ್ತ್ವಿತಿ ಭವಂತೋ ಬ್ರುವಂತು ಇತಿ ದ್ವಿಜಾನ್ ಪ್ರಾರ್ಥಯೇತ್ ॥ ತೇ ಚ ತಥಾಸ್ತ್ವಿತಿ ಬ್ರೂಯುಃ ॥ ತತೋ ದ್ವಿಜಾನ್ ಸಂಪೂಜ್ಯ ತದಾಶಿಷೋ ಗೃಹೀತ್ವಾ ಸಕುಟುಂಬೋ ಭುಂಜೀತ ॥**

॥ ಇತಿ ಮಂಡಪೋದ್ವಾಸನಂ ॥

---

ಬಳಿಕ ಯಜಮಾನನು ತಲೆಯ ಮೇಲೆ ಕೈಜೋಡಿಸಿ, "**ಅಸ್ಮದ್ಗೋತ್ರೇ ... ... ಬ್ರುವಂತು**" ಎಂದು ಪ್ರಾರ್ಥಿಸಿದಾಗ, ಬ್ರಾಹ್ಮಣರು "**ತಥಾಸ್ತು**" ಎನ್ನಬೇಕು. ಬಳಿಕ ಬ್ರಾಹ್ಮಣರಿಗೆ ದಕ್ಷಿಣಾದಿಗಳನ್ನು ಕೊಟ್ಟು ಪೂಜಿಸಿ ಆಶೀರ್ವಾದ ಪಡೆಯಬೇಕು.

॥ ಮಂಡಪೋದ್ವಾಸನ ಸಮಾಪ್ತ ॥

**ಮಹಾಲಕ್ಷ್ಮೀಂ ಷೋಡಶೋಪಚಾರೈರ್ಯಥಾಚಾರಂ ಸಂಪೂಜ್ಯ ಲಿಖಿತಕ್ರಮೇಣ ನಾಮ ವಾಚಯಿತ್ವಾ ವಿಪ್ರಾಶಿಷೋ ಗೃಹೀತ್ವಾ ತೇಭ್ಯೋ ದಕ್ಷಿಣಾಂ ದದ್ಯಾತ್ ॥**

**॥ ಇತಿ ವಧೂಗೃಹಪ್ರವೇಶಃ ॥**

---

ಮೇಲೆ ಚಿನ್ನದ ಸಲಾಕೆಯಿಂದ ಕುಲದೇವತೆಯ ಹೆಸರನ್ನೂ, ತನ್ನ ಪತ್ನಿಗೆ ತಾನು ಇಡಲು ಬಯಸಿದ ಹೆಸರನ್ನೂ ಬರೆದು **"ತದಸ್ತು"** **"ಗೃಹಾವೈ"** ಮುಂತಾದ ಮಂತ್ರಗಳಿಂದ ಪ್ರತಿಷ್ಠಾಪಿಸಬೇಕು. ಆಮೇಲೆ **"ನಾಮಾನಿತೇ.."** ಎಂಬ ಮಂತ್ರವನ್ನು ಹೇಳಿ **"ಭೂರ್ಭುವಃ ಸ್ವಃ ...ನಮಃ"** ಎಂದು ಷೋಡಶೋಪಚಾರಗಳಿಂದ ಮಹಾಲಕ್ಷ್ಮಿಯ ಪೂಜೆಮಾಡಿ, ಮೊದಲು ಬರೆದ ಕ್ರಮದಲ್ಲಿ ಹೆಸರುಗಳನ್ನು ಓದಿ ಬ್ರಾಹ್ಮಣರಿಂದ ಆಶೀರ್ವಾದ ಪಡೆದು ಅವರಿಗೆ ದಕ್ಷಿಣಾದಿಗಳನ್ನು ಕೊಡಬೇಕು.

**॥ ವಧೂಗೃಹಪ್ರವೇಶ ಸಮಾಪ್ತ ॥**

# ॥ ದೇವಕೋತ್ಥಾಪನ ಮಂಡಪೋದ್ವಾಸನೇ ॥

**॥ ಶ್ರೀಃ ॥ ಕರ್ತಾ ಉಕ್ತಕಾಲೇ ಮಂಡಪಾಂತಃ ಸಪತ್ನೀಕ ಉಪವಿಶ್ಯ ಆಚಮ್ಯ ಪ್ರಾಣಾನಾಯಮ್ಯ ದೇಶಕಾಲೌ ಸಂಕೀರ್ತ್ಯ ॥ ವಿವಾಹಾಂಗತ್ವೇನ-ಸ್ಥಾಪಿತದೇವತಾನಾಮುತ್ಥಾಪನಂ ಮಂಡಪೋದ್ವಾಸನಂ ತದಂಗಂ ಗಣಪತಿ-ಪೂಜನಂ ಪುಣ್ಯಾಹವಾಚನಂ ಚ ಕರಿಷ್ಯೇ ಇತಿ ಸಂಕಲ್ಪ್ಯ ॥ ಸರ್ವಾಃ ದೇವತಾಃ ಪ್ರತ್ಯೇಕಂ ಪ್ರತ್ಯಹವತ್ಪೂಜಯಿತ್ವಾ ॥ ಓಂ ಉತ್ತಿಷ್ಠಬ್ರಹ್ಮಣಸ್ಪತೇದೇವಯಂತ-ಸ್ತ್ವೇಮಹೇ ॥ ಉಪಪ್ರಯಂತು ಮರುತಃಸುದಾನವಇಂದ್ರಪ್ರಾಶೂರ್ಭವಾ-ಸಚಾ ॥ ಓಂ ಅಭ್ಯಾರಮಿದದ್ರಯೋನಿಷಿಕ್ತಂ ಪುಷ್ಕರೇಮಧು ॥ ಅವತಸ್ಯ-ವಿಸರ್ಜನೇ ॥ ಇತಿ ವಿಸೃಜ್ಯ ಭಗವತ್ಯಾದೀನಾಂ ಮಂಡಪಾಂತಃ ತೈಲಾಭ್ಯಂಗೋ-ದ್ವರ್ತನೋಷ್ಣೋದಕಸ್ನಾನಪೂರ್ವಕಂ ಪೂಜನಂ ವಿಧಾಯ ॥ ವೇಷ್ಟನಸೂತ್ರ-ಮುನ್ಮುಚ್ಯ ಸ್ವಸ್ತಿವಾಚನಂ ಕುರ್ಯಾತ್ ॥ ತತೋ ದ್ವಿಜೈರಭಿಷೇಕಃ ಕಾರ್ಯಃ ॥ ತತ್ರಾಭಿಷೇಕಾಂತೇ ಪುರೋಧಾಸ್ತಚ್ಛಾಖಾದಿ ವಂಶಪಾತ್ರೇ ನಿಧಾಯ ತದುಪರಿ ಪ್ರಕ್ಷಿಪ್ತಾಭಿಷೇಕಜಲಂ ಸಕುಟುಂಬಯಜಮಾನಶಿರಸಿ ಕಿಂಚಿತ್ ಸ್ರಾವಯೇತ್ ॥**

---

**ದೇವಕೋತ್ಥಾಪನ ಮಂಡಪೋದ್ವಾಸನವಿಧಿಃ-** ಯಜಮಾನನು ಉಕ್ತಕಾಲದಲ್ಲಿ ಮಂಡಪದಲ್ಲಿ ಪತ್ನಿಯೊಡನೆ ಕುಳಿತು ಆಚಮನ ಪ್ರಾಣಾಯಾಮ ದೇಶಕಾಲಕೀರ್ತನಾದಿಗಳನ್ನು ಮಾಡಿ **"ವಿವಾಹಾಂಗತ್ವೇನ ...ಚ ಕರಿಷ್ಯೇ"** ಎಂದು ಸಂಕಲ್ಪ ಮಾಡಿ ಪ್ರತಿದಿನದಂತೆ ಎಲ್ಲ ದೇವತೆಗಳನ್ನೂ ಪ್ರತ್ಯೇಕವಾಗಿ ಪೂಜಿಸಬೇಕು. ಆಮೇಲೆ **"ಉತ್ತಿಷ್ಠಬ್ರಹ್ಮಣಸ್ಪತೇ..."** ಎಂದು ಅಕ್ಷತೆ ಹಾಕಿ ವಿಸರ್ಜಿಸಿ ಭಗವತೀ ಮುಂತಾದ ದೇವತೆಗಳಿಗೆ ತೈಲಾಭ್ಯಂಗ ಬಿಸಿನೀರಿನ ಸ್ನಾನ ಮುಂತಾದವುಗಳನ್ನು ಮಾಡಿಸಿ ಪೂಜೆಮಾಡಿ, ಸುತ್ತಿಕಟ್ಟಿದ ನೂಲನ್ನು ಬಿಚ್ಚಿ ಸ್ವಸ್ತಿವಾಚನ ಮಾಡಬೇಕು. ಆಮೇಲೆ ಬ್ರಾಹ್ಮಣರು ಅಭಿಷೇಕ ಮಾಡಬೇಕು. ಅಭಿಷೇಕಾನಂತರ ಪುರೋಹಿತನು ಆ ಪಲ್ಲವಶಾಖೆಗಳನ್ನು ಒಂದು ಬಿದಿರಿನ ಪಾತ್ರೆಯಲ್ಲಿಟ್ಟು ಅದರ ಮೇಲೆ ಅಭಿಷೇಕಜಲವನ್ನು ಸುರಿಯಬೇಕು. ಹಾಗೆ ಸುರಿದ ನೀರನ್ನು ಕುಟುಂಬಸಮೇತನಾಗಿ ಕುಳಿತ ಯಜಮಾನನ ತಲೆಯ ಮೇಲೆ **"ಪ್ರೇತಿಚೇತಿ..."** ಎಂಬ ವಚನಮಂತ್ರವನ್ನು ಮೂರು ಬಾರಿ ಹೇಳಿ ಸಿಂಪಡಿಸಬೇಕು.

**ಓಂ ಪ್ರೇತಿಚೇತಿಚೇತ್ಯೇತದ್ವೈ ಸರ್ವಂ ಸ್ವಸ್ತ್ಯಯನಂ ಯತ್ಪ್ರೇತಿಚೇತಿತದ್ಯೋ ಸ್ಯಪ್ರಿಯಸ್ಯಾತ್ತಮೇತೇನಾನುಮಂತ್ರಯೇತ ಪ್ರೇತಿಚೇತಿಚೇತಿಸ್ವಸ್ತ್ಯೇವಗಚ್ಛತಿ ಸ್ವಸ್ತಿಪುನ-ರಾಗಚ್ಛತೀತಿ ಬ್ರಾಹ್ಮಣಂ ಪಠೇತ್ ॥ ಏವಂ ತ್ರಿಃ ಕುರ್ಯಾತ್ ॥ ತತಃ ಕರ್ತಾ ಸ್ವಶಿರಸಿ ಬದ್ಧಾಂಜಲಿರಸ್ಮದ್ಗೋತ್ರೇ ಷಟ್ಸು ಷಟ್ಸು ಮಾಸೇಷು ಶೋಭನಮಸ್ತ್ವಿತಿ ಭವಂತೋ ಬ್ರುವಂತು ಇತಿ ದ್ವಿಜಾನ್ ಪ್ರಾರ್ಥಯೇತ್ ॥ ತೇ ಚ ತಥಾಸ್ತ್ವಿತಿ ಬ್ರೂಯುಃ ॥ ತತೋ ದ್ವಿಜಾನ್ ಸಂಪೂಜ್ಯ ತದಾಶಿಷೋ ಗೃಹೀತ್ವಾ ಸಕುಟುಂಬೋ ಭುಂಜೀತ ॥**

**॥ ಇತಿ ಮಂಡಪೋದ್ವಾಸನಂ ॥**

---

ಬಳಿಕ ಯಜಮಾನನು ತಲೆಯ ಮೇಲೆ ಕೈಜೋಡಿಸಿ, **"ಅಸ್ಮದ್ಗೋತ್ರೇ ... ... ಬ್ರುವಂತು"** ಎಂದು ಪ್ರಾರ್ಥಿಸಿದಾಗ, ಬ್ರಾಹ್ಮಣರು **"ತಥಾಸ್ತು"** ಎನ್ನಬೇಕು. ಬಳಿಕ ಬ್ರಾಹ್ಮಣರಿಗೆ ದಕ್ಷಿಣಾದಿಗಳನ್ನು ಕೊಟ್ಟು ಪೂಜಿಸಿ ಆಶೀರ್ವಾದ ಪಡೆಯಬೇಕು.

॥ ಮಂಡಪೋದ್ವಾಸನ ಸಮಾಪ್ತ ॥

## ॥ ಔಪಾಸನಾಖ್ಯಃ ಸಾಯಂಪ್ರಾತರ್ಹೋಮನಿರ್ಣಯಃ ॥

**ಗೃಹ್ಯಾಗ್ನಿಮತಃ ಸಾಯಂಪ್ರಾತರೌಪಾಸನಹೋಮಪ್ರಯೋಗೋತ್ರಾಪೇಕ್ಷಿತಃ ॥ ಕೃತದಾರೋ ನ ತಿಷ್ಠೇತ ಕ್ಷಣಮಪ್ಯಗ್ನಿನಾ ವಿನಾ । ತಿಷ್ಠೇತ ಚ ದ್ವಿಜೋ ವ್ರಾತ್ಯಃ ತಥಾ ಚ ಪತಿತೋ ಭವೇತ್ ॥ ೧ ॥ ಶ್ರೌತೇ ಕರ್ಮಣಿ ನೋ ಶಕ್ತೋ ಜ್ಞಾನದ್ರವ್ಯಾದ್ಯಭಾವತಃ ॥ ಸ್ಮಾರ್ತಂ ಕುರ್ಯಾದ್ಯಥಾ ಶಕ್ತೋऽತ್ರಾಪ್ಯಾಚಾರಂ ಲಭೇತ್ಸದಾ ॥ ೨ ॥ ನಾವಸಥ್ಯಾತ್ಪರೋ ಧರ್ಮೋ ನಾವಸಥ್ಯಾತ್ಪರಂ ತಪಃ ॥ ನಾವಸಥ್ಯಾತ್ಪರಂ ದಾನಂ ನಾವಸಥ್ಯಾತ್ಪರಂ ಧನಂ ॥ ನಾವಸಥ್ಯಾತ್ಪರಂ ಶ್ರೇಯೋ ನಾವಸಥ್ಯಾತ್ಪರಂ ಯಶಃ ॥ ನಾವಸಥ್ಯಾತ್ಪರಾ ಸಿದ್ಧಿಃ ನಾವಸಥ್ಯಾತ್ಪರಾಗತಿಃ । ನಾವಸಥ್ಯಾತ್ಪರಂ ಸ್ಥಾನಂ ನಾವಸಥ್ಯಾತ್ಪರಂ ವ್ರತಂ ॥ (ಗೃಹ್ಯಕಾಂಡಂ) ಸ್ಮೃತಿಕಾರಃ ॥ ವೈವಾಹಿಕೇಗ್ನೌ ಕುರ್ವೀತ ಗೃಹ್ಯಂ ಕರ್ಮ ಯಥಾವಿಧಿ । ಪಂಚಯಜ್ಞವಿಧಾನಂ ಹಿ ಪಂಕ್ತಿಂ ಚಾನ್ವಾಹಿಕೀ ಗೃಹೀ ॥ ಮನು ಅ. ೩ ಶ್ಲೋ. ೬೩ ॥ ಗೃಹಕಾರಿಕಾಯಾಂ ಸ ತು ಯಸ್ಮಿನ್ವಿವಾಹಾಗ್ನಿರುತ್ಪನ್ನೋऽಹನಿ ತಸ್ಯ ತು । ಯತ್ಸಾಯಂ ತತ ಆರಭ್ಯ ಗೃಹ್ಯಂ ಪರಿಚರೇತ್ಸ್ವಯಂ ॥ ಆತ್ಮನೋऽಸಂಭವೇ ಪತ್ನೀಪುತ್ರಾದಯ ಇತಿ ಸ್ಥಿತಿಃ ॥ ಅನ್ಯಸ್ತು ಮನ್ಯತೇ ಪತ್ನೀ ಕುಮಾರ್ಯೋಸ್ತದಹೋಮಕಂ ॥ ೨ ॥**

---

**ಔಪಾಸನವೆಂಬ ಸಾಯಂಪ್ರಾತರ್ಹೋಮನಿರ್ಣಯ:–** ವಿವಾಹವಾದಂದಿನಿಂದ ಗೃಹ್ಯಾಗ್ನಿಯು ಆರಂಭವಾಗುತ್ತದೆ. ಗೃಹ ಎಂದರೆ ಗೃಹಣೀ ಎಂದರ್ಥ. ಗೃಹಿಣಿಯ ಸ್ವೀಕಾರವಾದಂದಿನಿಂದ ಗೃಹಾಗ್ನಿ ಸೇವನವನ್ನು ಮಾಡಬೇಕು. ಗೃಹಾಗ್ನಿಯನ್ನು ಉದ್ದೇಶಿಸಿ ಸಾಯಂಪ್ರಾತರ್ಹೋಮಗಳ ವಿಧಿಯನ್ನು ಕೊಡಲಾಗಿದೆ.

ವಿವಾಹಕಾಲದಲ್ಲಿ ಕನ್ಯೆಯ ಮನೆಯಲ್ಲಿ ವಿವಾಹಹೋಮ ಮಾಡಿದ ನಂತರ ಗೃಹ ಪ್ರವೇಶದ ಸಮಯಕ್ಕೆ ಗೃಹಪ್ರವೇಶನೀಯ ಹೋಮವನ್ನೂ ಮಾಡಿ ಸಮಿಧೆಗಳ ಮೇಲೆ ಅಗ್ನಿಯನ್ನು ಆವಾಹಿಸಿ ಸ್ವಗೃಹಕ್ಕೆ ತೆಕ್ಕೊಂಡು ಬರುತ್ತಾರೆ. ಬಂದ ನಂತರ ಔಪಾಸನ ಕುಂಡ ಅಥವಾ ಸ್ಥಂಡಿಲದ ಮೇಲೆ ಅದನ್ನು ಪ್ರತ್ಯವರೋಹಣ ಮಾಡಿ ಪ್ರಜ್ವಲಿಸಿ ಗೃಹ ಪ್ರವೇಶನೀಯ ಅಥವಾ ಸ್ಥಾಲೀಪಾಕಾದಿ ವಿಧಿಗಳನ್ನು ಮಾತ್ರ ಮಾಡುವುದು ಕಂಡುಬರುವುದಿಲ್ಲ. ವಿವಾಹಹೋಮದ ಸಂಗಡವೇ ಗೃಹಪ್ರವೇಶನೀಯವನ್ನೂ ಮಾಡಿ ಮುಗಿಸುತ್ತಾರೆ. ಇದು ಸರಿಯಲ್ಲ. ಅಗ್ನಿಯ ಸಮಾರೋಪ ಮಾಡಿಕೊಂಡು ತನ್ನ ಮನೆಗೆ ಬಂದ ಮೇಲೆ ಪುನಃಸಂಧಾನ ವಿಧಿಯಿಂದ ಅಗ್ನಿಯನ್ನು ಸಿದ್ಧಮಾಡಿ ಗೃಹಪ್ರವೇಶನೀಯ ಹೋಮವನ್ನೂ ಸಾಯಂಪ್ರಾತರೌಪಾಸನವನ್ನೂ ಮಾಡಬೇಕು.

## ಹವನದ್ರವ್ಯಾಣಿ:-

**ವ್ರೀಹಿಶ್ಯಾಮಾಕಯವಾನಾಂ ತಂಡುಲಾಃ ಪಯೋದಧಿಸರ್ಪಿರ್ಯವ-ವ್ರೀಹಿ ಗೋಧೂಮಪ್ರಿಯಂಗವಃ ಸ್ವರೂಪೇಣಾಪಿ ಹೋಮ್ಯಾಃ ತಿಲಾಸ್ತು ಸ್ವರೂಪೇಣೈವ ॥ ಶತಂ ಚತುಃಷಷ್ಟಿರ್ವಾಹುತಿಂ ವ್ರೀಹಿತುಲ್ಯಾನಾಂ । ದ್ರವಂ ಹವಿಃ ಸ್ರುವೇಣೈವ ಪಾಣಿನಾ ಕಠಿಣಂ ಹವಿಃ । ಕರ್ಷಪ್ರಮಾಣಮಾಜ್ಯಂ ಸ್ಯಾನ್ಮಧು ಕ್ಷೀರಂ ಚ ತತ್ಸಮಂ ॥ ಇತಿ ಸಿದ್ಧಾಂತಶೇಖರೇ ॥ ಪ್ರಾದೇಶ-ಮಾತ್ರಾಃ ಸಮಿಧಃ ಅನ್ನಂ ಗ್ರಾಸಸಮಂ ಗ್ರಾಹ್ಯಂ ॥ ಉತ್ತಾನೇನೈವ ಹಸ್ತೇನ ಹ್ಯಂಗುಷ್ಠಾಗ್ರೇಣ ಪೀಡಿತಂ । ಸಂಹತಾಂಗುಲಿಪಾಣಿಸ್ತು ವಾಗ್ಯತೋ ಜುಹು-ಯಾದ್ಧವಿರಿತಿ ॥ ಗೋ. ಗೃ. ಸೂ. ೮೧ ॥**

## ಹೋಮೇ ಅಗ್ನಿಸ್ವರೂಪಂ:-

**ಬಹು ಶುಷ್ಕೇಂಧನೇ ಚಾಗ್ನೌ ಸುಸಮಿದ್ಧೇ ಹುತಾಶನೇ ॥ ವಿಧೂಮೇ ಲೇಲಿಹಾನೇ ಚ ಹೋತವ್ಯಂ ಕರ್ಮಸಿದ್ಧಯೇ ॥ ದೀಪಿಕಾಯಾಮಪಿ:-ಯತಃ ಕಾಷ್ಠಂ ತತಃ ಶ್ರೋತ್ರಂ ಯತೋ ಧೂಮೋಥ ನಾಸಿಕಾ । ಯತೋಲ್ಪಜ್ವಲನಂ ನೇತ್ರಂ ಯತೋ ಭಸ್ಮ ತತಃ ಶಿರಃ । ಯತಃ ಪ್ರಜ್ವಲಿತೋ ವಹ್ನಿಃ ತನ್ಮುಖಂ ಜಾತವೇದಸಃ । ಅತೋ ಮುಖಾತಿರಿಕ್ತೇಷು ಹೋಮೇನಿಷ್ಟತ್ವಮುಕ್ತಂ । ಅತಃ ವಹ್ನೇರ್ಮುಖಸಂಜ್ಞೇ ಪ್ರಜ್ವಲಿತಾಂಗೇ ಜುಹುಯಾತ್ ॥**

---

ಅಗ್ನಿಯ ಉಪಾಸನಾರೂಪವಾದ ಹೋಮಕ್ಕೆ ಔಪಾಸನವೆಂದು ಹೆಸರು. ವಿವಾಹವಾದ ನಂತರ ಒಂದು ಕ್ಷಣವೂ ಅಗ್ನಿಯನ್ನು ಬಿಟ್ಟಿರಬಾರದು. ಅಗ್ನಿಯನ್ನು ಬಿಟ್ಟವನು ವ್ರಾತ್ಯ ಅಥವಾ ಪತಿತನೆನಿಸುತ್ತಾನೆ. ಜ್ಞಾನ, ದ್ರವ್ಯ ಮುಂತಾದುವುಗಳ ಅಭಾವದಿಂದ ಶ್ರೌತಕರ್ಮಗಳನ್ನು ಮಾಡಲು ಅಸಮರ್ಥನಾದವನು ಯಥಾಶಕ್ತಿ ಸ್ಮಾರ್ತಕರ್ಮಗಳನ್ನು ಮಾಡಬೇಕು. ಸ್ಮಾರ್ತಾಗ್ನಿಗೆ ಆವಸಥ್ಯ (ಮನೆಯಲ್ಲಿರುವ ಅಗ್ನಿ) ಎಂಬ ಹೆಸರಿದೆ. ಆವಸಥ್ಯಸೇವನೆಯಿಂದ ಎಲ್ಲ ಧರ್ಮಕರ್ಮಗಳನ್ನು ಮಾಡಿದರೆ ಶ್ರೇಯಸ್ಸು, ಬ್ರಹ್ಮತೇಜಸ್ಸು, ಮಾನ, ಸುಖ, ಐಶ್ವರ್ಯ, ಸಿದ್ಧಿ, ಮೋಕ್ಷ, ಇತ್ಯಾದಿಗಳು ಲಭಿಸುತ್ತವೆ.

**"ಗೃಹೇ ಭವಂ ಗೃಹ್ಯಂ"** ಅಥವಾ **"ಗೃಹಾತ್ ಭವಂ ಗೃಹ್ಯಂ"** :- ಮನೆಯಲ್ಲಿ ಆಗುವುದು ಅಥವಾ ಗೃಹಾತ್ (ಪತ್ನಿಯಿಂದ) ಆಗುವುದು ಎಂದು ಎರಡು ರೀತಿಯ ಅರ್ಥವಾಗುತ್ತದೆ. ಗೃಹ ಎಂದರೆ ಮನೆ ಮತ್ತು ಪತ್ನೀ ಎಂಬ ಎರಡೂ ಅರ್ಥಗಳಿವೆ. **"ನ ಗೃಹಂ ಗೃಹಮಿತ್ಯಾಹುಃ ಗೃಹಿಣೀ ಗೃಹಮುಚ್ಯತೇ" "ಸ್ವಗೃಹೋ ಗೃಹಮಾಗತಃ"** ಈ ಮಾತುಗಳಿಂದ ಗೃಹ ಎಂದರೆ ಗೃಹಿಣೀ ಎಂದು ಅರ್ಥವಾಗುತ್ತದೆ.

ವೈಜ್ಞಾನಿಕ ದೃಷ್ಟಿಯಿಂದ ನೋಡಿದರೆ ಹೋಮದಿಂದ ಉಂಟಾದ ವಾಯುವಿನಿಂದ ವಾತಾವರಣದ ಮೇಲೆ ಅದ್ಭುತ ಪರಿಣಾಮವುಂಟಾಗಿ ಮನುಷ್ಯನ ಆರೋಗ್ಯ, ಆಯುಸ್ಸು,

## ಗೃಹ್ಯಾಗ್ನಿಮುಹೂರ್ತ:-

**ಭದ್ರಾವ್ಯತೀಪಾತಾದ್ಯಸಂಭವೇ- ಪ್ರಾಜಾಪತ್ಯೇ ಪೂಷಭೇ ಸಿದ್ಧಿ ದೈವೇ ಪುಷ್ಯ ಜ್ಯೇಷ್ಠಾಸ್ವೈಂದವೇ ಕೃತ್ತಿಕಾಸು । ಅಗ್ನ್ಯಾಧಾನಮುತ್ತರಾಣಾಂ ತ್ರಯೇಽಪಿ ಶ್ರೇಷ್ಠಂ ಪ್ರೋಕ್ತಂ ಪ್ರಾಕ್ತನೈರ್ವಿಪ್ರಮುಖ್ಯೈಃ ॥**

**ಪ್ರಾದುಷ್ಕರಣಕಾಲಾತ್ಯಯೇ ಸಮಸ್ತವ್ಯಾಹೃತಿಭಿರೇಕಾ ಆಜ್ಯಾಹುತಿಃ ಕಾರ್ಯಾ ತಥಾ ಚ ಗೃಹ್ಯಕಾರಿಕಾ - ಪ್ರಾಯಶ್ಚಿತ್ತವಿಶೇಷೇಣ ಯತ್ರ ನೋಕ್ತೋ ಭವೇದ್ವಿಧಿಃ । ಹೋತವ್ಯಾಜ್ಯಾಹುತಿಸ್ತತ್ರ ಭೂರ್ಭುವಃ ಸ್ವರಿತೀತಿ ಚ ॥**

---

ಶಕ್ತಿವರ್ಧನೆ ಇತ್ಯಾದಿಗಳು ವೃದ್ಧಿಯಾಗುತ್ತವೆ. ಯಜ್ಞಕುಂಡದ ಸಮೀಪವಿದ್ದವರ ಮೇಲಂತೂ ಒಳ್ಳೆಯ ಪರಿಣಾಮ ಆಗಿಯೇ ಆಗುತ್ತದೆ. ಅದಕ್ಕಿಂತ ಹೆಚ್ಚಾಗಿ ವಾಯು ಮಂಡಲವು ಶುದ್ಧವಾಗಿ ಇಡೀ ಲೋಕಕ್ಕೆ ಒಳಿತಾಗುತ್ತದೆ. ತನ್ನ ಹಾಗೂ ತನ್ನ ಕುಟುಂಬದ ಕ್ಷೇಮದ ದೃಷ್ಟಿಯಿಂದಲಾದರೂ ಪ್ರತಿದಿನವೂ ದಿನಕ್ಕೆರಡು ಸಲ ಹೋಮವನ್ನು ಮಾಡಲೇಬೇಕು. ಯಜ್ಞದಲ್ಲಿ ಹೋಮಿಸುವ ಸಾಮಗ್ರಿಗಳ ಗುಣವನ್ನು ಪರಿಶೀಲಿಸಿದರೆ ಯಜ್ಞಗಳ ಉಪಯುಕ್ತತೆಯ ಕುರಿತು ಯಾರಿಗೂ ಸಂದೇಹ ಬರಲಾರದು. ನಮ್ಮ ಪ್ರಾಚೀನ ಋಷಿ ಮುನಿಗಳಿಗೆ ಈ ವಿಚಾರವು ಚೆನ್ನಾಗಿ ತಿಳಿದಿತ್ತು ಆದ್ದರಿಂದಲೇ ಅವರು ಈ ಔಪಾಸನಾದಿ ಕರ್ಮಗಳನ್ನು ಮಾಡಲೇಬೇಕೆಂದು ವಿಧಿಸಿದ್ದಾರೆ.

ಪಂಚಮಹಾಯಜ್ಞಗಳಿಗೆ ಮಹತ್ತ್ವದ ಸ್ಥಾನವಿರುವುದರಿಂದ ಗೃಹಸ್ಥನಾದವನು ಅವುಗಳನ್ನು ತಪ್ಪದೆ ಮಾಡಬೇಕೆಂಬ ವಿಧಿ ಇದೆ. ಆದರೆ ಈ ಕಾಲದಲ್ಲಿ ಇವುಗಳನ್ನು ಯಾರೂ ಮಾಡುವುದಿಲ್ಲ. ಇದೇ ರೀತಿ ಪಾರ್ವಣ ಸ್ಥಾಲೀಪಾಕ, ಔಪಾಸನ ಹೋಮ ಮುಂತಾದವುಗಳನ್ನೂ ಹವಿರ್ಯಜ್ಞ ಸಂಸ್ಕಾರಗಳಲ್ಲಿ ಗಣನೆ ಮಾಡಿದ್ದಾರೆ. ವಿವಾಹಾಗ್ನಿಯ ಮೇಲೆಯೇ ಎಲ್ಲ ಗೃಹ್ಯಕರ್ಮಗಳನ್ನೂ, ಪಂಚ ಮಹಾಯಜ್ಞ, ಉಪಾಕರ್ಮೋತ್ಸರ್ಜನ, ವಾಸ್ತುವಿಧಿ, ಸರ್ವಕಾಮ್ಯವಿಧಿ ಇತ್ಯಾದಿಗಳನ್ನೂ ಮಾಡಬೇಕು. ಇಷ್ಟೇ ಅಲ್ಲ ಅಡಿಗೆಯನ್ನು ಸಹ ಗೃಹ್ಯಾಗ್ನಿಯ ಮೇಲೆಯೇ ಮಾಡಬೇಕು.

**ಗೃಹ್ಯಕಾರಿಕೆಯಲ್ಲಿ:-** ವಿವಾಹಾಗ್ನಿಯು ಸಿದ್ಧವಾದ ದಿನವೇ ಸಾಯಂ ಔಪಾಸನವನ್ನೂ ಮರುದಿನ ಪ್ರಾತರೌಪಾಸನವನ್ನೂ, ಈ ಕ್ರಮದಿಂದ ಮೊದಲು ಸಾಯಂ ಮತ್ತೆ ಪ್ರಾತರೌಪಾಸನವನ್ನು ಆರಂಭಿಸಬೇಕೆಂದು ಹೇಳಿದ್ದಾರೆ. ಹೆಂಡತಿಯಿಂದ ತನಗೆ ಏನಾದರೂ ತೊಂದರೆ ಇದ್ದರೆ, ಅವಳಿಗೂ ರಜಸ್ವಲಾದಿ ದೋಷಗಳಿದ್ದರೆ, ಮಗನಿಂದ ಇಲ್ಲವೇ ಮಗಳು, ಸಂಬಂಧಿಕ, ಋತ್ವಿಜ, ಶಿಷ್ಯ ಮುಂತಾದವರಿಂದಲಾದರೂ ಔಪಾಸನವನ್ನು ಮಾಡಿಸಲೇಬೇಕು. ಇದಕ್ಕೆ ಎಂದಿಗೂ ಚ್ಯುತಿ ಬರಬಾರದು.

**"ಹವನದ್ರವ್ಯಾನಾಮಗ್ನೌ ಹವನೇನ ವಾಯುರ್ವಿಶುದ್ಧ್ಯತಿ"** ಎಂಬ ಮಾತಿನಂತೆ, ಹವನದಿಂದ ವಾಯುವು ಶುದ್ಧವಾಗಿ ರೋಗಾದಿಗಳು ನಾಶವಾದ ಅನೇಕ ಉದಾಹರಣೆಗಳಿವೆ.

## ಸಮಸ್ಯಹೋಮಃ-

**ಕಾಲದ್ವಯೇಪ್ಯಶಕ್ತಶ್ಚೇದೇಕಸ್ಮಿನ್ ಕಾಲ ಏವ ವಾ । ಪ್ರಾಗೇವೋಕ್ತೇನ ವಿಧಿನಾ ಸಮಸ್ಯಂ ಸಾಯಮಾಚರೇದಿತಿ ಶಾಕಲಃ । ಸಾಯಂ ಪ್ರಾತರ್ಹೋಮೌ ಸಮಸ್ಯಂ ಕರಿಷ್ಯೇ ಇತಿ ಸಂಕಲ್ಪ್ಯ ಏಕತಂತ್ರೇಣ ಕುರ್ಯಾತ್ ॥**

**ದರ್ಶಪೌರ್ಣಮಾಸಸ್ಥಾಲೀಪಾಕಃ ಅತ್ರಾಪೇಕ್ಷಿತಃ । ಸ ಪೂರ್ವಪ್ರಸಂಗಮನುಸೃತ್ಯ ಗೃಹಯಜ್ಞಾರಂಭೇ ಗತ ಏವ ॥ ನಷ್ಟಾಗ್ನೇಃ ಪುನಃ ಸಂಧಾನಂ "ವಿಚ್ಛಿನ್ನಸ್ಯ ಗೃಹ್ಯಾಗ್ನೇಃ ಪುನಃ ಸಂಧಾನ ಪ್ರಯೋಗೋ" ಪ್ರಸಂಗಮನುಸೃತ್ಯ ಗರ್ಭಾಧಾನಪ್ರಯೋಗಾರಂಭೇ ಸಂಗೃಹೀತೋಸ್ತಿ ॥**

---

**ಹವನದ್ರವ್ಯಗಳು:-** ಭತ್ತ, ಶ್ಯಾಮಾಕ, ಯವ ಇವುಗಳ ಅಕ್ಕಿ, ಹಾಲು, ಮೊಸರು, ತುಪ್ಪ, ಯವ, ವ್ರೀಹಿ, ಗೋಧಿ, ಪ್ರಿಯಂಗು ಮತ್ತು ಎಳ್ಳು. ಅಕ್ಕಿ ಮೊದಲಾದ ಗಟ್ಟಿ ವಸ್ತುಗಳನ್ನು ಒಂದು ಆಹುತಿಗೆ ೧೦೦ ಅಥವಾ ೬೪ ತೆಗೆದುಕೊಳ್ಳಬೇಕು. ಘನವಸ್ತುಗಳನ್ನು ಉತ್ತಾನ ಹಸ್ತದಿಂದಲೂ, ದ್ರವಗಳನ್ನು ಸ್ರುವದಿಂದಲೂ ಹೋಮಿಸಬೇಕು. ಎರಡು ತೊಲೆಯಷ್ಟು ಪ್ರತಿಯೊಂದು ಆಹುತಿಯ ಪ್ರಮಾಣವಿರಬೇಕು. ಸಮಿಧೆ ಚೋಟುದ್ದವಾಗಿಯೂ ಅನ್ನವು ಒಂದು ಗ್ರಾಸದಷ್ಟೂ ಇರಬೇಕು.

**ಹೋಮಾಗ್ನಿಯ ಸ್ವರೂಪ:-** ಕಟ್ಟಿಗೆ ಇದ್ದಲ್ಲಿ ಕಿವಿ, ಹೊಗೆ ಇದ್ದಲ್ಲಿ ಮೂಗು, ಸ್ವಲ್ಪ ಜ್ವಾಲೆ ಇದ್ದಲ್ಲಿ ಕಣ್ಣು, ಭಸ್ಮವಿದ್ದಲ್ಲಿ ತಲೆ, ಪ್ರಜ್ವಲಿಸುವ ಜ್ವಾಲೆ ಇದ್ದಲ್ಲಿ ಮುಖ, ಈ ರೀತಿ ಇರುವುದರಿಂದ ಉರಿಯುವ ಜ್ವಾಲೆ (ಮುಖ) ಇರುವಲ್ಲಿಯೇ ಆಹುತಿಗಳನ್ನು ಕೊಡಬೇಕು.

**ಗೃಹ್ಯಾಗ್ನಿ ಪರಿಗ್ರಹದ ಮುಹೂರ್ತ:-** ಭದ್ರಾ ವ್ಯತೀಪಾತಾದಿ ದುರ್ಯೋಗಗಳಿರಬಾರದು. ರೋಹಿಣೀ, ರೇವತಿ, ವಿಶಾಖಾ, ಪುಷ್ಯ, ಜ್ಯೇಷ್ಠಾ, ಮೃಗಶಿರಾ, ಕೃತ್ತಿಕಾ ಮತ್ತು ಮೂರು ಉತ್ತರಾ ಇವುಗಳಲ್ಲಿ ಪ್ರಥಮ ಅಗ್ನ್ಯಾಧಾನವನ್ನಾರಂಭಿಸಬೇಕು. ಹೋಮ ಕಾಲ ಮೀರಿದ್ದರೆ ಮೊದಲು ಓಂ ಭೂರ್ಭುವಃ ಸ್ವಃ ಸ್ವಾಹಾ ಎಂದು ಒಂದು ಆಹುತಿ ಕೊಟ್ಟು ಬಳಿಕ ಹೋಮ ಮಾಡಬೇಕು.

ಹವನದ್ರವ್ಯದ ಜ್ವಲನದಿಂದ ಆರೋಗ್ಯವೃದ್ಧಿಯಾಗುವುದರಿಂದ ಬೇರೆ ಬೇರೆ ಋತುಗಳಲ್ಲಿ ಅವುಗಳ ಪ್ರಮಾಣ ಭಿನ್ನವಾಗಿರುತ್ತದೆ. ಹವನದ್ರವ್ಯವು ೪ ವಿಧವಾಗಿರುತ್ತದೆ. ೧. ಪುಷ್ಟಿಕಾರಕ ಪದಾರ್ಥ:- ತುಪ್ಪ, ಹಾಲು, ಹಣ್ಣು ಇತ್ಯಾದಿ. ೨. ಮಿಷ್ಟಪದಾರ್ಥ:- ಜೇನು, ಗೋಧಿ, ದ್ರಾಕ್ಷಿ ಇತ್ಯಾದಿ. ೩. ರೋಗನಾಶಕ:- ಮುತ್ತುಗ, ಉತ್ತರಾಣೀ, ಅಶ್ವತ್ಥ, ಔದುಂಬರ, ದೂರ್ವೆ, ದರ್ಭೆ ಇತ್ಯಾದಿ. ೪. ಸುಗಂಧಕಾರಕ:- ಕಸ್ತೂರಿ, ಕೇಸರ, ಅಗರು, ಶ್ವೇತಚಂದನ ಇತ್ಯಾದಿ.

**ಸಮಸ್ಯಹೋಮ:-** ಎರಡು ಹೊತ್ತು ಔಪಾಸನ ಮಾಡಲು ಅಸಾಧ್ಯವಾದರೆ, ಸಾಯಂಕಾಲ ಒಂದೇ ಸಲ **"ಸಾಯಂಪ್ರಾತರೌಪಾಸನ...ಕರಿಷ್ಯೇ"** ಎಂದು ಸಂಕಲ್ಪ ಮಾಡಿ ಏಕತಂತ್ರದಿಂದ ಮಾಡಬೇಕು.

## ಆಯತನಸಂಸ್ಕಾರ:-

**ಶುದ್ಧದೇಶೇ ಉಕ್ತರೀತ್ಯಾ ಆಯತನಂ ಸ್ಥಂಡಿಲಂ ವಾ ನಿರ್ಮಾಯ ಗೋಮಯೇನೋಪಲಿಪ್ಯ ಗಂಧಾದಿಭಿರಲಂಕೃತ್ಯ ಯಜ್ಞೀಯಶಕಲಮೂಲೇನೋ- ಲ್ಲಿಖ್ಯ ಲೇಖಾಸು ಶಕಲಂ ಪ್ರಾಗಗ್ರಂ ನಿಧಾಯ ಆಯತನಂ ಸ್ಥಂಡಿಲಂ ವಾ ಅಂಬು ಭಿರಭ್ಯುಕ್ಷ್ಯ ಶಕಲಮಾಗ್ನೇಯ್ಯಾಂ ದಿಶಿ ನಿರಸ್ಯ ಅಪಉಪಸ್ಪೃಶೇತ್ ॥**

## ಹೋಮಕಾಲ:-

**ಸಾಯಂ ಸೂರ್ಯಾಸ್ತಾನಂತರಂ ನವನಾಡಿಕಾಪರ್ಯಂತಂ ಮುಖ್ಯಃ । ತತಃ ಆಪ್ರಾತರ್ಗೌಣಃ । ಪ್ರಾತಃ ಸೂರ್ಯೋದಯೋತ್ತರಂ ದಶಘಟಿಕಾ. ಪರ್ಯಂತಂ ಮುಖ್ಯಃ । ತತ ಆಸಾಯಂ ಗೌಣಃ । ಇತಿ ಧರ್ಮಾಬ್ಧಿಃ ।**

---

**ದರ್ಶಪೌರ್ಣಮಾಸ ಸ್ಥಾಲೀಪಾಕ:-** ಗೃಹ್ಯಾಗ್ನಿಸಿದ್ಧಿಗಾಗಿ ದರ್ಶಸ್ಥಾಲೀಪಾಕ ಮತ್ತು ಪೌರ್ಣಮಾಸೀ ಸ್ಥಾಲೀಪಾಕಗಳನ್ನು ಮಾಡಬೇಕು. ನಿತ್ಯದ ಪ್ರಾತರೌಪಾಸನವನ್ನು ಮಾಡಿ, ಆಚಮನ ಪ್ರಾಣಾಯಾಮ ದೇಶಕಾಲ ಸಂಕೀರ್ತನಾದಿಗಳನ್ನು ಮಾಡಿ, **"ದರ್ಶಪೂರ್ಣ- ಮಾಸಾಭ್ಯಾಂ ಸ್ಥಾಲೀಪಾಕಾಭ್ಯಾಂ ಯಕ್ಷ್ಯೇ"** ಎಂದು ಸಂಕಲ್ಪ ಮಾಡಿ ಸ್ಥಾಲೀಪಾಕಪ್ರಯೋಗವನ್ನು ಮಾಡಬೇಕು. ವಿವಾಹಾಗ್ನಿ ನಷ್ಟವಾಗಿದ್ದರೆ, ಈ ಮೊದಲು ಹೇಳಿದ **"ಗೃಹಾಗ್ನಿ ಪುನಃಸಂಧಾನ"** ವಿಧಿಯಿಂದ ಅದನ್ನು ಪುನಃ ಪಡೆದು ಔಪಾಸನ ಮಾಡಬೇಕು. ಅದರಲ್ಲಿ ಆಜ್ಯಾಹುತಿ ಲಾಜಾಹುತಿ ಹೃದಯಾಂಜನ ಇತ್ಯಾದಿ ವಿವಾಹಹೋಮದ ತಂತ್ರವಿದೆ. ಇಲ್ಲಿ ಪತ್ನಿಯ ಅಂಜಲಿಯಿಂದಲೇ ಲಾಜಹೋಮ ಮಾಡುವುದಾದರೂ ಆಹುತಿಯನ್ನು ತಾನೇ ಕೊಡಬೇಕು. ಇತರ ಬಂಧುಗಳಿಂದ ಕೊಡಿಸಬಾರದು.

**ಆಯತನ ಸಂಸ್ಕಾರ:-** ಔಪಾಸನ ಹೋಮಕ್ಕೆ ಔಪಾಸನ ಕುಂಡಲಕ್ಷಣದಲ್ಲಿ ಹೇಳಿದಂತೆ ಮನೆಯ ಈಶಾನ್ಯ ದಿಕ್ಕಿನಲ್ಲಿ ಶುಚಿಯಾದ ದೇಶದಲ್ಲಿ ಕುಂಡವನ್ನು ನಿರ್ಮಿಸಬೇಕು. ನಂತರ ಅದನ್ನು ಸ್ಥಾಲೀಪಾಕದಲ್ಲಿ ಹೇಳಿದಂತೆ ಗೋಮಯಾದಿಗಳಿಂದ ಶುದ್ಧಗೊಳಿಸಿ, ಗಂಧಾದಿಗಳಿಂದ ಅಲಂಕರಿಸಿ, ಸಮಿಧೆಯಿಂದ ಗೆರೆ ಎಳೆಯುವುದು ಇತ್ಯಾದಿ ಕ್ರಿಯೆಗಳನ್ನು ಮಾಡಬೇಕು.

**ಹೋಮಕಾಲ:-** ಸಂಜೆ ಸೂರ್ಯಾಸ್ತದ ನಂತರ ೯ ಘಳಿಗೆಯ ವರೆಗೆ, ಬೆಳಿಗ್ಗೆ ಸೂರ್ಯೋದಯಾನಂತರ ೧೦ ಘಳಿಗೆಯ ವರೆಗೆ, ಮುಖ್ಯ ಕಾಲವೆಂದು ನಂತರ ಗೌಣವೆಂದು ತಿಳಿಯಬೇಕು.

**ಆಸನದ ಆವಶ್ಯಕತೆ:-** ಔಪಾಸನಕ್ಕೆ ಕುಳಿತುಕೊಳ್ಳಲು ದರ್ಭೆ ಅಥವಾ ಕಂಬಳಿಯ ಆಸನವನ್ನು ಮಾಡಿಕೊಳ್ಳಬೇಕು. ದರ್ಭೆ, ಉಣ್ಣೆ ಮತ್ತು ಮರಗಳಲ್ಲಿ ವಾಹಕಗುಣ ವಿಲ್ಲದಿರುವುದರಿಂದ ಶರೀರದ ವಿದ್ಯುತ್ಪ್ರವಾಹವು ಹೊರಗೆ ಹೋಗುವುದಿಲ್ಲ. ಹೊರಗಿನದು ಶರೀರಕ್ಕೆ ಬರುವುದಿಲ್ಲ. ಆದ್ದರಿಂದ ಉಪಾಸನೆ ಮಾಡುವಾಗ ಇಂತಹ ದರ್ಭೆ, ಉಣ್ಣೆ, ಮರ ಇತ್ಯಾದಿಗಳ ಆಸನವನ್ನೇ ಉಪಯೋಗಿಸಬೇಕೆಂದು ಹೇಳಲಾಗಿದೆ.

ಏತದ್ವಿಷಯಸ್ಯ ವಿಸ್ತರೇಣ ವರ್ಣನಂ ಗೃಹ್ಯಾಗ್ನಿಸಾಗರೇ ಧರ್ಮಸಿಂಧೌ ಚ ದ್ರಷ್ಟವ್ಯಂ ॥

---

## ॥ ಸಭಾರ್ಯಸ್ಯ ಪ್ರವಾಸೇ ಪ್ರಸಕ್ತೇ ಅಗ್ನಿಸಮಾರೋಪವಿಧಿಃ ॥

ನಿತ್ಯಕಾಲಹೋಮಾನಂತರಂ । ಅಯಂ ತೇ ಯೋನಿರಿತ್ಯಸ್ಯ ಗಾಥಿನೋ ವಿಶ್ವಾಮಿತ್ರೋಗ್ನಿರನುಷ್ಟುಪ್ । ಅಗ್ನಿಸಮಾರೋಪಣೇ ವಿನಿಯೋಗಃ ॥ ಓಂ ಅಯಂ ತೇ ಯೋನಿರ್ಋತ್ವಿಯೋ ಯತೋಜಾತೋ ಅರೋಚಥಾಃ ॥ ತಂ ಜಾನನ್ನಗ್ನ ಆಸೀದಾಥಾನೋ ವರ್ಧಯಾಗಿರಃ ॥ ಆನೇನೈವಾಶ್ವತ್ಥಸಮಿಧಂ ಪ್ರತಾಪ್ಯಾಗ್ನಿಸಮಾರೋಹಂ ತತ್ರ ಭಾವಯೇತ್ ॥ ಯದ್ವಾ ॥ ಯಾ ತೇ ಅಗ್ನೇ ಯಜ್ಞಿಯಾ ತನೂಸ್ತಯೇಹ್ಯಾರೋಹಾತ್ಮಾತ್ಮಾನಂ ॥ ಅಚ್ಛಾವಸೂನಿ ಕೃಣ್ವನ್ನಸ್ಮೇ ನರ್ಯಾ ಪುರೂಣಿ ॥ ಯಜ್ಞೋ ಭೂತ್ವಾ ಯಜ್ಞಮಾಸೀದಸ್ವಾಂ ಯೋನಿಂ ॥ ಜಾತವೇದೋ ಭುವ ಆಜಾಯಮಾನಃ ಸಕ್ಷಯ ಏಹಿ ॥ ಇತಿ ಮಂತ್ರೇಣ ಪಾಣೀ ಪ್ರತಾಪ್ಯ ಆತ್ಮನಿ ಸಮಾರೋಪಯೇತ್ ॥ ಇದಂ ಸಮಾ-ರೋಪಣಂ ದ್ವಾದಶರಾತ್ರಪರ್ಯಂತಮೇವ ಕುರ್ಯಾತ್ ॥

---

ಈ ವಿಷಯಗಳ ಹೆಚ್ಚಿನ ಮಾಹಿತಿಯನ್ನು ಗೃಹ್ಯಾಗ್ನಿಸಾಗರದಲ್ಲಿ, ಧರ್ಮಸಿಂಧುವಿನಲ್ಲಿ ಪಡೆಯಬಹುದು.

**ಅಗ್ನಿಸಮಾರೋಪವಿಧಿಃ–** ನಿತ್ಯಹೋಮವನ್ನು ಮಾಡಿದ ಮೇಲೆ **"ಅಯಂ ತೇ ಯೋ"** ಎಂಬ ಮಂತ್ರವನ್ನು ಹೇಳಿ ಅಶ್ವತ್ಥದ ಸಮಿಧೆಯನ್ನು ಬೆಂಕಿಯ ಸಮೀಪ ಹಿಡಿದು ಕಾಯಿಸಿ ಇದರಲ್ಲಿ ಅಗ್ನಿಯು ಆವಾಹಿತನಾಗಿದ್ದಾನೆಂದು ಭಾವಿಸಬೇಕು. ಅಥವಾ **"ಯಾ ತೇ ಅಗ್ನೇ"** ಎಂಬ ಮಂತ್ರವನ್ನು ಹೇಳಿ ತನ್ನ ಎರಡು ಕೈಗಳನ್ನೂ ಅಗ್ನಿಯ ಮೇಲೆ ಹಿಡಿದು ಕಾಯಿಸಿ, ತನ್ನಾತ್ಮದಲ್ಲಿ ಅಗ್ನಿಯು ಪ್ರವೇಶಿಸಿದ್ದಾನೆಂದು ಭಾವಿಸಿ ಅಗ್ನಿಸಮಾರೋಪವನ್ನು ಮಾಡಬೇಕು.

## ಅಗ್ನೇಃ ಪ್ರತ್ಯವರೋಹಣಂ (ಪುನರವತರಣಂ):-

ತತ್ರ ಪ್ರಾದುಷ್ಕರಣಕಾಲೇ । ಅಶ್ವತ್ಥಸಮಿತ್ಸಮಾರೋಪಪಕ್ಷೇ ಶ್ರೋತ್ರಿಯಾಗಾರಾದಗ್ನಿಮಾಹೃತ್ಯ ಸಂಸ್ಕೃತೇ ಸ್ಥಂಡಿಲೇ ಪ್ರತಿಷ್ಠಾಪ್ಯ ॥ ಓಂ ಪ್ರತ್ಯವರೋಹ ಜಾತವೇದಃ ಪುನಸ್ತ್ವಂ ದೇವೇಭ್ಯೋ ಹವ್ಯಂ ವಹನಃ ಪ್ರಜಾನನ್ ॥ ಪ್ರಜಾಂ ಪುಷ್ಟಿಂ ರಯಿಮಸ್ಮಾಸುಧೇಹ್ಯಥಾಭವ ಯಜಮಾನಾಯ ಶಂ ಯೋಃ ॥ ಇತಿ ಮಂತ್ರೇಣ ತಾಂ ಸಮಿಧಂ ನಿದಧ್ಯಾತ್ ॥ ಆತ್ಮಸಮಾರೋಪಪಕ್ಷೇ ಸರ್ವದಾಽಸ್ಪೃಶ್ಯಸ್ಪರ್ಶನಂ ಜಲೇ ನಿಮಜ್ಯ ಹೋಮಕಾಲೇ ಆತ್ಮಸಮಾರೂಢಮಗ್ನಿಮುಚ್ಛ್ವಾಸರೂಪೇಣ ಪ್ರತ್ಯವರೋಹೇತಿ ಮಂತ್ರೇಣ ಲೌಕಿಕಾಗ್ನೌ ನಿದಧ್ಯಾತ್ ॥ ಏವಂ ಯಥಾಧಿಕಾರಮಗ್ನಿಂ ಪ್ರತಿಷ್ಠಾಪ್ಯ ಪೂರ್ವವಜ್ಜುಹುಯಾತ್ ॥

## ನವವಧೂಗೃಹಪ್ರವೇಶನಿರ್ಣಯ:-

ವಧೂಪ್ರವೇಶಃ ಪ್ರಥಮೇ ತೃತೀಯೇ ಶುಭಪ್ರದಃ ಪಂಚಮಕೇಥವಾಹನಿ ॥ ದ್ವಿತೀಯಕೇವಾಥ ಚತುರ್ಥಕೇ ವಾ ಷಷ್ಠೇಪಿ ಪ್ರೋಕ್ತೋ ದಿವಸೇ ಮುನೀಂದ್ರೈಃ ॥ ವೃದ್ಧವಸಿಷ್ಠೋಪಿ-ಷಷ್ಠಾಷ್ಟಮೇ ವಾ ದಶಮೇ ದಿನೇ ವಾ ವಿವಾಹಮಾರಭ್ಯ ವಧೂಪ್ರವೇಶಃ । ಪಂಚಾಂಗಸಂಶುದ್ಧಿದಿನಂ ವಿನಾಪಿ ವಿಧಾವಸದ್ಗೋಚರಗೇಪಿ ಕಾರ್ಯಃ ॥ ವ್ಯತೀಪಾತೇ ಕ್ಷಯತಿಥೌ ಗ್ರಹಣೇ ವೈಧೃತೌ ತಥಾ । ಅಮಾಸಂಕ್ರಾಂತಿವಿಷ್ಟ್ಯಾದೌ ಪ್ರಾಪ್ತಕಾಲೇಪಿ ನಾಚರೇತ್ ॥ ಪ್ರಥಮನವವಧೂಪ್ರವೇಶೇ ವಿವಾಹಾರ್ಥಗಮನೇ ಚ ಪ್ರತಿಶುಕ್ರದೋಷೋ ನಾಸ್ತಿ ॥

---

**ಅಗ್ನಿಯನ್ನು ಸಿದ್ಧಿಸಿವುದು:-** ಅಶ್ವತ್ಥದ ಸಮಿಧೆಯ ಮೇಲೆ ಸಮಾರೋಪಿತವಾದ ಅಗ್ನಿ ಆಗಿದ್ದರೆ ಶ್ರೋತ್ರಿಯನ ಮನೆಯಿಂದ ತಂದ ಅಗ್ನಿಯನ್ನು ಸ್ಥಂಡಿಲದ ಮೇಲೆ ಸ್ಥಾಪಿಸಿ, **"ಪ್ರತ್ಯವರೋಹ"** ಎಂಬ ಮಂತ್ರವನ್ನು ಹೇಳಿ ಸಮಿಧೆಯನ್ನು ಆ ಅಗ್ನಿಯಲ್ಲಿ ಹಾಕಿ ಉರಿಯುವಂತೆ ಮಾಡಬೇಕು. ತನ್ನಲ್ಲೆ ಸಮಾರೋಪ ಮಾಡಿದ ಪಕ್ಷದಲ್ಲಿ ಆ ದಿನ ಸಚೈಲ

## ದ್ವಿರಾಗಮನ ವಿಚಾರಃ-

**ಮಾಘ ಫಾಲ್ಗುನ ವೈಶಾಖೇ ಶುಕ್ಲಪಕ್ಷೇ ಶುಭೇ ದಿನೇ । ಗುರ್ವಾದಿತ್ಯವಿಶುದ್ಧೌ ಸ್ಯಾನ್ನಿತ್ಯಂ ಪತ್ನೀ ದ್ವಿರಾಗಮಃ ॥ ನೀಹಾರಾಂಶುಯುಗುತ್ತರಾದಿತಿಗುರುಬ್ರಹ್ಮಾನುರಾಧಾಶ್ವಿನೀ । ಶಕ್ರೇಭಾಸ್ಕರ ವಾಯುವಿಷ್ಣುವರುಣತ್ವಾಷ್ಟ್ರೇ ಪ್ರಶಸ್ತೇ ತಿಥೌ ॥ ಕುಂಭಾಜಾಲಿಗತೇ ರವೌ ಶುಭಕರೇ ಪ್ರಾಪ್ತೋದಯೇ ಭಾರ್ಗವೇ ಜೀವಜ್ಞಾಸ್ಸುಜಿತಾಂ ದಿನೇ ನವವಧೂವೇಶ್ಮಪ್ರವೇಶಃ ಶುಭಃ ॥**

**ಅತ್ರ ವಿಶೇಷಃ ದ್ವಿರಾಗಮೇ ಷೋಡಶವಾಸರಾಂತರೇ ಏಕಾದಶಾಹೇ ಸಮವಾಸರೇಷು । ನ ಚಾತ್ರ ಋಕ್ಷಂ ನ ತಿಥಿರ್ನ ಯೋಗೋ ನ ವಾರಶುದ್ಧ್ಯಾದಿ ವಿಚಾರಣೀಯಂ ॥**

## ಕನ್ಯಾವೈಧವ್ಯಯೋಗಪರಿಹಾರೋಪಾಯಃ-

**ಮಾರ್ಕಂಡೇಯಪುರಾಣೇ-ಬಾಲವೈಧವ್ಯಯೋಗೇ ತು ಕುಂಭದ್ರುಪ್ರತಿಮಾದಿಭಿಃ । ಕೃತ್ವಾ ಲಗ್ನಂ ರಹಃ ಪಶ್ಚಾತ್ಕನ್ಯೋದ್ವಾಹೇತಿ ಚಾಪರೇ ॥ ಅತ್ರ ಪುನರ್ಭೂದೋಷಾಭಾವ ಉಕ್ತಃ ವಿಧಾನಖಂಡೇ – ಸ್ವರ್ಣಾಂಬು ಪಿಪ್ಪ-**

---

ಸ್ನಾನಮಾಡಿ ಶುಚಿಯಾಗಿದ್ದು ಸ್ಥಾಪಿಸಿದ ಅಗ್ನಿಯ ಮೇಲೆ ಉಚ್ಛ್ವಾಸರೂಪದಿಂದ **"ಪ್ರತ್ಯವರೋಹ"** ಎಂಬ ಮಂತ್ರದಿಂದ ತನ್ನಲ್ಲಿದ್ದ ಅಗ್ನಿಯನ್ನು ಲೌಕಿಕಾಗ್ನಿಯ ಮೇಲೆ ಸ್ಥಾಪಿಸಬೇಕು.

**ನವವಧೂ ಗೃಹಪ್ರವೇಶದ ನಿರ್ಣಯ:-** ಒಂದು, ಎರಡು, ಮೂರು, ನಾಲ್ಕು, ಐದು, ಆರು ಈ ದಿನಗಳಲ್ಲಿ ನವವಧೂ ಗೃಹಪ್ರವೇಶವು ಶುಭ. ವೃದ್ಧ ವಸಿಷ್ಠರ ಮತಪ್ರಕಾರ ವಿವಾಹದಿಂದ ಆರು, ಎಂಟು ಅಥವಾ ಹತ್ತನೆಯ ದಿನ ಉತ್ತಮ. ಇದಕ್ಕೆ ಬೇರೆ ಮುಹೂರ್ತ ನೋಡಬೇಕಾಗಿಲ್ಲ. ಆದರೆ ವ್ಯತೀಪಾತ, ಕ್ಷಯತಿಥಿ, ಗ್ರಹಣ, ವೈಧೃತಿ, ಅಮಾವಾಸ್ಯೆ, ಸಂಕ್ರಮಣ, ಭದ್ರಾ ಮುಂತಾದ ಅತಿಕ್ರೂರ ಯೋಗಗಳಿದ್ದರೆ ಕೂಡದು. ನವವಧೂ ಗೃಹಪ್ರವೇಶಕ್ಕೂ ಪ್ರತಿಶುಕ್ರದೋಷವಿಲ್ಲ.

**ದ್ವಿರಾಗಮನ ವಿಚಾರ:-** ಒಂದು ಸಲ ಪತಿಗೃಹಕ್ಕೆ ಹೋಗಿ ಮರಳಿ ಬರುವ ವಿಚಾರ-ಮಾಘ ಫಾಲ್ಗುನ ವೈಶಾಖ ತಿಂಗಳುಗಳಲ್ಲಿ, ಶುಕ್ಲಪಕ್ಷದಲ್ಲಿ, ಗುರುಶುಕ್ರಾದಿ ಅಸ್ತಗಳನ್ನು ಬಿಟ್ಟು ದ್ವಿರಾಗಮನವು ಪ್ರಶಸ್ತ. ಮೃಗಶಿರಾ, ಮೂರು ಉತ್ತರಾ, ಪುನರ್ವಸು, ಪುಷ್ಯ, ರೋಹಿಣೀ, ಅನುರಾಧಾ, ಅಶ್ವಿನೀ, ಜ್ಯೇಷ್ಠಾ, ಹಸ್ತಾ, ಸ್ವಾತೀ, ಶ್ರವಣಾ, ಶತತಾರಕಾ, ಚಿತ್ರಾ ಈ ನಕ್ಷತ್ರಗಳು ಮತ್ತು ಶುಭತಿಥಿ, ಕುಂಭ, ಮೇಷ, ವೃಶ್ಚಿಕ ರಾಶಿಯ ಸೂರ್ಯ, ಶುಕ್ರಾದಿಗಳ ಉದಯ, ಗುರು ಬುಧ ಚಂದ್ರವಾರಗಳು ಶುಭ. ವಿವಾಹವಾಗಿ ೧೬ ದಿನಗಳೊಳಗೆ ಬರುವುದಾದರೆ ಸಮದಿನಗಳಲ್ಲಿ ಅಥವಾ ೧೧ನೆಯ ದಿನ ಪ್ರಶಸ್ತ. ಇದಕ್ಕೆ ತಿಥಿ, ವಾರ ನಕ್ಷತ್ರಾದಿಗಳನ್ನು ನೋಡಬೇಕಾದ್ದಿಲ್ಲ.

**ಲಾನಾಂ ಚ ಪ್ರತಿಮಾವಿಷ್ಣುರೂಪಿಣೀ । ತಯಾ ಸಹ ವಿವಾಹೇತು ಪುನರ್ಭರ್ತೃತ್ವಂ ನ ಜಾಯತೇ ॥ ಸೂರ್ಯಾರುಣಸಂವಾದೇ–ವಿವಾಹಾತ್ಪೂರ್ವಕಾಲೇ ಚ ಚಂದ್ರತಾರಾಬಲಾನ್ವಿತೇ । ವಿವಾಹೋಕ್ತೇ ಚ ತಾಂ ಕನ್ಯಾಂ ಕುಂಭೇನ ಸಹ ಚೋದ್ವಹೇತ್ ॥ ಕುಂಕುಮಾಲಂಕೃತಂ ದೇಹಂ ತಯೋರೇಕಾಂತ ಮಂದಿರೇ ॥**

## ಕನ್ಯಾವೈಧವ್ಯಯೋಗಪರಿಹಾರವಿಧಾನಂ:–

**ವಿವಾಹಕರ್ತಾ ಪಿತ್ರಾದಿಃ ಕನ್ಯಾವೈಧವ್ಯಹರಂ ಕುಂಭವಿವಾಹಂ ಕರಿಷ್ಯೇ ಇತಿ ಸಂಕಲ್ಪ್ಯ । ನಾಂದೀಶ್ರಾದ್ಧಾಂತಂ ಕೃತ್ವಾ ಮಹೀದ್ಯೌರಿತ್ಯಾದಿ ಕುಂಭ ಸ್ಥಾಪನಾಂತೇ ತತ್ರ ವರುಣಪ್ರತಿಮಾಯಾಂ ವರುಣಂ ಸಂಪೂಜ್ಯ ತತ್ರ ಕಲಶಮಧ್ಯೇ ವಿಷ್ಣುಪ್ರತಿಮಾಯಾಂ ವಿಷ್ಣುಂ ಷೋಡಶೋಪಚಾರೈಃ ಸಂಪೂಜ್ಯ ಪ್ರಾರ್ಥಯೇತ್ ॥ ವರುಣಾಂಗಸ್ವರೂಪಾಯ ಜೀವನಾನಾಂ ಸಮಾಶ್ರಯ । ಪತಿಂ ಜೀವಯ ಕನ್ಯಾಯಾಶ್ಚಿರಂ ಪುತ್ರಸುಖಂ ಕುರು । ದೇಹಿ ವಿಷ್ಣೋ ವರಂ ದೇವ ಕನ್ಯಾಂ ಪಾಲಯ ದುಃಖತಃ । ಇತಿ । ತತೋ ವಿಷ್ಣುರೂಪಿಣೇ ಕುಂಭಾಯೇಮಾಂ ಕನ್ಯಾಂ ಶ್ರೀರೂಪಿಣೀಂ ಸಮರ್ಪಯಾಮಿತಿ ಸಮರ್ಪ್ಯ ॥ ಪರಿತ್ವೇತ್ಯಾದಿಮಂತ್ರೈಃ ಅಧಸ್ತಾದುಪರಿ ಚ ಕುಂಭಂ ಕನ್ಯಾಂ ಚ ಮಂತ್ರಾವೃತ್ತ್ಯಾ ಪರಿವೇಷ್ಟ್ಯ । ತತಃ ಕುಂಭಂ ನಿಃಸಾರ್ಯ ಜಲಾಶಯೇ ಪ್ರಭಜ್ಯ ॥ ಶುದ್ಧಜಲೇನ ಸಮುದ್ರಜ್ಯೇಷ್ಠೇತ್ಯಾದಿಮಂತ್ರೈಃ ಪಂಚಪಲ್ಲವೈಃ ಕನ್ಯಾಮಭಿಷಿಚ್ಯ ವಿಪ್ರಾನ್ ಭೋಜಯೇದಿತಿ ಕುಂಭವಿವಾಹಃ ॥ ಮೂರ್ತಿದಾನಮಪಿ ತತ್ರೈವೋಕ್ತಂ–ಬ್ರಾಹ್ಮಣಂ ಸಾಧುಮಾಮಂತ್ರ್ಯ ಸಂಪೂಜ್ಯ ವಿವಿಧಾರ್ಹಣೈಃ । ತಸ್ಮೈ ದದ್ಯಾದ್ವಿಧಾನೇನ ವಿಷ್ಣೋರ್ಮೂರ್ತಿಂ ಚತುರ್ಭುಜಾಂ ॥**

---

**ಕನ್ಯೆಯ ವೈಧವ್ಯಯೋಗವನ್ನು ಪರಿಹರಿಸುವ ಉಪಾಯ:–** ಕನ್ಯೆಗೆ ಬಾಲವೈಧವ್ಯ ಯೋಗವಿದ್ದರೆ, ನೀರು ತುಂಬಿದ ಕೊಡ, ಅಶ್ವತ್ಥಾದಿ ವೃಕ್ಷ, ಚಿನ್ನದ ವಿಷ್ಣು ಪ್ರತಿಮೆ ಮುಂತಾದವುಗಳೊಡನೆ ಮೊದಲು ಅವಳ ಮದುವೆ ಮಾಡಿ ನಂತರ ವರನೊಂದಿಗೆ ಮದುವೆ ಮಾಡಬೇಕೆಂದು ಮಾರ್ಕಂಡೇಯ ಪುರಾಣದಲ್ಲಿದೆ. ಇದರಿಂದ ಪುನರ್ವಿವಾಹ ದೋಷ ಬರುವುದಿಲ್ಲ, ಕಾರಣ ಇವುಗಳೆಲ್ಲಾ ವಿಷ್ಣುಸ್ವರೂಪಿಗಳೆಂದು ವಿಧಾನಯಿಂದವಲ್ಲಿದೆ. ಸೂರ್ಯಾರುಣ ಸಂವಾದದಲ್ಲಿ- ಏಕಾಂತ ಸ್ಥಳದಲ್ಲಿ ಕನ್ಯೆಗೆ ಮತ್ತು ಕುಂಭಕ್ಕೆ ಅರಸಿನ ಕುಂಕುಮಗಳನ್ನು ಹಚ್ಚಿ, ತಾರಾಬಲ ಚಂದ್ರಬಲಗಳನ್ನು ನೋಡಿ ವಿವಾಹಮುಹೂರ್ತದಲ್ಲಿ ಕುಂಭದೊಡನೆ ಅವಳ ವಿವಾಹವನ್ನು ಮಾಡಬೇಕೆಂದು ಹೇಳಿದೆ.

**ವೈಧವ್ಯಯೋಗಪರಿಹಾರ ವಿಧಾನ:–** ವಿವಾಹಕರ್ತನು "**ಕನ್ಯಾವೈಧವ್ಯ....ಕರಿಷ್ಯೇ**" ಎಂದು ಸಂಕಲ್ಪ ಮಾಡಿ ನಾಂದೀಶ್ರಾದ್ಧಾದಿಗಳನ್ನು ಮಾಡಿ "**ಮಹೀದ್ಯೌ...**" ಮುಂತಾದ

## ವಿಷ್ಣುಮೂರ್ತಿದಾನವಿಧಿಃ:-

ಕನ್ಯಾ ದೇಶಕಾಲೌ ಸಂಕೀರ್ತ್ಯ ವೈಧವ್ಯಹರಂ ಶ್ರೀ ವಿಷ್ಣುಪ್ರತಿಮಾ-ದಾನಂ ಕರಿಷ್ಯೇ ಇತಿ ಸಂಕಲ್ಪ್ಯ ॥ ಪಲಂ ತದರ್ಧತದರ್ಧಾನ್ಯತಮಪ್ರಮಾಣ-ಹೇಮನಿರ್ಮಿತಾಂ ವಿಷ್ಣುಪ್ರತಿಮಾಂ ಚತುರ್ಭುಜಾಂ ಸಾಯುಧಾಂ ಘೃತೇನ ಆಚಾರ್ಯೇಣ ಅಗ್ನ್ಯುತ್ತಾರಣಪೂರ್ವಕಂ ಷೋಡಶೋಪಚಾರೈಃ ಪೂಜ-ಯೇತ್ । ವಸ್ತ್ರಾರ್ಪಣಕಾಲೇ ಪೀತವಸ್ತ್ರೇ ಪುಷ್ಪಾರ್ಪಣಕಾಲೇ ಕುಮುದೋ-ತ್ಪಲಮಾಲಾಂ ಚ ದದ್ಯಾತ್ । ಪೂಜಾಂತೇ ಕನ್ಯಾ ದೇವಂ ಪ್ರಣಮ್ಯ ಮಂತ್ರೇಣ ದದ್ಯಾತ್ । ಯನ್ಮಯಾ ಪ್ರಾಂಚಿ ಜನುಷಿ ಘ್ನಂತ್ಯಾ ಪತಿಸಮಾಗಮಂ । ವಿಷೋಪವಿಷಶಸ್ತ್ರಾದ್ಯೈರ್ಹತೋ ವಾಪಿ ವಿರಕ್ತಯಾ ॥ ಪ್ರಾಪ್ಯಮಾಣಂ ಮಹಾಘೋರೋ ಯಶಃ ಸೌಖ್ಯಧನಾಪಹಂ । ವೈಧವ್ಯಾದ್ಯತಿ ದುಃಖೌಘಂ ತನ್ನಾಶಯ ಸುಖಾಪ್ತಯೇ ॥ ಬಹುಸೌಭಾಗ್ಯವೃದ್ಧ್ಯೈ ಚ ಮಹಾವಿಷ್ಣೋರಿಮಾಂ ತನುಂ। ಸೌವರ್ಣೀಂ ನಿರ್ಮಿತಾಂ ಶಕ್ತ್ಯಾ ತುಭ್ಯಂ ಸಂಪ್ರದದೇ ದ್ವಿಜ ॥ ಇತಿ ॥ ತತೋ ಯಥಾಶಕ್ತಿ ಹೇಮದಕ್ಷಿಣಾಂ ದತ್ವಾ ॥ ಅನಘಾದ್ಯಾಹಮಸ್ಮಿ ಇತಿ ತ್ರಿರ್ವ-ದೇತ್ ॥ ಏವಮಸ್ತು ಇತಿ ವಿಪ್ರೋಪಿ ತ್ರಿಃ ॥ ತತೋ ವಿಪ್ರಭೋಜನಂ ॥

## ಮೃತಭಾರ್ಯಾತ್ವದೋಷ ಪರಿಹಾರೋಪಾಯಃ:-

ತತ್ರ ಪರಿವೇತ್ತೃತ್ವಪಾಪಾತ್ ಮೃತಭಾರ್ಯಾತ್ವಂ ತತ್ಪಾಪಪರಿಹಾರಾಯ ಪ್ರಾಜಾಪತ್ಯತ್ರಯಂ ಚಾಂದ್ರಾಯಣತ್ರಯಂ ಕೃತ್ವಾ ಅಸಕೃನ್ಮೃತಭಾರ್ಯಾತ್ವ-ಯೋಗೇ ತದುಭಯತ್ರಯಮಾವೃತ್ಯಾ ಕೃತ್ವಾ ॥ ಮೃತಭಾರ್ಯಾತ್ವನಿರಾಸ-ದ್ವಾರಾ ಶ್ರೀಪರಮೇಶ್ವರಪ್ರೀತ್ಯರ್ಥಂ ಅಯುತಸಂಖ್ಯಚರ್ವಾಜ್ಯಹೋಮಂ ಕರಿಷ್ಯೇ ಇತಿ ಸಂಕಲ್ಪ್ಯ ॥ ಅಗ್ನಿಸ್ಥಾಪನಾಂತೇ ಅನ್ವಾಧಾನಂ ದುರ್ಗಾಗ್ನಿ-ವಿಷ್ಣೂನ್ ಅಷ್ಟಾಧಿಕಾಯುತಸಂಖ್ಯಾಭಿಶ್ಚರ್ವಾಜ್ಯಾಹುತಿಭಿಃ ಶೇಷೇಣ ಸ್ವಿಷ್ಟ-ಕೃತಮಿತ್ಯಾದಿ ಪ್ರತಿದೈವತಂ ತೂಷ್ಣೀಂ ನಿರುಪ್ಯ ಪ್ರೋಕ್ಷ್ಯ ಚ ತ್ಯಾಗಕಾಲೇ

---

ಮಂತ್ರಗಳಿಂದ ಕಲಶಸ್ಥಾಪನೆ, ವರುಣಪ್ರತಿಮೆಯಲ್ಲಿ ವರುಣಪೂಜೆ ಇತ್ಯಾದಿಗಳನ್ನು ಪ್ರಾರಂಭಿಸಿ ಕಲಶಮಧ್ಯದಲ್ಲಿ ವಿಷ್ಣುಪ್ರತಿಮೆಯಲ್ಲಿ ವಿಷ್ಣುವನ್ನೂ ಪೂಜಿಸಿ **"ವರುಣಾಂಗ..ದುಃಖಿತಃ"** ಎಂದು ಪ್ರಾರ್ಥಿಸಬೇಕು. ನಂತರ **"ವಿಷ್ಣುರೂಪಿಣೇ...ಸಮರ್ಪಯಾಮಿ"** ಎಂದು ಕನ್ಯೆಯನ್ನು ಸಮರ್ಪಿಸಿ **"ಪರಿತ್ವೇ"** ಇತ್ಯಾದಿ ಮಂತ್ರಗಳಿಂದ ಕನ್ಯೆಗೂ ಕುಂಭಕ್ಕೂ ಸೂತ್ರವೇಷ್ಟನ ಮಾಡಿ ಕುಂಭವನ್ನು ಜಲಾಶಯದಲ್ಲಿ ಬಿಸಾಡಿ **"ಸಮುದ್ರಜ್ಯೇಷ್ಠಾ..."** ಮುಂತಾದ ಮಂತ್ರಗಳಿಂದ ಕನ್ಯೆಗೆ ಅಭಿಷೇಕ ಮಾಡಬೇಕು. ನಂತರ ಬ್ರಾಹ್ಮಣಸಂತರ್ಪಣೆ ಮಾಡಬೇಕು.

**ಅಷ್ಟೋತ್ತರಾಯುತ ಸಂಖ್ಯಾಹುತಿಪರ್ಯಾಪ್ತಂ ಚರ್ವಾಜ್ಯಂ ದ್ರವ್ಯಂ ಯಥಾ ಮಂತ್ರಲಿಂಗ ದುರ್ಗಾಯೈ ಅಗ್ನಯೇ ವಿಷ್ಣವೇ ಚ ನ ಮಮೇತಿ ತ್ಯಜೇತ್ ॥ ಜಾತವೇದಸೇ ಇತ್ಯನುವಾಕಸ್ಯ ಉಪನಿಷದಋಷಯಃ ದುರ್ಗಾಗ್ನಿ ವಿಷ್ಣವೋ ದೇವತಾಃ ತ್ರಿಷ್ಟುಪ್ ಛಂದಃ ಚರ್ವಾಜ್ಯ ಹೋಮೇ ವಿನಿಯೋಗಃ ॥ ಅನುವಾಕಾವೃತ್ತ್ಯಾ ಪ್ರತ್ಯೃಚಂ ಹೋಮಃ ॥ ತತ್ರ ಪ್ರಥಮಂ ಚತುರಧಿಕ ಪಂಚಸಹಸ್ರಸಂಖ್ಯಶ್ಚರುಹೋಮಃ । ತತಃ ಚತುರಧಿಕಪಂಚಸಹಸ್ರಾಜ್ಯಹೋಮ ಇತ್ಯೇವಮಯುತ ಹೋಮಃ । ಹೋಮಶೇಷಂ ಸಮಾಪ್ಯ ದಶವಿಪ್ರಾನ್ ಭೋಜಯೇದಿತಿ । ಅಥವಾ ಕಸ್ಯಚಿದ್ಬ್ರಾಹ್ಮಣಸ್ಯ ವಿವಾಹಂ ಕುರ್ಯಾತ್ ॥**

## ದ್ವಿತೀಯ ತೃತೀಯ ವಿವಾಹನಿರ್ಣಯಃ-

**ಸಂಗ್ರಹೇ-ಪ್ರಮದಾಮೃತಿವಾಸರಾದಿನಃ ಪುನರುದ್ವಾಹವಿಧಿರ್ವರಸ್ಯ ಚ । ವಿಷಮೇ ಪರಿವತ್ಸರೋ ಶುಭೋ ಯುಗಲೇ ಚಾಪಿ ಮೃತಪ್ರದೋ ಭವೇತ್ ॥**

---

**ವಿಷ್ಣುಮೂರ್ತಿದಾನವಿಧಿ:-** ಕನ್ಯೆಯು ದೇಶಕಾಲ ಸಂಕೀರ್ತನೆ ಮಾಡಿ **"ವೈಧವ್ಯಹರಂ...ಕರಿಷ್ಯೇ"** ಎಂದು ಸಂಕಲ್ಪ ಮಾಡಿ; ಒಂದು, ಅರ್ಧ ಅಥವಾ ಕಾಲು ಪಲಪ್ರಮಾಣದಿಂದ ನಿರ್ಮಿಸಿದ, ಆಚಾರ್ಯನು ಅಗ್ನ್ಯುತ್ತಾರಣ ಕ್ರಮದಿಂದ ಸಂಸ್ಕರಿಸಿದ, ಷೋಡಶೋಪಚಾರಗಳಿಂದ ಪೂಜಿಸಿದ ವಿಷ್ಣುಪ್ರತಿಮೆಯನ್ನು **"ಯನ್ಮಯಾ .... ಸಂಪ್ರದದೇ ದ್ವಿಜ"** ಎಂದು ಪ್ರಾರ್ಥಿಸಿ, ಬ್ರಾಹ್ಮಣನಿಗೆ ದಾನ ಮಾಡಬೇಕು. ವಸ್ತ್ರ-ಪೀತವಸ್ತ್ರ, ಪುಷ್ಪ-ಕುಮುದೋತ್ಪಲ ಮಾಲೆ. ನಂತರ ದಕ್ಷಿಣೆ ಕೊಟ್ಟು **"ಅನಘಾಹಮಸ್ಮಿ"** ಎಂದು ಮೂರು ಸಲ ಕನ್ಯೆಯು ಹೇಳಿದಾಗ ಬ್ರಾಹ್ಮಣನು ಮೂರು ಸಲ **"ಏವಮಸ್ತು"** ಎಂದು ಹೇಳಬೇಕು. ಆಮೇಲೆ ಬ್ರಾಹ್ಮಣ ಸಂತರ್ಪಣೆ ಮಾಡಬೇಕು.

**ಮೃತಭಾರ್ಯಾತ್ವದೋಷಪರಿಹಾರೋಪಾಯ:** ಪರಿವೇತೃತ್ವಪಾಪದಿಂದ ಮೃತ ಭಾರ್ಯಾತ್ವ ದೋಷ ಉಂಟಾಗುತ್ತದೆ. ಅದರ ಪರಿಹಾರಕ್ಕೆ ಮೂರು ಪ್ರಾಜಾಪತ್ಯ ಮತ್ತು ಮೂರು ಚಾಂದ್ರಾಯಣಗಳನ್ನು ಮಾಡಬೇಕು. ಮತ್ತೂ ಮತ್ತೂ ಮೃತ ಭಾರ್ಯಾಯೋಗವಿದ್ದರೆ ಇವುಗಳನ್ನು ಮೂರು ಮೂರು ಆವೃತ್ತಿಯಿಂದ ಮತ್ತೂ ಮಾಡಬೇಕು. **"ಮೃತಭಾರ್ಯಾತ್ವ... ಹೋಮಂ ಕರಿಷ್ಯೇ"** ಎಂದು ಸಂಕಲ್ಪ ಮಾಡಿ ಅಗ್ನಿ ಸ್ಥಾಪನಾದಿಗಳನ್ನು ಮಾಡಿ **"ದುರ್ಗಾಗ್ನಿ... ಶೇಷೇಣ ಸ್ವಿಷ್ಟಕೃತ..."** ಎಂದು ಅನ್ವಾಧಾನ ಮಾಡಬೇಕು. ನಂತರ ಮಂತ್ರರಹಿತವಾಗಿ ಪ್ರತಿಯೊಂದು ದೇವತೆಗೆ ನಾಲ್ಕು ಸಲ ಚರುವನ್ನು ನಿರ್ವಾಪ ಮಾಡಬೇಕು. **"ಜಾತವೇದಸೇ"** ಮಂತ್ರದಿಂದ ಮೊದಲು ಐದುಸಾವಿರದ ನಾಲ್ಕು ಚರ್ವಾಹುತಿಗಳನ್ನೂ ನಂತರ ಅದೇ ಮಂತ್ರದಿಂದ ಐದುಸಾವಿರದ ನಾಲ್ಕು ಆಜ್ಯಾಹುತಿಗಳನ್ನೂ ಕೊಡಬೇಕು. ಬಳಿಕ ಸ್ವಿಷ್ಟಕೃದಾದಿ ಹೋಮಶೇಷವನ್ನು ಮುಗಿಸಿ ಬ್ರಾಹ್ಮಣಭೋಜನ ಮಾಡಿಸಬೇಕು ಅಥವಾ ಒಬ್ಬ ಬ್ರಾಹ್ಮಣನಿಗೆ ಮದುವೆ ಮಾಡಿಸಬೇಕು.

**ತೃತೀಯ ವಿವಾಹೇ ನಿಷೇಧೋ ಮಾತ್ಸ್ಯೇಉದ್ವಹೇದ್ರತಿಸಿದ್ಧ್ಯರ್ಥಂ ತೃತೀಯಾಂ ನ ಕದಾಚನ । ಮೋಹಾದಜ್ಞಾನತೋ ವಾಪಿ ಯದಿ ಗಚ್ಛೇತ್ತು ಮಾನುಷೀಂ ॥ ನಶ್ಯತ್ಯೇವ ನ ಸಂದೇಹೋ ಗರ್ಗಸ್ಯ ವಚನಂ ಯಥಾ ॥ ಇತಿ ॥ ಸಂಗ್ರಹೇ-ತೃತೀಯಾಂ ಯದಿ ಚೋದ್ವಹೇತ್ತರ್ಹಿ ಸಾ ವಿಧವಾ ಭವೇತ್ । ಚತುರ್ಥಾದಿ ವಿವಾಹಾರ್ಥಂ ತೃತೀಯೇರ್ಕಂ ಸಮುದ್ವಹೇತ್ ॥**

## ಅರ್ಕವಿವಾಹ ಪ್ರಯೋಗಃ:-

**॥ ಶ್ರೀಃ ॥ ರವಿಶನ್ಯೋರ್ವಾರೇ ಹಸ್ತರ್ಕ್ಷೇ ವಾನ್ಯತ್ರಶುಭದಿನೇ ವಾ ಪುಷ್ಪಫಲಯುತಂ ಅರ್ಕಂ ಗತ್ವಾ ಅರ್ಕಕನ್ಯಾದಾತಾರಂ ಆಚಾರ್ಯಂ ವೃತ್ವಾ ರಕ್ತಗಂಧಾದಿಭೂಷಿತೋ ದೇಶಕಾಲೌ ಸ್ಮೃತ್ವಾ ಮಮ ತೃತೀಯಮಾನುಷೀ ವಿವಾಹಜನ್ಯದೋಷಪರಿಹಾರಾರ್ಥಂ ತೃತೀಯಮರ್ಕವಿವಾಹಂ ಕರಿಷ್ಯೇ ॥ ಆಚಾರ್ಯಂ ವೃತ್ವಾ ನಾಂದೀಶ್ರಾದ್ಧಾಂತಂ ಕುರ್ಯಾತ್ ॥ ದಾತಾ ಮಧು-ಪರ್ಕಯಜ್ಞೋಪವೀತಗಂಧಮಾಲ್ಯಾದಿಭಿರ್ವರಂ ಪೂಜಯೇತ್ । ಅರ್ಕಸ್ಯ ಪುರತಃ ಸ್ಥಿತ್ವಾ ॥ ತ್ರಿಲೋಕವಾಸಿನ್ ಸಪ್ತಾಶ್ವ ಛಾಯಯಾ ಸಹಿತೋ ರವೇ । ತೃತೀಯೋದ್ವಾಹಜಂ ದೋಷಂ ನಿವಾರಯ ಸುಖಂ ಕುರು ॥ ಇತಿ ಪ್ರಾರ್ಥ್ಯ ॥ ಛಾಯಾಯುತಂ ರವಿಮರ್ಕೇ ಭಾಗ್ಯತ್ವಾಬ್ಲಿಂಗ್ಯೈರಭಿಷಿಚ್ಯ ವಸ್ತ್ರಾದಿಭಿರಾಕೃಷ್ಣೇ-**

---

**ಎರಡನೆಯ ಮತ್ತು ಮೂರನೆಯ ವಿವಾಹ ನಿರ್ಣಯಃ:-** ಮೊದಲನೆಯ ಹೆಂಡತಿ ಸತ್ತ ವರನ ಮದುವೆಯನ್ನು ಭಾರ್ಯೆಯು ಮೃತಳಾದ ವಿಷಮವರ್ಷದಲ್ಲಿ ಮಾಡುವುದು ಶುಭ. ಸಮವರ್ಷದಲ್ಲಿ ಮಾಡಿದರೆ ಅದು ಮೃತ್ಯುದಾಯಕವಾಗುತ್ತದೆ-ಎಂದು ಸಂಗ್ರಹದಲ್ಲಿ ಹೇಳಲಾಗಿದೆ. ಮೂರನೆಯ ಸ್ತ್ರೀಯನ್ನು ವಿವಾಹವಾಗುವುದು ನಿಷಿದ್ಧವಾಗಿದೆ. ಕೇವಲ ರತಿಸುಖಕ್ಕಾಗಿ ಮೂರನೆಯ ಹೆಣ್ಣನ್ನು ಮದುವೆಯಾಗಕೂಡದೆಂದು ಮಾತ್ಸ್ಯದಲ್ಲಿ ಹೇಳಿದ್ದಾರೆ. ಮೋಹ ಅಥವಾ ಅಜ್ಞಾನದಿಂದ ಮೂರನೆಯವಳನ್ನು ಮದುವೆಯಾದರೆ ಅಂಥವನು ವಿನಾಶ ಹೊಂದುತ್ತಾನೆ ಎಂದು ಗರ್ಗನ ವಚನವಿದೆ. ಸಂಗ್ರಹದಲ್ಲಿ-ಮೂರನೆಯವಳನ್ನು ಮದುವೆ ಯಾದರೆ ಅವಳು ವಿಧವೆಯಾಗುತ್ತಾಳೆಂದು ಹೇಳಲಾಗಿದೆ. ಮೂರನೆಯ ವಿವಾಹವನ್ನು ಅರ್ಕದೊಂದಿಗೆ ಮಾಡಿಕೊಂಡು ನಾಲ್ಕನೆಯದನ್ನು ಮಾಡಬೇಕು.

**ಅರ್ಕವಿವಾಹ ಪ್ರಯೋಗಃ:-** ಕರ್ತೃವು ರವಿ ಅಥವಾ ಶನಿವಾರ ಅಥವಾ ಹಸ್ತಾ ನಕ್ಷತ್ರದ ದಿನ ಅಥವಾ ಬೇರೆ ಶುಭದಿನದಲ್ಲಿ ಹೂವು ಕಾಯಿಗಳಿರುವ ಅರ್ಕಗಿಡದ ಸಮೀಪ ಹೋಗಿ ಅರ್ಕ ಕನ್ಯಾದಾನ ಮಾಡುವ ಆಚಾರ್ಯನನ್ನು ವರಿಸಿ ರಕ್ತಚಂದನಾದಿಗಳಿಂದ ಭೂಷಿತನಾಗಿ ದೇಶಕಾಲಗಳನ್ನು ಉಚ್ಚರಿಸಿ, **"ಮಮ ತೃತೀಯಮಾನುಷೀ...ಕರಿಷ್ಯೇ"** ಎಂದು ಸಂಕಲ್ಪ ಮಾಡಬೇಕು. ನಂತರ ಆಚಾರ್ಯನ ಮೂಲಕ ನಾಂದೀಶ್ರಾದ್ಧಾದಿಗಳನ್ನು ಮಾಡಿಸಬೇಕು. ದಾತೃವು ಮಧುಪರ್ಕ, ಯಜ್ಞೋಪವೀತ, ವಸ್ತ್ರ, ಗಂಧ, ಪುಷ್ಪಾದಿಗಳಿಂದ ವರನ ಪೂಜೆಯನ್ನು

**ನೇತಿ ಮಂತ್ರೇಣ ಸಂಪೂಜ್ಯ ಶ್ವೇತವಸ್ತ್ರೇ ಸೂತ್ರೇಣಚಾವೇಷ್ಟ್ಯ ಗುಡೌದನಂ ನಿವೇದ್ಯ ತಾಂಬೂಲಂ ದದ್ಯಾತ್ ॥ ಮಮ ಪ್ರೀತಿಕರಾಯೇಯಂ ಮಯಾ ಸೃಷ್ಟಾ ಪುರಾತನೀ । ಅರ್ಕಜಾ ಬ್ರಹ್ಮಣಾ ಸೃಷ್ಟಾದ್ಯಾಸ್ಮಾನ್ ಸಂಪ್ರತಿ ರಕ್ಷತು ॥ ಇತ್ಯರ್ಕಂ ಪ್ರದಕ್ಷಿಣೀಕೃತ್ಯ ॥ ನಮಸ್ತೇ ಮಂಗಲೇ ದೇವಿ ನಮಃ ಸವಿತುರಾತ್ಮಜೇ । ತ್ರಾಹಿ ಮಾಂ ಕೃಪಯಾ ದೇವಿ ಪತ್ನೀ ತ್ವಂ ಮ ಇಹಾ-ಗತಾ । ಅರ್ಕ ತ್ವಂ ಬ್ರಹ್ಮಣಾ ಸೃಷ್ಟಃ ಸರ್ವಪ್ರಾಣಿಹಿತಾಯ ಚ । ವೃಕ್ಷಾ-ಣಾಮಧಿಭೂತಸ್ತ್ವಂ ದೇವಾನಾಂ ಪ್ರೀತಿವರ್ಧನ ॥ ತೃತೀಯೋದ್ವಾಹಜಂ ಪಾಪಂ ಮೃತ್ಯುಂ ಚಾಶು ವಿನಾಶಯ ॥ ಇತಿ ಪ್ರದಕ್ಷಿಣೀ ಕುರ್ಯಾತ್ ॥**

**ಅಂತಃಪಟಧಾರಣಾದಿ ಕನ್ಯಾದಾನಪರ್ಯಂತಂ ವಿಧಿಂ ಕೃತ್ವಾ ಕನ್ಯಾ-ದಾತಾ ಆದಿತ್ಯಸ್ಯ ಪ್ರಪೌತ್ರೀಂ, ಸವಿತುಃ ಪೌತ್ರೀಂ ಅರ್ಕಸ್ಯ ಪುತ್ರೀಂ ಕಾಶ್ಯಪ ಗೋತ್ರಾಮರ್ಕಕನ್ಯಾಂ ಅಮುಕಗೋತ್ರಾಯ ವರಾಯ ತುಭ್ಯಂ ಸಂಪ್ರದದೇ ॥ ಅರ್ಕಕನ್ಯಾಮಿಮಾಂ ವಿಪ್ರ ಯಥಾಶಕ್ತಿವಿಭೂಷಿತಾಂ । ಗೋತ್ರಾಯ ಶರ್ಮಣೇ ತುಭ್ಯಂ ದತ್ತಾಂ ವಿಪ್ರ ಸಮಾಶ್ರಯ ॥ ದಕ್ಷಿಣಾಂ ದತ್ವಾ ಗಾಯತ್ರ್ಯಾವೇಷ್ಟಿತ**

---

ಮಾಡಬೇಕು. ನಂತರ ಅರ್ಕಗಿಡದ ಮುಂದೆ ನಿಂತು, **"ತ್ರಿಲೋಕವಾಸಿನ್...ಕುರು"** ಎಂದು ಪ್ರಾರ್ಥಿಸಬೇಕು. ನಂತರ **"ಸಮುದ್ರಜ್ಯೇಷ್ಠಾ..."** ಇತ್ಯಾದಿ ಮಂತ್ರಗಳನ್ನು ಹೇಳಿ ವಸ್ತ್ರಾದಿಗಳಿಂದ ಪೂಜಿಸಿ, ಬಿಳಿಬಟ್ಟೆ ಮತ್ತು ನೂಲಿನಿಂದ ವೇಷ್ಟನ ಮಾಡಿ ಪಾಯಸ ನೈವೇದ್ಯವನ್ನರ್ಪಿಸಿ ತಾಂಬೂಲವನ್ನು ಕೊಡಬೇಕು. **"ಮಮ ಪ್ರೀತಿಕರಾ..."** ಈ ಮಂತ್ರ ಹೇಳುತ್ತ ಪ್ರದಕ್ಷಿಣೆ ಮಾಡಿ ಪುನಃ **"ನಮಸ್ತೇ ಮಂಗಲೇ"** ಎಂದು ಹೇಳುತ್ತ ಸುತ್ತು ಬರಬೇಕು.

ಬಳಿಕ ಅಂತಃಪಟಧಾರಣದಿಂದ ಕನ್ಯಾದಾನದ ವರೆಗಿನ ಕರ್ಮಗಳನ್ನು ಮಾಡಿ, **"ಆದಿತ್ಯಸ್ಯ... ಸಮಾಶ್ರಯ"** ಎಂದು ಹೇಳಿ ಅರ್ಕಕನ್ಯಾದಾನ ಮಾಡಬೇಕು. ದಕ್ಷಿಣೆ ಕೊಟ್ಟು ಗಾಯತ್ರೀ ಮಂತ್ರದಿಂದ ಅರ್ಕಕನ್ಯೆ ಮತ್ತು ವರನನ್ನು ನೂಲಿನಿಂದ ವೇಷ್ಟನ ಮಾಡಿ, ಆ ನೂಲಿನ ಕಂಕಣ ಮಾಡಿ **"ಬೃಹತ್ಸಾಮ..."** ಮಂತ್ರದಿಂದ ಅದನ್ನು ವಧು ವರನಿಗೆ ಕಟ್ಟಬೇಕು. ಅರ್ಕವೃಕ್ಷದ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಕಲಶಗಳನ್ನಿಟ್ಟು ಪ್ರತಿಯೊಂದು ಕಲಶದ ಮೇಲೆ ನಾಮಮಂತ್ರದಿಂದ ವಿಷ್ಣುವಿಗೆ ಷೋಡಶೋಪಚಾರ ಪೂಜೆ ಮಾಡಬೇಕು. ಅರ್ಕವೃಕ್ಷದ ಉತ್ತರಕ್ಕೆ ವರನು ಕುಳಿತು ಪತ್ನಿಗೆ ಹಸ್ತಸ್ಪರ್ಶ ಮಾಡುತ್ತ **"ಅಸ್ಯಾಃ ಸಮ್ಯಕ್....ಕರಿಷ್ಯೇ"** ಎಂದು ಸಂಕಲ್ಪ ಮಾಡಿ ಸ್ಥಾಲೀಪಾಕದಲ್ಲಿ ಹೇಳಿದಂತೆ ಹೋಮಕರ್ಮಗಳನ್ನು ಮಾಡಬೇಕು. ಬೃಹಸ್ಪತಿ ಮತ್ತು ಅಗ್ನಿಗೆ ಆಹುತಿಗಳನ್ನು ಕೊಟ್ಟು, ವ್ಯಾಹೃತಿಗಳಿಂದ ನಾಲ್ಕು ಆಹುತಿಗಳನ್ನೂ ಕೊಟ್ಟು ಹೋಮಸಮಾಪ್ತಿ ಮಾಡಬೇಕು. **"ಮಯಾಕೃತಂ..."** ಎಂದು ಪ್ರಾರ್ಥನೆ ಮಾಡಿ ಶಾಂತಿಸೂಕ್ತಗಳನ್ನು ಪಠಿಸಿ, ಆಚಾರ್ಯನಿಗೆ ಎರಡು ಗೋದಾನ ಕೊಟ್ಟು, ತಾನು

ಸೂತ್ರೇಣ ॥ ಬೃಹತ್ಸಾಮಕ್ಷತ್ರಭೃದ್‌ವೃದ್ಧವೃಷ್ಣಿ ಯತ್ರಿಷ್ಟುಭೌಜಃ ಶುಭಿತ-ಮುಗ್ರವೀರಂ । ಇಂದ್ರಸ್ತೋಮೇನ ಪಂಚದಶೇನ ಮಧ್ಯಮಿದಂ ವಾತೇನ ಸಗರೇಣ ರಕ್ಷ ॥ ಇತಿ ಮಂತ್ರೇಣ ಅರ್ಕವರಯೋಃ ಕಂಕಣಂ ಬಧ್ವಾರ್ಕಸ್ಯ ಚತುರ್ದಿಕ್ಷು ಕುಂಭೇಷು ವಿಷ್ಣುನಾಮಮಂತ್ರೇಣ ಷೋಡಶೋಪಚಾರೈಃ ಸಂಪೂಜ್ಯ ॥ ಅರ್ಕಸ್ಯೋತ್ತರೇ ಅರ್ಕಪತ್ನ್ಯಾನ್ವಾರಭ್ಧೋ ವರಃ ಅಸ್ಯಾಃ ಸಮ್ಯಕ್ ಭಾರ್ಯಾತ್ವಸಿದ್ಧ್ಯರ್ಥಂ ಪಾಣಿಗ್ರಹಹೋಮಂ ಕರಿಷ್ಯೇ । ಆಘಾರ-ದೇವತೇ ಆಜ್ಯೇನೇತ್ಯಂತೇ ಬೃಹಸ್ಪತಿಂ ಅಗ್ನಿಂ ಅಗ್ನಿಂ ವಾಯುಂ ಸೂರ್ಯಂ ಪ್ರಜಾಪತಿಂ ಚಾಜ್ಯದ್ರವ್ಯೇಣ ಶೇಷೇಣ ಸ್ವಿಷ್ಟಕೃತಂ । ಆಘಾರಾಂತಂ ಕೃತ್ವಾ । ಸಂಗೋಭಿರಿತ್ಯಸ್ಯಾಂಗಿರಸೋ ಬೃಹಸ್ಪತಿಸ್ತ್ರಿಷ್ಟುಪ್ ಆಜ್ಯಹೋಮೇ ವಿನಿಯೋಗಃ ॥ ಓಂ ಸಂಗೋಭಿರಾಂಗಿರಸೋ ನಕ್ಷಮಾಣೋ ಭಗ ಇವೇದರ್ಯಮಣಂ ನಿನಾಯ । ಜನೇ ಮಿತ್ರೋ ನ ದಂಪತೀ ಅನಕ್ತಿ ಬೃಹಸ್ಪತೇ ವಾಜಯಾ-ಶೂಂರಿವಾಜೌ ಸ್ವಾಹಾ । ಬೃಹಸ್ಪತಯ ಇದಂ ನ ಮಮ ॥ ಯಸ್ಮೈತ್ವೇತಿ ವಾಮದೇವೋಗ್ನಿಸ್ತ್ರಿಷ್ಟುಪ್ । ಯಸ್ಮೈತ್ವಾಕಾಮಕಾಮಾಯ ವಯಂ ಸಮ್ರಾಡ್ಯ-ಜಾಮಹೇ । ತಮಸ್ಮಭ್ಯಂ ಕಾಮಂ ದತ್ವಾಥೇದಂ ತ್ವಂ ಘೃತಂ ಪಿಬ ಸ್ವಾಹಾ । ಅಗ್ನಯ ಇದಂ ...॥ ತತೋ ವ್ಯಸ್ತಸಮಸ್ತವ್ಯಾಹೃತಿಭಿರ್ಹುತ್ವಾ ಹೋಮಶೇಷಂ ಸಮಾಪ್ಯ ॥ ಮಯಾ ಕೃತಮಿದಂ ಕರ್ಮ ಸ್ಥಾವರೇಷು ಜರಾಯುಣಾ । ಅರ್ಕಾಪತ್ಯಾನಿ ನೋ ದೇಹಿ ತತ್ಸರ್ವಂ ಕ್ಷಂತುಮರ್ಹಸಿ । ಇತಿ ಪ್ರಾರ್ಥ್ಯ ಶಾಂತಿಪಾಠಾಂತೇ ಗೋಯುಗ್ಮಮಾಚಾರ್ಯಾಯ ದತ್ವಾ ಸ್ವಧೃತವಸ್ತ್ರಾಣಿ ಗುರವೇ ದತ್ವಾ ಅನ್ಯಾನಿ ಧಾರಯೇತ್ ॥ ದಶ ತ್ರಯೋ ವಾ ವಿಪ್ರಾ ಭೋಜ್ಯಾಃ

---

ಧರಿಸಿದ ವಸ್ತ್ರಗಳನ್ನೂ ಕೊಟ್ಟು ಹತ್ತು ಅಥವಾ ಮೂರು ಮಂದಿ ಬ್ರಾಹ್ಮಣರಿಗೆ ಭೋಜನ ಕೊಡಬೇಕು.

೫೭

# ॥ ಸಾಯಮೌಪಾಸನಹೋಮಃ ॥

**॥ ಶ್ರೀಃ ॥ ಕರ್ತಾ ಕೃತಸಂಧ್ಯಾವಂದನಃ ಆಯತನೇ ಸ್ಥಂಡಿಲೇ ವಾ ಪ್ರಾದುಷ್ಕೃತಸ್ಯಾಗ್ನೇಃ ಪಶ್ಚಿಮತಃ ಪ್ರಾಙ್ಮುಖೋ ದರ್ಭಾಸನಾದೌ ಉಪವಿಶ್ಯ ಆಚಮ್ಯ ಪ್ರಾಣಾನಾಯಮ್ಯ ದೇಶಕಾಲಾದ್ಯುಚ್ಚಾರ್ಯ ॥ ಅಗ್ನಿರೂಪೀ ಶ್ರೀಪರಮೇಶ್ವರಪ್ರೀತ್ಯರ್ಥಂ ಸಾಯಮೌಪಾಸನಹೋಮಂ ಕರಿಷ್ಯೇ ॥ ಇತಿ ಸಂಕಲ್ಪ್ಯ ॥ ಚತ್ವಾರಿಶೃಂಗಾ ಗೌತಮೋ ವಾಮದೇವೋಽಗ್ನಿಸ್ತ್ರಿಷ್ಟುಪ್ ಅಗ್ನಿ-ಮೂರ್ತಿಧ್ಯಾನೇ ವಿನಿಯೋಗಃ ಓಂ ಚತ್ವಾರಿಶೃಂಗಾತ್ರಯೋ ಅಸ್ಯ ಪಾದಾದ್ವೇ ಶೀರ್ಷೇ ಸಪ್ತಹಾಸ್ತಾಸೋ ಅಸ್ಯ ॥ ತ್ರಿಧಾ ಬದ್ಧೋ ವೃಷಭೋ ರೋರವೀತಿ ಮಹೋ ದೇವೋ ಮರ್ತ್ಯಾಂ ಆವಿವೇಶ ॥ ಇತಿ ಪ್ರಜ್ವಲಿತಾಗ್ನಿಂ ಧ್ಯಾತ್ವಾ ॥ ಆಗ್ನೇರೀಶಾನೀಂ ದಿಶಮಾರಭ್ಯ ಸೋದಕೇನ ಪಾಣಿನಾ ಸಮಂತಾತ್ ಪ್ರದಕ್ಷಿಣಂ**

---

**ಸಾಯಮೌಪಾಸನಹೋಮ ಪ್ರಯೋಗ:-** ವಿವಾಹಸಂಸ್ಕಾರವಾದ ಮೇಲೆ ಗೃಹಪ್ರವೇಶನೀಯ ಹೋಮ ಮಾಡಿ ಮನೆಯಲ್ಲಿ ಅಗ್ನಿಯನ್ನು ಪ್ರತಿಷ್ಠಾಪಿಸಿದ ನಂತರ ಪ್ರತಿಯೊಬ್ಬ ಗೃಹಸ್ಥನೂ ಸಂಜೆ ಮತ್ತು ಬೆಳಿಗ್ಗೆ ತಪ್ಪದೆ ಔಪಾಸನ ಹೋಮವನ್ನು ಮಾಡಬೇಕು. ಸಾಯಂಕಾಲದ ಔಪಾಸನವನ್ನು ಸೂರ್ಯಾಸ್ತದ ನಂತರ ೯ ಘಳಿಗೆಗಳ ಒಳಗೂ ಪ್ರಾತರೌಪಾಸನವನ್ನು ಸೂರ್ಯೋದಯಾನಂತರ ೧೦ ಘಳಿಗೆಗಳ ಒಳಗೂ ಮಾಡಬೇಕು. ಔಪಾಸನ ಮಾಡುವವನು ಸಾಯಂ ಸಂಧ್ಯಾವಂದನೆ ಮಾಡಿ, ಸ್ಥಂಡಿಲದಲ್ಲಿ ಚೆನ್ನಾಗಿ ಉರಿಯುವ ಅಗ್ನಿಯ ಪಶ್ಚಿಮದಿಕ್ಕಿನಲ್ಲಿ ಪೂರ್ವಕ್ಕೆ ಮುಖಮಾಡಿ ಕುಳಿತು ಆಚಮನ ಪ್ರಾಣಾಯಾಮ ದೇಶ ಕಾಲಕೀರ್ತನಾದಿಗಳನ್ನು ಮಾಡಿ **"ಅಗ್ನಿರೂಪೀ ...ಕರಿಷ್ಯೇ"** ಎಂದು ಸಂಕಲ್ಪ ಮಾಡಬೇಕು. **"ಚತ್ವಾರಿಶೃಂಗಾ..."** ಎಂಬ ಮಂತ್ರ ಹೇಳಿ ಅಗ್ನಿಯನ್ನು ಧ್ಯಾನಿಸಿ, ಈಶಾನ್ಯ ದಿಕ್ಕಿನಿಂದ ಆರಂಭಿಸಿ ಮೂರು ಬಾರಿ ನೀರನ್ನು ಪ್ರೋಕ್ಷಿಸಿ ಸುತ್ತಲೂ ಕೈಯಿಂದ ಉಜ್ಜಿ ನಾಲ್ಕು ದಿಕ್ಕುಗಳಲ್ಲಿಯೂ ಹದಿನಾರು ದರ್ಭೆಗಳಿಂದ ಪರಿಸ್ತರಣ ಹಾಕಬೇಕು. ಚೆನ್ನಾಗಿ ತೊಳೆದ, ಒಡ್ಡೆಯಾಗಿರುವ ಅಕ್ಕಿಯನ್ನು, ಸಮಿಧೆ ಮತ್ತು ಬರ್ಹಿಗಳೊಂದಿಗೆ ಅಗ್ನಿಯ ಉತ್ತರಭಾಗದಲ್ಲಿಟ್ಟು ಉರಿಯುವ ದರ್ಭೆಯ ತುಂಡಿನಿಂದ ಮೂರು ಬಾರಿ ಸುತ್ತಿಸಿ ಆ ತುಂಡನ್ನು ಅಗ್ನಿಯಲ್ಲಿ ಹಾಕಿ ಕೈತೊಳೆದು ಅಗ್ನಿಯ ಪಶ್ಚಿಮದಲ್ಲಿ ದರ್ಭೆಗಳನ್ನು ಹಾಸಿ ಅದರ ಮೇಲೆ ಸಮಿಧೆಯನ್ನೂ ಹವಿಸ್ಸನ್ನೂ ಇಟ್ಟು **"ವಿಶ್ವಾನಿನ..."** ಎಂಬ ಮಂತ್ರದಿಂದ ಎಂಟು ದಿಕ್ಕುಗಳಲ್ಲಿ ಅಗ್ನಿಯನ್ನು ಅರ್ಚಿಸಿ

ತ್ರಿಃ ಪರಿಮೃಜ್ಯ ಷೋಡಶ ದರ್ಭೈಃ ಪೂರ್ವಾದಿಷು ಪರಿಸ್ತೀರ್ಯ ತ್ರಿಃ ಪರ್ಯುಕ್ಷ್ಯ ॥ ಪ್ರಕ್ಷಾಲಿತಾನಾರ್ದ್ರಸಿತತಂಡುಲಾನ್ ಪಾತ್ರೇ ನಿಕ್ಷಿಪ್ಯ ॥ ತತ್ಪಾತ್ರಂ ಸಮಿಧಾ ಬರ್ಹಿಷಾ ಚ ಸಹ ಅಗ್ನೇರುತ್ತರತೋ ನಿಧಾಯ ಜ್ವಲತಾ ದರ್ಭೇಣಾವಜ್ವಲ್ಯ ಪ್ರೋಕ್ಷ್ಯ ತೇನೈವ ತ್ರಿಃ ಪರ್ಯಗ್ನಿ ಕೃತ್ವಾ ತದುಲ್ಮುಕಂ ನಿರಸ್ಯ ಅಪಉಪಸ್ಪೃಶ್ಯ ॥ ಅಗ್ನೇಃ ಪಶ್ಚಿಮತಃ ಕುಶಾನಾಸ್ತೀರ್ಯ ತತ್ರ ಸಮಿಧಾ ಸಹ ಹವಿರ್ನಿಧಾಯ ॥ ವಿಶ್ವಾನಿನ ಇತಿ ತಿಸೃಣಾಮಾತ್ರೇಯೋ ವಸುಶ್ರುತೋ-ಗ್ನಿಸ್ತ್ರಿಷ್ಟುಪ್ ದ್ವಯೋರಗ್ನ್ಯರ್ಚನೇ ಅಂತ್ಯಾಯಾ ಉಪಸ್ಥಾನೇ ವಿನಿಯೋಗಃ ॥ ಓಂ ವಿಶ್ವಾನಿನೋ .....॥ ಇತಿ ಬದ್ಧಾಂಜಲಿರ್ನಮಸ್ಕೃತ್ಯ ॥ ದಕ್ಷಿಣಂ ಜಾನು ಸಂಪಾತ್ಯ ತಾಂ ಸಮಿಧಂ ತೂಷ್ಣೀಂ ಅಗ್ನೌ ಪ್ರಕ್ಷಿಪ್ಯೋಪಸ್ಪೃಶ್ಯ ಸಮಿಧಿ ಪ್ರದೀಪ್ತಾಯಾಂ ವಿಧೂಮಜ್ವಾಲಾಗ್ನೌ ಅಂಗಾರೇಗ್ನೌ ಶತಸಂಖ್ಯಾ-ಕಾನ್ ಚತುಃ ಷಷ್ಟಿಮಿತಾನ್ ವಾ ತಂಡುಲಾನ್ ದಕ್ಷಿಣಹಸ್ತೇನಾದಾಯ ಸವ್ಯಪಾಣಿಂ ಹೃದಿ ನಿಧಾಯ ಅಗ್ನ್ಯುತ್ತರಪಾರ್ಶ್ವೇನ ಸಮಿನ್ಮೂಲತೋ ದ್ವ್ಯಂಗುಲಪ್ರದೇಶೇ ಓಂ ಅಗ್ನಯೇ ಸ್ವಾಹಾ ಇತಿ ಹುತ್ವಾ ಅಗ್ನಯ ಇದಂ ನ ಮಮ ಇತ್ಯುಕ್ತ್ವಾ ವಾಗ್ಯತ ಏವ ದ್ವಿತೀಯಾಂ ಭೂಯಸೀಮಾದಾಯ ಓಂ ಪ್ರಜಾಪತಯೇ ಇತ್ಯುಪಾಂಶು ಧ್ಯಾತ್ವಾ ಸ್ವಾಹಾ ಇತ್ಯುಕ್ತ್ವಾ ತಸ್ಯೈಶಾನದೇಶೇ ಅಸಂಸ್ಪೃಷ್ಟಾಂ ಹುತ್ವಾ ಪ್ರಜಾಪತಯ ಇದಂ ನ ಮಮ ಇತ್ಯುಕ್ತ್ವಾ ಪೂರ್ವವ-

---

ಧ್ಯಾನಮಾಡಬೇಕು. ಬಳಿಕ ಬಲ ಮೊಣಕಾಲನ್ನು ನೆಲಕ್ಕೆ ತಾಗುವಂತೆ ಇಟ್ಟು ಆ ಸಮಿಧೆಯನ್ನು ಮಂತ್ರವಿಲ್ಲದೆ ಅಗ್ನಿಯಲ್ಲಿ ಹೋಮಿಸಬೇಕು. ಕೈತೊಳೆದು, ಸಮಿಧೆಯು ಚೆನ್ನಾಗಿ ಉರಿದಾಗ ಹೊಗೆ ಇಲ್ಲದ ಕೆಂಡಗಳ ಮೇಲೆ ನೂರಾಗುವಷ್ಟು ಅಥವಾ ಅರ್ವತ್ತನಾಲ್ಕು ಆಗುವಷ್ಟು ಅಕ್ಕಿಕಾಳುಗಳನ್ನು ಬಲಗೈಯಲ್ಲಿ ತೆಕ್ಕೊಂಡು ಎಡಗೈಯನ್ನು ಎದೆಯ ಮೇಲಿಟ್ಟು **"ಅಗ್ನಯೇ ಸ್ವಾಹಾ"** ಎಂದು ಹೋಮಿಸಬೇಕು. **"ಅಗ್ನಯ ಇದಂ..."** ಎಂದು ಹೇಳಿ ಎರಡನೆಯ ಆಹುತಿಗಾಗಿ ಸ್ವಲ್ಪ ಹೆಚ್ಚಾಗಿಯೇ ಅಕ್ಕಿಯನ್ನು ತೆಕ್ಕೊಂಡು **"ಪ್ರಜಾಪತಯೇ"** ಎಂದು ಮನಸ್ಸಿನಲ್ಲೇ ಭಾವಿಸಿ, **"ಸ್ವಾಹಾ"** ಎಂದು ಗಟ್ಟಿಯಾಗಿ ಹೇಳಿ ಹೋಮಿಸಿ **"ಪ್ರಜಾಪತಯ ಇದಂ..."** ಎಂದು ಹೇಳಿ ಮೊದಲಿನಂತೆ ಸರಿಯಾಗಿ ಕುಳಿತು, ಪರಿಸ್ತರಣಗಳನ್ನು ತೆಗೆದು ಮತ್ತೊಮ್ಮೆ ನೀರು ಚಿಮುಕಿಸಿ ಅಗ್ನಿಯ ಸುತ್ತಲೂ ಶುದ್ಧಿಮಾಡಿ ಅಗ್ನಿಯ ವಾಯುವ್ಯ ದಿಕ್ಕಿನಲ್ಲಿ ನಿಂತು

ದುಪವಿಶ್ಯ ಪರಿಸ್ತರಣಾನಿ ವಿಸೃಜ್ಯ ಪರಿಸಮೂಹನಪರ್ಯುಕ್ಷಣೇ ಕೃತ್ವಾ ಉಪ-ಸ್ಥಾನಂ ಕುರ್ಯಾತ್ ॥ ಅಗ್ನೇರ್ವಾಯವ್ಯದೇಶೇ ತಿಷ್ಠನ್ ಪ್ರಹ್ವಃ ಕೃತಾಂಜ-ಲಿರಗ್ನಿಮೀಕ್ಷಮಾಣೋ ಮಂತ್ರಾನ್ ಪಠೇತ್ ॥ ಅಗ್ನ ಆಯೂಂಷೀತಿ ತಿಸೃಣಾಂ ಶತಂ ವೈಖಾನಸಾ ಋಷಯಃ ಅಗ್ನಿಃ ಪವಮಾನೋ ದೇವತಾ ಗಾಯತ್ರೀ ಛಂದಃ ॥ ಅಗ್ನ್ಯುಪಸ್ಥಾನೇ ವಿನಿಯೋಗಃ ॥ ಓಂ ಅಗ್ನ ಆಯೂಂಷಿ....॥ ಋಕ್ ೩ ॥ ಅಗ್ನೇ ತ್ವಂ ನ ಇತಿ ಚತಸೃಣಾಂ ಗೌಪಾಯನಾ ಲೌಪಾಯನಾ ವಾಬಂಧುಃ ಸುಬಂಧುಃ ಶ್ರುತಬಂಧುರ್ವಿಪ್ರಬಂಧುಶ್ಚೈಕರ್ಚಾ ಋಷಯಃ ಅಗ್ನಿರ್ದೇವತಾ ದ್ವಿಪದಾ ವಿರಾಟ್ ಛಂದಃ ॥ ಅಗ್ನ್ಯುಪಸ್ಥಾನೇ ವಿನಿಯೋಗಃ ॥ ಓಂ ಅಗ್ನೇತ್ವನ್ನೋ ಅಂತಮ ಉತ ತ್ರಾತಾ ಶಿವೋ ಭವಾವರೂಥ್ಯಃ ॥ ವಸು-ರಗ್ನಿರ್ವಸೂಶ್ರವಾಅಚ್ಛಾನಕ್ಷಿದ್ಯುಮತ್ತಮಂರಯಿಂದಾಃ ॥ ಸನೋಬೋಧಿಶ್ರುಧೀ ಹವ ಮುರುಷ್ಯಾಣೋ ಅಘಾಯತಃ ಸಮಸ್ಮಾತ್ ॥ ತಂತ್ವಾಶೋಚಿಷ್ಠದೀ ದಿವಃ ಸುಮ್ನಾಯನೂನಮೀಮಹೇಸಖಿಭ್ಯಃ ॥ ಪ್ರಜಾಪತೇ ಹಿರಣ್ಯಗರ್ಭಃ ಪ್ರಜಾಪತಿಸ್ತ್ರಿಷ್ಟುಪ್ ॥ ಪ್ರಜಾಪತ್ಯುಪಸ್ಥಾನೇ ವಿನಿಯೋಗಃ ॥ ಓಂ ಪ್ರಜಾ-ಪತೇ .....॥ ತಂತುಂ ತನ್ವನ್ ದೇವಾ ಅಗ್ನಿರ್ಜಗತೀ ॥ ಅಗ್ನ್ಯುಪಸ್ಥಾನೇ ವಿನಿಯೋಗಃ ॥ ಓಂ ತಂತುಂ ತನ್ವನ್ ರಜಸೋ ಭಾನುಮನ್ವಿಹಿಜ್ಯೋತಿಷ್ಮತಃ ಪಥೋ ರಕ್ಷ ಧಿಯಾ ಕೃತಾನ್ ॥ ಅನುಲ್ಬಣಂ ವಯತ ಜೋಗುವಾಮಪ್ಪೋ-ಮನುರ್ಭವಜನಯಾ ದೈವ್ಯಂ ಜನಂ ॥ ಹಿರಣ್ಯಗರ್ಭ ಇತ್ಯಸ್ಯ ಹಿರಣ್ಯಗರ್ಭಃ ಪ್ರಜಾಪತಿಸ್ತ್ರಿಷ್ಟುಪ್ ॥ ಪ್ರಜಾಪತ್ಯುಪಸ್ಥಾನೇ ವಿನಿಯೋಗಃ ॥ ಓಂ ಹಿರಣ್ಯ-ಗರ್ಭಃ ಸಮವರ್ತತಾಗ್ರೇ ಭೂತಸ್ಯ ಜಾತಃ ಪತಿರೇಕ ಆಸೀತ್ ॥ ಸದಾಧಾರ-ಪೃಥಿವೀಂ ದ್ಯಾಮುತೇ ಮಾಂ ಕಸ್ಮೈ ದೇವಾಯ ಹವಿಷಾ ವಿಧೇಮ ॥ ಉಪ-ವಿಶ್ಯಾಚಾಮೇತ್ ॥ ನ್ಯೂನಾತಿರಿಕ್ತಾಚ್ಛಿದ್ರತ್ವಾರ್ಥಂ ವಿಷ್ಣುಸ್ಮರಣಂ ಕೃತ್ವಾ ॥ ಪ್ರಮಾದಾತ್ ಕುರ್ವತಾಂ ಕರ್ಮ ಪ್ರಚ್ಯವೇತಾಧ್ವರೇಷು ಯತ್ ॥ ಸ್ಮರಣಾ-

**ದೇವ ತದ್ವಿಷ್ಣೋಃ ಸಂಪೂರ್ಣಂ ಸ್ಯಾದಿತಿ ಶ್ರುತಿಃ ॥ ಅನೇನ ಹೋಮ-ಕರ್ಮಣಾ ಶ್ರೀಪರಮೇಶ್ವರಃ ಪ್ರೀಯತಾಂ ಇತ್ಯುಕ್ತ್ವಾ ಜಲಂ ತ್ಯಜೇತ್ ॥ ಅಗ್ನಿಂ ಸಂಭಾರಯೇತ್ ॥**

**॥ ಇತಿ ಸಾಯಮೌಪಾಸನಹೋಮಃ ॥**

---

ಕೈಜೋಡಿಸುತ್ತ **"ಅಗ್ನ ಆಯೂಂಷಿ..." "ಅಗ್ನೇತ್ವನ್ನ...." "ಪ್ರಜಾಪತೇ ನ ತ್ವ..." "ತಂತುಂ ತನ್ವನ್..." "ಹಿರಣ್ಯಗರ್ಭ..."** ಈ ಮಂತ್ರಗಳಿಂದ ಅಗ್ನ್ಯುಪಸ್ಥಾನ ಮಾಡಬೇಕು. ನಂತರ ಕುಳಿತು **"ಪ್ರಮಾದಾತ್ ಕುರ್ವತಾಂ..."** ಎಂದು ವಿಷ್ಣುಸ್ಮರಣೆ ಮಾಡಿ **"ಅನೇನ ಹೋಮಕರ್ಮಣಾ ...ಪ್ರೀಯತಾಂ"** ಎಂದು ನೀರುಬಿಟ್ಟು, ಎರಡು ಸಲ ಆಚಮನ ಮಾಡಬೇಕು.

॥ ಸಾಯಂ ಔಪಾಸನಹೋಮ ಸಮಾಪ್ತ ॥

# ॥ ಪ್ರಾತರೌಪಾಸನಹೋಮಃ ॥

॥ ಶ್ರೀಃ ॥ ಏವಂ ಪ್ರಾತರುದಯಾತ್ಪೂರ್ವಂ ಕೃತಸಂಧ್ಯಾವಂದನಃ ಅಗ್ನೇಃ ಪ್ರಾದುಷ್ಕರಣಂ ಕೃತ್ವಾ ಆಚಮ್ಯ ಪ್ರಾಣಾನಾಯಮ್ಯ ದೇಶಕಾಲಾದ್ಯು-ಚ್ಚಾರ್ಯ ಅಗ್ನಿರೂಪೀ ಪರಮೇಶ್ವರಪ್ರೀತ್ಯರ್ಥಂ ಪ್ರಾತರೌಪಾಸನಹೋಮಂ ಕರಿಷ್ಯೇ ॥ ಇತಿ ಸಂಕಲ್ಪ್ಯ ॥ ಹೋಮಕಾಲೇ ಪೂರ್ವವತ್ ॥ ಸಮಿಧಂ ತೂಷ್ಣೀಂ ಅಗ್ನೌ ನಿಧಾಯ ॥ ಓಂ ಸೂರ್ಯಾಯ ಸ್ವಾಹಾ ಸೂರ್ಯಾಯ ಇದಂ ..... ॥ ಓಂ ಪ್ರಜಾಪತಯೇ ಸ್ವಾಹಾ ಪ್ರಜಾಪತಯ ಇದಂ .....॥ ಪರಿಸ್ತರಣಂ ವಿಸೃಜ್ಯ ಪರ್ಯೂಹನೋಕ್ಷಣೇ ಕುರ್ಯಾತ್ ॥ ತಿಷ್ಠನ್ ॥ ಉಪಸ್ಥಾನಮಂತ್ರಾಃ ॥ ಸೂರ್ಯೋ ನೋ ದಿವಸ್ಪಾತ್ವಿತ್ಯಸ್ಯ ಚಕ್ಷುಃ ಸೂರ್ಯೋ ಗಾಯತ್ರೀ ॥ ಸೂರ್ಯೋಪಸ್ಥಾನೇ ವಿನಿ... ॥ ಓಂ ಸೂರ್ಯೋ ನೋ ದಿವಸ್ಪಾತುವಾತೋ ಅಂತರಿಕ್ಷಾತ್ ॥ ಅಗ್ನಿರ್ನಃ ಪಾರ್ಥಿವೇಭ್ಯಃ ॥ ಉದುತ್ಯಂ ಕಾಣ್ವಃ ಪ್ರಸ್ಕಣ್ವಃ ಸೂರ್ಯೋ ಗಾಯತ್ರೀ ॥ ಸೂರ್ಯೋಪಸ್ಥಾನೇ ವಿನಿ .....॥ ಓಂ ಉದುತ್ಯಂ ಜಾತವೇದಸಂ ದೇವಂ ವಹಂತಿ ಕೇತವಃ ॥ ದೃಶೇ-ವಿಶ್ವಾಯಸೂರ್ಯಂ ॥ ಚಿತ್ರಂ ದೇವಾನಾಮಾಂಗಿರಸಃ ಕುತ್ಸಃ ಸೂರ್ಯಸ್ತ್ರಿ-ಷ್ಟುಪ್ ॥ ಸೂರ್ಯೋಪಸ್ಥಾನೇ ವಿನಿ .....॥ ಓಂ ಚಿತ್ರಂ ದೇವಾನಾಮುದ-ಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ ॥ ಆಪ್ರಾದ್ಯಾವಾ ಪೃಥಿವೀ ಅಂತರಿಕ್ಷಂ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ ॥ ನಮೋ ಮಿತ್ರಸ್ಯೇತ್ಯಭಿತಪಾಃ ಸೂರ್ಯೋ ಜಗತೀ ॥ ಸೂರ್ಯೋಪಸ್ಥಾನೇ ವಿನಿ .... ॥ ಓಂ ನಮೋ ಮಿತ್ರಸ್ಯ ವರುಣಸ್ಯ ಚಕ್ಷಸೇ ಮಹೋದೇವಾಯತದೃತಂಸಪರ್ಯತ ॥ ದೂರೇ-ದೃಶೇ ದೇವಜಾತಾಯ ಕೇತವೇ ದಿವಸ್ಪುತ್ರಾಯ ಸೂರ್ಯಾಯ ಶಂಸತ ॥

ಏತೈರ್ಮಂತ್ರೈಶ್ಚತುರ್ಭಿಃ ಸೂರ್ಯಮುಪಸ್ಥಾಯ ॥ ಪ್ರಜಾಪತೇ ನತ್ವದೇ-
ತಾನ್ .....॥ ಹಿರಣ್ಯಗರ್ಭಃ ಸಮವರ್ತತಾ .....॥ ಇತಿ ದ್ವಾಭ್ಯಾಂ ಪ್ರಜಾಪತಿಂ
ಕೋಪಸ್ಥಾಯ ॥ ಓಂಚಮೇ ಸ್ವರಶ್ಚ ಮೇ... ॥ ಇತಿ ಪ್ರಾತರ್ಹೋಮೇ ವಿಶೇಷಃ
ರ್ಮೇಶ್ವರಾರ್ಪಣಾದಿ ಪೂರ್ವವತ್ ॥

॥ ಇತಿ ಪ್ರಾತರೌಪಾಸನಹೋಮಃ ॥

---

ಸೂರ್ಯೋದಯಕ್ಕೆ ಮೊದಲೇ ಸಂಧ್ಯಾವಂದನೆಯನ್ನು ಮಾಡಿ ಪ್ರಾತರೌಪಾಸನ ಹೋಮವನ್ನು ಮಾಡಬೇಕು. ಸಂಕಲ್ಪದಲ್ಲಿ **"ಪ್ರಾತರೌಪಾಸನಹೋಮಂ ಕರಿಷ್ಯೇ"** ಎಂದೂ ಆಹುತಿಯಲ್ಲಿ **"ಸೂರ್ಯಾಯ ಸ್ವಾಹಾ ಸೂರ್ಯಾಯ ಇದಂ ....."** ಎಂದೂ ಉಪಸ್ಥಾನ ಮಂತ್ರಗಳಲ್ಲಿ ಸೂರ್ಯಸಂಬಂಧಿಯಾದ **"ಸೂರ್ಯೋ ನೋ...."** ಮುಂತಾಗಿ ನಾಲ್ಕು ಮಂತ್ರಗಳೆಂದೂ, ಈ ವ್ಯತ್ಯಾಸಗಳನ್ನುಳಿದು ಇತರ ಎಲ್ಲ ಕರ್ಮಗಳನ್ನು ಸಾಯಮೌಪಾಸನ ಹೋಮದಂತೆಯೇ ಮಾಡಬೇಕು.

॥ ಪ್ರಾತರೌಪಾಸನಹೋಮ ಸಮಾಪ್ತ ॥

## ೫೯

# ॥ ಗ್ರಹಯಜ್ಞಾವಶ್ಯಕತಾ ಗ್ರಹಾಣಾಂ ಪ್ರತಿಮಾವರ್ಣಾದಿ ಚ ॥

**ಶ್ರೀಕಾಮಃ ಶಾಂತಿಕಾಮೋ ವಾ ಗ್ರಹಯಜ್ಞಂ ಸಮಾಚರೇತ್ ।**
**ವೃಷ್ಟ್ಯಾಯುಃ ಪುಷ್ಟಿಕಾಮೋ ವಾ ತಥೈವಾಭಿಚರನ್ನಪಿ ॥**
**ಯಸ್ಯ ಗ್ರಹೋ ಯದಾ ದುಃಸ್ಥಃ ಸ ತಂ ಯತ್ನೇನ ಪೂಜಯೇತ್ ।**
**ಬ್ರಹ್ಮಣೈಷಾಂ ವರೋ ದತ್ತಃ ಪೂಜಿತಾ ಪೂಜಯಿಷ್ಯಥ ॥**
**ಗ್ರಹಾಧೀನಾ ನರೇಂದ್ರಾಣಾಮುಚ್ಛ್ರಾಯಾಃ ಪತನಾನಿ ಚ ।**
**ಭಾವಾಭಾವೌ ಚ ಜಗತಃ ತಸ್ಮಾತ್ಪೂಜ್ಯತಮಾ ಗ್ರಹಾಃ ॥**

## ॥ ಗ್ರಹಾಣಾಂ ನಾಮಾನಿ ॥

**ಸೂರ್ಯಃ ಸೋಮೋ ಮಹೀಪುತ್ರಃ ಸೋಮಪುತ್ರೋ ಬೃಹಸ್ಪತಿಃ ।**
**ಶುಕ್ರಃ ಶನೈಶ್ಚರೋ ರಾಹುಃ ಕೇತುಶ್ಚೇತಿ ಗ್ರಹಾಃ ಸ್ಮೃತಾಃ ॥**

---

### ॥ ಗ್ರಹಯಜ್ಞವನ್ನು ಮಾಡಬೇಕಾದ ಆವಶ್ಯಕತೆ ॥

ಗ್ರಹಗಳ ಪೂಜೆ ಮಾಡುವುದರಿಂದ ದಾರಿದ್ರ್ಯ, ರೋಗ, ರುಜಿನ, ಇತ್ಯಾದಿಗಳ ನಿವಾರಣೆಯಾಗಿ ಸಂಪತ್ತು ಸುಖ ಚಿತ್ತಶಾಂತಿಗಳು ದೊರೆಯುತ್ತವೆ. ಕೃಷಿ, ಮಳೆ, ಬೆಳೆ, ಧಾನ್ಯ ವೃದ್ಧಿ, ಆಯುಷ್ಯ, ಆರೋಗ್ಯ ಮುಂತಾದವುಗಳು ವರ್ಧಿಸುತ್ತವೆ. ಮಿತ್ರಲಾಭವಾಗುತ್ತದೆ. ಶತ್ರುಗಳ ನಾಶವಾಗುತ್ತದೆ. ಜನ್ಮರಾಶಿ ಅಥವಾ ಜನ್ಮಲಗ್ನದಿಂದ ಅಷ್ಟಮಾದಿ ದುಷ್ಟಸ್ಥಾನದಲ್ಲಿರುವ ಗ್ರಹದ ಅಥವಾ ಅಷ್ಟೋತ್ತರೀ ವಿಂಶೋತ್ತರೀ ದಶಾಕ್ರಮದಲ್ಲಿ ಯಾವ ಯಾವ ದುಷ್ಟಗ್ರಹಗಳ ದಶೆ ಪ್ರಾಪ್ತವಾಗಿದೆಯೋ ಆಯಾ ಗ್ರಹವನ್ನು ಜಪ, ಹೋಮ ಮೊದಲಾದವುಗಳಿಂದ ಪೂಜಿಸಿ, ಸಂತುಷ್ಟಿಗೊಳಿಸಿದರೆ ಅದು ಪೀಡಿಸುವುದಿಲ್ಲ ಮಾತ್ರವಲ್ಲ ಶುಭಫಲವನ್ನೂ ಕೊಡುತ್ತದೆ. ಯಾಕೆಂದರೆ ಜಪ, ಹೋಮಾದಿಗಳಿಂದ ಯಾರು ನಿಮ್ಮನ್ನು ಪೂಜಿಸುತ್ತಾರೋ ಅವರ ಸಕಲ ಸಂಕಟಗಳನ್ನೂ ಪರಿಹರಿಸಿ ಅಂಥವರಿಗೆ ನೀವು ಶುಭಫಲಗಳನ್ನು ಕರುಣಿಸಬೇಕೆಂದು ಪೂರ್ವಕಾಲದಲ್ಲಿ ಬ್ರಹ್ಮನು ನವಗ್ರಹಗಳಿಗೆ ವರವನ್ನು ಕೊಟ್ಟಿದ್ದಾನೆ. ರಾಜನಾದವನು ಅನಿವಾರ್ಯವಾಗಿ ಈ ಗ್ರಹಗಳ ಪೂಜಾದಿಗಳನ್ನು ಮಾಡಲೇಬೇಕು. ಇಡೀ ರಾಜ್ಯದ ಹಾಗೂ ಎಲ್ಲ ಪ್ರಜೆಗಳ ಅಭಿವೃದ್ಧಿ ಹಾಗೂ ಪತನಗಳು, ಅತಿವೃಷ್ಟಿ, ಅನಾವೃಷ್ಟಿ, ಈತಿಬಾಧೆ ಮುಂತಾದವು ಗ್ರಹಗಳನ್ನೇ ಹೊಂದಿರುತ್ತವೆ. ರಾಜನಾದವನು ಸದಾಕಾಲವೂ ಗ್ರಹಗಳನ್ನು ತೃಪ್ತಿಪಡಿಸಿಕೊಂಡಿದ್ದರೆ ತನ್ನ ಸಮಸ್ತ ರಾಜ್ಯದ ಮತ್ತು ಪ್ರಜೆಗಳ ಕ್ಷೇಮವನ್ನು ಸಾಧಿಸಬಹುದು.

## ॥ ಗ್ರಹಾಣಾಂ ಮೂರ್ತಯಃ – ಪ್ರತಿಮಾಃ ॥

**ತಾಮ್ರಕಾತ್ ಸ್ಫಾಟಿಕಾದ್ರಕ್ತಚಂದನಾತ್ ಸ್ವರ್ಣಕಾದುಭೌ ।**
**ರಾಜತಾದಯಸಃ ಸೀಸಾತ್ಕಾಂಸ್ಯಾತ್ಕಾರ್ಯಾ ಗ್ರಹಾಃ ಕ್ರಮಾತ್ ॥**

## ॥ ಗ್ರಹಮೂರ್ತೀಕರಣಪ್ರಕಾರಃ ॥

**ಪದ್ಮಾಸನಃ ಪದ್ಮಕರಃ ಪದ್ಮಗರ್ಭಸಮದ್ಯುತಿಃ ।**
**ಸಪ್ತಾಶ್ವರಥಸಂಸ್ಥಶ್ಚ ದ್ವಿಭುಜಃ ಸ್ಯಾತ್ಸದಾ ರವಿಃ ॥**
**ಶ್ವೇತಃ ಶ್ವೇತಾಂಬರಧರೋ ದಶಾಶ್ವಃ ಶ್ವೇತಭೂಷಣಃ ।**
**ಗದಾಪಾಣಿರ್ದ್ವಿಬಾಹುಶ್ಚ ಕರ್ತವ್ಯೋ ವರದಃ ಶಶೀ ॥**
**ರಕ್ತಮಾಲ್ಯಾಂಬರಧರಃ ಶಕ್ತಿಶೂಲಗದಾಧರಃ ।**
**ಚತುರ್ಭುಜೋ ಮೇಷಗಮೋ ವರದಃ ಸ್ಯಾದ್ಧರಾಸುತಃ ॥**
**ಪೀತಮಾಲ್ಯಾಂಬರಧರಃ ಕರ್ಣಿಕಾರಸಮದ್ಯುತಿಃ ।**
**ಖಡ್ಗಚರ್ಮಗದಾಪಾಣಿಃ ಸಿಂಹಸ್ಥೋ ವರದೋ ಬುಧಃ ॥**

---

### ॥ ಗ್ರಹಗಳ ಹೆಸರುಗಳು ॥

1. ಸೂರ್ಯ 2. ಚಂದ್ರ. 3. ಮಂಗಳ. 4. ಬುಧ. 5. ಬೃಹಸ್ಪತಿ 6. ಶುಕ್ರ. 7. ಶನೈಶ್ಚರ. 8. ರಾಹು. 9. ಕೇತು.

**ನವಗ್ರಹಗಳ ಪ್ರತಿಮೆಗಳು:-** ಸೂರ್ಯ-ತಾಮ್ರ; ಚಂದ್ರ-ಸ್ಫಟಿಕ; ಕುಜ – ರಕ್ತಚಂದನ; ಬುಧ-ಸುವರ್ಣ; ಗುರು-ಸುವರ್ಣ; ಶುಕ್ರ-ಬೆಳ್ಳಿ; ಶನಿ-ಕಬ್ಬಿಣ ; ರಾಹು-ಸೀಸ; ಕೇತು – ಕಂಚು ಈ ಲೋಹಗಳು ದೊರೆಯದಿದ್ದರೆ ಆಯಾ ಬಣ್ಣದ ರಂಗವಲ್ಲಿಗಳಿಂದ ಗ್ರಹಗಳ ಆಕೃತಿಗಳನ್ನು ನಿರ್ಮಿಸಬೇಕು.

**ಗ್ರಹಗಳ ಮೂರ್ತಿಗಳು:-** 1. ಸೂರ್ಯ:- ತಾವರೆಯ ಆಸನ, ಕೈಯಲ್ಲಿ ತಾವರೆ, ಪದ್ಮರಾಗದ ಬಣ್ಣ, ಎರಡು ಕೈಗಳು, ವರದ ಹಸ್ತ, ಏಳು ಕುದುರೆಗಳುಳ್ಳ ರಥದ ಮೇಲೆ ಮಂಡಿಸಿದವ. 2. ಚಂದ್ರ:- ಶ್ವೇತವರ್ಣ, ಬಿಳಿಬಟ್ಟೆ, ಬಿಳಿ ಆಭರಣಗಳು, ಹತ್ತು ಕುದುರೆಗಳುಳ್ಳ ರಥ, ಎರಡು ಕೈಗಳು, ಕೈಯಲ್ಲಿ ಗದೆ, ವರದ ಹಸ್ತ. 3. ಕುಜ-ಕೆಂಪು ಹೂಗಳ ಮಾಲೆ, ಕೆಂಪು ಬಟ್ಟೆ, ಶಕ್ತಿ, ಶೂಲ, ಗದೆ, ಆಯುಧಗಳು, ನಾಲ್ಕು ಕೈಗಳು, ಕುರಿವಾಹನ, ವರದಹಸ್ತ. 4. ಬುಧ:- ಅರಸಿನ ಬಣ್ಣದ ಪುಷ್ಪಮಾಲೆ, ಅರಸಿನ ಬಣ್ಣದ ವಸ್ತ್ರ, ಕರ್ಣಿಕಾರ ಪುಷ್ಪದಂತಹ ಶರೀರಕಾಂತಿ, ಖಡ್ಗ, ಚರ್ಮ, ಗದೆ, ಆಯುಧಗಳು, ಸಿಂಹವಾಹನ, ವರದಹಸ್ತ. 5. ಗುರು:- ಪೀತವರ್ಣದ ಪುಷ್ಪ ಮಾಲೆ, ಪೀತ (ಅರಸಿನ) ವಸ್ತ್ರ, ನಾಲ್ಕು ಕೈಗಳು, ದಂಡ, ಕಮಂಡಲು,

**ದೇವದೈತ್ಯಗುರೂ ತದ್ವತ್ಪೀತಶ್ವೇತೌ ಚತುರ್ಭುಜೌ ।**
**ದಂಡಿಗೌ ವರದೌ ಕಾರ್ಯೌ ಸಾಕ್ಷಸೂತ್ರ ಕಮಂಡಲೂ ॥**
**ಇಂದ್ರನೀಲದ್ಯುತಿಃ ಶೂಲೀ ವರದೋ ಗೃಧ್ರವಾಹನಃ ।**
**ಬಾಣಬಾಣಾಸನಧರಃ ಕರ್ತವ್ಯೋಽರ್ಕಸುತಃ ಸದಾ ॥**
**ಕರಾಲವದನಃ ಖಡ್ಗಚರ್ಮಶೂಲೀವರಪ್ರದಃ ।**
**ನೀಲಃ ಸಿಂಹಾಸನಸ್ಥಶ್ಚ ರಾಹುರತ್ರ ಪ್ರಶಸ್ಯತೇ ॥**
**ಧೂಮ್ರಾ ದ್ವಿಬಾಹವಃ ಸರ್ವೇ ಗದಿನೋ ವಿಕೃತಾನನಾಃ ।**
**ಗೃಧ್ರಾಸನಗತಾ ನಿತ್ಯಂ ಕೇತವಃ ಸ್ಯುರ್ವರಪ್ರದಾಃ ॥**
**ಸರ್ವೇ ಕಿರೀಟಿನಃ ಕಾರ್ಯಾ ಗ್ರಹಾ ಲೋಕಹಿತಾವಹಾಃ ।**
**ಸ್ವಾಂಗುಲೇನೋಚ್ಛ್ರಿತಾಃ ಸರ್ವೇ ಶತಮಷ್ಟೋತ್ತರಂ ಸದಾ ॥**

## ॥ ಗ್ರಹಸ್ಥಾಪನದಿಶಾ ॥

**ಮಧ್ಯೇತು ಭಾಸ್ಕರಂ ವಿದ್ಯಾಲ್ಲೋಹಿತಂ ದಕ್ಷಿಣೇನ ತು ।**
**ಉತ್ತರೇಣ ಗುರುಂ ವಿದ್ಯಾದ್ಬುಧಂ ಪೂರ್ವೋತ್ತರೇಣ ತು ॥**
**ಪೂರ್ವೇಣ ಭಾರ್ಗವಂ ವಿದ್ಯಾತ್ಸೋಮಂ ದಕ್ಷಿಣಪೂರ್ವಕೇ ।**
**ಪಶ್ಚಿಮೇ ಚ ಶನಿಂ ವಿದ್ಯಾದ್ರಾಹುಂ ಪಶ್ಚಿಮದಕ್ಷಿಣೇ ॥**
**ಪಶ್ಚಿಮೋತ್ತರತಃ ಕೇತುಂ ಸ್ಥಾಪ್ಯಾ ವೈ ಶುಕ್ಲ ತಂಡುಲೈಃ ।**
**ಸ್ವವರ್ಣೈರ್ವಾ ಪಟೇ ಲೇಖ್ಯಾ ಗಂಧೈರ್ಮಂಡಲಕೇಷು ವಾ ॥**

---

ಅಕ್ಷಮಾಲೆ, ವರದಹಸ್ತ. 6. ಶುಕ್ರ:- ಶ್ವೇತವರ್ಣ, ಶ್ವೇತಮಾಲೆ, ಶ್ವೇತವಸ್ತ್ರ, ನಾಲ್ಕು ಕೈಗಳು, ದಂಡ ಕಮಂಡಲು, ಅಕ್ಷಮಾಲೆ, ವರದಹಸ್ತ, 7. ಶನಿ:- ಇಂದ್ರನೀಲವರ್ಣ, ತ್ರಿಶೂಲ, ಬಿಲ್ಲು ಮತ್ತು ಬಾಣ ಆಯುಧ, ವರದಹಸ್ತ, ವಾಹನ ರಣಹದ್ದು. 8. ರಾಹು:- ನೀಲವರ್ಣ, ವಿಕಾರವೂ, ಕ್ರೂರವೂ ಆದ ಮುಖ, ಖಡ್ಗ, ಚರ್ಮ, ತ್ರಿಶೂಲ ಆಯುಧ, ಆಸನ ಸಿಂಹಾಸನ, ವರದಹಸ್ತ. 9. ಕೇತು:- ಹೊಗೆಯಂತೆ ಕಪ್ಪಾದ ಬಣ್ಣ, ಎರಡು ಕೈಗಳು, ವಿಕಾರವಾದ ಮುಖ, ಆಸನ ರಣಹದ್ದು, ವರದಹಸ್ತ ಹೀಗೆ ಆಕೃತಿಗಳುಳ್ಳ ನವಗ್ರಹರ ಪ್ರತಿಮೆಗಳನ್ನು ಮಾಡಬೇಕು. ಲೋಕಹಿತವನ್ನು ಸಾಧಿಸುವ ಈ ನವಗ್ರಹಗಳಿಗೆಲ್ಲ ಕಿರೀಟಗಳಿರಬೇಕು. ಒಂದೊಂದು ಪ್ರತಿಮೆಯೂ ಒಂದೊಂದು ಅಂಗುಲ ಪ್ರಮಾಣದಲ್ಲಿರಬೇಕು.

### ॥ ಗ್ರಹಗಳನ್ನು ಪ್ರತಿಷ್ಠಾಪಿಸುವ ದಿಕ್ಕುಗಳು ॥

ಆಯಾ ಬಣ್ಣದ ರಂಗವಲ್ಲಿಯ ಮಂಡಲದ ಮೇಲೆ, ಅಥವಾ ಆಯಾ ವರ್ಣದಿಂದ ಬಟ್ಟೆಯ ಮೇಲೆ ಚಿತ್ರ ಬರೆದು ಈ ಮುಂದೆ ಹೇಳಿದಂತೆ ಆಯಾ ದಿಕ್ಕಿನಲ್ಲಿ ಗ್ರಹಗಳನ್ನು

## ॥ ಗ್ರಹಾಣಾಂ ವರ್ಣಾಃ ॥

**ಸಂಸ್ಮರೇದ್ರಕ್ತಮಾದಿತ್ಯಮಂಗಾರಕಸಮನ್ವಿತಂ ।**
**ಸೋಮಶುಕ್ರೌ ತಥಾ ಶ್ವೇತೌ ಬುಧಜೀವೋತ್ರಪೀತಕೌ ॥**
**ಮಂದೋ ರಾಹುಸ್ತಥಾ ಕೃಷ್ಣೌ ಧೂಮಃ ಕೇತುಗುಣಾನ್ವಿದುಃ ।**
**ಯಥಾವರ್ಣಂ ಪ್ರದೇಯಾನಿ ವಾಸಾಂಸಿ ಕುಸುಮಾನಿ ಚ ॥**
**ಗಂಧಶ್ಚ ವಲಯಶ್ಚೈವ ಧೂಪೋ ದೇಯಶ್ಚ ಗುಗ್ಗುಲುಃ ।**
**ಕರ್ತವ್ಯಾ ಮಂತ್ರವಂತಶ್ಚ ಚರವಃ ಪ್ರತಿದೇವತಾಃ ॥**

## ॥ ನವಗ್ರಹಪ್ರೀತ್ಯರ್ಥನೈವೇದ್ಯಂ ॥

**ಗುಡೌದನಂ ರವೇರ್ದದ್ಯಾತ್ಸೋಮಾಯ ಘೃತಪಾಯಸಂ ।**
**ಲೋಹಿತಾಯ ಹವಿಷ್ಯಾನ್ನಂ ಬುಧಾಯ ಕ್ಷೀರಷಾಷ್ಟಿಕಂ ॥**
**ದಧ್ಯೋದನಂ ಗುರೋರ್ದದ್ಯಾಚ್ಛುಕ್ರಾಯ ಚ ಘೃತೌದನಂ ।**
**ಮಿಶ್ರಿತಂ ತಿಲಮಾಷೈಶ್ಚ ನೈವೇದ್ಯಂತು ಶನೈಶ್ಚರೇ ॥**

---

ಪ್ರತಿಷ್ಠಾಪಿಸಬೇಕು. ಸೂರ್ಯ-ಮಧ್ಯದಲ್ಲಿ; ಚಂದ್ರ-ಆಗ್ನೇಯ; ಕುಜ-ದಕ್ಷಿಣ; ಬುಧ-ಈಶಾನ್ಯ; ಗುರು-ಉತ್ತರ; ಶುಕ್ರ-ಪೂರ್ವ: ಶನಿ-ಪಶ್ಚಿಮ; ರಾಹು-ನೈಋತ್ಯ; ಕೇತು-ವಾಯವ್ಯ.

### ॥ ಗ್ರಹಗಳ ಬಣ್ಣಗಳು ॥

ಆದಿತ್ಯ, ಅಂಗಾರಕ - ರಕ್ತವರ್ಣ; ಚಂದ್ರ, ಶುಕ್ರ-ಬಿಳಿ ಬಣ್ಣ; ಬುಧ, ಗುರು-ಪೀತ ವರ್ಣ (ಹಳದಿ); ಶನಿ, ರಾಹು-ಕಪ್ಪು ಬಣ್ಣ; ಕೇತು-ಧೂಮ್ರವರ್ಣ, ಆಯಾ ವರ್ಣದ ಗ್ರಹಕ್ಕೆ ಅದೇ ವರ್ಣದ ಬಟ್ಟೆ, ಗಂಧ, ಪುಷ್ಪಗಳನ್ನು ಸಮರ್ಪಿಸಬೇಕು. ಎಲ್ಲ ಗ್ರಹಗಳಿಗೂ ಗುಗ್ಗುಳದ ಧೂಪ ತೋರಿಸಬೇಕು. ಪ್ರತ್ಯೇಕ ಪ್ರತ್ಯೇಕವಾಗಿ ಎಲ್ಲ ಗ್ರಹಗಳಿಗೂ ಚರುವಿನ ಬಲಿಗಳನ್ನು ಕೊಡಬೇಕು.

### ॥ ನವಗ್ರಹಗಳಿಗೆ ಪ್ರಿಯವಾದ ನೈವೇದ್ಯ ॥

ಸೂರ್ಯ-ಬೆಲ್ಲ ಸೇರಿಸಿದ ಅನ್ನ; ಚಂದ್ರ-ಘೃತಪಾಯಸ; ಮಂಗಳ-ಹವಿಷ್ಯಾನ್ನ; ಬುಧ-ಸಣ್ಣಕ್ಕಿಯ ಹಾಲುಪಾಯಸ; ಗುರು-ಮೊಸರು ಕಲಸಿದ ಅನ್ನ; ಶುಕ್ರ-ತುಪ್ಪ ಕಲಸಿದ ಅನ್ನ; ಶನಿ-ಎಳ್ಳು ಮತ್ತು ಉದ್ದು ಬೆರಸಿದ ಅನ್ನ; ರಾಹು-ದೇವನಾಳಿ ಅಕ್ಕಿಯ ಪಾಯಸ; ಕೇತು-ಚಿತ್ರಾನ್ನ. ಈ ಪ್ರಕಾರ ಗ್ರಹಗಳಿಗೆ ನೈವೇದ್ಯ ಸಮರ್ಪಣೆ ಮಾಡಬೇಕು. ಇಂತಹ ವಿಶಿಷ್ಟ ನೈವೇದ್ಯ

**ರಾಹೋರ್ಮಾಂಸೌದನಂ ದದ್ಯಾತ್ಕೇತೋಶ್ಚಿತ್ರೌದನಂ ತಥಾ ।**
**ಪೂರ್ವೋಕ್ತ ವಿವಿಧನೈವೇದ್ಯಾಭಾವೇ ಯಥಾಲಾಭಮೋದನಾನಿ ನಿವೇದಯೇತ್ ॥**

---

ಪದಾರ್ಥಗಳನ್ನು ಸಂಗ್ರಹಿಸುವುದು ಕಷ್ಟ ಸಾಧ್ಯವೆಂದಾದರೆ ಯಥಾಸಂಭವ ಸಾಧ್ಯವಿದ್ದ ಕ್ರಮದಲ್ಲಿ ಒದಗಿಸಿಕೊಳ್ಳಬೇಕು. ಇದೇ ರೀತಿಯ ಪಾಕಾದಿಗಳನ್ನು ತಯಾರಿಸಿ ಬ್ರಾಹ್ಮಣರಿಗೆ ಭೋಜನ ದಕ್ಷಿಣಾದಿಗಳನ್ನಿತ್ತು ಅವರಿಂದ ಆಶೀರ್ವಾದ ಪಡೆಯಬೇಕು.

# ॥ ಗ್ರಹಯಜ್ಞಃ ॥

॥ ಶ್ರೀಃ ॥ ಕರ್ತಾ ಕೃತನಿತ್ಯಕ್ರಿಯೋ ದ್ವಿರಾಚಮ್ಯ ಪವಿತ್ರಪಾಣಿಃ ಪ್ರಾಣಾನಾ-ಯಮ್ಯ ದೇವಗುರುಬ್ರಾಹ್ಮಣಾಭಿವಾದನಪೂರ್ವಂ ದೇಶಕಾಲೌ ಸ್ಮೃತ್ವಾ ॥ ಅಮುಕಕರ್ಮಕರ್ತುಮಾದೌ ಗ್ರಹಾನುಕೂಲ್ಯಸಿದ್ಧಿದ್ವಾರಾ ಅಮುಕಕಾಮನಾಸಿದ್ಧಿ ದ್ವಾರಾ ವಾ ಶ್ರೀಪರಮೇಶ್ವರಪ್ರೀತ್ಯರ್ಥಂ ಗ್ರಹಯಜ್ಞಂ ಕರಿಷ್ಯೇ ॥ ಇತಿ ಸಂಕಲ್ಪ್ಯ ॥ ಗಣಪತಿಪೂಜನಸ್ವಸ್ತಿವಾಚನಮಾತೃಕಾಪೂಜನನಾಂದೀಶ್ರಾದ್ಧಾನಿ ಕೃತ್ವಾ ॥ ಆಚಾರ್ಯವರಣಂ ಕುರ್ಯಾತ್ ॥ ತತೋ ಗ್ರಹಪ್ರತಿಮಾನಾಂ ಅಗ್ನ್ಯುತ್ತಾರಣ-ಪೂರ್ವಕಂ ಪ್ರಾಣಪ್ರತಿಷ್ಠಾಂ ಚ ಕೃತ್ವಾ ॥

## ॥ ಆಚಾರ್ಯವರಣಂ ॥

ಗ್ರಹಯಜ್ಞಾಂಗಭೂತಂ ಆಚಾರ್ಯಾದಿವರಣಂ ಚ ಕರಿಷ್ಯೇ ॥ ಆಚಾರ್ಯಂ ಸಂಪೂಜ್ಯ ॥ ಅಮುಕಪ್ರವರಾನ್ವಿತೋಽಮುಕಗೋತ್ರೋಽಮುಕ-ಶರ್ಮಾ ಅಹಂ ॥ ಅಮುಕಪ್ರವರಾನ್ವಿತಮಮುಕಗೋತ್ರೋತ್ಪನ್ನಂ ಋಗ್ವೇ-ದಾಂತರ್ಗತಶಾಕಲಶಾಖಾಧ್ಯಾಯಿನಂ ಅಮುಕಶರ್ಮಾಣಂ ಬ್ರಾಹ್ಮಣಂ ಅಸ್ಮಿನ್ ಗ್ರಹಯಜ್ಞಾಖ್ಯೇ ಕರ್ಮಣಿ ಆಚಾರ್ಯಂ ತ್ವಾಂ ವೃಣೇ ॥ ಇತಿ ವೃತ್ವಾ ಪ್ರಾರ್ಥಯೇತ್ ॥ ಆಚಾರ್ಯಸ್ತು ಯಥಾ ಸ್ವರ್ಗೇ ಶಕ್ರಾದೀನಾಂ ಬೃಹಸ್ಪತಿಃ । ತಥಾ ತ್ವಂ ಮಮ ಯಜ್ಞೇಽಸ್ಮಿನ್ನಾಚಾರ್ಯೋ ಭವ ಸುವ್ರತ ॥ ಅಸ್ಯ ಯಾಗಸ್ಯ ನಿಷ್ಪತ್ತೌ ಭವಂತೋಽಭ್ಯರ್ಥಿತಾ ಮಯಾ ॥ ಸುಪ್ರಸನ್ನೈಶ್ಚ ಕರ್ತವ್ಯಂ

---

### ॥ ಗ್ರಹಯಜ್ಞ ॥

ಯಜಮಾನನು ನಿತ್ಯಕರ್ಮಗಳನ್ನು ಮಾಡಿ ಎರಡು ಸಲ ಆಚಮನ ಮಾಡಿ ಪವಿತ್ರವನ್ನು ಧರಿಸಿ ಪ್ರಾಣಾಯಾಮ ದೇಶಕಾಲಕೀರ್ತನಾದಿಗಳನ್ನು ಮುಗಿಸಿ, "**ಅಮುಕಕರ್ಮ ..... ಗ್ರಹಯಜ್ಞಂ ಕರಿಷ್ಯೇ**" ಎಂದು ಸಂಕಲ್ಪ ಮಾಡಬೇಕು. ಬಳಿಕ ಗಣಪತಿ ಪೂಜನ, ಸ್ವಸ್ತಿವಾಚನ, ಮಾತೃಕಾಪೂಜನ, ನಾಂದೀಶ್ರಾದ್ಧಾದಿಗಳನ್ನು ಮಾಡಿ ಆಚಾರ್ಯನನ್ನು ವರಿಸಬೇಕು. "**ಗ್ರಹಯಜ್ಞಾಂಗ ....ಕರಿಷ್ಯೇ**" ಎಂದು ಸಂಕಲ್ಪಿಸಿ, ಆಚಾರ್ಯನಾಗುವವನನ್ನು ಪೂಜಿಸಿ, "**ಅಮುಕ ಪ್ರವರಾನ್ವಿತೋ ...ತ್ವಾ ವೃಣೇ**" ಎಂದು ಹೇಳಿ "**ಆಚಾರ್ಯಸ್ತು .... ವಿಧಿಪೂರ್ವಕಂ**" ಎಂದು ಪ್ರಾರ್ಥಿಸಬೇಕು. ಆಚಾರ್ಯನು "**ವೃತೋಽಸ್ಮಿ ...ಕರಿಷ್ಯಾಮಿ**"

**ಕರ್ಮೇದಂ ವಿಧಿಪೂರ್ವಕಂ ॥ ಇತಿ ಸಂಪ್ರಾರ್ಥ್ಯ ಯಥಾವಿಭವ ಮರ್ಚಯೇತ್ ॥ ಆಚಾರ್ಯಃ ವೃತೋಽಸ್ಮಿ ಯಥಾಜ್ಞಾನತಃ ಕರ್ಮ ಕರಿಷ್ಯಾಮೀತಿ ವದೇತ್ ॥ ಅನಂತರಂ ಬ್ರಹ್ಮಾದಿ ಋತ್ವಿಜಾನ್ ಆಸನಗಂಧಾದ್ಯುಪಚಾರೈಃ ಯಥಾಸಂಭವಂ ಪೂಜಯೇತ್ ॥ ಅಥಾಚಾರ್ಯಃ ಆಚಮ್ಯ ಪವಿತ್ರಂ ಧೃತ್ವಾ ಪ್ರಾಣಾನಾಯಮ್ಯ ದೇಶಕಾಲೌ ಸಂಕೀರ್ತ್ಯ ಯಜಮಾನೇನ ಗೃಹಯಜ್ಞಾಖ್ಯೇ ಕರ್ಮಣಿ ವೃತೋಽಹಮಾಚಾರ್ಯಕರ್ಮ ಕರಿಷ್ಯೇ ॥ ಇತಿ ಸಂಕಲ್ಪ್ಯ ॥ ಪೃಥ್ವಿ ತ್ವಯಾ ಧೃತಾ ಲೋಕಾ...ಯಜ್ಞಕರ್ಮಸಮಾರಭೇ ॥ ಇತ್ಯಾಸನವಿಧಿಂ ಪುರುಷಸೂಕ್ತನ್ಯಾಸಂ ಜಪಂ ಕೃತ್ವಾ ಷಡಂಗನ್ಯಾಸಂ ವಿಧಾಯ ॥ ಕಲಶಸ್ಯ ಮುಖೇ ವಿಷ್ಣುಃ ...॥ ಇತಿ ಕಲಶಂ ಪೂಜಯಿತ್ವಾ ॥ ಅಪವಿತ್ರಃ ಪವಿತ್ರೋ ವಾ ....॥ ತತಃ ॥ ಯದತ್ರ ಸಂಸ್ಥಿತಂ ಭೂತಂ ಸ್ಥಾನಮಾಶ್ರಿತ್ಯ ಸರ್ವತಃ ॥ ಸ್ಥಾನಂ ತ್ಯಕ್ತ್ವಾ ತು ತತ್ಸರ್ವಂ ಯತ್ರಸ್ಥಂ ತತ್ರ ಗಚ್ಛತು ॥ ಅಪಕ್ರಾಮಂತು ಭೂತಾನಿ ಪಿಶಾಚಾಃ ಸರ್ವತೋದಿಶಂ ॥ ಸರ್ವೇಷಾಮವಿರೋಧೇನ ಯಜ್ಞಕರ್ಮ ಸಮಾರಭೇ ॥ ಇತಿ ಗೌರವಸರ್ಷಪಾನ್ ವಿಕೀರ್ಯ ॥ ಪಂಚಗವ್ಯಮೇಲನಂ ಕೃತ್ವಾ ಭೂಮಿಂ ಪ್ರೋಕ್ಷಯೇತ್ ॥**

**ಶುಚೀವೋ ಹವ್ಯೇತಿ ಮೈತ್ರಾವರುಣಿರ್ವಸಿಷ್ಠೋಮರುತಸ್ತ್ರಿಷ್ಟುಪ್ ॥ ಅಗ್ನಿಃಶುಚಿವ್ರತತಮ ಇತಿ ದ್ವಯೋರಾಂಗಿರಸೋ ವಿರೂಪೋಗ್ನಿರ್ಗಾಯತ್ರೀ ॥ ಏತೋನ್ವಿಂದ್ರಮಿತಿ ತಿಸೃಣಾಮಾಂಗಿರಸಸ್ತಿರಶ್ಚೀ ಇಂದ್ರೋನುಷ್ಟುಪ್ ॥ ಪಂಚ-**

---

ಎಂದು ಪ್ರತ್ಯುತ್ತರ ಹೇಳಬೇಕು. ಆಚಾರ್ಯನನ್ನೂ ಮುಂದೆ ಬ್ರಹ್ಮನೇ ಮೊದಲಾದ ಋತ್ವಿಜರನ್ನೂ ವರಣ ಮಾಡಿ ಅವರನ್ನೆಲ್ಲ ಯಥಾಸಂಭವ ವಸ್ತ್ರ ದಕ್ಷಿಣೆ ಇತ್ಯಾದಿಗಳಿಂದ ಅರ್ಚಿಸಬೇಕು.

ಆಚಾರ್ಯನು ಆಚಮನ ಮಾಡಿ ಪವಿತ್ರ ಧರಿಸಿ, ಪ್ರಾಣಾಯಾಮ ದೇಶಕಾಲ ಸಂಕೀರ್ತನಾದಿಗಳನ್ನು ಪೂರಯಿಸಿ "**ಯಜಮಾನೇನ .... ಕರ್ಮ ಕರಿಷ್ಯೇ**" ಎಂದು ಸಂಕಲ್ಪ ಮಾಡಬೇಕು. ನಂತರ "**ಪೃಥ್ವಿತ್ವಯಾ ...ಸಮಾರಭೇ**" ಎಂದು ಆಸನವಿಧಿಯನ್ನು ಮಾಡಿ ಪುರುಷಸೂಕ್ತನ್ಯಾಸ, ಜಪ, ಷಡಂಗನ್ಯಾಸಗಳನ್ನೂ ಮಾಡಿ "**ಕಲಶಸ್ಯಮುಖೇ .....**" ಎಂಬುವನ್ನು ಹೇಳಿ ಕಲಶಪೂಜೆ ಮಾಡಿ "**ಅಪವಿತ್ರಃ...**" ಎಂದು ಎಲ್ಲ ಪೂಜಾದ್ರವ್ಯಗಳನ್ನೂ ತನ್ನನ್ನೂ ಪ್ರೋಕ್ಷಿಸಿಕೊಳ್ಳಬೇಕು. ಬಳಿಕ "**ಯದತ್ರ ಸಂಸ್ಥಿತಂ...ಸಮಾರಭೇ**" ಎಂದು ಬಿಳಿ ಸಾಸಿವೆಯನ್ನು ಸುತ್ತಲೂ ಚೆಲ್ಲಬೇಕು. ಆ ನಂತರ ಪಂಚಗವ್ಯವನ್ನು ತಯಾರಿಸಿ "**ಶುಚೀವೋ ಹವ್ಯಾ...**" ಎಂಬ ಮಂತ್ರಗಳಿಂದ ಭೂಮಿಯನ್ನು ಪ್ರೋಕ್ಷಿಸಬೇಕು.

ಗವ್ಯೇನ ಭೂಮಿಪ್ರೋಕ್ಷಣೇ ವಿನಿಯೋಗಃ ॥ ಓಂ ಶುಚೀವೋ ಹವ್ಯಾಮರುತಃ ಶುಚೀನಾಂಶುಚಿಂ ಹಿನೋಮ್ಯಧ್ವರಂ ಶುಚಿಭ್ಯಃ ॥ ಋತೇನ ಸತ್ಯಮೃತಸಾಪ-ಆಯನ್ಛುಚಿಜನ್ಮಾನಃಶುಚಯಃಪಾವಕಾಃ ॥ ಅಗ್ನಿಃ ಶುಚಿವ್ರತತಮಃ ಶುಚಿ-ರ್ವಿಪ್ರಃ ಶುಚಿಃ ಕವಿಃ ॥ ಶುಚೀರೋಚತಆಹುತಃ ॥ ಉದಗ್ನೇ ಶುಚಯಸ್ತವ-ಶುಕ್ರಾಭ್ರಾಜಂತ ಈರತೇ ॥ ತವಜ್ಯೋತೀಂಷ್ಯರ್ಚಯಃ ॥ ಏತೋನ್ವಿಂದ್ರಂ-ಸ್ತವಾಮ ಶುದ್ಧಂ ಶುದ್ಧೇನ ಸಾಮ್ನಾ ॥ ಶುದ್ಧೈರುಕ್ಥೈರ್ವಾವೃಧ್ವಾಂಸಂಶುದ್ಧ-ಆಶೀರ್ವಾನ್ಮಮತ್ತು ॥ ಇಂದ್ರ ಶುಧ್ಧೋನ ಆಗಹಿಶುದ್ಧಃಶುದ್ಧಾಭಿರೂತಿಭಿಃ ॥ ಶುಧ್ಧೋರಯಿಂ ನಿಧಾರಯ ಶುದ್ಧೋ ಮಮದ್ಧಿ ಸ್ತೋಮ್ಯಃ । ಇಂದ್ರ ಶುದ್ಧೋಹಿ ನೋರಯಿಂ ಶುದ್ಧೋ ರತ್ನಾನಿ ದಾಶುಷೇ ॥ ಶುದ್ಧೋವೃತ್ರಾಣಿ ಜಿಘ್ನಸೇ ಶುದ್ಧೋ-ವಾಜಂಸಿಷಾಸಸಿ ॥ ಪಂಚಗವ್ಯೇನ ಭೂಮಿಪ್ರೋಕ್ಷಣಂ ॥

ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋಽಪಿ ವಾ ॥ ಯಃ ಸ್ಮರೇತ್ಪುಂಡರೀಕಾಕ್ಷಂ ಸ ಬಾಹ್ಯಾಭ್ಯಂತರಃ ಶುಚಿಃ ॥ ಇತಿ ಕುಶೋದಕೇನ ಭೂಮಿಂ ಪ್ರೋಕ್ಷಯೇತ್ ॥ ತತಃ ಕೃತಾಂಜಲಿಪುಟಸ್ತಿಷ್ಠನ್ ॥ ಓಂ ಸ್ವಸ್ತ್ಯ-ಯನಂ ತಾರ್ಕ್ಷ್ಯಮರಿಷ್ಟನೇಮಿಂಮಹದ್ಭೂತಂ ವಾಯಸಂ ದೇವತಾನಾಂ ॥ ಅಸುರಘ್ನಮಿಂದ್ರಸಖಿಂ ಸಮತ್ಸುಬೃಹದ್ಯಶೋನಾವಮಿವಾರುಹೇಮ ॥ ಅಂ-ಹೋಮುಚಮಾಂಗಿರಸಂಗಯಂ ಚ ಸ್ವಸ್ತ್ಯಾತ್ರೇಯಂ ಮನಸಾಚತಾರ್ಕ್ಷ್ಯಂ ॥ ಪ್ರಯತಪಾಣಿಃ ಶರಣಂ ಪ್ರಪದ್ಯೇ ಸ್ವಸ್ತಿಸಂಬಾಧೇಷ್ವಭಯಂನೋಅಸ್ತು ॥ ದೇವಾ ಆಯಾಂತು ॥ ಯಾತುಧಾನಾ ಅಪಯಾಂತು ॥ ವಿಷ್ಣೋ ದೇವಯ-ಜನಂ ರಕ್ಷಸ್ವ ॥ ಭೂಮೌ ಪ್ರಾದೇಶಂ ಕುರ್ಯಾತ್ ॥

---

"**ಅಪವಿತ್ರಃ ಪವಿತ್ರೋ ವಾ ....**" ಎಂದು ಹೇಳಿ ದರ್ಭೆಗಳಿಂದ ನೀರನ್ನು ನಾಲ್ಕೂ ಕಡೆಗಳಲ್ಲಿಯೂ ಪ್ರೋಕ್ಷಿಸಬೇಕು. ಆಮೇಲೆ ಕೈಜೋಡಿಸಿ ನಿಂತು "**ಸ್ವಸ್ತ್ಯ- ಯನಂ ....**" ಇತ್ಯಾದಿ ಮಂತ್ರಗಳನ್ನು ಹೇಳಿ ಕೊನೆಗೆ ನೆಲದ ಮೇಲೆ ಅಂಗುಷ್ಠ ತರ್ಜನೀಗಳನ್ನು ಚಾಚಿ ಇಟ್ಟು ಪ್ರಾದೇಶಮಾಡಬೇಕು.

# ॥ ಅಗ್ನ್ಯುತ್ತಾರಣಂ ॥

ದೇಶಕಾಲೌ ಸ್ಮೃತ್ವಾ ಅಸ್ಯಾಃ ಪ್ರತಿಮಾಯಾಃ ಘನದೋಷಪರಿಹಾರಾರ್ಥಂ ಅಗ್ನ್ಯುತ್ತಾರಣಂ ಕರಿಷ್ಯೇ ಇತಿ ಸಂಕಲ್ಪ್ಯ ॥ ಅಗ್ನಿಃ ಸಪ್ತಿಮಿತಿ ವರ್ಗೇಣ ಅಗ್ನಿಪದತ್ಯಾಗೇನ ಪಠಿತೇನ ಪುನಃ ಅಗ್ನಿಪದಸಹಿತೇನ ಪಠಿತೇನೈಕಮಾವರ್ತನಂ ಭವತಿ ॥ ಏವಂ ಪಠಿತ್ವಾ ಸಂತತಜಲಧಾರಾಂ ಕುರ್ಯಾತ್ ॥ ಅಗ್ನಿಃ ಸಪ್ತಿಮಿತಿ ಸಪ್ತರ್ಚಸ್ಯ ಸೂಕ್ತಸ್ಯ ಸೋಚಿಕೋ ವೈಶ್ವಾನರಸ್ತ್ರಿಷ್ಟುಪ್ ಅಗ್ನ್ಯುತ್ತಾರಣೇ ವಿನಿಯೋಗಃ ॥ ಓಂ ಸಪ್ತಿಂವಾಜಂಭರಂದದಾತಿವೀರಂಶ್ರುತ್ಯಂ ಕರ್ಮನಿಷ್ಠಾಂ ॥ ರೋದಸೀವಿಚರತ್ಸಮಂಜನ್ನಾರೀಂವೀರಕುಂಕ್ಷಿಪುರಂಧಿಂ ॥ ಅಪ್ಸಸಃಸಮಿದಸ್ತುಭದ್ರಾಮಹೀರೋದಸೀ ಆವಿವೇಶ ॥ ಏಕಂಚೋದಯತ್ಸಮತ್ಸ್ವವೃತ್ರಾಣಿದಯತೇ ಪುರೂಣಿ ॥ ಹತ್ಯಂ ಜರತಃ ಕರ್ಣಮಾವಾದ್ಭ್ಯೋನಿರದಹಜ್ಜರೂಥಂ ॥ ಅತ್ರಿಂಘರ್ಮಉರುಷ್ಯದಂತರ್ನ್ಯಮೇಧಂ ಪ್ರಜಯಾಸೃಜತ್ಸಂ ॥ ದಾದ್ರವಿಣಂ ವೀರಪೇಶಾಋಷಿಂ ಯಃಸಹಸ್ರಾಸನೋತಿ ॥ ದಿವಿಹವ್ಯಮಾತತಾನ ಧಾಮಾನಿವಿಭೃತಾಪುರುತ್ರಾ ॥ ಉಕ್ಥೈರ್ಋಷಯೋ ವಿಹ್ವಯಂತೇ ನರೋಯಾಮನಿಬಾಧಿತಾಸಃ ॥ ವಯೋ ಅಂತರಿಕ್ಷೇಪತಂತಃ ಸಹಸ್ರಾಪರಿಯಾತಿಗೋನಾಂ ॥ ವಿಶಈಳತೇಮಾನುಷೀರ್ಯಾಮನುಷೋನಹುಷೋವಿಜಾತಾಃ ॥ ಗಾಂಧರ್ವೀಂ ಪಥ್ಯಾಮೃತಸ್ಯ ಗವ್ಯೂತಿರ್ಘೃತಆನಿಷತ್ತಾ ॥ ಬೃಹನ್ಮುಭವಸ್ತತಕ್ಷುರ್ಮಹಾಮವ್ಯೋಚಾಮಾಸುವೃತ್ತಿಂ ॥ ಪ್ರಾವ ಜರಿತಾರಂಯವಿಷ್ಠಮಹಿಂದ್ರವಿಣಮಾಯಜಸ್ವ ॥

---

## ॥ ಅಗ್ನ್ಯುತ್ತಾರಣ ॥

ದೇಶಕಾಲಗಳನ್ನು ಸ್ಮರಿಸಿ, **"ಅಸ್ಯಾಃ ಪ್ರತಿಮಾಯಾಃ .....ಕರಿಷ್ಯೇ"** ಎಂದು ಸಂಕಲ್ಪ ಮಾಡಿ **"ಅಗ್ನಿಃ ಸಪ್ತಿ ...."** ಎಂಬ ಸೂಕ್ತವನ್ನು **'ಅಗ್ನಿ'** ಪದ ರಹಿತ ಒಂದು ಸಲ, ಅಗ್ನಿಪದಸಹಿತ ಒಂದು ಸಲ ಹೇಳಿ ಪ್ರತಿಮೆಗಳ ಮೇಲೆ ನೀರಿನ ಧಾರೆಯನ್ನು ಸುರಿಯಬೇಕು.

॥ ಅಗ್ನಿಪದಸಹಿತಂ ಸೂಕ್ತಂ ॥ ಓಂ ಅಗ್ನಿಃ ಸಪ್ತಿಂವಾಜಂಭರಂದದಾತ್ಯಗ್ನಿರ್ವೀರಂಶ್ರುತ್ಯಂ ಕರ್ಮನಿಷ್ಠಾಂ ॥ ಅಗ್ನೀರೋದಸೀವಿಚರತ್ಸಮಂಜನ್ನಗ್ನಿರ್ನಾರೀಂ ವೀರಕುಕ್ಷಿಂ ಪುರಂಧಿಂ ॥ ಅಗ್ನೇರಪ್ನಸಃ ಸಮಿದಸ್ತು ಭದ್ರಾಗ್ನಿರ್ಮಹಿರೋದಸೀ ಆವಿವೇಶ ॥ ಅಗ್ನಿರೇಕಂ ಚೋದಯತ್ಸಮತ್ಸ್ವಗ್ನಿರ್ವೃತ್ರಾಣಿ ದಯತೇ ಪುರೂಣಿ ॥ ಅಗ್ನಿರ್ಹತ್ಯಂಜರತಃ ಕರ್ಣಮಾವಾಗ್ನಿರದ್ಭ್ಯೋನಿರದಹಜ್ಜರೂಥಂ ॥ ಅಗ್ನಿರತ್ರಿಂಘರ್ಮಉರುಷ್ಯದಂತರಗ್ನಿರ್ನೃಮೇಧಂಪ್ರಜಯಾಸೃಜತ್ಸಂ ॥ ಅಗ್ನಿರ್ದಾದ್ರವಿಣಂ ವೀರಪೇಶಾ ಅಗ್ನಿರ್ಋಷಿಂ ಯಃಸಹಸ್ರಾಸನೋತಿ ॥ ಅಗ್ನಿರ್ದಿವಿಹವ್ಯಮಾತತಾನಾಗ್ನೇರ್ಧಾಮಾನಿವಿಭೃತಾಪುರುತ್ರಾ ॥ ಅಗ್ನಿಮುಕ್ಥೈರ್ಋಷಯೋವಿಹ್ವಯಂತೇಗ್ನಿಂ ನರೋಯಾಮನಿಬಾಧಿತಾಸಃ ಅಗ್ನಿಂ ವಯೋ ಅಂತರಿಕ್ಷೇ ಪತಂತೋಗ್ನಿಃ ಸಹಸ್ರಾಪರಿಯಾತಿಗೋನಾಂ ॥ ಅಗ್ನಿಂ ವಿಶಈಳತೇ ಮಾನುಷೀರ್ಯಾ ಅಗ್ನಿಂಮನುಷೋ ನಹುಷೋವಿಜಾತಾಃ ॥ ಅಗ್ನಿರ್ಗಾಂಧರ್ವೀಂ ಪಥ್ಯಾಮೃತಸ್ಯಾಗ್ನೇರ್ಗವ್ಯೂತಿರ್ಘೃತ ಆನಿಷತ್ತಾ ॥ ಅಗ್ನಯೇ ಬ್ರಹ್ಮ ಋಭವಸ್ತತಕ್ಷುರಗ್ನಿಂ ಮಹಾಮವೋಚಾಮಾಸುವೃಕ್ತಿಂ ॥ ಅಗ್ನೇ ಪ್ರಾವಜರಿತಾರಂಯವಿಷ್ಠಾಗ್ನೇ ಮಹಿದ್ರವಿಣಮಾಯಜಸ್ವ ॥ ಅನಂತರಂ ಪ್ರಾಣಪ್ರತಿಷ್ಠಾಂ ಕುರ್ಯಾತ್ ॥

## ॥ ಪ್ರಾಣಪ್ರತಿಷ್ಠಾ ॥

ಅಸ್ಯಾಂ ಪ್ರತಿಮಾಯಾಂ ದೇವಕಲಾಸಾನ್ನಿಧ್ಯಾರ್ಥಂ ಪ್ರಾಣಪ್ರತಿಷ್ಠಾಂ ಕರಿಷ್ಯೇ ॥ ಅಸ್ಯ ಶ್ರೀಪ್ರಾಣಪ್ರತಿಷ್ಠಾ ಮಂತ್ರಸ್ಯ ಬ್ರಹ್ಮವಿಷ್ಣುಮಹೇಶ್ವರಾ

---

**॥ ಪ್ರಾಣಪ್ರತಿಷ್ಠೆ ॥**

**"ಅಸ್ಯಾಂ ಪ್ರತಿಮಾಯಾಂ..."** ಎಂದು ಸಂಕಲ್ಪ ಮಾಡಿ **"ಅಸ್ಯ ಶ್ರೀ..."** ಎಂಬಲ್ಲಿಂದ **"ಜೀವೇಮ ಶರದಃ ಶತಂ"** ಎಂಬಲ್ಲಿ ವರೆಗೆ ಪ್ರತಿಮೆಯ ಹೃದಯವನ್ನು ಮುಟ್ಟಿಕೊಂಡು ಹೇಳಬೇಕು. ಬಳಿಕ ಕಣ್ಣುಗಳಿಗೆ ತುಪ್ಪ ಹಚ್ಚಿ ನೇತ್ರೋನ್ಮೀಲನ ಮಾಡಬೇಕು.

ಋಷಯಃ ॥ ಋಗ್ಯಜುಸ್ಸಾಮಾಥರ್ವಾಣಿ ಛಂಧಾಸಿ ॥ ಕ್ರಿಯಾಮಯವಪುಃ ಪ್ರಾಣಾಖ್ಯಾ ದೇವತಾ ॥ ಆಂ ಬೀಜಂ ॥ ಹ್ರೀಂ ಶಕ್ತಿಃ ॥ ಕ್ರೌಂ ॥ ಕೀಲಕಂ ॥ ಅಸ್ಯಾಂ ಪ್ರತಿಮಾಯಾಂ ಪ್ರಾಣಪ್ರತಿಷ್ಠಾಪನೇ ವಿನಿಯೋಗಃ ॥ ಪ್ರತಿಮಾಯಾಂ ಹೃದಿ ಸ್ಪೃಶೇತ್ । ಓಂ ಆಂ ಹ್ರೀಂ ಕ್ರೌಂ ಅಂ ಯಂ ರಂ ಲಂ ವಂ ಶಂ ಸಂ ಹಂ ಳಂ ಕ್ಷಂ ಅಃ ಅಸ್ಯಾಂ ಪ್ರತಿಮಾಯಾಂ ಪ್ರಾಣಾಸ್ತಿಷ್ಠಂತು ॥ ಪುನಃ ಆಂ ಹ್ರೀಂ ಕ್ರೌಂ ...... ಅಸ್ಯಾಂ ಪ್ರತಿಮಾಯಾಂ ಸರ್ವೇಂದ್ರಿಯಾಣಿ ಶ್ರೋತ್ರ-ತ್ವಕ್ಚಕ್ಷುರ್ಜಿಹ್ವಾಘ್ರಾಣವಾಕ್ಪಾಣಿಪಾದಪಾಯೂಪಸ್ಥಾನಿ ಇಹೈವಾಗತ್ಯ ಸುಖಂ ಚಿರಂ ತಿಷ್ಠಂತು ಸ್ವಾಹಾ ॥ ಓಂ ಅಸುನೀತೇಪುನರಸ್ಮಾಸುಚಕ್ಷುಃ ಪುನಃ ಪ್ರಾಣ-ಮಿಹನೋಧೇಹಿಭೋಗಂ ॥ ಜ್ಯೋಕ್ಪಶ್ಯೇಮಸೂರ್ಯಮುಚ್ಚರಂತಮನುಮತೇ-ಮೃಳಯಾನಃ ಸ್ವಸ್ತಿ ॥ ಗರ್ಭಾಧಾನಾದಿಪಂಚದಶಸಸ್ಕಾರಸಿದ್ಧ್ಯರ್ಥಂ ಪಂಚದಶಪ್ರಣ-ವಾವೃತ್ತೀಃ ಕರಿಷ್ಯೇ ॥ ಓಂ ತಚ್ಚಕ್ಷುರ್ದೇವಹಿತಂಶುಕ್ರಮುಚ್ಚರತ್ ॥ ಪಶ್ಯೇಮ ಶರದಃ ಶತಂ ಜೀವೇಮ ಶರದಃ ಶತಂ ॥ ದೇವಸ್ಯಾಜ್ಯೇನ ನೇತ್ರೋನ್ಮೀಲನಂ ಕೃತ್ವಾ ಪಂಚೋಪಚಾರಪೂಜನಂ ಕುರ್ಯಾತ್ ॥

## ॥ ಗ್ರಹಸ್ಥಾಪನಂ ॥

ಹಸ್ತಮಾತ್ರಾವರಂ ಸ್ಥಂಡಿಲಂ ಸಂಸ್ಕೃತ್ಯ ಅಗ್ನಿಪ್ರತಿಷ್ಠಾಪನಾಂತಂ ಕರ್ಮ-ಕೃತ್ವಾ ॥ ಗ್ರಹವೇದ್ಯಾಂ ವಸ್ತ್ರೇ ಅಷ್ಟದಲಂ ಪದ್ಮಂ ಗಂಧಾದಿನಾಕೃತ್ವಾ ॥ ಪ್ರಣವಸ್ಯ ಪರಬ್ರಹ್ಮಋಷಿಃ ಪರಮಾತ್ಮಾ ದೇವತಾ ದೈವೀಗಾಯತ್ರೀ ಛಂದಃ ॥

---

**ಗ್ರಹಸ್ಥಾಪನೆ:-** ಸ್ಥಾಲೀಪಾಕದಲ್ಲಿ ಹೇಳಿದಂತೆ ಸ್ಥಂಡಿಲ ಸಂಸ್ಕಾರ ಅಗ್ನಿ-ಪ್ರತಿಷ್ಠಾಪನಪರ್ಯಂತ ಕರ್ಮಗಳನ್ನು ಮಾಡಿ ರಂಗವಲ್ಲಿಯಿಂದ ನವಗ್ರಹಮಂಡಲ (ಅಷ್ಟದಲ ಪದ್ಮ)ವನ್ನು ಮಾಡಿ ಅದರ ಮೇಲೆ ಮುಂದೆ ಹೇಳಿದಂತೆ ಸೂರ್ಯನೇ ಮುಂತಾಗಿ ನವಗ್ರಹಗಳನ್ನು ಆಯಾ ಮಂತ್ರವನ್ನು ಹೇಳುತ್ತ ಆಯಾ ದಿಕ್ಕಿನಲ್ಲಿ ಪ್ರತಿಷ್ಠಾಪಿಸುವುದು. **"ಪ್ರಣವಸ್ಯ ಪರಬ್ರಹ್ಮ..ವಿನಿಯೋಗಃ"** ಎಂದು ಆರಂಭದಲ್ಲಿ ಹೇಳಬೇಕು.

# ॥ ಔರ್ಧ್ವದೇಹಿಕವಿಧಿಃ ॥

ಶ್ರೀಃ ॥ ತತೋ ದಾಹಗರ್ತಾದೀಶಾನೇ ಜಾನುಮಾತ್ರಂ ವಿತಸ್ತಿಮಾತ್ರಂ ವಾ ಗರ್ತಂ ಕೃತ್ವಾ ಜಲಮಾಪೂರ್ಯ ತತ್ರಾವಕಾಂಶೀಪಾಲಂ (ಶೈವಾಲಂ) ಚ ನಿಕ್ಷಿಪೇತ್ ॥ ಅಸ್ಮಿನ್ ಕರ್ಮಣಿ ಪ್ರಾಯಃ ಪ್ರಾಚೀನಾವೀತಿತ್ವಮಾಗ್ನೇಯ್ಯಾಭಿ- ಮುಖತಾ ದಕ್ಷಿಣಾಪವರ್ಗತ್ವಂ ಚ ಜ್ಞೇಯಂ ॥ ತತಃ ಕರ್ತಾ ಹಸ್ತೌ ಪಾದೌ ಪ್ರಕ್ಷಾಲ್ಯ ಆಚಮ್ಯ ಅಮಂತ್ರಕಂ ಪ್ರಾಣಾಯಾಮಂ ಕೃತ್ವಾ ದೇಶಕಾಲೌ ಸಂಕೀರ್ತ್ಯ ॥ ಅಮುಕಗೋತ್ರಸ್ಯಾಮುಕಪ್ರೇತಸ್ಯ ಪ್ರೇತತ್ವವಿಮೋಕ್ಷಾರ್ಥಂ ಔರ್ಧ್ವ ದೇಹಿಕಂ ಕರಿಷ್ಯೇ ಇತಿ ಸಂಕಲ್ಪ್ಯ ॥ ಪ್ರಾಚೀನಾವೀತೀ ॥ ಉಪಸರ್ಪೇತಿ ಸಂಕುಸುಕಃ ಪಿತೃಮೇಧಾಸ್ತ್ರಿಷ್ಟುಪ್ ॥ ಭೂಮಿಪ್ರಾರ್ಥನೇ ವಿನಿಯೋಗಃ ॥ ಉಪಸರ್ಪ ಮಾತರಂ ಭೂಮಿಮೇತಾಮುರುವ್ಯಚಸಂ ಪೃಥಿವೀಂ ಸುಶೇವಾಂ ॥ ಊರ್ಣಮ್ರದಾ ಯುವತಿರ್ದಕ್ಷಿಣಾವತ ಏಷಾತ್ವಾಪಾತುನಿರ್ಋತೇರುಪಸ್ಥಾತ್ ॥ ಅಪಸರ್ಪಂತು ತೇ ಪ್ರೇತಾ ಯೇ ಕೇಚಿದಿಹ ಪೂರ್ವಜಾಃ ॥ ಸ್ವಸ್ತಿನಃ ಕೃಣು-

---

ಪ್ರೇತ ಪುನಃ ಸಂಧಾನ ಆದಮೇಲೆ ಚಿತೆಯನ್ನು ನಿರ್ಮಿಸಿದ ಹೊಂಡದ ಈಶಾನ್ಯ ದಿಕ್ಕಿನಲ್ಲಿ ಒಂದು ಸಣ್ಣ ಹೊಂಡವನ್ನು ಮಾಡಿ ಅದರಲ್ಲಿ ನೀರು ತುಂಬಿಸಿ ಮೇಲಿನಿಂದ ಹಾವಸೆಯನ್ನು ಹಾಕಬೇಕು. ಇನ್ನು ಮುಂದಿನ ಎಲ್ಲ ಕರ್ಮಗಳನ್ನೂ ಅಪಸವ್ಯದಲ್ಲಿದ್ದು ಆಗ್ನೇಯ ದಿಕ್ಕಿಗೆ ಅಭಿಮುಖವಾಗಿ ಮಾಡಬೇಕು. ಬಳಿಕ ಕರ್ತನು ಕೈಕಾಲು ತೊಳೆದು ಆಚಮನವನ್ನೂ ಮಂತ್ರರಹಿತವಾಗಿ ಪ್ರಾಣಾಯಾಮವನ್ನೂ ಮಾಡಿ **"ಅಮುಕಗೋತ್ರಸ್ಯ....ಔರ್ಧ್ವದೇಹಿಕಂ ಕರಿಷ್ಯೇ"** ಎಂದು ಸಂಕಲ್ಪ ಮಾಡಿ, **"ಉಪಸರ್ಪ ಮಾತರಂ....."** ಎಂಬ ಮಂತ್ರವನ್ನು ಹೇಳಿ ಭೂಮಿಪ್ರಾರ್ಥನೆಯನ್ನೂ **"ದಿವಿ ಜಾತಾ....."** ಎಂಬುದರಿಂದ ಸ್ಥಳಶುದ್ಧಿಯನ್ನೂ ಮಾಡಬೇಕು. ಬಳಿಕ **"ಅಪೇತವೀತ...."** ಎಂಬ ಮಂತ್ರವನ್ನು ಹೇಳುತ್ತ ಮೊದಲು ತಯಾರಿಸಿದ ಗರ್ತೋದಕವನ್ನು ಶಮೀಶಾಖೆಯಿಂದ ಕಾಷ್ಠಕ್ಕೆ ಮೂರು ಸಲ ಅಪ್ರದಕ್ಷಿಣೆ ಬರುತ್ತ ಪ್ರತಿಯೊಂದು ಸುತ್ತಿಗೂ ಮಂತ್ರವನ್ನು ಆವರ್ತಿಸಿ ಪ್ರೋಕ್ಷಿಸಬೇಕು. ಆಮೇಲೆ ಕಾಷ್ಠದ ವಾಯವ್ಯದಿಕ್ಕಿನಲ್ಲಿ ನೀರನ್ನು ಪ್ರೋಕ್ಷಿಸಿ ತ್ರಿಕೋಣಾಕಾರದ ಒಂದು ಸ್ಥಂಡಿಲವನ್ನು ಮಾಡಿ ಉಲ್ಲೇಖಿಸಿ, **"ಅಗ್ನೇ ತ್ವಂ....ನಾಮಾಸಿ"** ಎಂದು ಔಪಾಸನಾಗ್ನಿಯನ್ನು ಅಥವಾ ಕಪಾಲಾಗ್ನಿ ಮುಂತಾಗಿ ಇತರ

**ತಾಮಾಶು ಆಪಾತಃ ಪುನರಾಗಮತ್ ॥ ಇತಿ ಭೂಮಿಂ ಪ್ರಾರ್ಥ್ಯ ॥ ದಿವಿ ಜಾತಾ ಅಪ್ಸು ಜಾತಾ ಯಾ ಜಾತಾ ಓಷಧೀಭ್ಯಃ ॥ ಅಥೋ ಯಾ ಅದ್ರಿಜಾ ಆಪಸ್ತಾನಃ ಶುಂಧಂತು ಶುಂಧನೀಃ ॥ ಇತಿ ಸ್ಥಲಶುದ್ಧಿಂ ಕೃತ್ವಾ ॥ ಅಪೇತೇತಿ ಯಮಃ ಪಿತರಸ್ತ್ರಿಷ್ಟುಪ್ ॥ ಭೂಮಿಪ್ರೋಕ್ಷಣೇ ವಿನಿಯೋಗಃ ॥ ಅಪೇತವೀತವಿಚಸರ್ಪತಾ ತೋಸ್ಮಾ ಏತಂ ಪಿತರೋ ಲೋಕಮಕ್ರನ್ ॥ ಅಹೋಭಿರದ್ಭಿರಕ್ತುಭಿರ್ವ್ಯಕ್ತಂ ಯಮೋದದಾತ್ಯವಸಾನಮಸ್ಮೈ ॥ ಇತಿ ಮಂತ್ರೇಣ ಪೂರ್ವೋಕ್ತಗರ್ತೋದಕೇನಾನ್ಯಜಲೇನ ವಾ ಶಮೀಶಾಖಯಾ ತ್ರಿರಪ್ರದಕ್ಷಿಣಂ ಪರಿವ್ರಜನ್ ಖಾತಂ ಪ್ರೋಕ್ಷೇತ್ ॥ ಪ್ರತಿ ಪರಿವ್ರಜನಂ ಮಂತ್ರಾವೃತ್ತಿಃ ॥ ತತೋ ವಾಯವ್ಯಾಂ ಖಾತಾಂತರೇ ತದ್ಬಹಿರ್ವಾ ತ್ರಿಕೋಣಂ ಸ್ಥಂಡಿಲಂ ಕೃತ್ವೋಪಲಿಪ್ಯೋಲ್ಲಿಖ್ಯ ಅಗ್ನೇ ತ್ವಂ ಕ್ರವ್ಯಾದನಾಮಾಸೀತಿ ಔಪಾಸನಾಗ್ನಿಂ ಪ್ರತಿಷ್ಠಾಪಯೇತ್ ॥ ಕುಶಮೂಲೇನ ಖಾತಮಧ್ಯೇ ಯಮಾಯ ದಹನಪತಯೇ ಚೋಲ್ಲಿಖಾಮಿ ಇತ್ಯೇಕಾಂ ರೇಖಾಮುಲ್ಲಿಖ್ಯ ॥ ಕಾಲಾಯ ದಹನಪತಯೇ ಚೋಲ್ಲಿಖಾಮಿ ಇತಿ ಉತ್ತರತಃ ॥ ಮೃತ್ಯವೇ ದಹನಪತಯೇ ಚೋಲ್ಲಿಖಾಮೀತಿ ದಕ್ಷಿಣತ ಉಲ್ಲಿಖ್ಯ ತಾಸು ತಿಲೋದಕಂ ನಿಕ್ಷಿಪೇದೇಭಿರ್ಮಂತ್ರೈಃ ॥ ಯಮಾಯ ದಹನಪತಯೇ ಪಿತೃಭ್ಯಃ ಸ್ವಧಾ ನಮಃ ಇತಿ ಮಧ್ಯಾದುತ್ತರಸ್ಯಾಂ ॥ ಮೃತ್ಯವೇ ದಹನಪತಯೇ ಪಿತೃಭ್ಯಃ ಸ್ವಧಾ ನಮಃ ಇತಿ ಮಧ್ಯಾದ್ದಕ್ಷಿಣಸ್ಯಾಂ ॥**

---

ಅಗ್ನಿಗಳಾದರೆ "**ಓಂ ಭೂರ್ಭುವಃ ಸ್ವರೋಂ ಕ್ರವ್ಯಾದನಾಮಾನಮಗ್ನಿಂ ಪ್ರತಿಷ್ಠಾಪಯಾಮಿ**" ಎಂದು ಅಗ್ನಿಪ್ರತಿಷ್ಠಾಪನೆ ಮಾಡಬೇಕು. ಅನಂತರ ದರ್ಭೆಯ ಮೂಲದಿಂದ ಚಿತೆಯ ಸ್ಥೊಂಡದ ಮಧ್ಯಭಾಗದಲ್ಲಿ "**ಓಂ ಯಮಾಯ ದಹನಪತಯೇ ಚೋಲ್ಲಿಖಾಮಿ**" ಎಂದೂ, ಉತ್ತರಭಾಗದಲ್ಲಿ "**ಓಂ ಕಾಲಾಯ ದಹನಪತಯೇ ಚೋಲ್ಲಿಖಾಮಿ**" ಎಂದೂ ದಕ್ಷಿಣಭಾಗದಲ್ಲಿ "**ಮೃತ್ಯವೇ ದಹನಪತಯೇ ಚೋಲ್ಲಿಖಾಮಿ**" ಎಂದೂ ಮೂರು ಗೆರೆಗಳನ್ನು ಎಳೆಯಬೇಕು. ಇಲ್ಲಿ, ಕಾಷ್ಠ ತಯಾರಿಸಿದ ಕೊಡಲಿಯಿಂದ ಮಧ್ಯ, ಉತ್ತರ ಮತ್ತು ದಕ್ಷಿಣಭಾಗದಲ್ಲಿ ಮೂರು ಸಲ ಚಿತೆಯನ್ನು ಕಡಿದು ಅಥವಾ ರೇಖೆಗಳನ್ನು ಎಳೆದು, ಚಿತೆಯ ತಲೆಯ ಭಾಗದಲ್ಲಿ ಉತ್ತರಕ್ಕೆ ಮುಖಮಾಡಿ ನಿಂತು ಕೊಡಲಿಯನ್ನು ಹಿಂಭಾಗಕ್ಕೆ ಬಿಸಾಡುವ ಸಂಪ್ರದಾಯವುಂಟು. ಆಮೇಲೆ ಹೀಗೆ ಎಳೆದ ರೇಖೆಗಳ ಮೇಲೆ ಮಧ್ಯ ಉತ್ತರ ಮತ್ತು ದಕ್ಷಿಣದಲ್ಲಿ ಕ್ರಮವಾಗಿ "**ಯಮಾಯ...ಸ್ವಧಾ ನಮಃ**", "**ಕಾಲಾಯ......ಸ್ವಧಾ ನಮಃ**", "**ಮೃತ್ಯವೇ....ಸ್ವಧಾ ನಮಃ**" ಎಂದು ಮೂರು ಕಡೆ ತಿಲೋದಕ ಕೊಡಬೇಕು. ಬಳಿಕ ಚಿತೆಯ

**ತತಃ ಖಾತೇ ಹಿರಣ್ಯಶಕಲಾನಿ ತಿಲಾಂಶ್ಚ ಪ್ರಕ್ಷಿಪ್ಯ ಸಜಾತೀಯಾಹೃತೈರ್ಯಜ್ಞೀಯಕಾಷ್ಠೈಶ್ಚಿತಿಂ ಕುಶಲಃ ಕುರ್ಯಾತ್ ॥ ತತಃ ಕರ್ತಾ ತಸ್ಯಾಂ ಬರ್ಹಿರಾಸ್ತೀರ್ಯ ತದುಪರಿ ಊರ್ಧ್ವಲೋಮಕೃಷ್ಣಾಜಿನಮಾಸ್ತೀರ್ಯ ಪ್ರೇತಮಗ್ನೇರುತ್ತರೇಣ ನೀತ್ವಾ ದಕ್ಷಿಣಶಿರಸ್ಕಂ ಚಿತೌ ನಿವೇಶಯೇತ್ ॥ ತತಃ ಪ್ರೇತಸ್ಯ ಮುಖೇ ನಾಸಿಕಾದ್ವಯೇ ಚಕ್ಷುರ್ದ್ವಯೇ ಶ್ರೋತ್ರದ್ವಯೇ ಏವಂ ಸಪ್ತಛಿದ್ರೇಷು ಹಿರಣ್ಯಶಕಲಾನಿ ತದಭಾವೇ ಆಜ್ಯಬಿಂದೂನ್ ವಾ ನಿಕ್ಷಿಪ್ಯ ಪ್ರೇತಶರೀರೇ ಘೃತಾಕ್ತಾಂಸ್ತಿಲಾನ್ಪ್ರಕ್ಷಿಪ್ಯ ॥ ತತೋ ದೇಶಕಾಲೌ ಸಂಕೀರ್ತ್ಯ ಪ್ರೇತೋಪಾಸನಂ ಕರಿಷ್ಯೇ ಇತಿ ಸಂಕಲ್ಪ್ಯ ಸಮಿದ್ದ್ವಯಮಾದಾಯ ಅಗ್ನಿಂ ಕಾಮಂ ಲೋಕಂ ಅನುಮತಿಂ ಏತಾಃ ಪ್ರಧಾನದೇವತಾಃ ಅಗ್ನಾವಾಜ್ಯೇನ ಪ್ರೇತಂ ಪ್ರೇತೋರಸಿ ಆಜ್ಯೇನ ಯಕ್ಷ್ಯೇ ॥ ವ್ಯಾಹೃತೀನಾಂ ಪರಮೇಷ್ಠೀ ಪ್ರಜಾಪತಿಃ ಪ್ರಜಾಪತಿರ್ಬೃಹತೀ ಅನ್ವಾಧಾನಸಮಿದ್ಧೋಮೇ ವಿನಿಯೋಗಃ ॥ ಓಂ ಭೂರ್ಭುವಃ ಸ್ವಃ ಸ್ವಾಹಾ ಪ್ರಜಾಪತಯ ಇದಂ ನಮಮ ॥ ಅಗ್ನಿಂ ಪರಿಸಮುಹ್ಯ ಚಿತಿಸಹಿತಮಗ್ನಿಂ ಪರಿಸ್ತೀರ್ಯ ದಕ್ಷಿಣತೋಗ್ನೇಃ ಪರ್ಯುಕ್ಷ್ಯ ಪ್ರೋಕ್ಷಣೀಂ ಸ್ರುವಂ ಚಮಸಂ ಆಜ್ಯಭಾಜನಂ ಚೇತಿ ಏಕೈಕಶಃ ಉತ್ತಾನಾನಿ ಪಾತ್ರಾಣ್ಯಾಸಾದಯೇತ್ ॥ ತತೋ ಗರ್ತೋದಕಂ ಚಮಸೇ ಆಸಿಚ್ಯ ದರ್ಭೈರಾಚ್ಛಾದ್ಯ ಪ್ರಣಯೇತ್ ॥ ಇಮಮಗ್ನ ಇತಿ ದಮನೋಽಗ್ನಿಸ್ತ್ರಿಷ್ಟುಪ್ ಚಮಸಾನು-**

---

ಹೊಂಡದಲ್ಲಿ ಚಿನ್ನದ ತುಂಡುಗಳನ್ನೂ ಎಳ್ಳನ್ನೂ ಹಾಕಿ ಗಂಧದ ಕಟ್ಟಿಗೆ ಮೊದಲಾದವುಗಳಿಂದ ಚಿತೆಯನ್ನು ಸರಿಯಾಗಿ ನಿರ್ಮಿಸಿ ಅದರ ಮೇಲೆ ದರ್ಭೆಗಳನ್ನು ಹರಡಿ (ಆಹಿತಾಗ್ನಿಯಾಗಿದ್ದರೆ, ಮೇಲ್ಭಾಗದಲ್ಲಿ ರೋಮಗಳಿರುವಂತೆ ಕೃಷ್ಣಾಜಿನವನ್ನು ಹಾಸಿ) ಹೊದಿಸಿದ ಬಟ್ಟೆಯೊಂದಿಗೆ ಶವವನ್ನು ಚಟ್ಟದಿಂದ ತೆಗೆದು ಅಗ್ನಿಯ ಉತ್ತರಭಾಗದಿಂದ ತಂದು ಕಾಷ್ಠದ ಮಧ್ಯದಲ್ಲಿ ದಕ್ಷಿಣದಿಕ್ಕಿಗೆ ತಲೆ ಇರುವಂತೆ ಇಡಬೇಕು. ಬಳಿಕ ಶವದ ಬಾಯಿ, ಎರಡು ಕಣ್ಣು, ಎರಡು ಮೂಗಿನ ಸೊಳ್ಳೆ ಮತ್ತು ಎರಡು ಕಿವಿಗಳಲ್ಲಿ ಚಿನ್ನದ ತುಂಡುಗಳನ್ನು ಅಥವಾ ತುಪ್ಪದ ಬಿಂದುಗಳನ್ನು ಹಾಕಿ ಇಡೀ ಶರೀರದ ಮೇಲೆ ತುಪ್ಪ ಬೆರೆಸಿದ ಎಳ್ಳುಗಳನ್ನು ಚೆಲ್ಲಬೇಕು. ಆಮೇಲೆ ಕರ್ತೃವು ಆಚಮನ ಮಾಡಿ ದೇಶಕಾಲಗಳನ್ನು ಹೇಳಿ "**ಪ್ರೇತೋಪಾಸನಂ ಕರಿಷ್ಯೇ**" ಎಂದು ಸಂಕಲ್ಪ ಮಾಡಬೇಕು. ಅತ್ತಿಯ ಎರಡು ಸಮಿಧೆಗಳನ್ನು ಕೈಯಲ್ಲಿ ಹಿಡಿದು "**ಅಗ್ನಿಂ, ಕಾಮಂ.....ಆಜ್ಯೇನ ಯಕ್ಷ್ಯೇ**" ಎಂದು ಹೇಳಿ, "**ವ್ಯಾಹೃತೀನಾಂ ಪರಮೇಷ್ಠೀ....ಓಂ ಭೂರ್ಭುವಃ ಸ್ವಃ ಸ್ವಾಹಾ**" ಎಂದು ಸಮಿಧೆಗಳನ್ನು ಹೋಮ ಮಾಡಿ "**ಪ್ರಜಾಪತಯ ಇದಂ ನಮಮ**" ಎಂದು ಹೇಳಬೇಕು.

**ಮಂತ್ರಣೇ ವಿನಿಯೋಗಃ ॥ ಇಮಮಗ್ನೇ ಚಮಸಂ ಮಾ ವಿಜಿಹ್ವರಃ ಪ್ರಿಯೋ ದೇವಾನಾಮುತ ಸೋಮ್ಯಾನಾಂ ॥ ಏಷ ಯಶ್ಚಮಸೋ ದೇವಪಾನಸ್ತಸ್ಮಿನ್ ದೇವಾ ಅಮೃತಾಮಾದಯಂತೇ ॥ ಇತಿ ಚಮಸಾನುಮಂತ್ರಣಂ ಕೃತ್ವಾ ಪ್ರೋಕ್ಷಣ್ಯಾಂ ಕುಶೈಕರೂಪಂ ಪವಿತ್ರಂ ನಿಧಾಯ ಜಲಮಾಪೂರ್ಯ ಗಂಧಾದಿ ಕ್ಷಿಪ್ತ್ವಾ ಅಪಸ್ತ್ರಿರುತ್ಪೂಯ ಪಾತ್ರಾಣಿ ಸಂಪ್ರೋಕ್ಷ್ಯ ಅನ್ಯದರ್ಭೇಣಾಚ್ಛಾದ್ಯ ತತ್ಪವಿತ್ರಂ ಆಜ್ಯಪಾತ್ರೇ ನಿಧಾಯ ಆಜ್ಯಪಾತ್ರಂ ಪುರತಃ ಸಂಸ್ಥಾಪ್ಯ ತಸ್ಮಿನ್ನಾಜ್ಯ ಮಾಸಿಚ್ಯ ಸ್ವಸ್ಥಾನೇ ನಿಧಾಯ ಜ್ವಲತಾ ದರ್ಭೋಲ್ಮುಕೇನಾವಜ್ವಲ್ಯ ಅಂಗುಷ್ಠಪರ್ವ ಮಾತ್ರಂ ದರ್ಭಾಗ್ರದ್ವಯಮಾಜ್ಯೇ ಪ್ರಕ್ಷಿಪ್ಯ ಪುನರ್ಜ್ವಲತಾ ತೇನೈವ ದರ್ಭೋಲ್ಮು ಕೇನಾಜ್ಯಂ ತ್ರಿಃ ಪರ್ಯಗ್ನಿ ಕೃತ್ವಾ ತದುಲ್ಮುಕಂ ನಿರಸ್ಯಾಪಃ ಸ್ಪೃಷ್ಟ್ವಾ ತತ್ರಸ್ಥಮೇವಾಜ್ಯಂ ತೂಷ್ಣೀಮುತ್ಪೂಯ ಪವಿತ್ರಮದ್ಭಿಃ ಪ್ರೋಕ್ಷ್ಯ ಅಗ್ನೌ ಪ್ರಹರೇತ್ ॥ ತತ ಆತ್ಮನೋಗ್ರತೋ ಭೂಮಿಂ ಪ್ರೋಕ್ಷ್ಯ ತತ್ರ ದರ್ಭೇಷು ಆಜ್ಯಪಾತ್ರಂ ನಿಧಾಯ ಸ್ರುವಂ ದಕ್ಷಿಣಹಸ್ತೇನ ಗೃಹೀತ್ವಾ ಸವ್ಯೇನ ದರ್ಭಾನಾದಾಯ ಸಹೈವಾಗ್ನೌ ಪ್ರತಾಪ್ಯ ದರ್ಭಾಗ್ರೈಃ ಸ್ರುವಸ್ಯ ಬಿಲಂ ಪೃಷ್ಠಂ ಚ ತ್ರಿಃ ಸಂಮೃಜ್ಯ ಮೂಲೈರ್ಮೂಲಂ ಚ ಪ್ರೋಕ್ಷ್ಯ ಪ್ರತಾಪ್ಯ ಆಜ್ಯಾದುತ್ತರತಃ ಸಂಸ್ಥಾಪ್ಯ ತೂಷ್ಣೀಮಗ್ನಿಮಲಂಕೃತ್ಯ ವಾಮಂ ಜಾನ್ವಾಚ್ಯ ಪ್ರಾಚೀನಾವೀತೀ ಪರಾಚೀನಪಾಣಿಃ ಸ್ರುವೇಣಾಜ್ಯಂ ಜುಹುಯಾತ್ ॥ ಅಗ್ನಯೇ**

---

ಅನಂತರ ಚಿತಿಸಹಿತ ಅಗ್ನಿಗೆ ಮೂರು ಸಲ ಸುತ್ತಲೂ ನೀರನ್ನು ಪ್ರೋಕ್ಷಿಸಿ, ದಕ್ಷಿಣದಿಂದ ಮೊದಲ್ಗೊಂಡು ನಾಲ್ಕು ದಿಕ್ಕುಗಳಲ್ಲಿ ಪರಿಸ್ತರಣ ಹಾಕಿ ಮೊದಲಿನಂತೆ ಮೂರು ಸಲ ನೀರನ್ನು ಪುನಃ ಪ್ರೋಕ್ಷಿಸಿ ಅಗ್ನಿಯ ದಕ್ಷಿಣಭಾಗದಲ್ಲಿ ಪ್ರೋಕ್ಷಣೀಪಾತ್ರ, ಸ್ರುಕ್‌ಸ್ರುವ, ಚಮಸಪಾತ್ರ ಮತ್ತು ಆಜ್ಯಪಾತ್ರವನ್ನು ಒಂದೊಂದಾಗಿ ಮೇಲ್ಮುಖವಾಗಿಟ್ಟು ಚಮಸಪಾತ್ರದಲ್ಲಿ ಗತೋದಕವನ್ನು ಹಾಕಿ ಎರಡು ದರ್ಭೆಗಳಿಂದ ಮುಚ್ಚಿ ಎರಡು ಕೈಗಳಿಂದಲೂ ಮುಚ್ಚಿಹಿಡಿದು **"ಇಮಮಗ್ನೇ...."** ಎಂಬ ಮಂತ್ರದಿಂದ ಜಪಿಸಿ ಎಡಭಾಗದಲ್ಲಿ ಹರಡಿದ ದರ್ಭೆಗಳ ಮೇಲೆ ಇಡಬೇಕು. ಬಳಿಕ ಒಂದು ದರ್ಭೆಯನ್ನು ಪ್ರೋಕ್ಷಣೀ ಪಾತ್ರೆಯಲ್ಲಿಟ್ಟು ನೀರನ್ನು ತುಂಬಿಸಿ, ಗಂಧ ಎಳ್ಳುಗಳನ್ನು ಹಾಕಿ, ಅದೇ ದರ್ಭೆಯಿಂದ ಮೂರು ಸಲ ಗಾಳಿಸಿ, ಉಳಿದ ಪಾತ್ರೆಗಳನ್ನು ಪ್ರೋಕ್ಷಿಸಿ,

ಸ್ವಾಹಾ ಅಗ್ನಯ ಇದಂ ......... ॥ ಕಾಮಾಯ ಸ್ವಾಹಾ ಕಾಮಾಯೇದಂ ......... ॥ ಲೋಕಾಯ ಸ್ವಾಹಾ ಲೋಕಾಯೇದಂ ......... ॥ ಅನುಮತಯೇ ಸ್ವಾಹಾ ಅನುಮತಯ ಇದಂ......॥ ಏವಂ ಚತಸ್ರ ಆಜ್ಯಾಹುತೀರ್ಹುತ್ವಾ ॥ ಅಸ್ಮಾತ್ತ್ವಮಧಿಜಾತೋಽಸಿ ತ್ವದಯಂ ಜಾಯತಾಂ ಪುನಃ ॥ ಅಸೌ ಸ್ವರ್ಗಾಯ ಲೋಕಾಯ ಸ್ವಾಹೇತಿ ಮಂತ್ರೇಣ ಪ್ರೇತಸ್ಯೋರಸಿ ಪಂಚಮೀಂ ಜುಹು-ಯಾತ್ ॥ ಅಸಾವಿತ್ಯತ್ರ ಸಂಬುದ್ಧ್ಯಾ ಪ್ರೇತನಾಮ ನಿರ್ದಿಶೇತ್ ॥ ಅಮುಕ-ಪ್ರೇತಾಯೇದಂ ನಮಮೇತಿ ತ್ಯಜೇತ್ ॥ ಅತ್ರ ಸ್ವಿಷ್ಟಕೃತಂ ಪಾತ್ರಸಂಯೋ-ಜನಂ ಚ ನಾಸ್ತಿ ॥ ಏವಂ ಪ್ರೇತೌಪಾಸನಂ ಕೃತ್ವಾ ತತಃ ಸಕ್ತುನಾ ಅಪೂಪ-ಪಂಚಕಂ ಕೃತ್ವಾ ಪೃಷದಾಜ್ಯೇನಾಭಿಘಾರ್ಯ ॥ ಅಗ್ನೇರ್ವರ್ಮೇತಿ ದಮನೋಗ್ನಿ-ಸ್ತ್ರಿಷ್ಟುಪ್ ಪ್ರೇತಸ್ಯ ಲಲಾಟೇ ಮುಖೇ ಚ ಸಕ್ತುಪಿಂಡದಾನೇ ವಿನಿಯೋಗಃ ॥ ಅಗ್ನೇರ್ವರ್ಮ ಪರಿಗೋಭಿರ್ವ್ಯಯಸ್ವಸಂಪ್ರೋರ್ಣುಷ್ವ ಪೀವಸಾ ಮೇದಸಾ ಚ ॥ ನೇತ್ತ್ವಾಧೃಷ್ಣುರ್ಹರಸಾಜರ್ಹೃಷಾಣೋದಧೃಗ್ವಿಧಕ್ಷ್ಯನ್ ಪರ್ಯಂಖಯಾತೇ ॥ ಇತಿ ಲಲಾಟೇ ಮುಖೇ ಚ ದ್ವೌ ಪಿಂಡೌ ದತ್ವಾ ॥ ಅತಿದ್ರವೇತಿ ಮಂತ್ರ-ದ್ವಯಸ್ಯ ಯಮಶ್ವಾನೌ ತ್ರಿಷ್ಟುಪ್ ಬಾಹುದ್ವಯೇ ಹೃದಯೇ ಚ ಸಕ್ತುಪಿಂಡ-

---

ಬೇರೊಂದು ದರ್ಭೆ ಮುಟ್ಟಿ, ಮೊದಲಿನ ದರ್ಭೆಯನ್ನು ಆಜ್ಯಪಾತ್ರದ ಮೇಲೆ ಇಟ್ಟು ಆಜ್ಯಪಾತ್ರವನ್ನು ತನ್ನ ಮುಂದೆ ಇಟ್ಟುಕೊಂಡು, ಅದರಲ್ಲಿ ತುಪ್ಪ ಹೊಯಿದು ಮೂರು ಕೆಂಡಗಳ ಮೇಲೆ ಅದನ್ನಿಟ್ಟು ಎರಡು ದರ್ಭೆಗಳನ್ನು ಹೊತ್ತಿಸಿ, ಪಾತ್ರದಲ್ಲಿರುವ ತುಪ್ಪಕ್ಕೆ ಹಾಕಿ, ಎರಡು ದರ್ಭೆಗಳ ತುದಿಯ ತುಂಡುಗಳನ್ನೂ ತೊಳೆದು ಅದರಲ್ಲಿ ಹಾಕಿ, ಮೊದಲು ಹೊತ್ತಿಸಿದ ದರ್ಭೆಗಳನ್ನು ತೆಗೆದು ಪುನಃ ಹೊತ್ತಿಸಿ, ಶವಸಹಿತ ಚಿತೆಗೂ ಆಜ್ಯಕ್ಕೂ ಮೂರು ಸಲ ಸುತ್ತು ಬರಿಸಿ ಅವುಗಳನ್ನು ಅಗ್ನಿಗೆ ಹಾಕಬೇಕು. ಆಮೇಲೆ ಕೆಂಡಗಳ ಮೇಲಿನಿಂದ ಆಜ್ಯಪಾತ್ರವನ್ನು ಕೆಳಗಿಳಿಸಿ, ಕೆಂಡಗಳನ್ನು ಮರಳಿ ಅಗ್ನಿಗೇ ಹಾಕಿ ಕೈತೊಳೆದು ಆಜ್ಯಪಾತ್ರದಲ್ಲಿದ್ದ ಮೊದಲಿನ ದರ್ಭೆಯೊಂದನ್ನು ತೆಗೆದು ಆಜ್ಯವನ್ನು ಮೂರು ಸಲ ಗಾಳಿಸಿ, ಆ ದರ್ಭೆಯನ್ನು ಅಗ್ನಿಗೆ ಹಾಕಿ, ತನ್ನ ಮುಂಭಾಗದ ಸ್ಥಳವನ್ನು ಪ್ರೋಕ್ಷಿಸಿ, ಅಲ್ಲಿ ದರ್ಭೆಗಳನ್ನು ಹರಡಿ ಅದರ ಮೇಲೆ ಆಜ್ಯಪಾತ್ರೆಯನ್ನು ಇಡಬೇಕು. ಬಳಿಕ ಅತ್ತಿ ಎಲೆಯ ಸ್ರುಕ್ ಸ್ರುವಗಳನ್ನು ದರ್ಭೆಗಳಿಂದ ಮೂರು ಸಲ ತಿಕ್ಕಿ ಆ ದರ್ಭೆಗಳನ್ನು ಅಗ್ನಿಗೆ ಹಾಕಬೇಕು. ಮೊದಲಿನಂತೆ ಚಿತೆಯ ಸಹಿತ ಅಗ್ನಿಗೆ ಮೂರು ಸಲ ಸುತ್ತಲೂ ನೀರನ್ನು ಪ್ರೋಕ್ಷಿಸಿ, ಗಂಧ ಪುಷ್ಪಾದಿಗಳಿಂದ ಎಂಟು ದಿಕ್ಕುಗಳಲ್ಲಿಯೂ ಅಲಂಕರಿಸಬೇಕು.

**ದಾನೇ ವಿನಿಯೋಗಃ ॥ ಅತಿದ್ರವ ಸಾರಮೇಯೌ ಶ್ವಾನೌ ಚತುರಕ್ಷೌ ಶಬಲೌ ಸಾಧುನಾ ಪಥಾ ॥ ಅಥಾ ಪಿತೄನ್ತ್ಸುವಿದತ್ರಾ ಉಪೇಹಿ ಯಮೇನಯೇ- ಸಧಮಾದಂ ಮದಂತಿ ॥ ಯೌ ತೇ ಶ್ವಾನೌ ಯಮರಕ್ಷಿತಾರೌ ಚತುರಕ್ಷೌ ಪಥಿರಕ್ಷೀನೃಚಕ್ಷಸೌ ॥ ತಾಭ್ಯಾಮೇನಂ ಪರಿದೇಹಿ ರಾಜನ್ ತ್ಸ್ವಸ್ತಿಚಾಸ್ಮಾ ಅನಮೀವಂ ಚ ದೇಹಿ ॥ ಇತಿ ಬಾಹುದ್ವಯೇ ಪಿಂಡದ್ವಯಂ ಹೃದಯೇ ಏಕಃ ಪಿಂಡ ಇತ್ಯೇವಂ ಪಂಚಸಕ್ತುಪಿಂಡಾನ್ದದ್ಯಾತ್ ॥ ತತೋ ಧನಿಷ್ಠಾ ಪಂಚಕ ತ್ರಿಪಾನ್ನಕ್ಷತ್ರಾದೌ ಮರಣೇ ತದ್ವಿಧಿಂ ಕೃತ್ವಾನಂತರಂ ಚಿತಿಪೂರಣಂ ಕಾರ್ಯಂ ॥**

**॥ ಇತಿ ಔರ್ಧ್ವದೇಹಿಕವಿಧಿಃ ॥**

---

ಬಳಿಕ ಎಡ ಮೊಣಕಾಲನ್ನು ಊರಿ "**ಓಂ ಅಗ್ನಯೇ ಸ್ವಾಹಾ**" ಎಂದು ಮೊದಲಾಗಿ ನಾಲ್ಕು ಆಹುತಿಗಳನ್ನು ಕೊಟ್ಟು "**ಓಂ ಅಸ್ಮಾದ್ವೈ.....**" ಎಂಬ ಮಂತ್ರದಿಂದ ಶವದ ಎದೆಯ ಮೇಲೆ ಐದನೆಯ ಆಹುತಿಯನ್ನು ಕೊಡಬೇಕು. "**ಅಸೌ**" ಎಂಬಲ್ಲಿ ಪ್ರೇತದ ಹೆಸರನ್ನು ಸೇರಿಸಿಕೊಳ್ಳಬೇಕು. ಆಮೇಲೆ ಅಕ್ಕಿಹಿಟ್ಟಿನಿಂದ ಐದು ಪಿಂಡಗಳನ್ನು ಮಾಡಿ "**ಓಂ ಅಗ್ನೇರ್ವರ್ಮ.....**" ಎಂಬ ಮಂತ್ರದಿಂದ ಶವದ ಹಣೆ ಮತ್ತು ಬಾಯಿಯಲ್ಲಿ ಎರಡು ಪಿಂಡಗಳನ್ನೂ, "**ಅತಿದ್ರವ....**" ಮತ್ತು "**ಯೌ ತೇ ಶ್ವಾನೌ.....**" ಎಂಬ ಎರಡು ಮಂತ್ರಗಳಿಂದ ಶವದ ಎರಡು ಕೈಗಳಲ್ಲಿ ಮತ್ತು ಹೃದಯದಲ್ಲಿ ಒಂದು ಹೀಗೆ ಐದು ಪಿಂಡಗಳನ್ನು ಇಡಬೇಕು.

॥ ಔರ್ಧ್ವದೇಹಿಕವಿಧಿ ಸಮಾಪ್ತ ॥

# ॥ ಪಂಚಕಾದಿದಾಹವಿಧಿಃ ॥

ಶ್ರೀಃ ॥ ಪಂಚಕಮರಣೇ ಶವಸಮೀಪೇ ದೇಶಕಾಲೌ ಸಂಕೀರ್ತ್ಯ ಅಮುಕಗೋತ್ರಸ್ಯಾಮುಕನಾಮ್ನಃ ಪಿತ್ರಾದೇಃ ಪ್ರೇತಸ್ಯ ಧನಿಷ್ಠಾಪಂಚಕಮರಣ ಸೂಚಿತವಂಶಾರಿಷ್ಟವಿನಾಶಾರ್ಥಂ ಪಂಚಕವಿಧಿಂ ಕರಿಷ್ಯೇ ॥ ದರ್ಭಮಯೀ- ರ್ಯವಪಿಷ್ಟಾನುಲಿಪ್ತಾ ಊರ್ಣಾಸೂತ್ರವೇಷ್ಟಿತಾಃ ಪಂಚಪ್ರತಿಮಾಃ ಕೃತ್ವಾ ॥ ಜ್ಮಯಾ ಅತ್ರ ವಸಿಷ್ಠೋ ವಸವಸ್ತ್ರಿಷ್ಟುಪ್ ಜಪೇ ವಿನಿಯೋಗಃ ॥ ಓಂ ಜ್ಮಯಾ ಅತ್ರ ವಸವೋರಂತ ದೇವಾ ಉರಾವಂತರಿಕ್ಷೇ ಮರ್ಜಯಂತ ಶುಭ್ರಾಃ ॥ ಅರ್ವಾಕ್ ಪಥ ಉರುಜ್ರಯಃ ಕೃಣುಧ್ವಂ ಶ್ರೋತಾ ದೂತಸ್ಯ ಜಗ್ಮುಷೋ ನೋ ಅಸ್ಯ ॥ ತತ್ವಾಯಾಮೀತ್ಯಸ್ಯ ಶುನಶ್ಯೇಫೋ ವರುಣಸ್ತ್ರಿಷ್ಟುಪ್ ಜಪೇ ವಿನಿಯೋಗಃ ॥ ಓಂ ತತ್ವಾ ಯಾಮಿ ಬ್ರಹ್ಮಣಾ ವಂದಮಾನಸ್ತದಾಶಾಸ್ತೇ ಯಜಮಾನೋ ಹವಿರ್ಭಿಃ ॥ ಅಹೇಳಮಾನೋ ವರುಣೇಹ ಬೋಧ್ಯುರುಶಂ ಸಮಾನ ಆಯುಃ ಪ್ರಮೋಷೀಃ ॥ ಓಂ ಅಭಿಯೇ ಮಿಥೋ ವನುಷಸ್ಸಪಂತೇ ರಾತಿಂ ದಿವೋ ರಾತಿಷಾಚಃ ಪೃಥಿವ್ಯಾಃ ॥ ಅಹಿರ್ಬುಧ್ನ್ಯ ಉತನಶ್ಶೃಣೋತು ವರೂತ್ರ್ಯೇಕ ಧೇನುಭಿರ್ನಿಪಾತು ॥ ಉತನ ಇತ್ಯಸ್ಯ ವಸಿಷ್ಠೋಹಿರ್ಬುಧ್ನ್ಯೋ ವಿರಾಟ್ ಜಪೇ ವಿನಿಯೋಗಃ ॥ ಓಂ ಉತನೋಽಹಿರ್ಬುಧ್ನ್ಯಶ್ಶೃಣೋತ್ವಜ

---

ಧನಿಷ್ಠಾದಿ ಪಂಚಕದಲ್ಲಿ ಮರಣಹೊಂದಿದ್ದರೆ ಶವದ ಬಳಿಯಲ್ಲಿ ದೇಶಕಾಲ ಸಂಕೀರ್ತನ ಮಾಡಿ **"ಅಮುಕಗೋತ್ರಸ್ಯ............ ಕರಿಷ್ಯೇ"** ಎಂದು ಸಂಕಲ್ಪ ಮಾಡಿ ದರ್ಭೆಗಳಿಂದ ಐದು ಮನುಷ್ಯ ಪ್ರತಿಮೆಗಳನ್ನು ಮಾಡಿ ಯವಪಿಷ್ಟ ಅಥವಾ ಅಕ್ಕಿಹುಡಿಯ ಹಿಟ್ಟಿನಿಂದ ಅವುಗಳನ್ನು ಲೇಪಿಸಿ, ಉಣ್ಣೆಯ ನೂಲಿನಿಂದ ಬೇರೆ ಬೇರೆಯಾಗಿ ಸುತ್ತಿ ಅವುಗಳನ್ನು ಕೈಯಲ್ಲಿ ಹಿಡಿದು **"ಜ್ಮಯಾ ಅತ್ರ..........."** ಎಂಬಲ್ಲಿಂದ ಐದು ನಕ್ಷತ್ರಮಂತ್ರ ಗಳನ್ನು ಜಪಿಸಬೇಕು. ಬಳಿಕ ಗಂಧಾಕ್ಷತಪುಷ್ಪಗಳಿಂದ ಅವುಗಳನ್ನು ಪೂಜಿಸಿ ಮೊದಲನೆಯದನ್ನು ಪ್ರೇತದ ತಲೆಯಲ್ಲಿ, ಎರಡನೆಯದನ್ನು ಕಣ್ಣುಗಳಲ್ಲಿ, ಮೂರನೆಯದನ್ನು ಹೊಟ್ಟೆಯಲ್ಲಿ,

**ಏಕಪಾತ್ ಪೃಥಿವೀ ಸಮುದ್ರಃ ॥ ವಿಶ್ವೇ ದೇವಾ ಋತಾ ವೃಧೋ ಹುವಾನಾ-ಸ್ತುತಾ ಮಂತ್ರಾಃ ಕವಿಶಸ್ತಾ ಅವಂತು ॥ ಪೂಷಾಗಾ ಇತ್ಯಸ್ಯ ಭಾರದ್ವಾಜಃ ಪೂಷಾ ಗಾಯತ್ರೀ ಜಪೇ ವಿನಿಯೋಗಃ ॥ ಓಂ ಪೂಷಾಗಾ ಅನ್ವೇತು ನಃ ಪೂಷಾ ರಕ್ಷತ್ವರ್ವತಃ ॥ ಪೂಷಾವಾಜಂ ಸನೋತು ನಃ ॥ ಇತಿ ನಕ್ಷತ್ರ-ಮಂತ್ರೈರಭಿಮಂತ್ರ್ಯ ಗಂಧಪುಷ್ಪೈಸ್ಸಂಪೂಜ್ಯ ಪ್ರಥಮಾಂ ಶಿರಸಿ ದ್ವಿತೀಯಾಂ ನೇತ್ರಯೋಃ ತೃತೀಯಾಂ ವಾಮಕುಕ್ಷೌ ಚತುರ್ಥೀಂ ನಾಭೌ ಪಂಚಮೀಂ ಪಾದಯೋಃ ಇತಿ ನ್ಯಸ್ಯ ತಾಸು ಕ್ರಮೇಣ ಆಜ್ಯಂ ಜುಹುಯಾದೇಭಿ-ರ್ಮಂತ್ರೈಃ ॥ ಪ್ರೇತವಾಹಾಯ ಸ್ವಾಹಾ ಪ್ರೇತವಾಹಾಯೇದಂ .......... ॥ ಪ್ರೇತಸಖಾಯ ಸ್ವಾಹಾ ಪ್ರೇತಸಖಾಯೇದಂ ........ ॥ ಪ್ರೇತಪಾಯ ಸ್ವಾಹಾ ಪ್ರೇತಪಾಯೇದಂ ........ ॥ ಪ್ರೇತಭೂಮಿಪಾಯ ಸ್ವಾಹಾ ಪ್ರೇತಭೂಮಿಪಾ-ಯೇದಂ .......... ಪ್ರೇತಹರ್ತ್ರೇ ಸ್ವಾಹಾ ॥ ಪ್ರೇತಹರ್ತ್ರ ಇದಂ .......... ॥ ತತಃ ತದುಪರಿ ಉದಕಧಾರಾಂ ದತ್ವಾ ॥ ಯಮಾಯ ಸೋಮಂ ಸುನುತ ಯಮಾಯ ಜುಹುತಾ ಹವಿಃ । ಯಮಂ ಹ ಯಜ್ಞೋ ಗಚ್ಛತ್ಯಗ್ನಿದೂತೋ ಅರಂಕೃತಃ ಸ್ವಾಹಾ ॥ ಯಮಾಯೇದಂ .......... ॥ ತ್ರ್ಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಂ ॥ ಉರ್ವಾರುಕಮಿವ ಬಂಧನಾನ್ ಮೃತ್ಯೋ-ರ್ಮುಕ್ಷೀಯಮಾಮೃತಾತ್ ಸ್ವಾಹಾ ॥ ಮೃತ್ಯುಂಜಯಾಯೇದಂ .......... ॥**

---

ನಾಲ್ಕನೆಯದನ್ನು ನಾಭಿಯಲ್ಲಿ ಮತ್ತು ಐದನೆಯದನ್ನು ಪಾದಗಳಲ್ಲಿ ಇಟ್ಟು ಕ್ರಮವಾಗಿ "**ಓಂ ಪ್ರೇತವಾಹಾಯ ಸ್ವಾಹಾ....**" ಎಂದು ಮೊದಲಾಗಿ ಐದು ಆಜ್ಯಾಹುತಿಗಳನ್ನು ಕೊಡಬೇಕು. ಆಮೇಲೆ ಅವುಗಳ ಮೇಲೆ ನೀರಿನ ಧಾರೆಯನ್ನೆರೆದು "**ಯಮಾಯ ಸೋಮಂ**" ಮತ್ತು "**ತ್ರ್ಯಂಬಕಂ ಯಜಾಮಹೇ**" ಎಂಬ ಈ ಎರಡು ಮಂತ್ರಗಳಿಂದ ಪ್ರತಿಯೊಂದು ಪ್ರತಿಮೆಯ ಮೇಲೂ ಪ್ರತ್ಯೇಕವಾಗಿ ಎರಡೆರಡು ಆಜ್ಯಾಹುತಿಗಳನ್ನು ಕೊಡಬೇಕು. ಅನಂತರ ಚಿನ್ನ, ವಜ್ರ, ನೀಲ, ಪದ್ಮರಾಗ, ಮುತ್ತು ಎಂಬ ಐದು ರತ್ನಗಳನ್ನು ಅಥವಾ ಐದು ಚಿನ್ನದ ತುಂಡುಗಳನ್ನು ಅದೂ ಇಲ್ಲವೆಂದಾದರೆ ಐದು ಬಿಂದು ತುಪ್ಪವನ್ನು ಪ್ರೇತದ ಬಾಯಿಯಲ್ಲಿ ಇಡಬೇಕು.

**ಇತಿ ಪ್ರತ್ಯೇಕಂ ಪ್ರತಿಮಾಸು ಆಜ್ಯಾಹುತೀರ್ಜುಹುಯಾತ್ ॥ ತತಃ ಪ್ರೇತ-ಮುಖೇ ಕನಕಹೀರಕನೀಲಪದ್ಮರಾಗಮೌಕ್ತಿಕೇತಿ ಪಂಚರತ್ನಾನಿ ತದಭಾವೇ ಕರ್ಷಾರ್ಧಂ ಸ್ವರ್ಣಂ ತದಭಾವೇ ಘೃತಂ ದತ್ವಾ ಪುತ್ತಲೈಃ ಸಹ ಪ್ರೇತಂ ದಹೇತ್ ॥ ತ್ರಿಪಾದೃಕ್ಷಮರಣೇ ॥ ಅಮುಕತ್ರಿಪಾದನಕ್ಷತ್ರ ಮರಣಸೂಚಿತ-ವಂಶಾರಿಷ್ಟವಿನಾಶಾರ್ಥಂ ತದ್ವಿಧಿಂ ಕರಿಷ್ಯೇ ॥ ಪೂರ್ವವತ್ಪುತ್ತಲಿಕಾತ್ರಯಂ ನಿರ್ಮಾಯ ಸಂಪೂಜ್ಯ ದಾಹಸಮಯೇ ಪ್ರಥಮಾಂ ಶಿರಸಿ ದ್ವಿತೀಯಾಂ ನೇತ್ರಯೋಃ ತೃತೀಯಾಂ ಕುಕ್ಷೌ ಏವಂ ನ್ಯಸ್ಯ ಪ್ರೇತವಾಹ ೧ ಪ್ರೇತಸಖ ೨ ಪ್ರೇತಪ ೩ ಇತಿ ನಾಮಭಿಸ್ತದುಪರಿ ಪೂರ್ವವದ್ಘೃತಂ ಹುತ್ವಾ ಯಥಾಲಿಂಗಂ ತ್ಯಕ್ತ್ವಾ ಉದಕಧಾರಾ ದತ್ವಾ ॥ ಯಮಾಯ ಸೋಮಂ ತ್ರ್ಯಂಬ ಕಮಿತಿ ಮಂತ್ರಾಭ್ಯಾಂ ಪ್ರತ್ಯೇಕಮಾಹುತಿದ್ವಯಂ ಹುತ್ವಾ ಪ್ರತಿಪ್ರತಿಮಾಂ ॥ ವಹ ವಪಾಂ ಜಾತವೇದಃ ಪಿತೃಭ್ಯೋ ಯತ್ರೈನಾನ್ವೇತ್ಥ ನಿಹಿತಾನ್ ಪರಾಕೇ ॥ ಕುಲ್ಯಾ ಉಗ್ರತಾಃ ಕ್ಷರಂತು ಸತ್ಯಾ ಏತಾ ಆಶಿಷಃ ಸಂತು ಕಾಮ್ಯೈಃ ಸ್ವಾಹಾ ॥ ಅಗ್ನಯೇ ಜಾತವೇದಸ ಇದಂ ....... ॥ ತ್ರಿಪುಷ್ಕರ ದ್ವಿಪುಷ್ಕರ ಮರಣೇ ॥ ದೇಶ ...... ॥ ಅಮುಕ ತ್ರಿಪುಷ್ಕರಯೋಗೇ ದ್ವಿಪುಷ್ಕರಯೋಗೇ ವಾ ಮರಣಸೂಚಿತವಂಶಾರಿಷ್ಟ ವಿನಾಶಾರ್ಥಂ ಕೃಚ್ಛ್ರ ತ್ರಯಪ್ರಾಯಶ್ಚಿತ್ತಂ ಯಥಾಶಕ್ತಿ ದ್ರವ್ಯದಾನದ್ವಾರಾಹಮಾಚರಿಷ್ಯೇ ॥ ಪುನರ್ದೇಶ ......... ॥ ಅಮುಕಸ್ಯ ತ್ರಿಪುಷ್ಕರಯೋಗಮರಣಸೂಚಿತವಂಶಾರಿಷ್ಟವಿನಾಶಾರ್ಥಂ ತ್ರಿಪುಷ್ಕರ-ವಿಧಿಂ ಕರಿಷ್ಯೇ ॥ ತ್ರಿಪಾದವತ್ಪ್ರತಿಮಾತ್ರಯಕರಣಾದ್ಯಾಜ್ಯಾಹುತ್ಯಂತಂ ಸರ್ವಂ**

---

ಕೃತ್ತಿಕಾ, ಪುನರ್ವಸು, ಉತ್ತರಾ, ವಿಶಾಖಾ, ಉತ್ತರಾಷಾಢಾ, ಪೂರ್ವಾಭಾದ್ರಾ - ಇವು ಆರು ತ್ರಿಪಾದನಕ್ಷತ್ರಗಳು. ತ್ರಿಪಾದನಕ್ಷತ್ರದಲ್ಲಿ ಮರಣ ಉಂಟಾಗಿದ್ದರೆ, **"ಅಮುಕ ತ್ರಿಪಾದನಕ್ಷತ್ರ.... ತದ್ವಿಧಿಂ ಕರಿಷ್ಯೇ"** ಎಂದು ಸಂಕಲ್ಪಮಾಡಿ ಮೂರು ಪ್ರತಿಮೆಗಳನ್ನು ಮೊದಲಿನ ವಿಧಿಯಲ್ಲಿ ಹೇಳಿದಂತೆ ತಯಾರಿಸಿ, ಪೂಜಿಸಿ ದಹನದ ಸಮಯದಲ್ಲಿ ಮೊದಲನೆಯದನ್ನು ಪ್ರೇತದ ತಲೆಯಲ್ಲಿ, ಎರಡನೆಯದನ್ನು ಕಣ್ಣುಗಳಲ್ಲಿ, ಮೂರನೆಯದನ್ನು ಹೊಟ್ಟೆಯಲ್ಲಿ ಇಟ್ಟು ಅದೇ ಕ್ರಮದಲ್ಲಿ **"ಓಂ ಪ್ರೇತವಾಹಾಯ ಸ್ವಾಹಾ...."** ಎಂದು ಮೊದಲಾಗಿ **"ಓಂ ಪ್ರೇತಪಾಯ ಸ್ವಾಹಾ"** ಎಂಬಲ್ಲಿವರೆಗಿನ ಮೂರು ಆಹುತಿಗಳನ್ನು ಕೊಟ್ಟು ನೀರಿನ ಧಾರೆಯನ್ನು ಸುರಿಸಿ, ಪ್ರತಿಯೊಂದು ಪ್ರತಿಮೆಯ ಮೇಲೆ **"ಯಮಾಯ ಸೋಮಂ...."** ಮತ್ತು **"ತ್ರ್ಯಂಬಕಂ ಯಜಾಮಹೇ...."** ಈ ಎರಡು ಮಂತ್ರಗಳಿಂದ ಎರಡೆರಡು ಆಜ್ಯಾಹುತಿಗಳನ್ನು ಕೊಟ್ಟು **"ಓಂ ವಹ ವಪಾಂ.... ಕಾಮ್ಯೈಸ್ಸ್ವಾಹಾ"** ಎಂದು ಎಲ್ಲ ಪ್ರತಿಮೆಗಳಿಗೂ ಒಂದೊಂದು ಆಹುತಿಕೊಟ್ಟು ಬಳಿಕ ದಹಿಸಬೇಕು.

**ಕುರ್ಯಾತ್ ॥ ದ್ವಿಪುಷ್ಕರೇತು ಪ್ರತಿಮಾದ್ವಯಂ ಕೃತ್ವಾ ಪ್ರೇತಶಿರಸಿ ೧ ನೇತ್ರಯೋಃ ೨ ನ್ಯಸ್ಯ ಪ್ರೇತವಾಹ ಪ್ರೇತಸಖ ಇತಿ ನಾಮಭ್ಯಾಂ ಪೂರ್ವವದ್ಘೃತಂ ಹುತ್ವಾ ಅನ್ಯತ್ಸರ್ವಂ ಪೂರ್ವವತ್ ಕುರ್ಯಾತ್ ॥**

**॥ ಇತಿ ಪಂಚಕಾದಿದಾಹವಿಧಿಃ ॥**

---

ಬಿದಿಗೆ, ಸಪ್ತಮಿ, ದ್ವಾದಶಿ ತಿಥಿಗಳು ರವಿ, ಕುಜ, ಶನಿವಾರಗಳಿಂದಲೂ ತ್ರಿಪಾದ ನಕ್ಷತ್ರಗಳಿಂದಲೂ ಕೂಡಿದರೆ ತ್ರಿಪುಷ್ಕರಯೋಗ. ಇವುಗಳಲ್ಲಿ ಯಾವುದಾದರೂ ಎರಡು ಮಾತ್ರ ಕೂಡಿದ್ದರೆ ದ್ವಿಪುಷ್ಕರಯೋಗ. ತ್ರಿಪುಷ್ಕರದಲ್ಲಿ ಮೂರು ಪ್ರತಿಮೆಗಳನ್ನು ದ್ವಿಪುಷ್ಕರದಲ್ಲಿ ಎರಡು ಪ್ರತಿಮೆಗಳನ್ನು ತಯಾರಿಸಿ ಮೊದಲಿನಂತೆ ಇತರ ಎಲ್ಲ ವಿಧಿಗಳನ್ನೂ ಮಾಡಿ ನಂತರ ದಹನಮಾಡಬೇಕು.

॥ ಪಂಚಕಾದಿದಾಹವಿಧಿ ಸಮಾಪ್ತ ॥

## ೭

# ॥ ಚಿತಿಪೂರಣಂ ॥

ಶ್ರೀಃ ॥ ತತಶ್ಚಿತಿಂ ಪರಿಪೂರ್ಯ ॥ ಕ್ರವ್ಯಾದಮಿತಿ ದಮನೋಗ್ನಿ-ಸ್ತ್ರಿಷ್ಟುಪ್ ॥ ಅಗ್ನಿಪ್ರಜ್ವಾಲನೇ ವಿನಿಯೋಗಃ ॥ ಕ್ರವ್ಯಾದಮಗ್ನಿಂ ಪ್ರಹಿಣೋಮಿ ದೂರಂ ಯಮರಾಜ್ಞೋ ಗಚ್ಛತುರಿಪ್ರವಾಹಃ ॥ ಇಹೈವಾಯಮಿತರೋ ಜಾತ-ವೇದಾ ದೇವೇಭ್ಯೋ ಹವ್ಯಂ ವಹತು ಪ್ರಜಾನನ್ ॥ ಇತಿ ಮಂತ್ರೇಣ ಪುಂಸಃ ಶಿರೋದೇಶೇ ಸ್ತ್ರಿಯಾಃ ಪಾದದೇಶೇ ಅಗ್ನಿಂ ಪ್ರಜ್ವಾಲ್ಯ ವಕ್ಷ್ಯಮಾಣಮಂತ್ರೈ-ರ್ವಸ್ತ್ರಪಲ್ಲವೈಶ್ಚಿತೌ ವಾಯುಃ ಕಾರ್ಯಃ ॥ ವಾತಾಸ್ತೇ ವಾಂತು ಪಥಿ ಪುಣ್ಯಗಂಧಾ ಮನಃ ಸುಖಾ ಗಾತ್ರಸುಖಾನುಲೋಮಾಃ ॥ ತ್ವಚಃ ಸುಖಾ ಮಾಂಸಸುಖಾ ಅಸ್ಥಿಸೌಖ್ಯಾ ವಹಂತು ತ್ವಾಂ ಮರುತಃ ಸುಕೃತಾಂ ಯತ್ರ ಲೋಕಾಃ ॥ ಇಮಾ ಆಪೋ ಮಧುಮತ್ಯೋಸ್ಮಿಂಸ್ತೇ ಲೋಕ ಉಪದುಹ್ಯಂತಾಮಕ್ಷೀಯಮಾಣಾಃ ಸ್ವಧಾ ನಮಃ ॥ ಇಮಾ ಆಪೋ ಮಧುಮತ್ಯೋಂತರಿಕ್ಷೇ ತೇ ಲೋಕ ಉಪ-ದುಹ್ಯಂತಾಮಕ್ಷೀಯಮಾಣಾಃ ಸ್ವಧಾ ನಮಃ ॥ ಇಮಾ ಆಪೋ ಮಧುಮತ್ಯಃ ಸ್ವರ್ಗೇ ತೇ ಲೋಕ ಉಪದುಹ್ಯಂತಾಮಕ್ಷೀಯಮಾಣಾಃ ಸ್ವಧಾ ನಮಃ ॥ ತತೋ ದಹ್ಯಮಾನಂ ಪ್ರೇತಂ ತಿಲಪ್ರಕ್ಷೇಪೇಣಾನುಮಂತ್ರಯೀತ ॥ ಪ್ರೇಹಿ ಪ್ರೇಹೀತಿ ದ್ವಯೋರ್ಯಮಃ ಪಿತರಸ್ತ್ರಿಷ್ಟುಪ್ ॥ ದಹ್ಯಮಾನಪ್ರೇತಾನು-

---

ಬಳಿಕ ಕಾಷ್ಠಕ್ಕೆ ಬೆಂಕಿ ಉರಿಯಲು ಅನುಕೂಲವಾದ ಸೌದೆ ಇತ್ಯಾದಿಗಳನ್ನಿಟ್ಟು ಸರಿಯಾಗಿ ತುಂಬಿಸಿ, ಕರ್ತೃವು ಒಂದು ಸೂಟೆಯನ್ನು ಅಗ್ನಿಯಿಂದ ಹೊತ್ತಿಸಿ ಪುರುಷಶವವಾದರೆ ತಲೆಯ ಕಡೆಯಿಂದಲೂ ಸ್ತ್ರೀಶವವಾದರೆ ಕಾಲುಗಳ ಕಡೆಯಿಂದಲೂ, "**ಕ್ರವ್ಯಾದ-ಮಗ್ನಿಂ ಪ್ರಹಿಣೋಮಿ....**" ಎಂಬ ಮಂತ್ರವನ್ನೂ "**ತ್ವಂ ಭೂತಕೃಜ್ಜಗದ್ಯೋನೇ ತ್ವಂ ಲೋಕಪರಿಪಾಲಕಃ ॥ ಉಕ್ತಸ್ಸಂಹಾರಕಸ್ತಸ್ಮಾದೇನಂ (ನಾಂ) ಸ್ವರ್ಗಂ ಮೃತಂ (ತಾಂ) ನಯ**" ಎಂಬ ಶ್ಲೋಕವನ್ನೂ ಹೇಳುತ್ತ ಚಿತೆಗೆ ಬೆಂಕಿ ಕೊಡಬೇಕು. ಆಮೇಲೆ "**ವಾತಾಸ್ತೇ ವಾಂತು...**" ಮತ್ತು "**ಇಮಾ ಆಪೋ....**" ಎಂಬ ಎರಡು ಮಂತ್ರಗಳನ್ನು ಹೇಳುತ್ತ ಬಟ್ಟೆ ಸೊಪ್ಪು ಮುಂತಾದವುಗಳಿಂದ ಚಿತೆಗೆ ಗಾಳಿ ಹಾಕಬೇಕು. ಬಳಿಕ "**ಪ್ರೇಹಿ ಪ್ರೇಹಿ ....**" ಎಂಬಲ್ಲಿಂದ

ಮಂತ್ರಣೇ ವಿನಿಯೋಗಃ ॥ ಪ್ರೇಹಿ ಪ್ರೇಹಿ ಪಥಿಭಿಃ ಪೂರ್ವೇಭಿರ್ಯತ್ರಾನಃ ಪೂರ್ವೇ ಪಿತರಃ ಪರೇಯುಃ ॥ ಉಭಾ ರಾಜಾನಾ ಸ್ವಧಯಾ ಮದಂತಾ ಯಮಂ ಪಶ್ಯಾಸಿ ವರುಣಂ ಚ ದೇವಂ ॥ ಸಂಗಚ್ಛಸ್ವ ಪಿತೃಭಿಃ ಸಂಯಮೇ-ನೇಷ್ಟಾಪೂರ್ತೇನ ಪರಮೇ ವ್ಯೋಮನ್ ॥ ಹಿತ್ವಾ ಯಾವದ್ಯಂ ಪುನರಸ್ತಮೇಹಿ ಸಂಗಚ್ಛಸ್ವ ತನ್ವಾ ಸುವರ್ಚಾಃ ॥ ಅತಿದ್ರವೇತಿ ದ್ವಯೋರ್ಯಮಶ್ವಾನೌ ತ್ರಿಷ್ಟುಪ್ ॥ ದಹ್ಯಮಾನಪ್ರೇತಾನುಮಂತ್ರಣೇ ವಿನಿಯೋಗಃ ॥ ಅತಿದ್ರವ ಸಾರ-ಮೇಯೌ ಶ್ವಾನೌ ಚತುರಕ್ಷೌ ಶಬಲೌ ಸಾಧುನಾ ಪಥಾ ॥ ಅಥಾ ಪಿತ್ರೂನ್ ತ್ಸುವಿಧತ್ರಾ ಉಪೇಹಿ ಯಮೇನ ಯೇ ಸಧಮಾದಂ ಮದಂತಿ ॥ ಯೌ ತೇ ಶ್ವಾನೌ ಯಮರಕ್ಷಿತಾರೌ ಚತುರಕ್ಷಾ ಪಥಿರಕ್ಷೀ ನೃಚಕ್ಷಸೌ ॥ ತಾಭ್ಯಾಮೇನಂ ಪರಿದೇಹಿ ರಾಜನ್ ತ್ಸ್ವಸ್ತಿಚಾಸ್ಮಾ ಅನಮೀವಂ ಚ ಧೇಹಿ ॥ ಮೈನಮಿತಿ ಪಣ್ಣಾಂ ದಮನೋಗ್ನಿಸ್ತ್ರಿಷ್ಟುಪ್ ॥ ದಹ್ಯಮಾನ ಪ್ರೇತಾನು ಮಂತ್ರಣೇ ವಿನಿಯೋಗಃ ॥ ಓಂ ಮೈನಮಗ್ನೇ ವಿದಹೋ ಮಾಭಿಶೋಚೋ ಮಾಸ್ಯ ತ್ವಚಂ ಚಿಕ್ಷಿಪೋ ಮಾ ಶರೀರಂ ॥ ಯದಾ ಶೃತಂ ಕೃಣವೋ ಜಾತವೇದೋಥೇ ಮೇನಂ ಪ್ರಹಿಣು ತಾತ್ಪಿತೃಭ್ಯಃ ॥ ಶೃತಂ ಯದಾ ಕರಸಿ ಜಾತವೇದೋಥೇ ಮೇನಂ ಪರಿದತ್ತಾತ್ಪಿತೃಭ್ಯಃ ॥ ಯದಾ ಗಚ್ಛಾತ್ಯಸುನೀತಿಮೇತಾಮಥಾ ದೇವಾನಾಂ ವಶನೀರ್ಭವಾತಿ ॥ ಸೂರ್ಯಂ ಚಕ್ಷುರ್ಗಚ್ಛತು ವಾತಮಾತ್ಮಾ ದ್ಯಾಂ ಚ ಗಚ್ಛ ಪೃಥಿವೀಂ ಚ ಧರ್ಮಣಾ ॥ ಅಪೋ ವಾಗಚ್ಛಯದಿ ತತ್ರ ತೇ ಹಿತಮೋಷಧೀಷು ಪ್ರತಿತಿಷ್ಠಾ ಶರೀರೈಃ ॥ ಅಜೋ ಭಾಗಸ್ತಪಸಾ ತಂ ತಪಸ್ವ ತಂ ತೇ ಶೋಚ-ಸ್ತಪತು ತಂ ತೇ ಅರ್ಚಿಃ ॥ ಯಾಸ್ತೇ ಶಿವಾಸ್ತನ್ವೋ ಜಾತವೇದಸ್ತಾಭಿರ್ವಹೈನಂ ಸುಕೃತಾಮು ಲೋಕಂ ॥ ಅವಸೃಜ ಪುನರಗ್ನೇ ಪಿತೃಭ್ಯೋ ಯಸ್ತ ಆಹುತ-ಶ್ಚರತಿ ಸ್ವಧಾಭಿಃ ॥ ಆಯುರ್ವಸಾನಃ ಉಪವೇತು ಶೇಷಃಸಂಗಚ್ಛತಾಂ ತನ್ವಾ

ಜಾತವೇದಃ ॥ ಯತ್ತೇ ಕೃಷ್ಣಃಶಕುನ ಆತುತೋದ ಪಿಪೀಲಸ್ಸರ್ಪ ಉತ ವಾ ಶ್ವಾಪದಃ ॥ ಅಗ್ನಿಷ್ಟದ್ವಿಶ್ವಾದಗದಂ ಕೃಣೋತು ಸೋಮಶ್ಚ ಯೋ ಬ್ರಾಹ್ಮಣಾಂಽ ಆವಿವೇಶ ॥ ಪೂಷಾತ್ವೇತಿ ಚತಸೃಣಾಂ ದೇವಶ್ರವಾಃ ಪೂಷಾ ತ್ರಿಷ್ಟುಪ್ ॥ ದಹ್ಯಮಾನಪ್ರೇತಾನುಮಂತ್ರಣೇ ವಿನಿಯೋಗಃ ॥ ಓಂ ಪೂಷಾ ತ್ವೇತಶ್ಚ್ಯಾವ-ಯತು ಪ್ರ ವಿದ್ವಾನನಷ್ಟ ಪಶುರ್ಭುವನಸ್ಯ ಗೋಪಾಃ ॥ ಸ ತ್ವೈತೇಭ್ಯಃ ಪರಿದದತ್ಪಿತೃಭ್ಯೋಽಗ್ನಿರ್ದೇವೇಭ್ಯಸ್ಸುವಿದತ್ರಿಯೇಭ್ಯಃ ॥ ಆಯುರ್ವಿಶ್ವಾಯುಃ ಪರಿಪಾಸತಿ ತ್ವಾ ಪೂಷಾ ತ್ವಾ ಪಾತು ಪ್ರಪಥೇ ಪುರಸ್ತಾತ್ ॥ ಯತ್ರಾಸತೇ ಸುಕೃತೋ ಯತ್ರ ತೇ ಯಯುಸ್ತತ್ರ ತ್ವಾ ದೇವಸ್ಸವಿತಾ ದಧಾತು ॥ ಪೂಷೇಮಾ ಆಶಾಽ ಅನುವೇದ ಸರ್ವಾಸ್ಸೋಽ ಅಸ್ಮಾ ಅಭಯತಮೇನನೇಷತ್ ॥ ಸ್ವಸ್ತಿದಾಽ ಆಘೃಣಿಸ್ಸರ್ವವೀರೋ ಪ್ರಯಚ್ಛನ್ ಪುರ ಏತು ಪ್ರಜಾನನ್ ॥ ಪ್ರಪಥೇ ಪಥಾಮಜನಿಷ್ಟ ಪೂಷಾ ಪ್ರಪಥೇ ದಿವಃ ಪ್ರಪಥೇ ಪೃಥಿವ್ಯಾಃ ॥ ಉಭೇ ಅಭಿ ಪ್ರಿಯತಮೇ ಸಧಸ್ಥ ಆ ಚ ಪರಾ ಚ ಚರತಿ ಪ್ರಜಾನನ್ ॥ ಉಪಸರ್ಪೇತಿ ಚತಸೃಣಾಂ ಸಂಕುಸುಕಃ ಪಿತೃಮೇಧಾಸ್ತ್ರಿಷ್ಟುಪ್ ದ್ವಿತೀಯಾ ಪ್ರಸ್ತಾರಪಂಕ್ತಿಃ ಚತುರ್ಥೀ ಜಗತೀ ದಹ್ಯಮಾನಪ್ರೇತಾನುಮಂತ್ರಣೇ ವಿನಿಯೋಗಃ ॥ ಓಂ ಉಪಸರ್ಪ ಮಾತರಂ ಭೂಮಿಮೇತಾ ಮುರು ವ್ಯಚಸಂ ಪೃಥಿವೀಂ ಸುಶೇವಾಂ ॥ ಊರ್ಣಮ್ರದಾ ಯುವತಿರ್ದಕ್ಷಿಣಾವತ ಏಷಾ ತ್ವಾ ಪಾತು ನಿರ್‌ಋತೇರುಪಸ್ಥಾತ್ ॥ ಉಚ್ ಛ್ವಂಚಸ್ವ ಪೃಥಿವಿ ಮಾ ನಿಬಾದಥಾ-ಸ್ಸೂಪಾಯನಾಸ್ಮೈ ಭವ ಸೂಪವಂಚನಾ ॥ ಮಾತಾ ಪುತ್ರಂ ಯಥಾಸಿಚಾ-ಭ್ಯೇನಂ ಭೂಮ ಊರ್ಣುಹಿ ॥ ಉಚ್ಛ್ವಂ ಚ ಮಾನಾ ಪೃಥಿವೀ ಸುತಿಷ್ಠತು ಸಹಸ್ರಂ ಮಿತ ಉಪ ಹಿ ಶ್ರಯಂತಾಂ ॥ ತೇ ಗೃಹಾಸೋ ಘೃತಶ್ಚುತೋ ಭವಂತು ವಿಶ್ವಾಹಾಸ್ಮೈ ಶರಣಾಸ್ಸಂತ್ವತ್ರ ॥ ಉತ್ತೇ ಸ್ತಭ್ನಾಮಿ ಪೃಥಿವೀಂ ತ್ವತ್ಪರೀಮಂ ಲೋಗಂ ನಿದಧನ್ಮೋಽ ಅಹಂ ರಿಷಂ ॥ ಏತಾಂ ಸ್ಥೂಣಾಂ

ಪಿತರೋ ಧಾರಯಂತು ತೇತ್ವಾ ಯಮಸ್ಸಾದನಾ ತೇ ಮಿನೋತು ॥ ಸೋಮ ಏಕೇಭ್ಯ ಇತಿ ಪಂಚಾನಾಂ ಯಮೋ ಭಾವವೃತ್ತೋಽನುಷ್ಟುಪ್ ॥ ದಹ್ಯಮಾನ ಪ್ರೇತಾನುಮಂತ್ರಣೇ ವಿನಿಯೋಗಃ ॥ ಓಂ ಸೋಮ ಏಕೇಭ್ಯಃ ಪವತೇ ಘೃತಮೇಕ ಉಪಾಸತೇ ॥ ಯೇಭ್ಯೋ ಮಧು ಪ್ರಧಾವತಿ ತಾಂಶ್ಚಿದೇವಾಪಿ ಗಚ್ಛತಾತ್ ॥ ತಪಸಾ ಯೇ ಅನಾಧೃಷ್ಯಾಸ್ತಪಸಾ ಯೇ ಸ್ವರ್ಯಯುಃ ॥ ತಪೋ ಯೇ ಚಕ್ರಿರೇ ಮಹಸ್ತಾಂಶ್ಚಿದೇವಾಪಿ ಗಚ್ಛತಾತ್ ॥ ಯೇ ಯುಧ್ಯಂತೇ ಪ್ರಧನೇಷು ಶೂರಾಸೋ ಯೇ ತನೂತ್ಯಜಃ ॥ ಯೇ ವಾ ಸಹಸ್ರದಕ್ಷಿಣಾಸ್ತಾಂಶ್ಚಿ ದೇವಾಪಿ ಗಚ್ಛತಾತ್ ॥ ಯೇ ಚಿತ್ಪೂರ್ವ ಋತಸಾಪಽ ಋತಾವಾನಽ ಋತಾವೃಧಃ ॥ ಪಿತೄನ್ತಪಸ್ವ ತೋ ಯಮ ತಾಂಶ್ಚಿದೇವಾಪಿ ಗಚ್ಛತಾತ್ ॥ ಸಹಸ್ರಣೀಥಾಃ ಕವಯೋ ಯೇ ಗೋಪಾಯಂತಿ ಸೂರ್ಯಂ ॥ ಋಷೀನ್ತಪ-ಸ್ವತೋ ಯಮ ತಪೋಜಾಽ ಅಪಿ ಗಚ್ಛತಾತ್ ॥ ಉರೂಣಸಾವಿತ್ಯಸ್ಯ ಯಮಶ್ವಾನೌ ತ್ರಿಷ್ಟುಪ್ ॥ ದಹ್ಯಮಾನಪ್ರೇತಾನುಮಂತ್ರಣೇ ವಿನಿಯೋಗಃ ॥ ಓಂ ಉರೂಣಸಾ ವಸುತೃಪಾ ಉದುಂಬಲೌ ಯಮಸ್ಯ ದೂತೌ ಚರತೋ ಜನಾಽ ಅನು ॥ ತಾವಸ್ಮಭ್ಯಂ ದೃಶಯೇ ಸೂರ್ಯಾಯ ಪುನರ್ದಾತಾ ವಸುಮ-ದ್ಯೇಹ ಭದ್ರಂ ॥ ಏತೈರ್ಮಂತ್ರೈರ್ದಹ್ಯಮಾನಪ್ರೇತಮನುಮಂತ್ರ್ಯ ॥

ತತಃ ಕರ್ತಾ ಸವ್ಯೇಂಸೇ ಜಲಪೂರ್ಣಂ ಕುಂಭಂ ಗೃಹೀತ್ವಾ ಶ್ಮಶಾನ-ಸ್ಥಿತಂ ನಾತಿಸ್ಥೂಲಮಸ್ಫುಟಿತಂ ಶ್ಲಕ್ಷ್ಣಮಶ್ಮಾನಮಾದಾಯ ಕುಂಭಸ್ಯ ಪೃಷ್ಠ-

---

ತೊಡಗಿ "ಉರೂಣಸಾ ವಸುತೃಪಾ...." ಎಂಬಲ್ಲಿ ವರೆಗಿನ ಮಂತ್ರಗಳನ್ನು ಹೇಳುತ್ತ ಶವದ ಮೇಲೆ ತುಪ್ಪ ಬೆರೆಸಿದ ಎಳ್ಳುಗಳನ್ನು ಚೆಲ್ಲುತ್ತಿರಬೇಕು.

ಈ ಮಂತ್ರಗಳನ್ನು ಜಪಿಸಿ ಆದ ಮೇಲೆ ಕರ್ತೃವು ಎಡ ಹೆಗಲಿನ ಮೇಲೆ ನೀರು ತುಂಬಿದ ಮಣ್ಣಿನ ಕೊಡವನ್ನು ಇಟ್ಟುಕೊಂಡು ಶ್ಮಶಾನದಲ್ಲಿದ್ದ ತುಂಬ ದೊಡ್ಡದಲ್ಲದ, ಒಡೆದು ಛಿದ್ರವಾಗದ, ಒಂದು ನುಣುಪಾದ ಕಲ್ಲನ್ನು ತೆಗೆದು ಅದರಿಂದ ಕೊಡದ ಹಿಂಭಾಗದಲ್ಲಿ ಒಂದು ತೂತು ಮಾಡಿ ಪ್ರೇತದ ಪಾದದೇಶದಿಂದ ತೊಡಗಿ ಪುನಃ ಅಲ್ಲಿಯ ವರೆಗೆ ಜಲ

ಭಾಗೇ ತೇನಾಶ್ಮನಾ ಛಿದ್ರಂ ಕೃತ್ವಾ ಪ್ರೇತಪಾದದೇಶಾದಾರಭ್ಯ ತತ್ಪರ್ಯಂ-ತಮಪ್ರದಕ್ಷಿಣಂ ಪರಿವ್ರಜನ್ ಜಪೇತ್ ॥ ವಾತಾಸ್ತೇ ವಾಂತು ಪಥಿ ಪುಣ್ಯ-ಗಂಧಾ ಮನಃಸುಖಾ ಗಾತ್ರಸುಖಾನುಲೋಮಾಃ ॥ ತ್ವಚಃಸುಖಾ ಮಾಂಸ-ಸುಖಾ ಅಸ್ಥಿಸೌಖ್ಯಾ ವಹಂತು ತ್ವಾ ಮರುತಃ ಸುಕೃತಾಂ ಯತ್ರ ಲೋಕಾಃ ॥ ಇಮಾ ಆಪೋ ಮಧುಮತ್ಯೋಽಸ್ಮಿಂಸ್ತೇ ಲೋಕ ಉಪದುಹ್ಯಂತಾಮಕ್ಷೀಯ-ಮಾಣಾಃ ಸ್ವಧಾ ನಮಃ ॥ ಇತ್ಯೇಕವಾರಂ ಪರಿಕ್ರಮ್ಯ ಪಾದದೇಶ ಏವ ಸ್ಥಿತ್ವಾ ತೇನೈವಾಶ್ಮನಾ ಕುಂಭೇ ದ್ವಿತೀಯಛಿದ್ರಂ ಕೃತ್ವಾ ವ್ರಜನ್ ಜಪೇತ್ ॥ ವಾತಾಸೇ ವಾಂತು ....... ॥ ಇಮಾ ಆಪೋ ಮಧುಮತ್ಯೋಂತರಿಕ್ಷೇ ತೇ ಲೋಕ ಉಪದುಹ್ಯಂತಾಮಕ್ಷೀಯಮಾಣಾಃ ಸ್ವಧಾ ನಮಃ ॥ ಪುನಸ್ತಥೈವ ತೃತೀಯಛಿದ್ರಂ ಕೃತ್ವಾ ಪೂರ್ವವದ್ವ್ರಜನ್ ಜಪೇತ್ ॥ ವಾತಾಸ್ತೇ ವಾಂತು........ ॥ ಇಮಾ ಆಪೋ ಮಧುಮತ್ಯಃ ಸ್ವರ್ಗೇ ತೇ ಲೋಕ ಉಪದುಹ್ಯಂತಾಮಕ್ಷೀಯಮಾಣಾಃ ಸ್ವಧಾ ನಮಃ ॥ ಏವಂ ತ್ರಿಃ ಪರಿಕ್ರಮ್ಯ ಪ್ರೇತಶಿರೋದೇಶೇ ಕುಂಭಂ ಸ್ಫೋಟಯಿತ್ವಾ ಶಿಲಾಹಸ್ತಃ ಕರ್ತಾ ॥ ಇಮೇ ಜೀವಾಃ ಸಂಕುಸುಕೋ ಮೃತ್ಯುಸ್ತ್ರಿಷ್ಟುಪ್ ॥ ಸವ್ಯಮಾವೃತ್ಯಗಮನೇ ವಿನಿ-ಯೋಗಃ ॥ ಇಮೇ ಜೀವಾ ವಿಮೃತೈರಾವವೃತ್ರನ್ನಭೂದ್ಭದ್ರಾ ದೇವಹೂ-ತಿರ್ನೋಽ ಅದ್ಯ ॥ ಪ್ರಾಂಚೋ ಅಗಾಮ ನೃತಯೇಹಸಾಯದ್ರಾಘೀಯ

---

ಧಾರೆಯನ್ನೆರೆಯುತ್ತ **"ವಾತಾಸ್ತೇ ವಾಂತು ........"** **"ಇಮಾ ಆಪೋ........."** ಎಂಬ ಮಂತ್ರಗಳನ್ನು ಹೇಳುತ್ತ ಅಪ್ರದಕ್ಷಿಣೆಯಾಗಿ ಬರಬೇಕು. ಪುನಃ ಅದೇ ಕಲ್ಲಿನಿಂದ ಎರಡನೇ ತೂತನ್ನು ಮಾಡಿ ಮೊದಲಿನಂತೆಯೇ **"ವಾತಾಸ್ತೇ ವಾಂತು............"** ಮತ್ತು **"ಇಮಾ ಆಪೋ............."** ಎಂಬ ಮಂತ್ರಗಳನ್ನು ಹೇಳುತ್ತ ಎರಡನೆಯ ಸುತ್ತನ್ನೂ ಹಾಗೆಯೇ ಮೂರನೇ ತೂತನ್ನು ಮಾಡಿ ಮೂರನೆಯ ಪ್ರದಕ್ಷಿಣೆಯನ್ನೂ ಮಾಡಬೇಕು. ಎರಡನೆ ಮತ್ತು ಮೂರನೆಯ ಪ್ರದಕ್ಷಿಣೆಯಲ್ಲಿ **"ಇಮಾ ಆಪೋ..."** ಎಂಬ ಮಂತ್ರವಲ್ಲಿರುವ ವ್ಯತ್ಯಾಸವನ್ನು ಗಮನಿಸಬೇಕು. ಬಳಿಕ ಪುರುಷನಾದರೆ ಶಿರೋದೇಶದಲ್ಲೂ, ಸ್ತ್ರೀಯಾದರೆ ಪಾದದೇಶದಲ್ಲೂ ಎತ್ತರದಿಂದ ನೆಲಕ್ಕೆ ಹಾಕಿ ಆ ಕೊಡವನ್ನು ಪೂರ್ಣವಾಗಿ ಒಡೆಯಬೇಕು.

**ಆಯುಃ ಪ್ರತರಂ ದಧಾನಾಃ ॥ ಇತಿ ಮಂತ್ರಂ ಜಪೇತ್ ॥ ತತಃ ಕರ್ತೃಸಹಿತಾಃ ಸವ್ಯಾವೃತ್ತಾ ಭೂತ್ವಾ ಪೃಷ್ಠತೋ ನ ವೇಕ್ಷಮಾಣಾಃ ಕನಿಷ್ಠಪೂರ್ವಾಃ ಕರ್ತೃ ಪುರಃಸರಂ ಸರ್ವೇ ನಿರ್ಗಚ್ಛೇಯುಃ ॥**

**॥ ಇತಿ ಚಿತಿಪೂರಣಂ ॥**

---

ಆಮೇಲೆ ತೂತು ಮಾಡಿದ ಆ ಕಲ್ಲನ್ನು ಕೈಯಲ್ಲಿ ಹಿಡಿದು ತೆಂಕುಮುಖವಾಗಿ **"ಇಮೇ ಜೀವಾಃ...."** ಎಂಬ ಮಂತ್ರವನ್ನು ಹೇಳುತ್ತ ಹಿಂತಿರುಗಿ ನೋಡದೆ ಸಣ್ಣವರನ್ನು ಮುಂದಿಟ್ಟುಕೊಂಡು ಅಪ್ರದಕ್ಷಿಣೆಯಾಗಿ ಅಲ್ಲಿಂದ ಹೋಗಬೇಕು.

॥ ಚಿತಿಪೂರಣಂ ಸಮಾಪ್ತ ॥

## ೮

# ॥ ತಿಲಾಂಜಲಿದಾನಂ ॥

**ಶ್ರೀಃ ॥ ತತೋ ಯತ್ರೋದಕಮವಹತ್ ಸ್ಥಿರಂ ಭವತಿ ತತ್ರ ಸರ್ವೇ ಗತ್ವಾ ಕಪಾಲಸ್ಫೋಟನಾನಂತರಂ ಸಪಿಂಡಾಃ ಸೋದಕಾಃ ಸಗೋತ್ರಿಣಃ ಸ್ತ್ರಿಯಶ್ಚಾಪಿ ಸರ್ವೇ ಮುಕ್ತಕೇಶಾ ಏಕವಾಸಸೋ ದಕ್ಷಿಣಾಮುಖಾಃ ಮಹಾ-ಜಲೇ ಶರೀರಮಲಂ ಪೂರ್ವಪರಿಹಿತಂ ವಸ್ತ್ರಂ ಚ ಪ್ರಕ್ಷಾಲ್ಯ ಪುನಸ್ತತ್ಪರಿಧಾಯ ಸರ್ವೇ ಏಕದಾ ನಿಮಜ್ಜ್ಯ ಪುನಃ ಕೈಶ್ಚಿದುಕ್ತೇನ ಅಪನ ಇತಿ ಮಂತ್ರೇಣ ವಾಮ-ಹಸ್ತೇನ ಅನಾಮಿಕಯಾ ಜಲಾವಲೋಡನಂ ಕೃತ್ವಾ ಸಚೈಲಂ ಸ್ನಾತ್ವಾಚಮ್ಯೋ-ತ್ತೀರ್ಯ ಯೇನಾಶ್ಮನಾ ಕುಂಭಛಿದ್ರಾಣಿ ಕೃತಾನಿ ತಮಶ್ಮಾನಂ ಶುಚೌ ತೀರೇ ದಕ್ಷಿಣಾಗ್ರೇಷು ದರ್ಭೇಷು ಸ್ಥಾಪಯಿತ್ವಾ ತಸ್ಯೋಪರಿ ಸತಿಲಮೇಕೈಕಂ ಜಲಾಂಜಲಿಂ ದಕ್ಷಿಣಹಸ್ತಪಿತೃತೀರ್ಥೇನ ಸವ್ಯೋತ್ತರಪಾಣಿನಾ ಯುಗಪದ-ಯುಗ್ಮಾ ದದ್ಯುಃ ॥ ಅಪಸವ್ಯೇನ ಅಮುಕಗೋತ್ರ ಅಮುಕಪ್ರೇತೈತತ್ತೇ ತಿಲೋದಕಮುಪತಿಷ್ಠತಾಮಿತಿ ॥ ಬ್ರಹ್ಮಚಾರೀ ತು ನ ದದ್ಯಾತ್ ॥ ಶವವಾಹ-ಕೈಶ್ಚಾಂಜಲಿರ್ದೇಯಃ ॥ ಅನ್ಯೇ ಸುಹೃದೋ ದದ್ಯುರ್ನವಾ ॥ ದಾನೇಪಿ ನಾಶ್ಮ-ನಿಯಮಃ ॥ ಪತಿತವ್ರಾತ್ಯಾದಯೋ ನ ದದ್ಯುಃ ॥ ತತೋಮುಕಗೋತ್ರಸ್ಯ**

---

ಬಳಿಕ ನೀರು ಕಟ್ಟಿ ನಿಂತ ದೊಡ್ಡ ಮಡುವಿನಲ್ಲಿ ಕರ್ತೃವೂ, ಸಪಿಂಡರೂ, ಸೋದಕರೂ, ಸಗೋತ್ರಿಗಳೂ, ಹೆಂಗಸರೂ ಕೂಡ ಜುಟ್ಟು ಬಿಡಿಸಿ ಒಂದೊಂದೇ ಬಟ್ಟೆಯನ್ನುಟ್ಟುಕೊಂಡು ತೆಂಕುಮುಖವಾಗಿ ಮೈಯನ್ನೂ, ಮೊದಲು ಉಟ್ಟ ಬಟ್ಟೆಯನ್ನೂ ತೊಳೆದು, ಪುನಃ ಆ ಬಟ್ಟೆಯನ್ನೇ ಉಟ್ಟುಕೊಂಡು ಎಲ್ಲರೂ ನೀರಿನಲ್ಲಿ ಒಟ್ಟಿಗೇ ಮುಳುಗಿ, ಬ್ರಾಹ್ಮಣರು, "**ಅಪನಃ ಶೋಶುಚದಘಂ.....**" ಎಂಬ ಮಂತ್ರವನ್ನು ಹೇಳುತ್ತಿರುವಾಗ ಎಡಗೈಯ ಅನಾಮಿಕೆಯಿಂದ ಜಲಾವಲೋಡನವನ್ನು ಮಾಡಿ ಸಚೈಲಸ್ನಾನ, ಆಚಮನಗಳನ್ನು ಮಾಡಿ ನೀರಿನಿಂದ ಮೇಲೆ ಬರಬೇಕು. ಆಮೇಲೆ ಶುದ್ಧವಾದ ಸ್ಥಳದಲ್ಲಿ ತೆಂಕುತುದಿಯಾಗಿ ಹರಡಿದ ದರ್ಭೆಗಳ ಮೇಲೆ ಶ್ಮಶಾನದಲ್ಲಿ ಕೊಡಕ್ಕೆ ತೂತುಮಾಡಿದ ಪ್ರೇತಶಿಲೆಯನ್ನಿಟ್ಟು ಎಡಕೈಯಿಂದೊಡಗೂಡಿದ ಬಲಕೈಯ ಪಿತೃತೀರ್ಥ (ತರ್ಜನೀ ಅಂಗುಷ್ಠಗಳ ಮಧ್ಯಭಾಗ)ದಲ್ಲಿ ಎಲ್ಲರೂ ಒಟ್ಟಿಗೆ ಅಯುಗ್ಮರಾಗಿ ಅಪಸವ್ಯದಿಂದ "**ಅಮುಕಗೋತ್ರ......ತಿಲೋದಕಮುಪತಿಷ್ಠತಾಂ**" ಎಂದು ಒಂದು ಸಲ ತಿಲಾಂಜಲಿಯನ್ನು ಕೊಡಬೇಕು. ಬ್ರಹ್ಮಚಾರಿಯು ತಾಯಿ, ತಂದೆ, ಗುರು, ಆಚಾರ್ಯ, ತಾಯಿಯ ತಂದೆ, ತಾಯಿಯ ತಾಯಿ-ಇವರಿಗೆ ಮಾತ್ರ ತಿಲಾಂಜಲಿಯನ್ನು ಕೊಡಬಹುದು. ಇತರರಿಗೆ ಕೊಡದು. ಶವವಾಹಕರೇ ಮೊದಲಾದ ಸಪಿಂಡರೂ, ಸೋದಕರೂ ಈ ತಿಲಾಂಜಲಿಯನ್ನು

**ಅಮುಕಪ್ರೇತಸ್ಯ ದಾಹಜನಿತತೃಷೋಪಶಮನಾರ್ಥಂ ಇದಂ ತೇ ವಾಸೋದಕ ಮುಪತಿಷ್ಠತಾಮಿತಿ ಕರ್ತಾಶ್ಮನಿ ಉತ್ತರೀಯೋದಕಂ ದದ್ಯಾತ್ ॥ ತತಃ ಕರ್ತೃ-ಭಿನ್ನಾಃ ಸರ್ವೇ ಸಪಿಂಡಾದಯಃ ಶವಸ್ಪರ್ಶಿನಶ್ಚಾನ್ಯಾನಿ ವಾಸಾಂಸಿ ಪರಿಧಾಯ ಆರ್ದ್ರಾಣ್ಯಧೋದಶಾನಿ ಸಕೃನ್ನಿಷ್ಪೀಡ್ಯ ಶೋಷಣಾರ್ಥಮುದಗ್ದಶಾನಿ ನಿಕ್ಷಿಪ್ಯ ದಿನದಾಹೇ ಆತಾರಕೋದಯಾತ್ ರಾತ್ರಿದಾಹೇ ಆದಿತ್ಯೋದಯಾತ್ತತ್ರೈವ ವಸೀರನ್ ॥ ಶವವಾಹಕಾನಾಮಪ್ಯೇವಂ ನಿಯಮಃ ॥**

**॥ ಇತಿ ತಿಲಾಂಜಲಿದಾನಂ ॥**

---

ಕೊಡಬೇಕು. ಸ್ನೇಹಿತರು ಕೊಟ್ಟರೂ ಕೊಡದಿದ್ದರೂ ಆಗಬಹುದು. ಪ್ರೇತಶಿಲೆಗೇ ಕೊಡಬೇಕೆಂಬ ನಿಯಮವೂ ಇಲ್ಲ. ಪತಿತರೂ, ಸಂಸ್ಕಾರ ಹೀನರೂ ಕೊಡಲೇ ಬಾರದು. ನಂತರ ಕರ್ತೃವು **"ಅಮುಕಗೋತ್ರಸ್ಯ........ವಾಸೋದಕಮುಪತಿಷ್ಠತಾಂ"** ಎಂದು ತನ್ನ ಉತ್ತರೀಯವನ್ನು ನೀರಿನಲ್ಲಿ ಅದ್ದಿ ಹಿಂಡಿ ಶಿಲೆಯ ಮೇಲೆ ನೀರನ್ನು ಕೊಡಬೇಕು. ಬಳಿಕ ಇತರರೆಲ್ಲರೂ ಬೇರೆ ಬಟ್ಟೆಗಳನ್ನು ಉಟ್ಟುಕೊಂಡು, ಒದ್ದೆಬಟ್ಟೆಗಳನ್ನು ಹಿಂಡಿ ಒಣಗಿಸಿ, ಹಗಲು ದಹನವಾದರೆ ನಕ್ಷತ್ರಗಳು ಕಾಣಿಸುವ ವರೆಗೂ, ರಾತ್ರಿ ದಹನವಾದರೆ ಸೂರ್ಯೋದಯದ ವರೆಗೂ ಅಲ್ಲಿಯೇ ಇರಬೇಕು.

॥ ತಿಲಾಂಜಲಿದಾನಂ ಸಮಾಪ್ತ ॥

# ॥ ಪ್ರಥಮದಿನವಿಧಿಃ ॥

ಶ್ರೀಃ ॥ ಕರ್ತಾ ತು ಆರ್ದ್ರವಸ್ತ್ರಸ್ತಸ್ಮಿನ್ ದಿನೇ ತತ್ಕಾಲ ಏವ ಅನ್ಯದಿನೇಷು ವಾ ಪೂರ್ವಾಹ್ಣ ಏವ ಪ್ರಾಗುದೀಚ್ಯಾಂ ಗ್ರಾಮಾದ್ಬಹಿಃ ಸರಿತ್ಸಂಗಮೇ ಮಹಾಜಲಸನ್ನಿಧೌ ವಾ ಗತ್ವಾ ಭೂಮಿಂ ಸಂಶೋಧ್ಯ ತತ್ರ ದಶಾಹಾಂತಂ ಕರ್ಮ ಕುರ್ಯಾತ್ ॥ ಸ್ನಾತ್ವಾ ಆರ್ದ್ರೇ ನವೀನೇ ವಾಸಸೀ ಧೃತ್ವಾ ಆಚಮ್ಯ ದೇಶಕಾಲೌ ಸ್ಮೃತ್ವಾ ಸೋತ್ತರೀಯಃ ಪ್ರಾಚೀನಾವೀತೀ ದಕ್ಷಿಣಾಮುಖಃ ಅಮುಕಗೋತ್ರಸ್ಯಾಮುಕಪ್ರೇತಸ್ಯ ಪಿತ್ರಾದೇಃ (ಮಾತ್ರಾದೌ ತು ಅಮುಕಗೋತ್ರಾಯಾ ಅಮುಕದೇವೀದಾಯಾಃ ಪ್ರೇತಾಯಾಃ) ಪ್ರೇತತ್ವ-ನಿವೃತ್ತ್ಯಾ ಉತ್ತಮಲೋಕಪ್ರಾಪ್ತ್ಯರ್ಥಂ ಪ್ರಥಮದಿನವಿಧಿಂ ಕರಿಷ್ಯೇ ಇತಿ ಸಂಕಲ್ಪ್ಯ ॥ ತಾಮ್ರಾದಿಮಯಂ ನವಂ ಭಾಂಡಂ ಸಂಶೋಧ್ಯ ತಸ್ಮಿನ್ ಪಿಂಡಾರ್ಥಂ ಸಕೃತ್ಪ್ರಕ್ಷಾಲಿತಾನ್ ಪ್ರಸೃತಿಪರಿಮಿತಾಂಸ್ತಂಡುಲಾನ್ ಸೋದಕಾ-ನ್ನಿಧಾಯ ತತ್ಪಾತ್ರಂ ಲೌಕಿಕಾಗ್ನಾವಧಿಶ್ರಿತ್ಯ ಸ್ವಯಂ ಚರುಂ ಶ್ರಪಯಿತ್ವಾ ಮೃತ್ತಿಕಾಸ್ನಾನಾದಿ ಕುರ್ಯಾತ್ ॥ ದೇಶಕಾಲೌ ಸಂಕೀರ್ತ್ಯ ಪ್ರಾಚೀನಾವೀತೀ ಪಿತ್ರಾದೇರಮುಕಗೋತ್ರಸ್ಯ ಅಮುಕಪ್ರೇತಸ್ಯ ಪ್ರೇತತ್ವನಿವೃತ್ತ್ಯಾ ಉತ್ತಮ-ಲೋಕಾವಾಪ್ತ್ಯರ್ಥಂ ಪ್ರಥಮೇಹನಿ ದಾಹಜನಿತ ತಾಪೋಪಶಮನಾರ್ಥಂ

---

**ಮೊದಲನೆಯ ದಿನದ ವಿಧಿ:-** ಕರ್ತೃವು ಊರಿನ ಹೊರಗೆ ಪೂರ್ವ ಅಥವಾ ಉತ್ತರದಿಕ್ಕಿನಲ್ಲಿರುವ ಹೊಳೆ ಅಥವಾ ನೀರು ತುಂಬಿದ ಆಳವಾದ ಮಡುವಿನಲ್ಲಿ ಸ್ನಾನ ಮಾಡಿ ಒಪ್ಪೆ ಮಾಡಿದ ಎರಡು ಹೊಸಬಟ್ಟೆಗಳನ್ನು ಧರಿಸಿ ಆಚಮನ ಪ್ರಾಣಾಯಾಮ ದೇಶಕಾಲ ಸಂಕೀರ್ತನಾದಿಗಳನ್ನು ಮಾಡಿ ಅಪಸವ್ಯದಿಂದ ತೆಂಕುಮುಖವಾಗಿ, "**ಅಮುಕಗೋತ್ರಸ್ಯ...... ಪ್ರಥಮದಿನವಿಧಿಂ ಕರಿಷ್ಯೇ**" ಎಂದು ಸಂಕಲ್ಪ ಮಾಡಬೇಕು. ಬಳಿಕ ತಾಮ್ರದ ಒಂದು ಹೊಸ ಪಾತ್ರೆಯಲ್ಲಿ ಒಂದು ಮುಷ್ಟಿಯಷ್ಟು ತೊಳೆದ ಅಕ್ಕಿಯನ್ನು ಹಾಕಿ ಬೇಯಿಸಿ ಚರುವನ್ನು ತಯಾರಿಸಬೇಕು. ಮತ್ತೊಮ್ಮೆ ದೇಶಕಾಲ ಸ್ಮರಣೆಯನ್ನು ಮಾಡಿ, "**ಪಿತ್ರಾದೇ........ ಮೃತ್ತಿಕಾಸ್ನಾನಾದಿ ಕರಿಷ್ಯೇ**" ಎಂದು ಸಂಕಲ್ಪ ಮಾಡಿ, "**ಉದ್ದುತ್ಯಂ ಜಾತವೇದಸಂ...**" ಎಂಬ

**ಮೃತ್ತಿಕಾಸ್ನಾನಾದಿ ಕರಿಷ್ಯೇ ಇತಿ ಸಂಕಲ್ಪ್ಯ ॥ ಉದುತ್ಯಂ ಜಾತವೇದಸಂ ದೇವಂ ವಹಂತಿ ಕೇತವಃ ॥ ದೃಶೇ ವಿಶ್ವಾಯ ಸೂರ್ಯಂ ॥ ಇತಿ ಶುದ್ಧಮೃದಮಾದಾಯ ॥ ಆ ಕೃಷ್ಣೇನ ರಜಸಾ ವರ್ತಮಾನೋ ನಿವೇಶಯನ್ನಮೃತಂ ಮರ್ತ್ಯಂ ಚ ॥ ಹಿರಣ್ಯಯೇನ ಸವಿತಾ ರಥೇನಾ ದೇವೋ ಯಾತಿ ಭುವನಾನಿ ಪಶ್ಯನ್ ॥ ಇತಿ ಸೂರ್ಯಾಯ ದರ್ಶಯಿತ್ವಾ ॥ ಸಹಸ್ರಶೀರ್ಷಾಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ ॥ ಸ ಭೂಮಿಂ ವಿಶ್ವತೋ ವೃತ್ವಾ ತ್ಯತಿಷ್ಠದ್ದಶಾಂಗುಲಂ ॥ ಇತಿ ಶಿರಸಿ ವಿಲಿಪ್ಯ ॥ ಅಂಗಾದಂಗಾಲ್ಲೋಮ್ನೋಲೋಮ್ನೋ ಜಾತಂ ಪರ್ವಣಿ ಪರ್ವಣಿ ॥ ಯಕ್ಷ್ಮಂ ಸರ್ವಸ್ಮಾದಾತ್ಮನಸ್ತಮಿದಂ ವಿವೃಹಾಮಿತೇ ॥ ಇತಿ ಸರ್ವಾಂಗೇ ಲಿಂಪೇತ್ ಸ್ನಾತ್ವಾ ಆಚಮ್ಯ ಪುನರ್ದ್ವಿವಾರಂ ಕಾರ್ಯಂ ॥ ತತಃ ಆಚಮ್ಯ ಅದ್ಯೇತ್ಯಾದಿ ಪ್ರಾಚೀನಾವೀತೀ ಪಿತ್ರಾದೇರಮುಕಗೋತ್ರಸ್ಯ ಅಮುಕ ಪ್ರೇತಸ್ಯ ದಾಹಜನಿತತೃಷೋಪಶಮನಾರ್ಥಂ ತಿಲತೋಯಾಂಜಲಿದಾನಂ ಕರಿಷ್ಯೇ ಇತಿ ಸಂಕಲ್ಪ್ಯ ಕುಶೋಪರ್ಯಶ್ಮಾನಂ ಸ್ಥಾಪಯಿತ್ವಾ ತದುಪರಿ ಅಮುಕಗೋತ್ರಾಮುಕಪ್ರೇತ ದಾಹಜನಿತತೃಷೋಪಶಮನಾರ್ಥಂ ಏಷ ತಿಲತೋಯಾಂಜಲಿಸ್ತವೋಪತಿಷ್ಠತಾಂ ॥ ಇತಿ ದಕ್ಷಿಣಾಮುಖಃ ತಿಲತೋಯಾಂಜಲಿಂ ದದ್ಯಾತ್ ॥ ಪ್ರತ್ಯಂಜಲಿಸ್ನಾನಂ ಕಾರ್ಯಂ ॥ ತಿಲಾಂಜಲಿಸಂಖ್ಯಾ ॥ ಪ್ರತಿದಿನಂ**

---

ಮಂತ್ರವನ್ನು ಹೇಳಿ, ಶುದ್ಧವಾದ ಮಣ್ಣನ್ನು ಕೈಯಲ್ಲಿ ತೆಗೆದುಕೊಳ್ಳಬೇಕು. "**ಆಕೃಷ್ಣೇನ....**" ಎಂಬ ಮಂತ್ರದಿಂದ ಅದನ್ನು ಸೂರ್ಯನಿಗೆ ತೋರಿಸಿ, "**ಸಹಸ್ರಶೀರ್ಷಾಪುರುಷಃ.....**" ಎಂಬುದರಿಂದ ತಲೆಗೆ ಲೇಪಿಸಿ, "**ಅಂಗಾದಂಗಾ....**" ಎಂಬ ಮಂತ್ರವನ್ನು ಹೇಳಿ ಸರ್ವಾಂಗಕ್ಕೂ ಲೇಪಿಸಿ ಕೊಂಡು ಸ್ನಾನಮಾಡಿ ಆಚಮನ ಮಾಡಬೇಕು. ಇದೇ ಕ್ರಮದಲ್ಲಿ ಇನ್ನೆರಡು ಸಲ ಹೀಗೇ ಮಾಡಬೇಕು.

ಅನಂತರ ಅಪಸವ್ಯದಲ್ಲಿ ಆಚಮನ ಪ್ರಾಣಾಯಾಮ ದೇಶಕಾಲ ಉಚ್ಚಾರಗಳನ್ನು ಮಾಡಿ "**ಪಿತ್ರಾದೇರಮುಕಗೋತ್ರಸ್ಯ.......ತಿಲತೋಯಾಂಜಲಿದಾನಂ ಕರಿಷ್ಯೇ**" ಎಂದು ಸಂಕಲ್ಪ ಮಾಡಿ, ತ್ರಿಕೋಣಾಕಾರದ ಒಂದು ಕುಂಡವನ್ನು ರಚಿಸಿ, ಅದರ ಮಧ್ಯದಲ್ಲಿ ದರ್ಭೆಯ

**ಏಕೈಕ ಇತಿ ದಶ ॥ ಪ್ರತಿದಿನಂ ತ್ರಯಸ್ತ್ರಯ ಇತಿ ತ್ರಿಂಶತ್ ॥ ಪ್ರತಿದಿನಂ ಏಕೈಕವೃದ್ಧಿರಿತಿ ಪಂಚಪಂಚಾಶತ್ ॥ ಪ್ರತ್ಯಹಂ ದಶ ದಶೇತ್ಯೇವಂ ಶತಂ ಭವತಿ ॥ ಪ್ರತ್ಯಹಂ ದ್ವಯೋತ್ತರಂ ವೃದ್ಧಿರಿತಿ ದಶೋತ್ತರಂ ಶತಂ ॥ ಏಷಾಂ ಪಕ್ಷಾಣಾಂ ಮಧ್ಯೇನ್ಯತಮಪಕ್ಷಾಶ್ರಯಣೇನ ತಿಲಾಂಜಲಿರ್ದೇಯಃ ॥ ಸ್ನಾತ್ವಾ ಆಚಮ್ಯ ತತಃ ಮಧುಸರ್ಪಿಸ್ತಿಲ ಶರ್ಕರಾಪಯೋಮಿಶ್ರಿತಂ ಭಕ್ತಪಿಂಡಂ ಕೃತ್ವಾ ಅಮುಕಗೋತ್ರಸ್ಯಾಮುಕಪ್ರೇತಸ್ಯ ಆದ್ಯೇಹನಿ ಶಿರೋವಯವನಿಷ್ಪತ್ತ್ಯರ್ಥಂ ಏಷ ಪಿಂಡಸ್ತವೋಪತಿಷ್ಠತಾಮಿತಿ ಕುಶೋಪರಿ ಮಹಾಂತಂ ಪಿಂಡಂ ದತ್ವಾ ॥ ಪುನಃ ಅಮುಕಗೋತ್ರಾಮುಕಪ್ರೇತ ಏತತ್ತೇ ತಿಲೋದಕಮುಪತಿಷ್ಠತಾಮಿತಿ ಪಿಂಡೋಪರಿ ಪಿತೃತೀರ್ಥೇನ ತಿಲೋದಕಂ ಪ್ರಕ್ಷಿಪ್ಯ ಪುನರಮುಕೇತ್ಯಾದಿ ಉಪ-ತಿಷ್ಠತಾಮಿತ್ಯಂತೇನ ತುಲಸೀದಲಂ ಭೃಂಗರಾಜಪತ್ರಂ ಧೂಪದೀಪಾದಿ ಚ ದತ್ವಾ ॥ ಅನಾದಿನಿಧನೋ ದೇವಃ ಶಂಖಚಕ್ರಗದಾಧರಃ ॥ ಅಕ್ಷಯ್ಯಃ ಪುಂಡರೀಕಾಕ್ಷಃ ಪ್ರೇತಮೋಕ್ಷಪ್ರದೋಸ್ತು ವೈ ॥ ಇತಿ ಪಠಿತ್ವಾ ॥ ಇದಂ ಪಿಂಡದಾನಂ ಸತಿಲೋದಕಂ ಪ್ರೇತಾಪ್ಯಾಯನಮಸ್ತು ॥ ಅಸ್ತು ಪ್ರೇತಾಪ್ಯಾ-**

---

ಮೇಲೆ ಪ್ರೇತಶಿಲೆಯನ್ನಿಟ್ಟು, ಅದರ ಮೇಲೆ **"ಅಮುಕಗೋತ್ರ....ತವೋಪತಿಷ್ಠತಾಂ"** ಎಂದು ತೆಂಕುಮುಖವಾಗಿ ತಿಲಾಂಜಲಿಯನ್ನು ಕೊಡಬೇಕು. ಪ್ರತಿಯೊಂದು ತಿಲಾಂಜಲಿಯನ್ನು ಕೊಟ್ಟಾದ ಮೇಲೂ ಒಂದು ಸಲ ಸ್ನಾನಮಾಡಬೇಕು.

**ತಿಲಾಂಜಲಿಗಳ ಸಂಖ್ಯೆ:-** ದಿನಕ್ಕೊಂದರಂತೆ ಹತ್ತು, ದಿನಕ್ಕೆ ಮೂರರಂತೆ ಮೂವತ್ತು. ಮೊದಲನೆಯ ದಿನ ಒಂದರಿಂದ ಆರಂಭಿಸಿ, ನಂತರ ಎರಡು, ಮೂರು, ನಾಲ್ಕು ಎಂದು ಒಂದೊಂದಾಗಿ ಹೆಚ್ಚಿಸುತ್ತ ಒಟ್ಟು ಐವತ್ತೈದು, ದಿನಕ್ಕೆ ಹತ್ತರಂತೆ ನೂರು, ಪ್ರತಿದಿನ ಎರಡೆರಡರಂತೆ ಹೆಚ್ಚಿಸುತ್ತ ಒಟ್ಟು (ನೂರಹತ್ತು) ಇವುಗಳಲ್ಲಿ ಯಾವುದಾದರೂ ಒಂದು ವಿಧಾನವನ್ನು ಅಂಗೀಕರಿಸಿ ತಿಲಾಂಜಲಿಗಳನ್ನು ಕೊಡಬೇಕು. ಬಳಿಕ ಆಚಮನ ಮಾಡಿ ಜೇನು, ತುಪ್ಪ, ಎಳ್ಳು, ಸಕ್ಕರೆ ಮುಂತಾದವುಗಳನ್ನು ಸೇರಿಸಿ ಬೇಯಿಸಿಟ್ಟ ಚರುವಿನಿಂದ ದೊಡ್ಡ ಪಿಂಡವೊಂದನ್ನು ತಯಾರಿಸಿ **"ಅಮುಕಗೋತ್ರಸ್ಯ......ಆದ್ಯೇಹನಿ......ತವೋಪತಿಷ್ಠತಾಂ"** ಎಂದು ದರ್ಭೆಗಳ ಮೇಲೆ ಪಿಂಡವನ್ನು ಕೊಡಬೇಕು. ಪಿಂಡದ ಮೇಲೆ ತಿಲೋದಕವನ್ನೂ ಕೊಡಬೇಕು. ಆಮೇಲೆ **"ಅಮುಕಗೋತ್ರ.....ಏತತ್ತೇ....ಉಪತಿಷ್ಠತಾಂ"** ಎಂದು ತುಲಸೀದಳ,

**ಯನಮಿತಿ ಪ್ರತಿವಚನಂ ಆಚಾರ್ಯೋ ವದೇತ್ ॥ ತತಃ ಪಿಂಡಂ ಜಲೇ ಪ್ರವಾಹ್ಯ ಸ್ನಾತ್ವಾ ಆಚಾಮೇತ್ ॥**

**॥ ಇತಿ ಪ್ರಥಮದಿನೀಯಾವಯವ ಪಿಂಡದಾನವಿಧಿಃ ॥**

---

ಭೃಂಗರಾಜಪತ್ರ, ಧೂಪ, ದೀಪ ಇತ್ಯಾದಿಗಳನ್ನು ಪಿಂಡಕ್ಕೆ ಸಮರ್ಪಿಸಿ **"ಅನಾದಿನಿಧನೋ...... ಮೋಕ್ಷಪ್ರದೋಸ್ತು ವೈ"** **"ಇದಂಪಿಂಡದಾನಂ....ಮಸ್ತು"** ಎಂದು ಹೇಳಬೇಕು. ಪುರೋಹಿತನು **"ಅಸ್ತು ಪ್ರೇತಾಪ್ಯಾಯನಂ"** ಎಂದು ಹೇಳಿದ ಮೇಲೆ ಪಿಂಡವನ್ನು ಹರಿಯುವ ನೀರಿನಲ್ಲಿ ಬಿಟ್ಟು ಸ್ನಾನ ಆಚಮನಗಳನ್ನು ಮಾಡಬೇಕು.

# ॥ ನವ (ವಿಷಮ) ಶ್ರಾದ್ಧಂ ॥

**ಶ್ರೀಃ ॥ ಆಚಮ್ಯ ಪ್ರಾಣಾನಾಯಮ್ಯ ದೇಶಕಾಲೌ ಸ್ಮೃತ್ವಾ ಅಮುಕಗೋತ್ರಸ್ಯಾಮುಕಪ್ರೇತಸ್ಯ ಪ್ರೇತತ್ವವಿಮೋಕ್ಷಾರ್ಥಂ ಆದ್ಯೇಹನಿ ನವ-ಶ್ರಾದ್ಧಂ ಕರಿಷ್ಯೇ ಇತಿ ಸಂಕಲ್ಪ್ಯ ॥ ಪ್ರಾಚೀನಾವೀತೀ ॥ ದಕ್ಷಿಣಾಭಿಮುಖಃ ಆತ್ಮನೋಗ್ರೇ ದರ್ಭಬಟುಂ ಉದಙ್ಮುಖಂ ಸಂಸ್ಥಾಪ್ಯ ಅಮುಕಗೋತ್ರಾಮುಕ-ಪ್ರೇತ ನವಶ್ರಾದ್ಧೇ ಅಯಂ ತೇ ಕ್ಷಣ ಉಪತಿಷ್ಠತಾಮಿತಿ ಏಕಂ ಕುಶಂ ದತ್ವಾ ಅಮುಕಗೋತ್ರಾಮುಕಪ್ರೇತ ನವಶ್ರಾದ್ಧೇ ಇದಂ ತೇ ಪಾದ್ಯಮುಪತಿಷ್ಠತಾಂ ಇತಿ ಪಾದ್ಯಂ ದತ್ವಾ ಅಮುಕಗೋತ್ರಸ್ಯಾಮುಕಪ್ರೇತಸ್ಯ ನವಶ್ರಾದ್ಧೇ ಆಸನ-ಮುಪತಿಷ್ಠತಾಂ ಇತಿ ದರ್ಭಬಟುವಾಮಭಾಗೇ ಏಕಂ ಸತಿಲಂ ಕುಶಂ ದತ್ವಾ ಸ್ವಾಗ್ರೇ ದಕ್ಷಿಣಾಗ್ರಮೇಕಂ ಕುಶಂ ನಿಧಾಯ ತತ್ರೈಕಮುತ್ತಾನಂ ಪಾತ್ರಮಾ-ಸಾದ್ಯ ತತ್ರೈಕಂ ಪವಿತ್ರಂ ನಿಧಾಯ ತೂಷ್ಣೀಂ ಜಲಮಾಸಿಚ್ಯ ತೂಷ್ಣೀಮೇವ ತಿಲಾನ್ ಪ್ರಕ್ಷಿಪ್ಯ ತೂಷ್ಣೀಮರ್ಘ್ಯಂ ನಿವೇದ್ಯ ಅಮುಕಗೋತ್ರಾಮುಕಪ್ರೇತ ನವಶ್ರಾದ್ಧೇ ಇದಮರ್ಘ್ಯಂ ತವೋಪತಿಷ್ಠತಾಮಿತಿ ಅರ್ಘ್ಯಂ ದತ್ವಾ ಅಮುಕಗೋತ್ರಾಮುಕಪ್ರೇತ ಆಚ್ಛಾದನಮುಪತಿಷ್ಠತಾಂ ಇತ್ಯಾಚ್ಛಾದನದರ್ಭಂ ದದ್ಯಾತ್ ॥ ನಾತ್ರ ಗಂಧಾದಿದಾನಂ ॥**

---

**ನವಶ್ರಾದ್ಧ:-** ತಂದೆ-ತಾಯಿಗಳಾದರೆ ಮೃತದಿನ ಮೊದಲ್ಗೊಂಡು ವಿಷಮ (೧, ೩, ೫, ೭, ೯) ದಿನಗಳಲ್ಲಿ ಸಂಕಲ್ಪ ಮಾಡುವಾಗ ಆಯಾ ದಿನವನ್ನು **"ಪ್ರಥಮೇಹನಿ" "ತೃತೀಯೇಹನಿ"** ಎಂದು ಮುಂತಾಗಿ ಹೇಳಿ ನವಶ್ರಾದ್ಧವನ್ನು ಮಾಡಬೇಕು. ಇತರರಿಗಾದರೆ, ಭರಣಿ, ಕೃತ್ತಿಕೆ, ರೋಹಿಣಿ, ಪುನರ್ವಸು, ಉತ್ತರೆ, ವಿಶಾಖೆ, ಉತ್ತರಾಷಾಢಾ, ಪೂರ್ವಾಭಾದ್ರಾ ಉತ್ತರಾಭಾದ್ರಾ - ಈ ನಕ್ಷತ್ರಗಳಲ್ಲಿಯೂ ಕರ್ತೃವಿನ ತ್ರಿಜನ್ಮನಕ್ಷತ್ರದಲ್ಲಿಯೂ ಸೋಮ, ಬುಧ, ಗುರು, ಶುಕ್ರವಾರಗಳಲ್ಲಿಯೂ ನವಶ್ರಾದ್ಧವನ್ನು ಮಾಡಬಾರದು. ಈ ದೋಷಗಳಿದ್ದುದರಿಂದ ಪ್ರಥಮಾದಿ ದಿನಗಳಲ್ಲಿ ನವಶ್ರಾದ್ಧವು ಉಳಿದು ಹೋದರೆ ಮುಂದಿನ ನವಶ್ರಾದ್ಧದ ದಿನ ಮೊದಲಿನದನ್ನೂ ಸೇರಿಸಿ ಮಾಡಬೇಕು. ಯಾವ ಒಂದು ದಿನವೂ ದೋಷರಹಿತವಾಗಿಲ್ಲದಿದ್ದರೆ ಮೃತದಿನದಿಂದ ಹನ್ನೊಂದನೆಯ ದಿವಸ ನವಶ್ರಾದ್ಧಗಳನ್ನೂ ಒಟ್ಟಿಗೆ ಮಾಡಬೇಕು. ಈ ನವಶ್ರಾದ್ಧಕ್ಕೆ ಚಂದ್ರಾಷ್ಟಮವೂ ವಿಪತ್ತ್ಯರವಧಾತಾರೆಗಳೂ ಪ್ರಶಸ್ತವಾಗಿವೆ.

ಆಚಮನ ಪ್ರಾಣಾಯಾಮ ದೇಶಕಾಲಕೀರ್ತನಾದಿಗಳನ್ನು ಮಾಡಿ ಅಪಸವ್ಯದಿಂದ **"...ಗೋತ್ರಸ್ಯ.... ಪ್ರೇತಸ್ಯ ಆದ್ಯೇಹನಿ... ಕರಿಷ್ಯೇ"** ಎಂದು ಸಂಕಲ್ಪಮಾಡಿ ತೆಂಕುಮುಖವಾಗಿ ಕುಳಿತು ತನ್ನ ಮುಂಭಾಗದಲ್ಲಿ ಶುದ್ಧವಾದ ಆಸನದ ಮೇಲೆ ಬ್ರಾಹ್ಮಣನ ಬದಲಿಗೆ

**ತತೋ ಘೃತಾಕ್ತಮನ್ನಂ ಸಕ್ತು ವಾ ಆದಾಯ ಅಮುಕಗೋತ್ರಾಯಾ-ಮುಕಪ್ರೇತಾಯ ಸ್ವಾಹೇತ್ಯೇಕಾಂ ಆಹುತಿಂ ದರ್ಭಬಟುಪಾಣೌ ಹುತ್ವಾ ಅಮುಕಗೋತ್ರಾಯಾಮುಕಪ್ರೇತಾಯ ನವಶ್ರಾದ್ಧೇ ದಾಸ್ಯಮಾನಮಾಮಂ ಯಥಾಶಕ್ತಿ ಸೋಪಸ್ಕರಂ ತನ್ನಿಷ್ಕ್ರಯಂ ವಾಸೋದಕುಂಭಂ ಸದಕ್ಷಿಣಮುಪ-ತಿಷ್ಠತಾಮಿತಿ ತಿಲೋದಕಂ ದದ್ಯಾತ್ ॥ ತತಃ ಪಿಂಡದಾನಾರ್ಥಮೇಕಂ ಕುಶಂ ನಿಧಾಯ ಅಭ್ಯುಕ್ಷ್ಯ ಅಮುಕಗೋತ್ರಾಯಾಮುಕಪ್ರೇತಾಯಾದ್ಯೇಹನಿ ನವ-ಶ್ರಾದ್ಧೇಽಯಂ ಸಕ್ತುಪಿಂಡ ಉಪತಿಷ್ಠತಾಮಿತಿ ಪಿಂಡಂ ದತ್ವಾ ತದುಪರಿ ತಿಲೋದಕಮುಪತಿಷ್ಠತಾಮಿತಿ ದತ್ವಾನುಮಂತ್ರ್ಯ ಶಕ್ತ್ಯಾ ಪ್ರಾಣಂ ನಿರುಧ್ಯ ಪುನರನುಮಂತ್ರ್ಯ ಶೇಷಮಾಘ್ರಾಯ ಅಮುಕಗೋತ್ರೇತ್ಯಾದಿ ಉಪತಿಷ್ಠತಾ-ಮಿತ್ಯಂತೇನ ಅಭ್ಯಂಜನಾಂಜನೇ ಕಶಿಪೂಪಬರ್ಹಣೇ ದಶಾಂ ಚ ನಿವೇದ್ಯೋಪ-ಸ್ಥಾಯಾಮುಕಗೋತ್ರಾಯಾಮುಕಪ್ರೇತಾಯ ನವಶ್ರಾದ್ಧೇ ದಕ್ಷಿಣೋಪತಿಷ್ಠ-**

---

ಉತ್ತರಾಭಿಮುಖವಾಗಿ ಒಂದು ಕೂರ್ಚವನ್ನಿಟ್ಟು, "**.... ಗೋತ್ರ... ಪ್ರೇತ... ಅಯಂ ತೇ ಕ್ಷಣ ಉಪತಿಷ್ಠತಾಂ**" ಎಂದು ಒಂದು ದರ್ಭೆಯನ್ನು ಕೂರ್ಚಬ್ರಾಹ್ಮಣನಿಗೆ ಕೊಡಬೇಕು. ಆಮೇಲೆ, "**...ಗೋತ್ರ.... ಪ್ರೇತ ಇದಂ ತೇ ಪಾದ್ಯಂ... ಆಸನಂ... ... ಅರ್ಘ್ಯಂ**" ಎಂದು ಮುಂತಾಗಿ ಬೇರೆ ಬೇರೆಯಾಗಿ ಹೇಳಿ ಅವುಗಳನ್ನು ಕೊಡಬೇಕು. ಆಸನಕ್ಕೆ ಎಳ್ಳುಸಹಿತ ಒಂದು ದರ್ಭೆಯನ್ನು ಬ್ರಾಹ್ಮಣನ ಎಡಭಾಗದಲ್ಲಿಡಬೇಕು. ತನ್ನ ಮುಂಭಾಗದಲ್ಲಿ ತೆಂಕುತುದಿಯಾಗಿ ಒಂದು ದರ್ಭೆಯನ್ನಿಟ್ಟು ಅದರ ಮೇಲೆ ಒಂದು ಪಾತ್ರೆಯನ್ನಿರಿಸಿ ಅದರಲ್ಲಿ ಒಂದು ದರ್ಭೆಯ ಕೂರ್ಚವನ್ನೂ ಹಾಕಿ ನೀರು ತುಂಬಿಸಿ ಎಳ್ಳುಗಳನ್ನೂ ಹಾಕಿ ಅರ್ಘ್ಯವನ್ನು ಕೊಡಬೇಕು. ಆಚ್ಛಾದನಕ್ಕೆ ಒಂದು ದರ್ಭೆಯನ್ನು ಕೊಡಬೇಕು.

ಆಮೇಲೆ ತುಪ್ಪಬೆರೆಸಿದ ಅನ್ನವನ್ನು ಕೈಯಲ್ಲಿ ತೆಕ್ಕೊಂಡು "**.....ಗೋತ್ರಾಯ...... ಪ್ರೇತಾಯ ಸ್ವಾಹಾ**" ಎಂದು ಕೂರ್ಚಬ್ರಾಹ್ಮಣನ ಬಲಗೈಯಲ್ಲಿ ಹೋಮಿಸಿ, "**.....ಗೋತ್ರಾಯ.....ಪ್ರೇತಾಯ ನವಶ್ರಾದ್ಧೇ ದಾಸ್ಯಮಾನ.... ಉಪತಿಷ್ಠತಾಂ**" ಎಂದು ಅಕ್ಕಿ, ಬಾಳೆಕಾಯಿ, ತೆಂಗಿನಕಾಯಿ, ದಕ್ಷಿಣೆ, ಜಲಪಾತ್ರ ಮೊದಲಾದವುಗಳೊಂದಿಗೆ ತಿಲೋದಕವನ್ನು ಕೊಡಬೇಕು. ಆಮೇಲೆ ಪಿಂಡದಾನಕ್ಕೆ ಒಂದು ದರ್ಭೆಯನ್ನು ನೆಲದಲ್ಲಿಟ್ಟು ಪ್ರೋಕ್ಷಿಸಿ, "**.....ಗೋತ್ರಾಯ.... ಪ್ರೇತಾಯ ಆದ್ಯೇಹನಿ...... ಉಪತಿಷ್ಠತಾಂ**" ಎಂದು ಪಿಂಡದಾನ ಮಾಡಿ "**ತದುಪರಿ ತಿಲೋದಕ.....**" ಎಂದು ಪಿಂಡದ ಮೇಲೆ ತಿಲೋದಕವನ್ನು ಕೊಡಬೇಕು. ಬಳಿಕ ಸವ್ಯದಲ್ಲಿ ಪಿಂಡವನ್ನು ಕೈಯಲ್ಲಿ ಹಿಡಿದು ಅಷ್ಟಾಕ್ಷರೀ ಮುಂತಾದ ಮಂತ್ರಗಳನ್ನು ಜಪಿಸಿ, ಅಪಸವ್ಯದಲ್ಲಿ ಗೋತ್ರನಾಮಗಳನ್ನು ಉಚ್ಚರಿಸಿ, ನಿತ್ಯಬಲಿಶ್ರಾದ್ಧದಲ್ಲಿ ಪಿಂಡಕ್ಕೆ ಅರ್ಪಿಸಿದಂತೆ ಇದರಲ್ಲಿಯೂ ಅಭ್ಯಂಜನ, ಅಂಜನ, ವಸ್ತ್ರಕ್ಕೆ ಉತ್ತರೀಯದ ನೂಲು, ತುಳಸೀದಳ, ಭೃಂಗರಾಜಪತ್ರ ಮೊದಲಾದವುಗಳನ್ನು ಅರ್ಪಿಸಬೇಕು. "**....ಗೋತ್ರಾಯ.....ಪ್ರೇತಾಯ**

**ತಾಮಿತಿ ದಕ್ಷಿಣಾಂ ದತ್ವಾ ತೂಷ್ಣೀಂ ವಿಕಿರಂ ದತ್ವಾ ಅನಾದಿನಿಧನ ಇತಿ ಶ್ಲೋಕಂ ಪಠಿತ್ವಾಭಿರಮ್ಯತಾಮಿತಿ ಉಕ್ತೇಽಭಿರತಾಃ ಸ್ಮೇತಿ ಪ್ರತ್ಯುಕ್ತೇ ಪಿಂಡಂ ಪ್ರವಾಹ್ಯ ಸ್ನಾಯಾತ್ ॥**

**॥ ಇತಿ ನವ (ವಿಷಮ) ಶ್ರಾದ್ಧಂ ಸಮಾಪ್ತಂ ॥**

---

**ದಕ್ಷಿಣೋಪತಿಷ್ಠತಾಂ**" ಎಂದು ದಕ್ಷಿಣೆಯನ್ನು ಕೊಟ್ಟು "**ಅನಾದಿನಿಧನೋ..... ಮುಕ್ತಿಪ್ರದೋ ಭವ**" ಎಂದು ಪ್ರಾರ್ಥಿಸಿ, "**ಅಭಿರಮ್ಯತಾಂ**" ಎಂದು ಹೇಳಿ "**ಅಭಿರತಾಃ ಸ್ಮಃ**" ಎಂದು ಉತ್ತರ ಪಡೆದು ವಾಯಸಬಲಿ ಮೊದಲಾದ ಕ್ರಮಗಳನ್ನು ನಿತ್ಯಬಲಿಶ್ರಾದ್ಧದಂತೆ ಮಾಡಿ, ಪಿಂಡೋದ್ವಾಸನ ಮಾಡಿ, ಮಿಂದು ಉಟ್ಟಬಟ್ಟೆಗಳನ್ನು ಉದಗಗ್ರವಾಗಿ ಒಣಗಲು ಬಿಡಬೇಕು.

ಈ ಪ್ರಥಮದಿನವಿಧಿಯಲ್ಲಿ ತಿಲಾಂಜಲ್ಯಾದಿಗಳನ್ನು ಮಾಡಿದ ಕರ್ತೃ, ಅವನ ಭೋಜನಸ್ಥಾನ, ಪಿಂಡಪ್ರದಾನ ಮಾಡಿದ ಸ್ಥಳ, ಹವಿಸ್ಸನ್ನು ಬೇಯಿಸಿದ ಪಾತ್ರೆ, ಆ ದಿವಸ ಉಪಯೋಗಿಸಿದ ದ್ರವ್ಯ ಇವುಗಳೆಲ್ಲ ಹತ್ತು ದಿನಗಳ ವರೆಗೂ ಎಂದೂ ವ್ಯತ್ಯಸ್ತಗಳಾಗಬಾರದು.

॥ ನವ (ವಿಷಮ) ಶ್ರಾದ್ಧ ಸಮಾಪ್ತ ॥

# ॥ ನಗ್ನಪ್ರಚ್ಛಾದನ ಶ್ರಾದ್ಧಂ ॥

**ಶ್ರೀಃ ॥ ಆಚಮ್ಯ ಪ್ರಾಣಾನಾಯಮ್ಯ ದೇಶಕಾಲೌ ಸ್ಮೃತ್ವಾ ಪ್ರಾಚೀನಾವೀತೀ ಅಮುಕಗೋತ್ರಸ್ಯಾಮುಕಪ್ರೇತಸ್ಯ ಪ್ರೇತತ್ವನಿವೃತ್ತಿಕಾಮಃ ಪ್ರಥಮದಿನವಿಹಿತಂ ನಗ್ನಪ್ರಚ್ಛಾದನಶ್ರಾದ್ಧಂ ಕರಿಷ್ಯೇ ಇತಿ ಸಂಕಲ್ಪ್ಯ ಉದಙ್ಮುಖಂ ದರ್ಭಬಟುಮುಪವೇಶ್ಯ ಅಮುಕಗೋತ್ರಾಮುಕಪ್ರೇತ ನಗ್ನಪ್ರ....... ಅಯಂ ತೇ ಕ್ಷಣ ಉಪತಿಷ್ಠತಾಂ ॥ ಏವಂ ಅಮುಕೇತ್ಯಾದಿ ಪಾದ್ಯಂ ॥ ಅಮುಕಗೋತ್ರಸ್ಯಾಮುಕಪ್ರೇತಸ್ಯ ನಗ್ನಪ್ರ.........ಆಸನಮುಪ........॥ ಏಕಪವಿತ್ರಕೋಕ್ತಾರ್ಘ್ಯಪಾತ್ರೇ ಜಲಮಾಸಿಚ್ಯಾನುಮಂತ್ರ್ಯ ॥ ತಿಲೋಸಿ ಪ್ರೇತದೈವತ್ಯೋಗೋಸವೇ ದೇವನಿರ್ಮಿತಃ ॥ ಪ್ರತ್ನವದ್ಭಿಃ ಪ್ರತ್ತಃ ಪ್ರೇತೇಮಾನ್ ಲೋಕಾನ್ ಪ್ರೀಣಯಾಹಿ ನಃ ॥ ಇತಿ ಮಂತ್ರೇಣ ತೂಷ್ಣೀಂ ವಾ ತಿಲಾನ್ ಪ್ರಕ್ಷಿಪ್ಯ ತೂಷ್ಣೀಂ ನಿವೇದ್ಯಾಮುಕಗೋತ್ರಾಮುಕಪ್ರೇತ ನಗ್ನ............ಇದಮರ್ಘ್ಯಂ ತವೋಪತಿಷ್ಠತಾಂ ॥ ಅಮುಕೇತ್ಯಾದಿ ಇದಮಾಚ್ಛಾದನಂ ತವೋಪತಿಷ್ಠತಾಂ ॥ ಅಮುಕಗೋತ್ರಾಯಾಮುಕಪ್ರೇತಾಯ ಸ್ವಾಹೇತಿ ವಿಪ್ರಪಾಣೌ ಹುತ್ವಾ ಅಮುಕಗೋತ್ರಾಯಾಮುಕಪ್ರೇತಾಯ ದಾಸ್ಯಮಾನಮಾಮಂ ಯಥಾಶಕ್ತಿ ಸೋಪಸ್ಕರಂ**

---

**ನಗ್ನಪ್ರಚ್ಛಾದನಶ್ರಾದ್ಧ:-** ಆಚಮನ ಪ್ರಾಣಾಯಾಮ ದೇಶಕಾಲಸಂಕೀರ್ತನಗಳನ್ನು ಮಾಡಿ, ಅಪಸವ್ಯದಿಂದ "**.... ಗೋತ್ರಸ್ಯ ಪ್ರೇತಸ್ಯ .... ಕರಿಷ್ಯೇ**" ಎಂದು ಸಂಕಲ್ಪಮಾಡಿ, ಬಡಗುತುದಿಯಾಗಿ ಬ್ರಾಹ್ಮಣನ ಬದಲಿಗೆ ಒಂದು ಕೂರ್ಚವನ್ನಿಟ್ಟು, ಗೋತ್ರ ಮತ್ತು ಹೆಸರುಗಳನ್ನು ಹೇಳಿ "**ಅಯಂ ತೇ ಕ್ಷಣ ಉಪತಿಷ್ಠತಾಂ**" ಎಂದು ಒಂದು ದರ್ಭೆಯನ್ನು ಕೊಟ್ಟು ಹಾಗೆಯೇ ಪಾದ್ಯ ಮತ್ತು ಆಸನಗಳನ್ನೂ ಕೊಟ್ಟು ತನ್ನ ಮುಂಭಾಗದಲ್ಲಿ ತೆಂಕುತುದಿಯಾಗಿ ಒಂದು ದರ್ಭೆಯನ್ನು ಹಾಕಿ ಅದರ ಮೇಲೆ ಒಂದು ಪಾತ್ರೆಯನ್ನಿಟ್ಟು ಒಂದೆಳೆಯ ಕೂರ್ಚ, ಮತ್ತು ನೀರನ್ನು ಹಾಕಿ "**ತಿಲೋಸಿಸೋಮದೇವತ್ಯೋ.....**" ಎಂದು ಹೇಳಿ ಎಳ್ಳುಗಳನ್ನೂ ಹಾಕಿ, "**...........ಗೋತ್ರ...........ಪ್ರೇತ ನಗ್ನಪ್ರಚ್ಛಾದನಶ್ರಾದ್ಧೇ ಇದಮರ್ಘ್ಯಂ.....**" ಎಂದು ಅರ್ಘ್ಯವನ್ನು ಕೊಡಬೇಕು. ನಂತರ ಆಚ್ಛಾದನಕ್ಕೆ ಒಂದು ದರ್ಭೆಯನ್ನು ಕೊಟ್ಟು, ಕೂರ್ಚಬ್ರಾಹ್ಮಣನ ಬಲಗೈಯಲ್ಲಿ "**.....ಗೋತ್ರಾಯ ಪ್ರೇತಾಯ ಸ್ವಾಹಾ**" ಎಂದು ತುಪ್ಪ ಬೆರೆಸಿದ ಅನ್ನವನ್ನು ಹೋಮಿಸಬೇಕು. ಆಮೇಲೆ "**.....ಗೋತ್ರಾಯ.....ಪ್ರೇತಾಯ ದಾಸ್ಯಮಾನಮಾಮಂ .... ಉಪತಿಷ್ಠತಾಂ**" ಎಂದು ಈ ವಾಕ್ಯದಲ್ಲಿ ಹೇಳಿದ ವಸ್ತುಗಳೊಂದಿಗೆ ಅಕ್ಕಿಯನ್ನು ಕೊಡಬೇಕು. ನಂತರ ಪಿಂಡದಾನಕ್ಕೆ ಒಂದು

**ಸಘೃತಂ ಸೋದಕುಂಭಂ ಸವಸ್ತ್ರಂ ಯಥಾಶಕ್ತಿ ಕಾಂಸ್ಯಪಾತ್ರ ಸುವರ್ಣ-ರಜತಲೋಹತೈಲದಕ್ಷಿಣೋಪೇತಂ ಸೋಪಾನತ್ಕಂ ಸೋದಪಾತ್ರಮುಪ-ತಿಷ್ಠತಾಮಿತ್ಯಾಮಂ ದದ್ಯಾತ್ ॥ ತತಃ ಪಿಂಡದಾನಾರ್ಥಮೇಕಂ ಕುಶಂ ನಿಧಾಯ ಅಭ್ಯುಕ್ಷ್ಯ ಶುಂಧಂತಾಂ ಪ್ರೇತಾ ಇತ್ಯುದಕಂ ನಿನೀಯ ಅಮುಕ-ಗೋತ್ರಾಯಾಮುಕಪ್ರೇತಾಯ ನಗ್ನಪ್ರಚ್ಛಾದನಶ್ರಾದ್ಧೇ ಅಯಂ ಸಕ್ತುಪಿಂಡ ಉಪತಿಷ್ಠತಾಂ ಪಿಂಡೋಪರಿ ತಿಲೋದಕಮುತಿಷ್ಠತಾಂ ॥ ತತೋನುಮಂತ್ರಣಾದಿ ಕಶಿಪೂಪಬರ್ಹಣದಶಾದಾನಾಂತಂ ಸರ್ವಂ ನವಶ್ರಾದ್ಧವತ್ತೂಷ್ಣೀಂ ಕೃತ್ವಾ ॥ ಅಮುಕೇತ್ಯಾದಿ ಪ್ರೇತನಗ್ನಪ್ರ.... ತುಲಸೀದಲಂ ಭೃಂಗರಾಜಪತ್ರಂ ಚೋಪತಿಷ್ಠತಾ-ಮಿತಿ ದತ್ವೋಪಸ್ಥಾಯ ಅಮುಕಗೋತ್ರಾಯಾಮುಕಪ್ರೇತಾಯ ನಗ್ನಪ್ರಚ್ಛಾದನ-ಶ್ರಾದ್ಧೇ ದಕ್ಷಿಣೋಪತಿಷ್ಠತಾಂ ॥ ಅನಾದಿನಿಧನೋದೇವ ಇತಿ ಸ್ನಾನಾಂತಂ ಪೂರ್ವವತ್ ॥**

**॥ ಇತಿ ನಗ್ನಪ್ರಚ್ಛಾದನಶ್ರಾದ್ಧಂ ॥**

---

ದರ್ಭೆಯನ್ನು ನೆಲದಲ್ಲಿಟ್ಟು **"ಶುಂಧಂತಾಂ ಪ್ರೇತಾಃ"** ಎಂದು ಪ್ರೋಕ್ಷಿಸಿ **"..... ಗೋತ್ರಾಯ.....ಪ್ರೇತಾಯ ಅಯಂ....."** ಎಂದು ಪಿಂಡದಾನ ಮಾಡಿ ಅದರ ಮೇಲೆ ತಿಲೋದಕ ಬಿಡಬೇಕು. ಪಿಂಡವನ್ನು ಕೈಯಲ್ಲಿ ಹಿಡಿದು ಅಷ್ಟಾಕ್ಷರೀ ಇತ್ಯಾದಿಗಳನ್ನು ಜಪಿಸಿ, ದಕ್ಷಿಣೆ ಕೊಟ್ಟು **"ಅಭಿರಮ್ಯತಾಂ"** ಹೇಳಿ, **"ಅಭಿರತಾಃ ಸ್ಮಃ"** ಎಂದು ಪ್ರತಿವಚನ ಪಡೆದು ಪಿಂಡೋದ್ವಾಸನ ಮಾಡಿ ಸ್ನಾನಮಾಡಬೇಕು.

॥ ನಗ್ನಪ್ರಚ್ಛಾದನಶ್ರಾದ್ಧ ಸಮಾಪ್ತ ॥

## ೧೨

# ॥ ಪಾಥೇಯ ಶ್ರಾದ್ಧಂ ॥

ಶ್ರೀಃ ॥ ಅಸ್ಮಿನ್ನೇವಾಹನಿ ಪಾಥೇಯಶ್ರಾದ್ಧಂ ॥ ಆಚಮ್ಯ ಪ್ರಾಣಾನಾಯಮ್ಯ ದೇಶಕಾಲೌ ಸ್ಮೃತ್ವಾ ಪ್ರಾಚೀನಾವೀತೀ ॥ ಅಮುಕಗೋತ್ರಸ್ಯಾ-ಮುಕಪ್ರೇತಸ್ಯ ಮನುಷ್ಯಲೋಕಾತ್ ಪ್ರೇತಲೋಕಗಮನಾರ್ಥಂ ಪಾಥೇಯ-ಶ್ರಾದ್ಧಂ ಕರಿಷ್ಯೇ ಇತಿ ಸಂಕಲ್ಪ್ಯ ಅಮುಕಗೋತ್ರಾಮುಕಪ್ರೇತ ಪಾಥೇಯ-ಶ್ರಾದ್ಧೇ ಅಯಂ ತೇ ಕ್ಷಣ ಉಪತಿಷ್ಠತಾಂ ॥ ಅಮುಕೇತ್ಯಾದಿ ಪಾದ್ಯಂ ॥ ಅಮುಕಗೋತ್ರಸ್ಯಾಮುಕಪ್ರೇತಸ್ಯ ಪಾಥೇಯಶ್ರಾದ್ಧೇ ಆಸನಂ ॥ ಏಕಪವಿತ್ರಾ-ರ್ಘ್ಯಪಾತ್ರೇ ಜಲಮಾಸಿಚ್ಯಾನುಮಂತ್ರ್ಯ ತಿಲೋಽಸೀತ್ಯೂಹಿತಮಂತ್ರೇಣ ತೂಷ್ಣೀಂ ವಾ ತಿಲಾನ್ ಪ್ರಕ್ಷಿಪ್ಯ ತೂಷ್ಣೀಂ ನಿವೇದ್ಯ ಅಮುಕಗೋತ್ರಾಮುಕಪ್ರೇತ ಪಾಥೇಯ .......... ಅರ್ಘ್ಯಂ .......... ॥ ಅಮುಕೇತ್ಯಾದಿ ಆಚ್ಛಾದನಂ ಉಪತಿಷ್ಠತಾಂ ॥ ಅಮುಕಗೋತ್ರಾಯಾಮುಕಪ್ರೇತಾಯ ಸ್ವಾಹೇತಿ ಪಾಣೌ ಹುತ್ವಾ ಅಮುಕಗೋತ್ರಾಯಾಮುಕಪ್ರೇತಾಯ ಆಮಂ ತನ್ನಿಷ್ಕ್ರಯಂ ವಾ ಯಥಾಶಕ್ತಿ ಸೋಪಸ್ಕರಂ ಸಘೃತಂ ಸೋದಕುಂಭಂ ಸವಸ್ತ್ರಂ ಯಥಾಶಕ್ತಿ ಕಾಂಸ್ಯಸುವರ್ಣರಜತಲೋಹತೈಲದಕ್ಷಿಣೋಪೇತಂ ಸೋಪಾನತ್ಕಂಸೋದಪಾತ್ರ-ಮುಪತಿಷ್ಠತಾಮಿತಿ ತಿಲೋದಕಂ ಕ್ಷಿಪೇದಿತಿ ॥ ತತಃ ಪಿಂಡದಾನಾರ್ಥ-ಮೇಕಂ ಕುಶಂ ನಿಧಾಯ ಅಭ್ಯುಕ್ಷ್ಯ ಶುಂಧಂತಾಂ ಪ್ರೇತಾ ಇತ್ಯುದಕಂ ನಿನೀಯ

---

ಆಚಮನ ಪ್ರಾಣಾಯಾಮ ದೇಶಕಾಲ ಸ್ಮರಣಾದಿಗಳನ್ನು ಮಾಡಿ ಅಪಸವ್ಯದಿಂದ, **“ಅಮುಕಗೋತ್ರಸ್ಯಾಮುಕ.... ಕರಿಷ್ಯೇ”** ಎಂದು ಸಂಕಲ್ಪ ಮಾಡಿ ಒಂದು ಕೂರ್ಚವನ್ನು ಉತ್ತರಮುಖವಾಗಿಟ್ಟು **“ಅಮುಕಗೋತ್ರ..... ಕ್ಷಣ ಉಪತಿಷ್ಠತಾಂ”** ಹಾಗೆಯೇ **“ಅಮುಕ..... ಪಾದ್ಯಂ ಆಸನಮುಪತಿಷ್ಠತಾಂ”** ಎಂದು ಪಾದ್ಯ ಆಸನಗಳನ್ನು ಕೊಟ್ಟು, ಒಂದು ದರ್ಭೆಯನ್ನಿಟ್ಟ ಅರ್ಘ್ಯಪಾತ್ರದಲ್ಲಿ ನೀರನ್ನು ಹಾಕಿ ಅಭಿಮಂತ್ರಿಸಿ ಎಳ್ಳುಗಳನ್ನು ಹಾಕಿ, **“ಅಮುಕಗೋತ್ರ........ ಅರ್ಘ್ಯಮುಪತಿಷ್ಠತಾಂ” “ಅಮುಕಗೋತ್ರ..... ಆಚ್ಛಾದನಮುಪತಿಷ್ಠತಾಂ”** ಎಂದು ಅರ್ಘ್ಯ ಆಚ್ಛಾದನಗಳನ್ನು ಕೊಡಬೇಕು. **“.....ಗೋತ್ರಾಯ.....ಪ್ರೇತಾಯ ಸ್ವಾಹಾ”** ಎಂದು ಮೊದಲಿನಂತೆ ಪಾಣಿಹೋಮವನ್ನು ಮಾಡಿ **“..... ಗೋತ್ರಾಯ.... ಪ್ರೇತಾಯ ಆಮಂ ತನ್ನಿಷ್ಕ್ರಯಂ ವಾ...... ಉಪತಿಷ್ಠತಾಂ”** ಎಂದು ಹೇಳಿ ಕೂರ್ಚಬ್ರಾಹ್ಮಣನಿಗೆ ಈ ವಾಕ್ಯದಲ್ಲಿ ಹೇಳಿದ ಅಕ್ಕಿ ಮೊದಲಾದ ವಸ್ತುಗಳೊಂದಿಗೆ ತಿಲೋದಕವನ್ನು ಕೊಡಬೇಕು.

**ಅಮುಕಗೋತ್ರಾಯಾಮುಕಪ್ರೇತಾಯ ಪಾಥೇಯಶ್ರಾದ್ಧೇ ಅಯಂ ಸಕ್ತುಪಿಂಡ ಉಪತಿಷ್ಠತಾಂ ॥ ಅನುಮಂತ್ರಣಾದಿ ಕಶಿಪೂಬರ್ಹಣದಶಾದಾನಾಂತಂ ಸರ್ವಂ ನವಶ್ರಾದ್ಧವತ್ತೂಷ್ಣೀಂ ಕೃತ್ವಾ ಅಮುಕೇತ್ಯಾದಿ ಪ್ರೇತತುಲಸೀದಲಂ ಭೃಂಗ-ರಾಜಪತ್ರಂ ಚ ಉಪತಿಷ್ಠತಾಂ ಇತಿ ದತ್ವೋಪಸ್ಥಾಯ ॥ ಅಮುಕಗೋತ್ರಾ-ಯಾಮುಕಪ್ರೇತಾಯ ದಕ್ಷಿಣೋಪತಿಷ್ಠತಾಂ ॥ ಅನಾದಿನಿಧನ ಇತ್ಯಾದಿಸ್ನಾನಾಂತಂ ಪೂರ್ವವತ್ ॥**

**ತತಃ ಪೂರ್ವಂ ಶೋಷಣಾಯ ಸ್ಥಾಪಿತಾನಿ ವಸ್ತ್ರಾಣಿ ಧಾರಯೇಯುಃ ॥ ತತಃ ಕರ್ತಾಪಿ ಪರಿಧಾನೀಯಮಾರ್ದ್ರವಸ್ತ್ರಮುತ್ತರೀಯಂ ತ್ರಿಗುಣಮಧೋದಶ-ಮರ್ಧವನ್ನಿಷ್ಪೀಡ್ಯ ಶೋಷಣಾಯ ಉದಗಗ್ರಂ ವಿಸೃಜೇತ್ ॥ ತತೋ ದಿವಾ ಮೃತೌ ದೃಷ್ಟೇಷ್ವೃಕ್ಷೇಷು ರಾತ್ರಿಮೃತೌ ಉದಿತೇ ಸೂರ್ಯೇ ಬಾಲಪುರಃಸರಾಃ ವೃದ್ಧಜಘನ್ಯಾ ಗೃಹಂ ಗತ್ವಾ ದ್ವಾರದೇಶೇ ನಿಂಬಪತ್ರಾಣಿ ವಿದಶ್ಯ ಪೂತ್ಕೃತ್ವಾ-ಚಮ್ಯ ಪಾಷಾಣಾಗ್ನಿಗೋಮಯಾಕ್ಷತ ತಿಲೋದಕ ದೂರ್ವಾವೃಷಭಸರ್ಷ-ಪಾನ್ ಯಥಾಲಾಭಂ ಸ್ಪೃಷ್ಟ್ವಾ ದೇಹಲ್ಯಶ್ಮನಿ ಚರಣಂ ದತ್ವಾ ಗೃಹಂ ವಿಶೇಯುಃ ॥ ಶವವಾಹಕಾನಾಮಪಿ ನಿಂಬಪತ್ರದಂಶಾದಿ ಏಕಾಹಮಾಶೌಚಂ ಚ ॥ ತತಃ ಶಿಕ್ಯಯೋರ್ನವೇ ಮೃಣ್ಮಯಭಾಜನೇ ಜಲಂ ದುಗ್ಧಂ ಚ ಪ್ರಕ್ಷಿಪ್ಯ ॥ ಪ್ರೇತಾತ್ರ ಸ್ನಾನೀಹೀದಂ ಚ ಪಿಬೇತಿ ವದೇತ್ ॥ ಇದಂ ಚ ಕೃತಾಕೃತಂ ॥ ಅಸ್ಮಿನ್ ದಿನೇ ಕ್ರೀತಂ ಸುಹೃದ್ಭ್ಯೋಲಬ್ಧಂ ವಾ ಅಶ್ನೀಯುಃ ॥ ಗೋತ್ರ-**

---

ಅನಂತರ ಸಕ್ತು ಪಿಂಡದಾನಾದಿ ಕೆಲಸಗಳನ್ನು "**ನಿತ್ಯಬಲಿಶ್ರಾದ್ಧೇ**" ಎಂಬುವರ ಬದಲು "**ಪಾಥೇಯಶ್ರಾದ್ಧೇ**" ಎಂದು ಹೇಳಿ ನಿತ್ಯಬಲಿಶ್ರಾದ್ಧದಲ್ಲಿ ಹೇಳಿದ ಕ್ರಮದಲ್ಲಿ ಮಾಡಿ ಕಡೆಗೆ ಸ್ನಾನಮಾಡಬೇಕು.

ಅನಂತರ ಸಪಿಂಡಾದಿಗಳೆಲ್ಲರೂ, ಶವವನ್ನು ಸ್ಪರ್ಶಿಸಿದವರೂ ಕೂಡ ಬೇರೆ ಬಟ್ಟೆಗಳನ್ನುಟ್ಟು ಒದ್ದೆಯಾದ ಬಟ್ಟೆಗಳನ್ನು ಒಂದು ಸಲ ಹಿಂಡಿ, ಒಣಗಲು ಬಡಗು ತುದಿಮಾಡಿ ಬಿಡಿಸಿ ಆರಿಸಬೇಕು. ಹಗಲು ದಹನಕಾರ್ಯ ನಡೆದಿದ್ದರೆ ಸಾಯಂಕಾಲ ನಕ್ಷತ್ರದರ್ಶನವಾಗುವ ವರೆಗೂ, ರಾತ್ರಿ ದಹನಮಾಡಿದ್ದರೆ ಸೂರ್ಯೋದಯದ ವರೆಗೂ ಅಲ್ಲಿಯೇ ಇರಬೇಕೆಂದು ಶಾಸ್ತ್ರ ನಿಯಮವಿದೆ. ಸಣ್ಣವರು ಮುಂದಾಗಿಯೂ, ದೊಡ್ಡದೊಡ್ಡವರು ಹಿಂದು ಹಿಂದಾಗಿಯೂ ಮನೆಗೆ ಹೋಗಿ ದ್ವಾರದೇಶದಲ್ಲಿ ಕಹಿಬೇವಿನ ಸೊಪ್ಪನ್ನು ಜಗಿದು ಉಗುಳಿ, ಆಚಮನ ಮಾಡಿ, ಅಗ್ನಿ, ಕಲ್ಲು, ಗೋಮಯ, ಅಕ್ಷತೆ, ಎಳ್ಳು, ನೀರು, ದೂರ್ವೆ, ಎತ್ತು, ಸಾಸಿವೆ ಇವುಗಳೆಲ್ಲವನ್ನೂ ಅಥವಾ ಸಿಕ್ಕದಿದ್ದರೆ ಅಗ್ನಿ, ಗೋಮಯ ಮೊದಲಾದವುಗಳನ್ನಾದರೂ ಒಂದೊಂದನ್ನಾಗಿ ಮುಟ್ಟಿ ಕೈಗಳನ್ನು ಶುದ್ಧಮಾಡಿಕೊಂಡು ತುಪ್ಪವನ್ನು ಸೇವಿಸಬೇಕು.

**ಜಾದೀನಾಂ ತದ್ದಿನೇ ತದ್ಗೃಹ ಏವ ಭೋಜನಂ ॥ ಆಮಿಷಲವಣಪಯೋ-ಮಿಷ್ಟಾಪೂಪಪಾಯಸಾದಿಕಂ ನಾಶ್ನೀಯುಃ ॥ ಹವಿಷ್ಯಾನ್ನಮೇವ ಭುಂಜೀರನ್ ॥ ಕರ್ತಾ ಭೋಜನ ಕಾಲೇ ಸಘೃತಮನ್ನಮಾದಾಯಾಮುಕಪ್ರೇತಾಯೇದಮನ್ನ-ಮುಪತಿಷ್ಠತಾಮಿತಿ ಗೃಹೋಪರಿ ಭೋಜನಸ್ಥಲ ಸಮೀಪೇ ವಾ ದದ್ಯಾತ್ ॥ ದಶಾಹಾಂತಂ ಭೋಜನಸ್ಥಾನವಿಪರ್ಯಯೋಽಪಿ ತಾವತ್ಪರ್ಯಂತಂ ನ ಕಾರ್ಯಃ ॥ ಲೇಖನಹರ್ಷೋಚ್ಚಾಸನೋತ್ಕೃಷ್ಟವಸ್ತ್ರಾದಿಧಾರಣ ತೈಲಾಭ್ಯಂಗ ಸ್ತ್ರೀಸಂಗಖಟ್ವಾಶಯನಾನ್ಯಸ್ಪರ್ಶಾದೀನಿ ವರ್ಜಯೇಯುಃ ॥ ರಾತ್ರೌ ಪೃಥಗೇವ ತೃಣಾಸ್ತೃತಭೂಮೌ ಶಯೀರನ್ ॥ ಮಹಾಗುರು ನಿಪಾತೇಷು ತ್ರ್ಯಹಮೇಕಾಹಂ ಚೋಪವಾಸಃ ॥ ಪಾರಣಾ ಚ ಕ್ರೀತೇನ ಸುಹೃದ್ಭ್ಯೋ ಲಬ್ಧೇನ ವಾ ॥ ಪತ್ನ್ಯಾಂ ಚೈವಂ ॥ ಬಾಲವೃದ್ಧಾತುರಾಣಾಂ ನೈತೇ ನಿಯಮಾಃ ॥**

**॥ ಇತಿ ಪಾಥೇಯ ಶ್ರಾದ್ಧಂ ॥**

---

---

ಬಳಿಕ ಮರಣಹೊಂದಿದ ಸ್ಥಳದಲ್ಲಿ ಹತ್ತು ದಿನಗಳ ವರೆಗೆ ನೊಂದಿಹೋಗದ ಹಾಗೆ ದಕ್ಷಿಣಾಭಿಮುಖವಾದ ದೀಪವನ್ನು ಎಳ್ಳೆಣ್ಣೆ ಹಾಕಿ ಹಚ್ಚಿ ಅದರ ಬಳಿಯಲ್ಲಿ ಹೊಸ ನೂಲುಗಳಿಂದ ಮಾಡಿದ ಎರಡು ಶಿಕ್ಯಗಳನ್ನು ಕಟ್ಟಿ ಎರಡು ಹೊಸ ಮಣ್ಣಿನ ಪಾತ್ರೆಗಳನ್ನು ಅವುಗಳ ಮೇಲೆ ಇಟ್ಟು "**....ಗೋತ್ರ....ಪ್ರೇತ ಅತ್ರ ಸ್ನಾಹಿ**" ಎಂದು ಒಂದರಲ್ಲಿ ನೀರನ್ನೆರೆದು "**....ಗೋತ್ರ... ಪ್ರೇತ ಇದಂ ಪಿಬ**" ಎಂದು ಮತ್ತೊಂದರಲ್ಲಿ ಹಾಲನ್ನು ಎರೆಯಬೇಕು.

ಬಳಿಕ, ಬಂದ ಬ್ರಾಹ್ಮಣರಿಗೆ ಊರ ಪ್ರಮುಖರಿಗೆ ಸೀಯಾಳ ದಕ್ಷಿಣಾದಿಗಳನ್ನು ಕೊಟ್ಟು ಹನ್ನೊಂದು ಹನ್ನೆರಡನೆಯ ದಿನಗಳಲ್ಲಿ ನಡೆಯತಕ್ಕ ಉತ್ತರಕ್ರಿಯಾದಿಗಳಿಗೆ ಆಮಂತ್ರಣವಿತ್ತು ಸೂತಕನಿವೃತ್ಯನಂತರ ಮಂತ್ರಾಕ್ಷತೆ ಕೊಡಿಸಬೇಕೆಂದು ಅವರಲ್ಲಿ ಪ್ರಾರ್ಥಿಸಿಕೊಳ್ಳಬೇಕು.

॥ ಪಾಥೇಯಶ್ರಾದ್ಧ ಸಮಾಪ್ತ ॥

## ॥ ಅಸ್ಥಿಸಂಚಯನಂ ॥

ಶ್ರೀಃ ॥ ತಚ್ಚ ಆಶೌಚಮಧ್ಯೇ ತು ಪ್ರಥಮೇ ದ್ವಿತೀಯೇ ತೃತೀಯೇ ಚತುರ್ಥೇ ಸಪ್ತಮೇ ನವಮೇ ವಾ ದಿನೇ ಕಾರ್ಯಂ ॥ ತತ್ರ ದ್ವಿಪಾದತ್ರಿಪಾದ-ನಕ್ಷತ್ರಾಣಿ ಕರ್ತುರ್ಜನ್ಮನಕ್ಷತ್ರಂ ಚ ವರ್ಜ್ಯಂ ॥ ಸಂಭವೇರ್ಕಭೌಮಮಂದ-ವಾರಾನಂದಾತಿಥಯಶ್ಚ ವರ್ಜ್ಯಾಃ ॥ ಅಸ್ಥ್ನಾಂ ಶ್ವಸೂಕರಶೂದ್ರಾದಿಸ್ಪರ್ಶೇ ಪಂಚಗವ್ಯೇನ ಶಾಲಗ್ರಾಮತುಲಸ್ಯುದಕೈಃ ಪ್ರೋಕ್ಷಣಂ ॥ ದಾಹದೇಶಂ ಗತ್ವಾ ಆಚಮ್ಯ ತೂಷ್ಣೀಂ ಪ್ರಾಣಾನಾಯಮ್ಯ ದೇಶಕಾಲೌ ಸ್ಮೃತ್ವಾ ಪ್ರಾಚೀನಾವೀತೀ ಅಮುಕಗೋತ್ರಸ್ಯಾಮುಕಪ್ರೇತಸ್ಯ ಪೇತತ್ವನಿವೃತ್ತ್ಯರ್ಥಂ ಅಸ್ಥಿಸಂಚಯನಂ ಕರಿಷ್ಯೇ ಇತಿ ಸಂಕಲ್ಪ್ಯ ಶಮೀಶಾಖಯಾ ಕ್ಷೀರಮಿಶ್ರೋದಕೇನ ಪ್ರದಕ್ಷಿಣಂ ತ್ರಿಃ ಪರಿವ್ರಜನ್ ಚಿತಿದೇಶಂ ಪ್ರೋಕ್ಷೇತ್ ॥ ಶೀತಿಕೇಶೀತಿ˜ ದಮನೋಗ್ನಿ ಸ್ತ್ರಿಷ್ಟುಪ್ ಚಿತಿಪ್ರೋಕ್ಷಣೇ ವಿನಿ..........॥ ಶೀತಿಕೇಶೀತಿಕಾವತಿಹ್ಲಾದಿಕೇಹ್ಲಾದಿ-ಕಾವತಿ ॥ ಮಂಡೂಕ್ಯಾ ೩ ಸುಸಂಗಮ ಇಮಂಸ್ವ ೧ ಗ್ನಿಂ ಹರ್ಷಯ ॥ ಇತಿ

---

**ಅಸ್ಥಿಸಂಚಯನ:-** ಪ್ರಥಮ, ದ್ವಿತೀಯ, ತೃತೀಯ, ಚತುರ್ಥ, ಸಪ್ತಮ, ನವಮ ದಿನಗಳಲ್ಲಿ ದ್ವಿಪಾದ ತ್ರಿಪಾದ ನಕ್ಷತ್ರಗಳನ್ನೂ ಕರ್ತೃವಿನ ಜನ್ಮಾನುಜನ್ಮನಕ್ಷತ್ರಗಳನ್ನೂ ಸಾಧ್ಯವಿದ್ದರೆ ರವಿ, ಕುಜ, ಶುಕ್ರ, ಶನಿವಾರಗಳನ್ನೂ ನಂದಾದಿ ತಿಥಿಗಳನ್ನೂ ಬಿಡಬೇಕು.

**ದ್ವಿಪಾದ ನಕ್ಷತ್ರಗಳು:-** ಮೃಗಶಿರೆ, ಚಿತ್ರೆ, ಧನಿಷ್ಠೆ.

**ತ್ರಿಪಾದ ನಕ್ಷತ್ರಗಳು:-** ಕೃತ್ತಿಕೆ, ಪುನರ್ವಸು, ಉತ್ತರೆ, ವಿಶಾಖೆ, ಉತ್ತರಾಷಾಢಾ, ಪೂರ್ವಾಭಾದ್ರೆ.

**ನಂದಾದಿ ತಿಥಿಗಳು:-** ಪಾಡ್ಯ, ಷಷ್ಠೀ, ಏಕಾದಶೀ.

ಅಸ್ಥಿಗಳಿಗೆ ನಾಯಿ, ಹಂದಿ, ಶೂದ್ರ ಮೊದಲಾದವರ ಸ್ಪರ್ಶವಾಗಿದ್ದರೆ ಪಂಚಗವ್ಯವನ್ನೂ, ಸಾಲಿಗ್ರಾಮ, ತುಲಸೀ ತೀರ್ಥಗಳನ್ನೂ ಪ್ರೋಕ್ಷಿಸಬೇಕು. ಸ್ಮಶಾನಕ್ಕೆ ಹೋಗಿ ಕುಳಿತು ಆಚಮನ ಪ್ರಾಣಾಯಾಮದೇಶಕಾಲಸ್ಮರಣಾದಿಗಳನ್ನು ಮಾಡಿ ಅಪಸವ್ಯದಲ್ಲಿ "**....ಗೋತ್ರಸ್ಯ... ಅಸ್ಥಿಸಂಚಯನಂ ಕರಿಷ್ಯೇ**" ಎಂದು ಸಂಕಲ್ಪಮಾಡಿ ಶಮೀಶಾಖೆಯಿಂದ ಹಾಲುಮಿಶ್ರಿತವಾದ

**ಮಂತ್ರೇಣ ಪಾದಾದಾರಭ್ಯ ಸರ್ವಾಂ ಚಿತಿಂ ತ್ರಿಃ ಪ್ರೋಕ್ಷೇತ್ ॥ ಪ್ರತಿ-ಪ್ರೋಕ್ಷಣಂ ಮಂತ್ರಾವೃತ್ತಿಃ ॥ ತತೋ ವೃದ್ಧಾ ವಿಷಮಾಃ ಕರ್ತೃಸಹಿತಾ ಅಂಗುಷ್ಠೋಪಕನಿಷ್ಠಿಕಾಭ್ಯಾಂ ಏಕೈಕಮಸ್ಥಿ ಪಾದಪ್ರಭೃತಿಶಿರಃ ಪರ್ಯಂತಂ ಗೃಹೀತ್ವಾ ಯಥಾ ಶಬ್ದೋ ನ ಭವತಿ ತಥಾ ಕುಂಭೇ ನಿದಧ್ಯುಃ ॥ ಸ್ತ್ರಿಯಾಃ ಕುಭ್ಯಾಂ ॥ ಸ್ತನರಹಿತಃ ಕುಂಭಃ ॥ ಸಸ್ತನೀ ಕುಂಭೀ ॥ ಅನ್ಯದ್ಭಸ್ಮಶೂರ್ಪೇಣ ಸಂಶೋಧ್ಯ ಸೂಕ್ಷ್ಮಾಣ್ಯಸ್ಥೀನ್ಯಪಿ ಕುಂಭೇ ನಿಧಾಯ ಭಸ್ಮ ಗಂಗಾಯಾಂ ಕ್ಷಿಪೇತ್ ॥ ತತೋ ವರ್ಷಾಕಾಲಾದನ್ಯಕಾಲೇ ಜಲಂ ನಾಗಚ್ಛತಿ ತಾದೃಶೇ ಶುಚಿ ಪ್ರದೇಶೇ ಗರ್ತಂ ಕೃತ್ವಾ ॥ ಉಪಸರ್ಪೇತಿ ಸಂಕುಸುಕಃ ಪೃಥಿವೀ ಮೃತ್ಯುಃ ಪಿತರೋ ವಾ ತ್ರಿಷ್ಟುಪ್ ॥ ಗರ್ತೇಽಸ್ಥಿನಿಕ್ಷೇಪಣೇ ವಿನಿಯೋಗಃ ॥ ಉಪಸರ್ಪ ಮಾತರಂ ಭೂಮಿಮೇತಾಮುರುವ್ಯಚಸಂ ಪೃಥಿವೀಂ ಸುಶೇವಾಂ ॥ ಊರ್ಣಮ್ರದಾಯುವತಿರ್ದಕ್ಷಿಣಾವತ ಏಷಾ ತ್ವಾ ಪಾತು ನಿಋತೇರು-ಪಸ್ಥಾತ್ ॥ ಇತಿ ಮಂತ್ರೇಣ ಕರ್ತಾ ಗರ್ತೇ ಘಟಂ ನಿದಧ್ಯಾತ್ ॥ ಉಚ್ಛ್ವಂ-ಚಸ್ವೇತಿ ಸಂಕುಸುಕೋ ಮೃತ್ಯುಃ ಪಿತರಃ ಪೃಥ್ವೀ ವಾ ಪ್ರಸ್ತಾರಪಂಕ್ತಿಃ ಗರ್ತೇ ಪಾಂಸುಕ್ಷೇಪಣೇ ವಿನಿಯೋಗಃ ॥ ಉಚ್ಛ್ವಂಚಸ್ವ ಪೃಥಿವಿ ಮಾನಿಬಾಧಥಾಃ ಸೂಪಾಯನಾಸ್ಮೈಭವಸೂಪವಂಚನಾ ॥ ಮಾತಾಪುತ್ರಂ ಯಥಾ ಸಿಚಾಭ್ಯೇನಂ**

---

ನೀರನ್ನು ಪಾದಪ್ರದೇಶದಿಂದ ಆರಂಭಿಸಿ, ಚಿತಿಪ್ರದೇಶಕ್ಕೆ ಮೂರು ಸಲ ಅಪ್ರದಕ್ಷಿಣ ಬರುತ್ತ **"ಶೀತಿಕೇ..."** ಎಂಬ ಮಂತ್ರವನ್ನು ಪ್ರತಿ ಪ್ರದಕ್ಷಿಣೆಗೆ ಬೇರೆಯಾಗಿ ಹೇಳಿ ಪ್ರೋಕ್ಷಿಸಬೇಕು. ಬಳಿಕ ೧, ೩, ೫ ಹೀಗೆ ವಿಷಮಸಂಖ್ಯೆಯಲ್ಲಿ ಕರ್ತೃಸಹಿತ ಹಿರಿಯರು ಅಂಗುಷ್ಠ ಮತ್ತು ಅನಾಮಿಕಾ ಬೆರಳುಗಳಿಂದ ಒಂದೊಂದೇ ಅಸ್ಥಿಯನ್ನು ಪಾದ ಮೊದಲ್ಗೊಂಡು ಶಿರೋಪ್ರದೇಶದ ವರೆಗೆ ಹೆಕ್ಕಿ ತೆಗೆದು ಸ್ತ್ರೀಯರದ್ದಾದರೆ ಸ್ತನ (ಮೊಗಡು) ವಿರುವ ಹೊಸ ಮಣ್ಣಿನ ಪಾತ್ರೆಯಲ್ಲಿ ಶಬ್ದವಾಗದ ಹಾಗೆ ಇಡಬೇಕು.

ನಂತರ ಗೆರಸೆಯಿಂದ ಶೋಧಿಸಿ ಎಲ್ಲ ಎಲುಬುಗಳನ್ನೂ ಹೆಕ್ಕಿ ಕೊಡದಲ್ಲಿಡಬೇಕು. ಸಾಧ್ಯವಿದ್ದರೆ ಭಸ್ಮವನ್ನು ಗಂಗಾನದಿಯಲ್ಲಿ ಹಾಕಬೇಕು. ಬಳಿಕ ಮಳೆಗಾಲದ ಹೊರತು ಇತರ ದಿನಗಳಲ್ಲಿ ನೀರು ಬಾರದಿರುವ ಸ್ಥಳದಲ್ಲಿ ಒಂದು ಹೊಂಡವನ್ನು ತೋಡಿ **"ಉಪ-ಸರ್ಪಮಾತರಂ...."** ಎಂಬ ಮಂತ್ರವನ್ನು ಹೇಳುತ್ತ ಆ ಕೊಡವನ್ನು ಅದರಲ್ಲಿ ಇಡಬೇಕು. **"ಉಚ್ಛ್ವಂಚಸ್ವ..."** ಎಂಬ ಮಂತ್ರವನ್ನು ಹೇಳುತ್ತ ಪಾತ್ರೆಯ ಸುತ್ತಲೂ ಮಣ್ಣು ತುಂಬಿಸಿ,

ಭೂಮ ಊರ್ಣುಹಿ ॥ ಅನೇನ ಘಟಸ್ಯ ಸಮಂತಾತ್ ಖಾತೇ ಮೃದಂ ಕ್ಷಿಪೇತ್ ॥ ಉಚ್ಛ್ವಂ ಚ ಮಾನೇತಿ ಸಂಕುಸುಕಃ ಪೃಥಿವೀ ಮೃತ್ಯುಃ ಪಿತರೋ ವಾ ತ್ರಿಷ್ಟುಪ್ ॥ ಅಸ್ಥಿಕುಂಭಸಮೀಪೇ ಜಪೇ ವಿನಿಯೋಗಃ ॥ ಉಚ್ಛ್ವಂ ಚ ಮಾನಾ ಪೃಥಿವೀ ಸುತಿಷ್ಠತು ಸಹಸ್ರಂ ಮಿತ ಉಪಹಿಶ್ರಯಂತಾಂ ॥ ತೇ ಗೃಹಾಸೋ ಘೃತಶ್ಚು ತೋ ಭವಂತು ವಿಶ್ವಾಹಾಸ್ಮೈ ಶರಣಾಃ ಸಂತ್ವತ್ರ ॥ ಇತಿ ಮಂತ್ರಮಂಜಲಿಂ ಬದ್ಧ್ವಾ ಜಪೇತ್ ॥ ಉತ್ತೇ ಸ್ತಭ್ನಾಮೀತಿ ಸಂಕುಸುಕಃ ಪೃಥ್ವೀ ಪಿತರೋ ಮೃತ್ಯುರ್ವಾ ತ್ರಿಷ್ಟುಪ್ ॥ ಘಟಸ್ಯ ಮುಖಪಿಧಾನೇ ವಿನಿಯೋಗಃ ॥ ಉತ್ತೇಸ್ತಭ್ನಾಮಿ ಪೃಥಿವೀಂ ತ್ವತ್ಪರೀಮಂಲೋಗಂ ನಿದಧ-ನ್ಮೋಽಅಹಂರಿಷಂ ॥ ಏತಾಂ ಸ್ಥೂಣಾಂ ಪಿತರೋ ಧಾರಯಂತು ತೇತ್ರಾಯಮಃ ಸಾದನಾತೇಮಿನೋತು ॥ ಇತಿ ನವ ಖರ್ಪರಂ ಘಟೋಪರಿ ನಿದಧ್ಯಾತ್ ॥ ತತೋ ಯಥಾ ಕುಂಭೋ ನ ದೃಶ್ಯತೇ ತಥಾ ಮೃದಂ ನಿಧಾಯ ಪಶ್ಚಾದನ-ವೇಕ್ಷಮಾಣೋನ್ಯತ್ರ ಗತ್ವಾ ಸ್ನಾಯಾತ್ ॥

॥ ಇತಿ ಅಸ್ಥಿಸಂಚಯನಂ ॥

---

**"ಉಚ್ಛ್ವಂಚ ಮಾನಾ...."** ಎಂಬ ಮಂತ್ರವನ್ನು ಜಪಿಸಬೇಕು. ಬಳಿಕ **"ಉತ್ತೇ ಸ್ತಭ್ನಾಮಿ...."** ಎಂಬ ಮಂತ್ರವನ್ನು ಹೇಳುತ್ತ ಆ ಕೊಡದ ಮೇಲೆ ಮತ್ತೊಂದು ಮಣ್ಣಿನ ಪಾತ್ರೆಯನ್ನು ಮುಚ್ಚಬೇಕು. ಅನಂತರ ಆ ಪಾತ್ರೆಗಳು ಹೊರಗೆ ಕಾಣದಂತೆ ಮಣ್ಣು ಮುಚ್ಚಿ ಹಿಂತಿರುಗಿ ನೋಡದೆ ಬೇರೆ ಕಡೆ ಹೋಗಿ ಸ್ನಾನಮಾಡಬೇಕು.

॥ ಅಸ್ಥಿಸಂಚಯನ ಸಮಾಪ್ತ ॥

# ॥ ಅಸ್ಥಿಸಂಚಯನಶ್ರಾದ್ಧಂ ॥

**ಶ್ರೀಃ ॥ ತತೋ ಗೋಮಯೇನ ಶ್ಮಶಾನದೇಶಮನುಲಿಪ್ಯ ತತ್ರ ದಕ್ಷಿಣಾ ಪ್ರವಣಾಂ ತ್ರಿಕೋಣಾಂ ವೇದಿಂ ಕೃತ್ವಾ ದೇಶಕಾಲೌ ಸಂಕೀರ್ತ್ಯ ಪ್ರಾಚೀನಾ- ವೀತೀ ಅಮುಕಗೋತ್ರಸ್ಯಾಮುಕಪ್ರೇತಸ್ಯಪ್ರೇತತ್ವನಿವೃತ್ಯರ್ಥಂ ವೇದಿಕಾ- ರಾಧನಂ ಕರಿಷ್ಯೇ ॥ ತೂಷ್ಣೀಂ ತಿಲೋದಕಂ ಕೃತ್ವಾ ವೇದಿಂ ಹರಿದ್ರಾದಿ- ನಾಲಂಕೃತ್ಯ ತತ್ರೋದಕಪೂರ್ಣಕುಂಭಂ ನಿಧಾಯ ತದುಪರಿ ಮಹಾಂತಂ ಭಕ್ತ- ಪಿಂಡಂ ಸಂಸ್ಥಾಪ್ಯ ಅಮುಕಗೋತ್ರಾಯಾಮುಕಪ್ರೇತಾಯ ಭೋಜನಾರ್ಥ- ಮಯಂ ಪಿಂಡಃ ಪಾನಾರ್ಥಂ ಚೋದಕುಂಭೋದಕಮುಪತಿಷ್ಠತಾಮಿತಿ ಸಕುಶ- ತಿಲೋದಕಂ ಕ್ಷಿಪ್ತ್ವಾ ॥ ತತ್ಪಶ್ಚಿಮಭಾಗೇ ಶ್ಮಶಾನವಾಸಿನೇ ರುದ್ರಾಯ**

---

**ಅಸ್ಥಿಸಂಚಯನಶ್ರಾದ್ಧ:-** ಸ್ಮಶಾನಸ್ಥಳವನ್ನು ಗೋಮಯದಿಂದ ಶುದ್ಧಮಾಡಿ, ಸ್ಮಶಾನವಲ್ಲೇ ದಕ್ಷಿಣಾಗ್ರವಾದ ತ್ರಿಕೋಣಾಕಾರದ ವೇದಿಕೆಯನ್ನಾಗಿ ಮಾಡಿ ಅರಸಿನ ಹುಡಿಯಿಂದ ಅಲಂಕರಿಸಿ, ಅಪಸವ್ಯದಲ್ಲಿ ದೇಶಕಾಲಗಳನ್ನುಚ್ಚರಿಸಿ, **"...ಗೋತ್ರಸ್ಯ ....ಪ್ರೇತಸ್ಯ.... ಕರಿಷ್ಯೇ"** ಎಂದು ಸಂಕಲ್ಪ ಮಾಡಬೇಕು. ಮಂತ್ರವಿಲ್ಲದೆ ತಿಲೋದಕವನ್ನು ಕೊಟ್ಟು ವೇದಿಯ ಮಧ್ಯದಲ್ಲಿ ಒಂದು ಉದಕುಂಭವನ್ನೂ ಅದರ ಮೇಲೆ ದೊಡ್ಡ ಒಂದು ಪಿಂಡವನ್ನೂ **"...ಗೋತ್ರಾಯ....ಪ್ರೇತಾಯ... ಪಿಂಡಃ ಪಾನಾರ್ಥಂ.... ಉಪತಿಷ್ಠತಾಂ"** ಎಂದು ಹೇಳಿ ಇಟ್ಟು ತಿಲೋದಕವನ್ನು ಕೊಡಬೇಕು. ನಂತರ ಅದರ ಪಶ್ಚಿಮದಲ್ಲಿ, ಉತ್ತರದಲ್ಲಿ, ಪೂರ್ವದಲ್ಲಿ ಕ್ರಮವಾಗಿ **"ಶ್ಮಶಾನವಾಸಿನೇ ರುದ್ರಾಯ...., ಶ್ಮಶಾನವಾಸಿಭ್ಯಃ ಪ್ರೇತೇಭ್ಯಃ...., ಪ್ರೇತ-ಸಖಿಭ್ಯ...."** ಎಂದು ಮೂರು ಉದಕುಂಭಗಳನ್ನೂ ಪಿಂಡಗಳನ್ನೂ ಇಟ್ಟು ತಿಲೋದಕವನ್ನು ಕೊಡಬೇಕು. ನಂತರ ನಾಲ್ಕು ಛತ್ರಗಳನ್ನೂ, ಎಂಟು ಪಾದುಕೆಗಳನ್ನೂ, ಅಕ್ಕಿಹಿಟ್ಟಿನಿಂದ ನಾಲ್ಕು ರೊಟ್ಟಿಗಳನ್ನು ತಯಾರಿಸಿ, ವೇದಿಕೆಯ ಮೇಲೆ, **"ಓಂ ಕಾಲಾಯ ದಹನ-ಪತಯೇ ಇದಮುಪತಿಷ್ಠತಾಂ... ಓಂ ಮೃತ್ಯವೇ ದಹನಪತಯೇ...."** ಎಂದು ಮೊದಲಾಗಿ ನಾಲ್ಕು ಕಡೆಗಳಲ್ಲಿ ಒಂದೊಂದು ಛತ್ರ, ಎರಡೆರಡು ಪಾದುಕೆ ಮತ್ತು ಒಂದೊಂದು ರೊಟ್ಟಿಯನ್ನು ಸಮರ್ಪಿಸಬೇಕು. ನಮಸ್ಕಾರ ಮಾಡಿ ಸ್ನಾನಮಾಡಿ ಬಂದು ಅಸ್ಥಿಸಂಚಯನಶ್ರಾದ್ಧವನ್ನು ಮಾಡಬೇಕು.

ಶ್ರಾದ್ಧಮಾಡುವ ಸ್ಥಳವನ್ನು ಗೋಮಯದಿಂದ ಶುದ್ಧಮಾಡಿ ದೇಶಕಾಲಗಳನ್ನುಚ್ಚರಿಸಿ, **"....ಗೋತ್ರಸ್ಯ.....ಪ್ರೇತಸ್ಯ ..... ಅಸ್ಥಿಸಂಚಯನಶ್ರಾದ್ಧಂ ಕರಿಷ್ಯೇ"** ಎಂದು ಸಂಕಲ್ಪಮಾಡಿ ಅಪಸವ್ಯದಿಂದ ತೂಷ್ಣೀಯಲ್ಲಿ ಒಂದು ತಿಲೋದಕ ಕೊಟ್ಟು ಮಂಡಲ ಮಾಡಿ ದಕ್ಷಿಣಾಗ್ರವಾಗಿ

**ಅಯಂ ಪಿಂಡ ಉಪತಿಷ್ಠತಾಮಿತಿ ಕುಂಭೋಪರಿ ಪಿಂಡಾಂತರಂ ॥ ತತಃ ತದುತ್ತರತಃ ಶ್ಮಶಾನ ವಾಸಿಭ್ಯಃ ಪ್ರೇತೇಭ್ಯೋಽಯಂ ಪಿಂಡ ಉಪತಿಷ್ಠತಾಮಿತಿ ಕುಂಭೋಪರಿ ಪಿಂಡಾಂತರಂ ॥ ಪೂರ್ವತೋ ದಕ್ಷಿಣತೋ ವಾ ಪ್ರೇತಸಖಿ-ಭ್ಯೋಽಯಂ ಪಿಂಡ ಉಪತಿಷ್ಠತಾಮಿತಿ ಕುಂಭೋಪರಿ ಪಿಂಡಾಂತರಂ ॥ ಏವಂ ಚತುರಃ ಪಿಂಡಾನ್ ದತ್ವಾ ಪಿಂಡೋಪರಿ ಶ್ಮಶಾನವಾಸಿನೇ ರುದ್ರಾಯ ಶ್ಮಶಾನ-ವಾಸಿಭ್ಯಃ ಪ್ರೇತೇಭ್ಯಃ ಪ್ರೇತಸಖಿಭ್ಯಶ್ಚ ಕ್ರಮೇಣ ಇದಂ ತಿಲೋದಕಮುಪತಿಷ್ಠ-ತಾಮಿತಿ ಪ್ರತ್ಯೇಕಂ ದತ್ವಾ ಯವಪಿಷ್ಟೇನ ಪೋಲಿಕಾತ್ರಯಂ ಪಾದುಕಾಷಟ್ಕಂ ಛತ್ರತ್ರಯಂ ಚ ಸಂಪಾದ್ಯ ತನ್ಮಧ್ಯ ಏಕಾಂ ಪೋಲಿಕಾಂ ಪಾದುಕಾದ್ವಯಂ ಏಕಂ ಛತ್ರಂ ಚ ಕಾಲಾಯ ದಹನಪತಯೇ ಇದಮುಪತಿಷ್ಠತಾಮಿತಿ ದತ್ವಾ ಪೋಲಿಕಾಂ ಪಾದುಕಾದ್ವಯಂ ಛತ್ರಂ ಚ ಯಮಾಯ ದಹನಪತಯೇ ಇದ-ಮುಪತಿಷ್ಠತಾಮಿತಿ ದದ್ಯಾತ್ ॥ ತತೋ ಯಮಶ್ವಭ್ಯಾಮುಪತಿಷ್ಠತಾಮಿತಿ ಪೋಲಿಕಾಂ ಪಾದುಕಾಂ ಛತ್ರಂ ಚ ದತ್ವಾ ಸ್ನಾಯಾತ್ ॥**

**ತತೋ ದೇಶಕಾಲೌ ಸಂಕೀರ್ತ್ಯ ಅಮುಕಗೋತ್ರಸ್ಯಾಮುಕಪ್ರೇತಸ್ಯ ಪ್ರೇತತ್ವವಿಮೋಕ್ಷಾರ್ಥಂ ಅಸ್ಥಿಸಂಚಯನಶ್ರಾದ್ಧಂ ಕರಿಷ್ಯೇ ॥ ಪ್ರಾಚೀನಾವೀತೀ**

---

ಒಂದು ಕೂರ್ಚವನ್ನಿಟ್ಟು "**....ಗೋತ್ರ... ಪ್ರೇತ ಅಸ್ಥಿಸಂಚಯನಶ್ರಾದ್ಧೇ ಅಯಂ ತೇ ಕ್ಷಣ-ಉಪತಿಷ್ಠತಾಂ**" ಎಂದು ಆ ಕೂರ್ಚಬ್ರಾಹ್ಮಣನಿಗೆ ಒಂದು ದರ್ಭೆಯನ್ನು ಕೊಡಬೇಕು.

ನಂತರ "**..........ಗೋತ್ರ............ಪ್ರೇತ ಇದಂ ತೇ ಪಾದ್ಯಮುಪತಿಷ್ಠತಾಂ**", "**.......ಗೋತ್ರಸ್ಯ....... .... ಪ್ರೇತಸ್ಯ....... ಆಸನಮುಪತಿಷ್ಠತಾಂ**", "**ಗೋತ್ರ...... ಪ್ರೇತ...... ಆಚ್ಛಾದನ...**" ಎಂದು ಇವುಗಳನ್ನು ಕೊಟ್ಟು ನೆಲದಲ್ಲಿ ದಕ್ಷಿಣಾಗ್ರವಾಗಿ ಒಂದು ದರ್ಭೆಯನ್ನು ಹಾಕಿ ಅದರ ಮೇಲೆ ಒಂದು ಅರ್ಘ್ಯಪಾತ್ರವನ್ನಿಟ್ಟು ಒಂದು ಪವಿತ್ರಕೂರ್ಚ, ನೀರು ಮತ್ತು ಎಳ್ಳುಗಳನ್ನು ಅದರಲ್ಲಿ ಹಾಕಿ "**.... ಗೋತ್ರ .... ಪ್ರೇತ ಅಸ್ಥಿಸಂಚಯನ ಶ್ರಾದ್ಧೇ ಇದಮರ್ಘ್ಯಂ ತವ್ಯೋಪತಿಷ್ಠತಾಂ**" ಎಂದು ಅರ್ಘ್ಯವನ್ನು ಕೊಟ್ಟು ಗೋತ್ರನಾಮಗಳೊಂದಿಗೆ ಗಂಧ, ತುಲಸೀಪತ್ರ, ಭೃಂಗರಾಜಪತ್ರಗಳನ್ನೂ ಕೊಡಬೇಕು. ಬಳಿಕ ಅಕ್ಕಿ ಜಲಪಾತ್ರ ಮತ್ತು ದಕ್ಷಿಣೆಯನ್ನು "**... ಗೋತ್ರಾಯ.... ಪ್ರೇತಾಯ ಆಮಾನ್ನಂ ತನ್ನಿಷ್ಕ್ರಯಂ ವಾ ಸೋದಕುಂಭಂ ಸದಕ್ಷಿಣಮುಪತಿಷ್ಠತಾಂ**" ಎಂದು ಕೊಡಬೇಕು.

ಅನಂತರ "**ಅಸ್ಥಿಸಂಚಯನಶ್ರಾದ್ಧೇ ಪಿಂಡಪ್ರದಾನಂ ಕರಿಷ್ಯಾಮಿ**" ಎಂದು ಸಂಕಲ್ಪ ಮಾಡಿ ನೆಲವನ್ನು ಪ್ರೋಕ್ಷಿಸಿ ದಕ್ಷಿಣಾಗ್ರವಾಗಿ ಒಂದು ದರ್ಭೆಯನ್ನಿಟ್ಟು ಅಕ್ಕಿ ಹಿಟ್ಟಿನ ಪಿಂಡವನ್ನು ಕೈಯಲ್ಲಿ ಹಿಡಿದು, "**.......ಗೋತ್ರಾಯ.......ಪ್ರೇತಾಯ.......ಅಸ್ಥಿ.......ಪಿಂಡ ಉಪತಿಷ್ಠತಾಂ**" ಎಂದು ಹೇಳಿ ಪಿಂಡವನ್ನು ಆ ದರ್ಭೆಯ ಮೇಲೆ ಇಡಬೇಕು. ಬಳಿಕ ಪಿಂಡಕ್ಕೆ ತಿಲೋದಕ,

**ತಿಲೋದಕಂ ಕೃತ್ವಾ ಉದಙ್ಮುಖಂ ದರ್ಭಬಟುಂ ಸಂಸ್ಥಾಪ್ಯ ಅಮುಕಗೋತ್ರ-ಸ್ಯಾಮುಕಪ್ರೇತಸ್ಯ ಅಸ್ಥಿಸಂಚಯನಶ್ರಾದ್ಧೇ ಕ್ಷಣ ಉಪತಿಷ್ಠತಾಮಿತ್ಯಾದಿ ಪಾದ್ಯಾಸನಾರ್ಘ್ಯಾಚ್ಛಾದನಾಂತಂ ಅಮುಕಪ್ರೇತೇತ್ಯಾದಿ ತತ್ತದ್ವಿಭಕ್ತ್ಯಾ ಉಪತಿಷ್ಠ-ತಾಮಿತಿ ದತ್ವಾ ಪಾಣಿಹೋಮಂ ಕೃತ್ವಾ ಅನಾದಿನಿಧನ ಇತಿ ಶ್ಲೋಕಂ ಪಠಿತ್ವಾಭಿರಮ್ಯತಾಮಿತ್ಯಾದಿ ಪಿಂಡಂ ಪ್ರವಾಹ್ಯ ಸ್ನಾಯಾತ್ ॥**

**॥ ಇತಿ ಅಸ್ಥಿಸಂಚಯನಶ್ರಾದ್ಧಂ ॥**

---

ಗಂಧ, ತುಲಸೀಪತ್ರ, ಭೃಂಗರಾಜಪತ್ರಾದಿಗಳನ್ನಿತ್ತು, ತಾಂಬೂಲ, ದಕ್ಷಿಣೆಗಳನ್ನೂ ಕೊಡಬೇಕು. ಪಿಟ್ಟಿನ ಶೇಷದಿಂದ ವಿಕಿರಾನ್ನವನ್ನೂ ಕೊಟ್ಟು **"ಅನಾದಿನಿಧನೋ...."** ಶ್ಲೋಕ ಹೇಳಿ **"ಅಭಿರಮ್ಯತಾಂ"** **"ಅಭಿರತಾಃ ಸ್ಮಃ"** ಎಂದು ಆಚಾರ್ಯನಿಂದ ಪ್ರತಿವಚನವನ್ನು ಪಡೆದು ಪಿಂಡೋದ್ವಾಸನ ಮಾಡಿ ಸ್ನಾನಮಾಡಬೇಕು.

॥ ಅಸ್ಥಿಸಂಚಯನಶ್ರಾದ್ಧ ಸಮಾಪ್ತ ॥

# ॥ ದ್ವಿತೀಯಾದಿದಿನವಿಧಿಃ ॥

**ಶ್ರೀಃ ॥ ತತಃ ಪೂರ್ವದಿನಕೃತ್ಯದೇಶೇ ದ್ವಿತೀಯದಿನವಿಧಿಂ ಕುರ್ಯಾತ್ ॥ ಆಚಮ್ಯ ಪ್ರಾಣಾನಾಯಮ್ಯ ದೇಶಕಾಲೌ ಸಂಕೀರ್ತ್ಯ ಪ್ರಾಚೀನಾವೀತೀ ಅಮುಕಗೋತ್ರಸ್ಯಾಮುಕಪ್ರೇತಸ್ಯ ಪ್ರೇತತ್ವನಿವೃತ್ತ್ಯಾ ಉತ್ತಮಲೋಕಪ್ರಾಪ್ತ್ಯರ್ಥಂ ದ್ವಿತೀಯದಿನವಿಧಿಂ ಕರಿಷ್ಯೇ ಇತಿ ಸಂಕಲ್ಪ್ಯ ಹವಿಃ ಶ್ರಪಯಿತ್ವಾ ಪ್ರಥಮದಿನ-ವತ್ಸಂಕಲ್ಪಪೂರ್ವಕಂ ಮೃತ್ತಿಕಾಸ್ನಾನತ್ರಯಂ ವಿಧಾಯ ಪ್ರಥಮದಿನಪರಿ-ಗೃಹೀತತಿಲಾಂಜಲಿದಾನಪಕ್ಷಾಶ್ರಯಣೇನ ಅಶ್ಮನಿ ಸಂಕಲ್ಪಪೂರ್ವಕಂ ಅಂಜಲಿ-ದಾನಂ ಕೃತ್ವಾ ಪ್ರತ್ಯಂಜಲಿಂ ಸ್ನಾತ್ವಾ ಅಮುಕಗೋತ್ರಸ್ಯಾಮುಕಪ್ರೇತಸ್ಯ ದ್ವಿತೀಯೇಹನಿ ಚಕ್ಷುಃ ಶ್ರೋತ್ರನಾಸಾವಯವನಿಷ್ಪತ್ತ್ಯರ್ಥಂ ಅಯಂ ಪಿಂಡ ಉಪತಿಷ್ಠತಾಂ ॥ ತೃತೀಯೇಹನಿ ಭುಜವಕ್ಷೋಗ್ರೀವಾಮುಖಾವಯವ......... (೩) ಚತುರ್ಥೇ ಪಾರ್ಶ್ವಕುಕ್ಷಿಕಟಿನಾಭಿಗುದಲಿಂಗಾವಯವ....................(೪) ಪಂಚಮೇ ಊರುಜಾನುಜಂಘಾವಯವ...............(೫) ಷಷ್ಠೇ ಗುಲ್ಫಪಾದಾಂ-ಗುಲಿಮರ್ಮಾದ್ಯವಯವ (೬) ಸಪ್ತಮೇ ಅಸ್ಥಿಮಜ್ಜಾಶಿರಾವಯವ..............(೭) ಅಷ್ಟಮೇ ನಖರೋಮಾದ್ಯವಯವ...............(೮) ನವಮೇ ಮರ್ಮವೀರ್ಯಾದಿ ಸರ್ವಾವಯವ............(೯) ದಶಮೇ ಕ್ಷುತ್ಪಿಪಾಸಾನಿವೃತ್ತ್ಯರ್ಥಮಿತಿ ತತ್ತದ್ದಿನೋ-ಹೇನ ದರ್ಭಶಿಖೋಪರಿ ಪಿಂಡಂ ದತ್ವಾ ತುಲಸೀಭೃಂಗರಾಜದಾನಾದಿ ಕೃತ್ವಾ ಅನಾದಿಶ್ಲೋಕಪಾಠ ಪಿಂಡಪ್ರವಾಹಣಸ್ನಾನಾಂತಂ ಪೂರ್ವವತ್ ॥ ತೃತೀಯ-ಪಂಚಮಸಪ್ತಮನವಮಾದಿದಿನೇಷು ತತ್ತದ್ದಿನೋಹೇನ ಪೂರ್ವೋಕ್ತವದ್ವಿಷಮ-ಶ್ರಾದ್ಧಂ ಕುರ್ಯಾತ್ ॥ ಇತಿ ದ್ವಿತೀಯಾದಿದಿನವಿಧಿಃ ॥**

---

ಮೊದಲನೆಯ ದಿನದಂತೆಯೇ ಎರಡನೆಯ ದಿನದಿಂದ ಹತ್ತನೆಯ ದಿನದ ವರೆಗಿನ ನಿತ್ಯವಿಧಿಯನ್ನು ಮಾಡಬೇಕು. ಸಂಕಲ್ಪದಲ್ಲಿ ಆಯಾ ದಿನಕ್ಕೆ ಸರಿಯಾಗಿ "**ದ್ವಿತೀಯ - ದಿನವಿಧಿಂ**" "**ತೃತೀಯದಿನವಿಧಿಂ**" ಎಂದು ಹೇಳಿಕೊಳ್ಳಬೇಕು. ಅಂತೆಯೇ ಪಿಂಡ ಹಾಕುವಾಗ, "**ದ್ವಿತೀಯೇಹನಿ-ಚಕ್ಷುಃ ಶ್ರೋತ್ರ.... ನಿಷ್ಪತ್ತ್ಯರ್ಥಂ**" ಎಂದು ಮೊದಲಾಗಿ ಮೇಲೆ ಹೇಳಿದಂತೆ ಆಯಾ ದಿನವನ್ನು ಅನುಸರಿಸಿ ಬೇರೆಯಾಗಿ ಹೇಳಿಕೊಳ್ಳಬೇಕು.

ಚರುವನ್ನು ಬೇಯಿಸಿ ಪಿಂಡವನ್ನು ತಯಾರಿಸುವುದು, ಮೃತ್ತಿಕಾಸ್ನಾನಾದಿಗಳು, ಶಿಲೆಯ ಮೇಲೆ ಕೊಡುವ ತಿಲಾಂಜಲಿಗಳು, ಇತ್ಯಾದಿ ಕರ್ಮಗಳನ್ನೆಲ್ಲ ಪ್ರಥಮದಿನದಂತೆಯೇ ಮಾಡಬೇಕು. ಮೂರು, ಐದು, ಏಳು ಮತ್ತು ಒಂಭತ್ತನೆಯ ದಿನಗಳಲ್ಲಿ ವಿಷಮಶ್ರಾದ್ಧವನ್ನೂ ಮಾಡಬೇಕು.

॥ ದ್ವಿತೀಯಾದಿದಿನವಿಧಿ ಸಮಾಪ್ತ ॥

# ॥ ದಶಮದಿನವಿಧಿಃ ॥

**ಶ್ರೀಃ ॥ ಅಥ ಕಾಕಬಲಿಃ ॥ ಪ್ರಾತ್ಯಾಹಿಕಪಿಂಡದೇಶೇ ಅನ್ಯತ್ರ ವಾ ಮೃದಾ ತ್ರಿಕೋಣಾಂ ವೇದಿಂ ಕೃತ್ವಾ ಗೋಮಯೇನ ಸಂಮೃಜ್ಯ ಹರಿದ್ರಾದಿ-ನಾಲಂಕೃತ್ಯ ಕರ್ತಾ ತಸ್ಯಾಂ ಮಧ್ಯೇ ಪೂರ್ವಾದಿ ಚತುರ್ದಿಕ್ಷು ಜಲಪೂರ್ಣಂ ಕುಂಭಪಂಚಕಂ ಸಂಸ್ಥಾಪ್ಯ ತೇಷು ಸ್ಥಾಪನಕ್ರಮೇಣೈವೌದನಪಿಂಡಾಂಶ್ಚ ನಿಧಾಯ ಕ್ರಮೇಣ ಸರ್ವತ್ರ ನಿವೇದಯೇತ್ ॥ ಅಮುಕಗೋತ್ರಾಯಾಮುಕಪ್ರೇತಾಯ ಕ್ಷುತ್ಪಿಪಾಸಾನಿವೃತ್ತ್ಯರ್ಥಂ ಅಯಂ ಪಿಂಡಃ ಸೋದಕುಂಭ ಉಪತಿಷ್ಠತಾಮಿತಿ ಮಧ್ಯಸ್ಥಂ ನಿವೇದಯೇತ್ ॥ ೧ ॥ ಪ್ರೇತಸಖಿಭ್ಯಃ ಕ್ಷುತ್ಪಿಪಾಸಾ.........ಇತಿ ಪೂರ್ವಸ್ಥಂ ॥ ೨ ॥ ವೈವಸ್ವತಾಯ ಯಮಾಯ ಕ್ಷುತ್ಪಿಪಾಸಾ............ಇತಿ ದಕ್ಷಿಣಸ್ಥಂ ॥ ೩ ॥ ವಾಯಸೇಭ್ಯಃ ಕ್ಷುತ್ಪಿಪಾಸಾ........ಇತಿ ಪಶ್ಚಿಮಸ್ಥಂ ॥ ೪ ॥ ಪ್ರೇತಾಧಿಪತಯೇ ರುದ್ರಾಯ ಕ್ಷುತ್ಪಿಪಾಸಾ..........ಇತಿ ಉತ್ತರಸ್ಥಂ ॥ ೫ ॥ ಪಿಂಡದಾನಕ್ರಮೇಣೈವ ತಿಲೋದಕಮುಪತಿಷ್ಠತಾಮಿತಿ ಪ್ರತ್ಯೇಕಂ ತಿಲೋದಕಂ ದತ್ವಾ ಪಾದುಕಾದ್ವಯಂ ಛತ್ರಂ ಪತಾಕಾ ಪೋಲಿಕಾ ಚ ಉಪತಿಷ್ಠತಾಮಿತಿ ಸರ್ವೇಭ್ಯಃ ಪ್ರತ್ಯೇಕಂ ದದ್ಯಾತ್ ॥ ತತಃ ಪಶ್ಚಿಮದೇಶಸ್ಥಂ ಪಿಂಡಂ ವಾಯಸೋ ಯಾವದ್ಭಕ್ಷಯಂತಿ ತಾವತ್ತಿಷ್ಠೇತ್ ॥ ತತೋಽಶ್ಮಾನಂ ತಿಲತೈಲೇನಾಭ್ಯಜ್ಯ ಜಲೇ ಕ್ಷಿಪೇತ್ ॥ ಕೇಚಿತ್ ಪ್ರೇತತ್ವನಿವೃತ್ತ್ಯಾ ಉತ್ತಮಲೋಕಪ್ರಾಪ್ತ್ಯರ್ಥಂ ದಶ-ದಾನಾನ್ಯಪ್ಯತ್ರ ಕುರ್ವಂತಿ ॥ ತತಃ ಕರ್ತ್ರಾ ಪ್ರಾರ್ಥಿತಾಃ ಸರ್ವೇ ಬಾಂಧವಾಃ**

---

**ಹತ್ತನೆಯ ದಿನದ ವಿಧಿ:-** ತಿಲಾಂಜಲಿ ನಿತ್ಯಬಲಿಶ್ರಾದ್ಧಾದಿಗಳನ್ನು ಮಾಡಿ ಪಿಂಡಕ್ಕೆ ಚರುವನ್ನು ಬೇಯಿಸಿಕೊಂಡು ಮಣ್ಣಿನಿಂದ ತ್ರಿಕೋಣಾಕಾರದ ವೇದಿಯನ್ನು ನಿರ್ಮಿಸಿ, ಗೋಮಯದಿಂದ ಶುದ್ಧೀಕರಿಸಿ, ಅರಸಿನಹುಡಿಯಿಂದ ಅಲಂಕರಿಸಿ, ಅದರ ಮೇಲೆ ನೀರು ತುಂಬಿದ ೫ ಉದಕುಂಭಗಳನ್ನೂ, ಕುಂಭಗಳ ಮೇಲೆ ೫ ಪಿಂಡಗಳನ್ನೂ ಇಟ್ಟು, **"......ಗೋತ್ರಾಯ.......ಪ್ರೇತಾಯ.......ಉಪತಿಷ್ಠತಾಂ"** ಎಂಬಲ್ಲಿಂದ **"ಪ್ರೇತಾಧಿಪತಯೇ ರುದ್ರಾಯ...."** ಎಂಬಲ್ಲಿ ವರೆಗೆ ೫ ಉದಕುಂಭ ಮತ್ತು ಪಿಂಡಗಳನ್ನು ಆಯಾ ದಿಕ್ಕುಗಳಲ್ಲಿ ನಿವೇದಿಸಬೇಕು. ಇದೇ ಕ್ರಮದಲ್ಲಿ ೫ ಕಡೆಗಳಲ್ಲಿ ತಿಲೋದಕವನ್ನೂ ಕೊಡಬೇಕು. ನಂತರ ಪ್ರತಿಯೊಂದಕ್ಕೂ ಎರಡೆರಡು ಪಾದುಕೆಗಳು, ಒಂದೊಂದು ಛತ್ರ ಪತಾಕೆ ಮತ್ತು ರೊಟ್ಟಿಗಳನ್ನು ಸಮರ್ಪಿಸಬೇಕು. ಪಶ್ಚಿಮದಲ್ಲಿ ಕಾಗೆಗಳಿಗೆಂದು ಸಮರ್ಪಿಸಿದ ಪಿಂಡವನ್ನು ಕಾಗೆಯು ಬಂದು ತಿನ್ನುವ ತನಕ ಅಲ್ಲಿ ಕಾದಿರಬೇಕು. ಅನಂತರ ಎಳ್ಳೆಣ್ಣೆಯನ್ನು ಸವರಿ ಪ್ರೇತಶಿಲೆಯನ್ನು ನೀರಿನಲ್ಲಿ ಬಿಡಬೇಕು. ಕೆಲವರು ಈ ಸಂದರ್ಭದಲ್ಲಿ ದಶದಾನಗಳನ್ನೂ ಮಾಡುತ್ತಾರೆ. ಅನಂತರ ಕರ್ತೃ

**ಸಂಬಂಧಿನಶ್ಚ ತ್ರೀಂಸ್ತ್ರೀನ್ ಧರ್ಮೋದಕಾಂಜಲೀನೇಕ್ಕೈಕಂ ವಾಂಜಲಿಂ ತೀರೇ ಪ್ರೇತೋದ್ದೇಶೇನ ದದ್ಯುಃ ॥ ತತಃ ಪುತ್ರಾದೀನಾಂ ಯಥಾಚಾರಂ ವಾಸಸಾಂ ತ್ಯಾಗಃ ಕೇಶಶ್ಮಶ್ರುವಪನಂ ನಖಚ್ಛೇದಾದಿ ಚ ॥ ತತಃ ಸರ್ವೇ ಸಗೋತ್ರಾಃ ಪುರಂಧ್ರ್ಯಶ್ಚ ಯಥಾದೇಶಾಚಾರಂ ಗೌರಸರ್ಷಪಕಲ್ಕೇನ ತಿಲಾಮಲಕಕಲ್ಕೇನ ವಾ ಅಭ್ಯಕ್ತಾಃ ಏಕಕಾಲೇ ಜಲೇ ಸಶಿರಸ್ಕಂ ಸ್ನಾತ್ವಾಚಮ್ಯ ವಾಗ್ಯತಾಃ ವೃಷಭಂ ಗಾಂ ಸುವರ್ಣಂ ಚ ಸ್ಪೃಷ್ಟ್ವಾ ಶುಕ್ಲವಾಸಸೋ ಗೃಹಂ ಗತ್ವಾ ಸರ್ವೇ ತತ್ರೈವ ಭುಂಜೀರನ್ ॥**

**॥ ಇತಿ ದಶಾಹಕೃತ್ಯಂ ॥**

---

ಮತ್ತು ಇತರರೆಲ್ಲರೂ ಮನೆಗೆ ಹೋಗಿ ಅಲ್ಲಿ ಹಚ್ಚಿಟ್ಟ ದೀಪದ ಬತ್ತಿಯನ್ನು ಬದಲಿಸಿ ಹಾಲು ಮತ್ತು ನೀರಿನ ಪಾತ್ರೆಯನ್ನು ವಿಸರ್ಜಿಸಿ, ಸ್ಥಳ ಶುದ್ಧಿಮಾಡಿ ನೀರಿನ ಬಳಿಗೆ ಬಂದು ಮೂರು ಮೂರು ಅಥವಾ ಒಂದೊಂದು ಧರ್ಮೋದಕಾಂಜಲಿಯನ್ನು ಕೊಡಬೇಕು. ಬಳಿಕ ಎಲ್ಲರೂ ಬಟ್ಟೆ ಬದಲಾಯಿಸಿ, ಕ್ಷೌರ ಮಾಡಿಕೊಂಡು ಬಿಳಿಬಟ್ಟೆಗಳನ್ನು ಧರಿಸಿ ಮನೆಗೆ ಹೋಗಿ ಅಲ್ಲಿಯೇ ಭೋಜನವನ್ನು ಮಾಡಬೇಕು.

॥ ದಶಮದಿನವಿಧಿ ಸಮಾಪ್ತ ॥

೧೭

## ॥ ಏಕಾದಶಾಹಕೃತ್ಯಂ ॥

ಶ್ರೀಃ ॥ ತತ್ರ ಪ್ರಾತರುತ್ಥಾಯ ಗೃಹಾನುಲೇಪನಂ ಕೃತ್ವಾ ಸ್ಪೃಷ್ಟಾನಾಂ ಮೃದ್ಭಾಂಡಾನಾಂ ತ್ಯಾಗಃ ಸರ್ವೇಷಾಂ ಸಪಿಂಡಾನಾಂ ಸಚೈಲಂ ಸ್ನಾನಂ ತತ್ರ ಸ್ಪೃಷ್ಟವಸ್ತ್ರಾದೀನಾಂ ಪ್ರಕ್ಷಾಲನಂ ತತ್ರ ಮಾಧವಪ್ರಾಯಶ್ಚಿತ್ತಗ್ರಂಥೇ ಚ ಶ್ವಪಾಕಮಪಿ ಶೋಧಯೇದಿತಿ ಬ್ರಹ್ಮಕೂರ್ಚಹೋಮಸ್ಯಾತ್ಯಂತಂ ಪಾಪದಾಹ-ಕತ್ವಶ್ರವಣಾತ್ ಕರ್ತ್ರಾ ಸ್ವಸ್ಯಾಶೌಚಜನ್ಯ ಸಕಲದೋಷನಿವೃತ್ತ್ಯೈ ಬ್ರಹ್ಮಕೂರ್ಚ-ಹೋಮಂ ಕೃತ್ವಾ ಪಂಚಗವ್ಯಪ್ರಾಶನಂ ಕಾರ್ಯಂ ॥ ಅಥವಾ ಪಂಚಗವ್ಯ - ಪ್ರಾಶನ ಮಾತ್ರೇಣಾಪಿ ಪಾಪಕ್ಷಯಶ್ರವಣಾದವಶ್ಯಂ ತತ್ಕಾಲಂ ಕೇವಲಂ ಪಂಚಗವ್ಯಂ ಸಂಪಾದ್ಯ ಪ್ರಾಶಯೇನ್ನ ಹೋಮಸ್ಯೈವಾವಶ್ಯಕತ್ವಂ ಬ್ರಹ್ಮ-ಕೂರ್ಚಹೋಮಸ್ಯ ದ್ವಿದಿನಸಾಧ್ಯತ್ವೇನೇದಾನೀಮಸಂಭವಾತ್ ॥ ಕರ್ತಾಚಮ್ಯ ಪ್ರಾಣಾನಾಯಮ್ಯ ದೇಶಕಾಲೌ ಸ್ಮೃತ್ವಾ ಮಮಾಶೌಚಜನ್ಯಾಶುಚಿತ್ವಾದಿ-ಸಕಲದೋಷನಿವೃತ್ತಿಪೂರ್ವಕಶರೀರಶುದ್ಧಿದ್ವಾರಾ ವೃಷೋತ್ಸರ್ಗಾದ್ಯಧಿಕಾರಸಿದ್ಧ್ಯರ್ಥಂ ಪಂಚಗವ್ಯಪ್ರಾಶನಮಹಂ ಕರಿಷ್ಯ ಇತಿ ಸಂಕಲ್ಪ್ಯ ತಾಮ್ರೇ ಪಾಲಾಶೇ ವಾ ಪಾತ್ರೇ ತಾಮ್ರಾಯಾ ಗೋಮೂತ್ರಮಷ್ಟಮಾಷಪ್ರಮಾಣಂ ತತ್ಸವಿತುರಿತಿ ಗಾಯತ್ರ್ಯಾದಾಯ ಗಂಧದ್ವಾರಾಮಿತಿ ಶ್ವೇತಗೋಃ ಶಕೃತ್ ಷೋಡಶಮಾಷ-ಮಾದಾಯ ಆಪ್ಯಾಯಸ್ವೇತಿ ಪೀತಗೋಃ ಕ್ಷೀರಂ ದ್ವಾದಶಮಾಷಂ ದಧಿಕ್ರಾವ್ಣ ಇತಿ ನೀಲಗೋರ್ದಧಿ ದಶಮಾಷಂ ಶುಕ್ರಮಸಿಜ್ಯೋತಿರಸಿತೇಜೋಸಿ ಇತಿ ಕೃಷ್ಣ

---

**ಹನ್ನೊಂದನೆಯ ದಿನದ ಕ್ರಿಯಾಭಾಗಃ-** ಪ್ರಾತಃಕಾಲ ಬೇಗನೆ ಎದ್ದು ಮನೆಯ ಒಳ-ಹೊರ ಭಾಗಗಳನ್ನು ಗುಡಿಸಿ ಗೋಮಯದಿಂದ ಸಾರಿಸಿ ಶುದ್ಧೀಕರಿಸಿ, ಅದುತನಕ ಉಪಯೋಗಿಸಿದ ಮಣ್ಣಿನ ಪಾತ್ರೆಗಳನ್ನೆಲ್ಲ ವಿಸರ್ಜಿಸಬೇಕು. ಸಪಿಂಡರಾದವರೆಲ್ಲರೂ ಸಚೈಲಸ್ನಾನ ಮಾಡಿ ಬಟ್ಟೆಗಳನ್ನೆಲ್ಲ ತೊಳೆಯಬೇಕು. ಬಳಿಕ ಆಶೌಚನಿವೃತ್ತಿಗಾಗಿ ಬ್ರಹ್ಮಕೂರ್ಚಹೋಮವನ್ನೂ, ಪಂಚಗವ್ಯಪ್ರಾಶನವನ್ನೂ ಮಾಡಬೇಕು. ಬ್ರಹ್ಮಕೂರ್ಚ ಹೋಮವು ಎರಡು ದಿನಗಳಲ್ಲಿ ಮಾಡಬಹುದಾದ ಕರ್ಮಭಾಗವಾದುದರಿಂದ, ಅದನ್ನು ಮಾಡದೆ ಕೇವಲ ಪಂಚಗವ್ಯ ಪ್ರಾಶನವನ್ನು ಮಾಡಿದರೂ ಸಾಕು. ಕರ್ತೃವು ಆಚಮನ ಪ್ರಾಣಾಯಾಮ ದೇಶಕಾಲ ಸ್ಮರಣಾದಿಗಳನ್ನು ಮಾಡಿ ತಾಮ್ರಪಾತ್ರೆ ಅಥವಾ ಪಲಾಶದ ಎಲೆಗಳಿಂದ ತಯಾರಿಸಿದ ದೊನ್ನೆಯಲ್ಲಿ, ಉದ್ದಿನ ಎಂಟು ಕಾಳಿನಷ್ಟು ಕೆಂಪು ದನದ ಗೋಮೂತ್ರ, ಹದಿನಾರು ಉದ್ದಿನ ಕಾಳಿನಷ್ಟು ಬಿಳಿ ದನದ ಗೋಮಯ, ಪೀತವರ್ಣದ ದನದ ಹನ್ನೆರಡು ಉದ್ದಿನ ಕಾಳಿನಷ್ಟು

ಗೋರ್ಘೃತಮಷ್ಟಮಾಷಮಾದಾಯ ತತ್ರ ದೇವಸ್ಯತ್ವೇತಿ ಕುಶೋದಕಂ ಚತುರ್ಮಾಷಂ ಪ್ರಕ್ಷಿಪ್ಯ ಪ್ರಣವೇನೈವ ಯಜ್ಞೀಯಕಾಷ್ಠೇನಾಲೋಡ್ಯ ಪ್ರಣವೇನಾಭಿಮಂತ್ರ್ಯ ಪ್ರಣವೇನ ಪಿಬೇತ್ ॥ ಕರ್ತೃಭಿನ್ನಾಃ ಸರ್ವೇಽಪಿ ಯಥಾಚಾರಂ ಪಿಬೇಯುರಾಚಮೇಯುಶ್ಚ ॥ ಏವಂ ಪಂಚಗವ್ಯಪ್ರಾಶನೇನ ಶರೀರಶುದ್ಧಿಂ ಸಂಪಾದ್ಯ ವೃಷೋತ್ಸರ್ಗಾದಿಕಂ ಕರ್ಮ ಕುರ್ಯಾತ್ ॥ ಕ್ವಚಿತ್ಪಂಚಕ ತ್ರಿಪಾದನಕ್ಷತ್ರ ತ್ರಿಪುಷ್ಕರ ದ್ವಿಪುಷ್ಕರಾದಿಸಂಭಾವನಾಯಾಂ ಸೂತಕಾಂತೇ ತತಃ ಪುತ್ರಃ ಕುರ್ಯಾಚ್ಛಾಂತಿಕಮಂತತ ಇತಿ ವಚನೇ ಅಂತಶಬ್ದಾತ್ ಪುತ್ರೇಣ ಸೂತಕನಿವೃತ್ತಿಸ್ನಾನೋತ್ತರಂ ಪ್ರಾತರ್ವೃಷೋತ್ಸರ್ಗಮಹೈಕೋದ್ದಿಷ್ಟಶ್ರಾದ್ಧಾತ್ಪ್ರಾಗೇವ ಶಾಂತಿಃ ಕರ್ತವ್ಯೇತಿ ಪ್ರತೀಯತೇ ॥ ಅತಃ ಪೂರ್ವಂ ಶಾಂತಿಕಂ ತತೋವೃಷೋತ್ಸರ್ಗಾದಿ ಸಂಗೃಹೀತಂ ॥

॥ ಇತಿ ಏಕಾದಶಾಹಕೃತ್ಯಂ ॥

---

ಹಾಲು, ನೀಲವರ್ಣದ ದನದ ಹತ್ತು ಉದ್ದಿನ ಕಾಳಿನಷ್ಟು ಮೊಸರು, ಕಪ್ಪುಬಣ್ಣದ ದನದ ಎಂಟು ಉದ್ದಿನ ಕಾಳಿನಷ್ಟು ತುಪ್ಪವನ್ನು ಗಾಯತ್ರಿಯಿಂದಾರಂಭಿಸಿ ಆಯಾ ಮಂತ್ರಗಳಿಂದ ಒಂದುಗೂಡಿಸಿ ಕುಶೋದಕವನ್ನು ಸೇರಿಸಿ, ಯಾವುದಾದರೊಂದು ಸಮಿಧೆಯಿಂದ ಕಲಗಿಸಿ, ಸರಿಯಾಗಿ ಬೆರಸಿ 'ಓಂ' ಎಂಬ ಪ್ರಣವವನ್ನು ಉಚ್ಚರಿಸಿ ಪ್ರಾಶನಮಾಡಬೇಕು.

॥ ಏಕಾದಶಾಹಕೃತ್ಯ ಸಮಾಪ್ತ ॥

# ॥ ಪಂಚಕತ್ರಿಪಾದಸಾಧಾರಣಶಾಂತಿಃ ॥

**ಶ್ರೀಃ ॥ ಅತ್ರ ವಿಶೇಷಃ ॥ ನಕ್ಷತ್ರಾಂತೇ ಮೃತಸ್ಯ ಪಂಚಕೇ ದಾಹಪ್ರಾಪ್ತೌ ದಾಹಕಾಲೇ ಪುತ್ತಲವಿಧಿರೇವ ನ ಶಾಂತಿಕಂ ॥ ಪಂಚಕಮೃತಸ್ಯ ಅಶ್ವಿನ್ಯಾಂ ದಾಹಪ್ರಾಪ್ತೌ ಶಾಂತಿಕಮೇವ ನ ಪುತ್ತಲವಿಧಿಃ ॥ ತತ್ರ ಸೂತಕಾಂತೇ ತಿಲಹೋಮಂ ಘೃತದಾನಂ ಚ ಕೃತ್ವಾ ಕಾಂಸ್ಯಪಾತ್ರೇ ತೈಲಂ ಪ್ರಕ್ಷಿಪ್ಯ ತತ್ರಾತ್ಮಬಿಂಬಂ ವೀಕ್ಷ್ಯ ವಿಪ್ರಾಯ ದದ್ಯಾತ್ ॥ ಶಾಂತಿಶ್ಚ ಲಕ್ಷಹೋಮರುದ್ರಜಪಾನ್ಯತರರೂಪಾ ಯಥಾವಿಭವಂ ಕಾರ್ಯಾ ॥ ಅಥವಾ ಕುಂಭೇ ಯಮಪ್ರತಿಮಾಂ ಸಂಪೂಜ್ಯ ಸ್ವಗೃಹ್ಯೋಕ್ತವಿಧಿನಾ ಅಗ್ನಿಪ್ರತಿಷ್ಠಾಪನಾನ್ವಾಧಾನಾದಿ ಚರುಶ್ರಪಣಾಂತಂ ಕೃತ್ವಾ ಆಜ್ಯಭಾಗಾಂತೇ ನಾಮಭಿಶ್ಚತುರ್ದಶ ಚರ್ವಾಹುತೀರ್ಜುಹುಯಾತ್ ॥ ಯಮಾಯ ಸ್ವಾಹಾ ಧರ್ಮರಾಜಾಯ ಮೃತ್ಯವೇ ಅಂತಕಾಯ ವೈವಸ್ವತಾಯ ಕಾಲಾಯ ಸರ್ವಭೂತಕ್ಷಯಾಯ ಔದುಂಬರಾಯ ದಧ್ನಾಯ ನೀಲಾಯ ಪರಮೇಷ್ಠಿನೇ ವೃಕೋದರಾಯ ಚಿತ್ರಾಯ ಚಿತ್ರಗುಪ್ತಾಯ ಸ್ವಾಹಾ (೧೪) ॥ ಏವಂ ಹುತ್ವಾ ಹೋಮಶೇಷಂ**

---

**ಪಂಚಕತ್ರಿಪಾದಸಾಧಾರಣಶಾಂತಿ:–** ಮರಣಕಾಲದಲ್ಲಿ ಪಂಚಕ ತ್ರಿಪಾದ ಮುಂತಾದ ದೋಷಗಳು ಒದಗಿ ಬಂದಿದ್ದರೆ ಮೊದಲು ಆಯಾ ಶಾಂತಿಕರ್ಮಗಳನ್ನು ಮಾಡಿ ನಂತರ ಮಹೈಕೋದ್ದಿಷ್ಟವನ್ನು ಮಾಡಬೇಕು. ಬೇರೆ ನಕ್ಷತ್ರದಲ್ಲಿ ಮೃತಪಟ್ಟು ಧನಿಷ್ಠಾದಿ ಪಂಚಕದಲ್ಲಿ ದಾಹ ಮಾಡಬೇಕಾದ ಸಂದರ್ಭ ಬಂದಿದ್ದರೆ, ದಾಹ ಕಾಲದಲ್ಲಿ ಪುತ್ತಲವಿಧಿಯನ್ನು ಮಾಡಿದರೆ ಸಾಕು. ಪಂಚಕಶಾಂತಿಯನ್ನು ಮಾಡಬೇಕಾದ್ದಿಲ್ಲ. ಪಂಚಕದಲ್ಲಿ ಮೃತಪಟ್ಟು ಅಶ್ವಿನೀ ನಕ್ಷತ್ರದಲ್ಲಿ ದಾಹ ಮಾಡುವ ಸಂದರ್ಭದಲ್ಲಿ ಪಂಚಕಶಾಂತಿಯನ್ನೇ ಮಾಡಬೇಕು.

ಸೂತಕ ನಿವೃತ್ತಿಯಾದ ಮೇಲೆ ತಿಲಹೋಮ ಘೃತದಾನ ಮುಂತಾದವುಗಳನ್ನು ಮಾಡಿ ಕಂಚಿನ ಪಾತ್ರೆಯಲ್ಲಿ ಎಳ್ಳೆಣ್ಣೆಯನ್ನು ಹಾಕಿ ಅದರಲ್ಲಿ ತನ್ನ ಪ್ರತಿಬಿಂಬವನ್ನು ನೋಡಿ ಬ್ರಾಹ್ಮಣನಿಗೆ ದಾನ ಕೊಡಬೇಕು. ಲಕ್ಷಹೋಮ ಅಥವಾ ರುದ್ರಜಪ ಇವೆರಡರಲ್ಲಿ ಯಾವುದಾದರೂ ಒಂದರಿಂದ ಶಾಂತಿಕರ್ಮವನ್ನು ಮಾಡಬೇಕು. ಅಥವಾ ಕಲಶದಲ್ಲಿ ಯಮಪ್ರತಿಮೆಯನ್ನು ಪೂಜಿಸಿ, ಸ್ಥಾಲೀಪಾಕದಲ್ಲಿ ಹೇಳಿದಂತೆ ಅಗ್ನಿಪ್ರತಿಷ್ಠಾಪನೆ, ಅನ್ವಾಧಾನ ಮುಂತಾದ ಎಲ್ಲ ಹೋಮಕಾರ್ಯಗಳನ್ನು ವಿಧಿವತ್ತಾಗಿ ಮಾಡಿ, ಚರುವನ್ನು ತಯಾರಿಸಿ **"ಯಮಾಯ"**

**ಸಮಾಪ್ಯ ಕೃಷ್ಣ ವಸ್ತ್ರಯುತಾಂ ಕೃಷ್ಣಾಂ ಗಾಂ ಯಮೋ ಮೇ ಪ್ರೀಯತಾಮಿತಿ ಬ್ರಾಹ್ಮಣಾಯ ದದ್ಯಾತ್ ॥**

**॥ ಇತಿ ಪಂಚಕತ್ರಿಪಾದಸಾಧಾರಣಶಾಂತಿಃ ॥**

---

ಮುಂತಾಗಿ "**ಚಿತ್ರಗುಪ್ತಾಯ**" ಎಂಬಲ್ಲಿ ವರೆಗಿನ ಹದಿನಾಲ್ಕು ನಾಮಮಂತ್ರಗಳಿಂದ ಹದಿನಾಲ್ಕು ಚರ್ವಾಹುತಿಗಳನ್ನು ಕೊಡಬೇಕು. ನಂತರ ಹೋಮ ಶೇಷವನ್ನು ಪೂರಯಿಸಿ, ಕಪ್ಪುಬಣ್ಣದ ಹಸುವನ್ನು ಕಪ್ಪುಬಟ್ಟೆ ಹೊದಿಸಿ, "**ಯಮೋಮೇ ಪ್ರೀಯತಾಂ**" ಎಂದು ಹೇಳಿ ಬ್ರಾಹ್ಮಣನಿಗೆ ದಾನ ಕೊಡಬೇಕು.

(ಇದು ಪಂಚಕತ್ರಿಪಾದಶಾಂತಿಗಳ ಸಾಧಾರಣ ಕ್ರಮ.)

॥ ಪಂಚಕತ್ರಿಪಾದಸಾಧಾರಣಶಾಂತಿ ಸಮಾಪ್ತ ॥

## ೧೯

# ॥ ಪಂಚಕಶಾಂತಿಃ ॥

**ಶ್ರೀಃ ॥ ದೇಶಕಾಲೌ ಸಂಕೀರ್ತ್ಯ ಅಮುಕಗೋತ್ರಸ್ಯಾಮುಕಶರ್ಮಣಃ ಪಂಚಕನಕ್ಷತ್ರಮರಣಾಧೋಗತಿದೋಷಶುದ್ಧಿಪೂರ್ವಕಂ ಮಮಾಶುಭತ್ವಪರಿಹಾರಾರ್ಥಂ ವಂಶಾರಿಷ್ಟವಿನಾಶಾರ್ಥಂ ಚ ಶ್ರೀಪರಮೇಶ್ವರಪ್ರೀತಯೇ ಪಂಚಕಶಾಂತಿಮಹಂ ಕರಿಷ್ಯೇ ॥ ತದಂಗತ್ವೇನಾಚಾರ್ಯವರಣಂ ॥ ಆಚಾರ್ಯೋ ಯದತ್ರೇತ್ಯಾದಿ ವರದನಾಮಾಗ್ನಿಪ್ರತಿಷ್ಠಾಂತಂ ಕೃತ್ವಾ ಪೂರ್ವೇ ಕಲಶಾನ್ ಸ್ಥಾಪಯೇತ್ ॥ ಮಹೀದ್ಯೌರಿತಿ ಮಂತ್ರಾವೃತ್ತ್ಯಾ ಪಂಚಕಲಶೇಷು ಪಂಚ ಸುವರ್ಣಪ್ರತಿಮಾಃ ಸಂಸ್ಥಾಪ್ಯ ತತ್ರ ಯಮಾಯ ಸೋಮಮಿತಿ ಮಧ್ಯೇ ಇಮಾ ರುದ್ರಾಯೇತಿ ಪೂರ್ವೇ ಅಪನಃ ಶೋಶುಚದಘಮಿತಿ ದಕ್ಷಿಣೇ ಇದಂ ವಿಷ್ಣುರಿತಿ ಪಶ್ಚಿಮೇ ಇಂದ್ರತ್ವಾ ವೃಷಭಮಿತ್ಯುತ್ತರೇ ॥ ಧನಿಷ್ಠಾದಿದೇವತಾಶ್ಚ ಜ್ಮಯಾ ಅತ್ರ...........ತತ್ವಾಯಾಮಿ..............ಅಭಿಯೇ ಮಿಥೋ..............ಉತನೋಹಿರ್ಬುಧ್ನ್ಯಃ.............ಪೂಷಾಗಾ ಅನ್ವೇತು ನಃ ॥ ಅತ್ರೈವ ಯಮಾದಯಃ ॥**

---

**ಪಂಚಕಶಾಂತಿ:-** ಆಚಮನ ಪ್ರಾಣಾಯಾಮ ದೇಶಕಾಲ ಸಂಕೀರ್ತನಾದಿಗಳನ್ನು ಮಾಡಿ **"ಅಮುಕಗೋತ್ರಸ್ಯಾಮುಕಶರ್ಮಣ......ಪಂಚಕಶಾಂತಿಮಹಂ ಕರಿಷ್ಯೇ"** ಎಂದು ಸಂಕಲ್ಪ ಮಾಡಬೇಕು. ಬಳಿಕ ಗ್ರಹಯಜ್ಞದಲ್ಲಿ ವಿವರಿಸಿದಂತೆ ಆಚಾರ್ಯಾದಿ ವರಣವನ್ನು ಮಾಡಿ ಆಚಾರ್ಯನು **"ಯದತ್ರ..."** ಮುಂತಾಗಿ ತಾನು ಮಾಡಬೇಕಾದ ಕರ್ಮಭಾಗಗಳನ್ನೆಲ್ಲ ಕ್ರಮವತ್ತಾಗಿ ಪೂರಯಿಸಿ **"ವರದ"** ಎಂಬ ಅಗ್ನಿಯನ್ನು ಪ್ರತಿಷ್ಠಾಪಿಸಬೇಕು. **"ಮಹೀದ್ಯೌ..."** ಮುಂತಾದ ಕಲಶಸ್ಥಾಪನೆಯ ಮಂತ್ರಗಳನ್ನು ಐದು ಬಾರಿ ಪ್ರತ್ಯೇಕವಾಗಿ ಆವರ್ತನೆ ಮಾಡಿ ಐದು ಕಲಶಗಳನ್ನು ಸ್ಥಾಪಿಸಿ, ಅವುಗಳಲ್ಲಿ ಐದು ಸುವರ್ಣಪ್ರತಿಮೆಗಳನ್ನು ಇಟ್ಟು **"ಯಮಾಯ ಸೋಮಂ...."** ಮುಂತಾಗಿ **"ಇಂದ್ರ ತ್ವಾ...."** ಎಂಬಲ್ಲಿ ವರೆಗಿನ ಐದು ಮಂತ್ರಗಳಿಂದ ಮಧ್ಯದಿಂದ ತೊಡಗಿ ಉತ್ತರದ ವರೆಗೆ ಯಮ, ರುದ್ರ, ಅಗ್ನಿ, ವಿಷ್ಣು, ಇಂದ್ರಾದಿಗಳನ್ನು ಆವಾಹಿಸಬೇಕು. ಅಂತೆಯೇ **"ಜ್ಮಯಾ ಅತ್ರ...."** ಮುಂತಾದ ಐದು ಮಂತ್ರಗಳಿಂದ ಧನಿಷ್ಠಾದಿ ಐದು ನಕ್ಷತ್ರದೇವತೆಗಳನ್ನೂ ಆವಾಹಿಸಬೇಕು. ಬಳಿಕ ಯಮ ಮುಂತಾಗಿ

**ಯಮಂ ಧರ್ಮರಾಜಂ ಮೃತ್ಯುಂ ಅಂತಕಂ ವೈವಸ್ವತಂ ಕಾಲಂ ಸರ್ವಭೂತ-ಕ್ಷಯಂ ಔದುಂಬರಂ ದಧ್ನಂ ನೀಲಂ ಪರಮೇಷ್ಠಿನಂ ವೃಕೋದರಂ ಚಿತ್ರಂ ಚಿತ್ರಗುಪ್ತಂ ಆವಾಹ್ಯ ತೈರೇವ ಮಂತ್ರೈಃ ಷೋಡಶೋಪಚಾರೈಃ ಸಂಪೂಜ್ಯ ಪೂರ್ವೋಕ್ತಾನಿ ಶಾಂತಿಸೂಕ್ತಾನಿ ಜಪ್ತ್ವಾ ಉತ್ತರೇ ಗ್ರಹಾನ್ ಕಲಶಂ ಚ ಸಂಪೂಜ್ಯ ಪ್ರಾರ್ಥ್ಯಾನ್ವಾದಧ್ಯಾತ್ ॥**

**ಚಕ್ಷುಷೀ ಆಜ್ಯೇನೇತ್ಯಂತಮುಕ್ತ್ವಾ ಅತ್ರ ಪ್ರಧಾನಂ ನವಗ್ರಹಾನ್ ಸಮಿತ್ತಿಲೈಃ ಪೂರ್ವೋಕ್ತಸಂಖ್ಯಾಕೈಃ ॥ ಪ್ರಧಾನಂ ಪಂಚನಕ್ಷತ್ರದೇವತಾಃ ಸಮಿತ್ತಿಲಾಜ್ಯಾಹುತಿಭಿಃ ಪ್ರತಿದ್ರವ್ಯಂ ೧೦೮ ಯಮಾದಿ ಚತುರ್ದಶ ಪ್ರತ್ಯೇಕಂ ೮ ಶೇಷೇಣೇತಿ ಪರಿಸಮೂಹನಾದಿ ತತ್ತದ್ದೇವತಾಯೈ ತೂಷ್ಣೀಂ ನಿರ್ವಾಪಾದಿ ಕೃತ್ವಾ ದ್ರವ್ಯತ್ಯಾಗಂ ಕೃತ್ವಾ ಪೂರ್ವಮಂತ್ರೈರ್ಹೋಮಂ ಕುರ್ಯಾತ್ ॥ ತತಃ ಸ್ವಿಷ್ಟಕೃದಾದಿ ಹೋಮಂ ಸಮಾಪ್ಯ ಬಲಿದಾನಂ ಕೃತ್ವಾ ಪೂರ್ಣಾಹುತಿಂ ಜುಹುಯಾತ್ ॥ ದೇವತಾ ವಿಸೃಜ್ಯ ತತಃ ಶಾಂತಿಪಾಠಃ ಆಜ್ಯಾವೇಕ್ಷಣಂ ಬ್ರಹ್ಮವಿಷ್ಣುಮಹೇಶೇಂದ್ರವರುಣಪ್ರೀತಯೇ ಪ್ರಿಯಂಗುಗೋಧೂಮಮಾಷ-**

---

ಚಿತ್ರಗುಪ್ತ ಎಂಬಲ್ಲಿ ವರೆಗೆ ೧೪ ನಾಮಮಂತ್ರಗಳಿಂದ ಆಯಾ ದೇವತೆಯನ್ನು ಆವಾಹಿಸಿ ಅದೇ ನಾಮಮಂತ್ರಗಳಿಂದ ಆ ದೇವತೆಗಳಿಗೆ ಷೋಡಶೋಪಚಾರ ಪೂಜೆಗಳನ್ನು ಸಮರ್ಪಿಸಿ, **"ಆ ನೋ ಭದ್ರಾಃ...."** ಮುಂತಾದ ಶಾಂತಿಸೂಕ್ತಗಳನ್ನು ಜಪಿಸಬೇಕು. ಆಮೇಲೆ ಉತ್ತರದಿಕ್ಕಿನಲ್ಲಿ ನವಗ್ರಹಗಳನ್ನೂ ಕಲಶವನ್ನೂ ಸ್ಥಾಪಿಸಿ, ಪೂಜಿಸಿ ಅನ್ವಾಧಾನವನ್ನು ಮಾಡಬೇಕು.

ಅನ್ವಾಧಾನದಲ್ಲಿ **"ಚಕ್ಷುಷೀ ಆಜ್ಯೇನ"** ಎಂಬಲ್ಲಿ ವರೆಗೆ ಹೇಳಿ **"ಅತ್ರಪ್ರಧಾನಂ"** ಎಂದು **"ನವಗ್ರಹಾನ್ ಸಮಿತ್ತಿಲೈಃ..."** ಎಂಬುದಾಗಿ ನಿರ್ಣಯಿಸಿ ನಿಶ್ಚಿತವಾದ ಸಂಖ್ಯೆಯಿಂದಲೂ, ಐದು ನಕ್ಷತ್ರದೇವತೆಗಳಿಗೆ ಸಮಿತ್ತಿಲಾಜ್ಯಾಹುತಿಗಳನ್ನು ೧೦೮ ಸಂಖ್ಯೆಯಿಂದಲೂ, ಯಮಾದಿ ೧೪ ದೇವತೆಗಳಿಗೆ ಎಂಟೆಂಟು ಆಹುತಿಗಳನ್ನೂ ಸಂಕಲ್ಪಿಸಿ **"ಶೇಷೇಣ ಸ್ವಿಷ್ಟಕೃತ...."** ಎಂದು ಹೇಳಬೇಕು. ಬಳಿಕ ಪರಿಸಮೂಹನ ಪರ್ಯುಕ್ಷಣಾದಿಗಳನ್ನು ಮಾಡಿ ಮಂತ್ರರಹಿತವಾಗಿ ಚರುನಿರ್ವಾಪವನ್ನೂ ಮಾಡಿ ಹೋಮ ಕಾರ್ಯವನ್ನು ಪೂರಯಿಸಬೇಕು. ನಂತರ ಸ್ವಿಷ್ಟಕೃದಾದಿ ಹೋಮಶೇಷವನ್ನು ಮಾಡಿ ಮೇಲೆ ಹೇಳಿದ ಎಲ್ಲ ದೇವತೆಗಳಿಗೂ ಬಲಿದಾನವನ್ನೂ ಸಮರ್ಪಿಸಿ, ಪೂರ್ಣಾಹುತಿಯನ್ನು ಕೊಡಬೇಕು. ದೇವತೆಗಳನ್ನು ವಿಸರ್ಜಿಸಿ ಶಾಂತಿಪಾಠ, ಆಜ್ಯಾವೇಕ್ಷಣಾದಿಗಳನ್ನು ಮಾಡಿ ಬ್ರಹ್ಮ ವಿಷ್ಣು ಮುಂತಾದ ದೇವತೆಗಳ

**ಮುದ್ಗಯವವ್ರೀಹಿತಿಲಸುವರ್ಣಾನಿ ದದ್ಯಾತ್ ॥ ತತೋ ನಾರಿಕೇಲೇನಾರ್ಘ್ಯಂ ದದ್ಯಾತ್ ॥**

**॥ ಇತಿ ಪಂಚಕಶಾಂತಿಃ ॥**

---

ಪ್ರೀತ್ಯರ್ಥವಾಗಿ ಪ್ರಿಯಂಗು ಮುಂತಾದ ಎಂಟು ದಾನಗಳನ್ನು ಕೊಡಬೇಕು. ನಂತರ ಒಂದು ತೆಂಗಿನಕಾಯಿಯನ್ನು ಒಡೆದು ಅದರಿಂದ ಅರ್ಘ್ಯಪ್ರದಾನವನ್ನು ಮಾಡಬೇಕು.

॥ ಪಂಚಕಶಾಂತಿ ಸಮಾಪ್ತ ॥

# ॥ ತ್ರಿಪಾದಶಾಂತಿಃ ॥

ಶ್ರೀಃ ॥ ದೇಶಕಾಲೌ ಸಂಕೀರ್ತ್ಯ ಅಮುಕಸ್ಯ ತ್ರಿಪಾದನಕ್ಷತ್ರಮರಣಾ-ಧೋಗತಿದೋಷಶುದ್ಧಿದ್ವಾರಾ ಸ್ವಸ್ಯಾಶುಭತ್ವಪರಿಹಾರಾರ್ಥಂ ವಂಶಾನಿಷ್ಟವಿನಾ-ಶಾರ್ಥಂ ಚ ಸನವಗ್ರಹಾಂ ತ್ರಿಪಾದಶಾಂತಿಮಹಂ ಕರಿಷ್ಯೇ ॥ ತದಂಗತ್ವೇ-ನಾಚಾರ್ಯಾದೀನ್ ವೃಣುಯಾತ್ ॥ ಅಥಾಚಾರ್ಯಃ ಕರ್ಮ ಸಂಕಲ್ಪ್ಯ ಯದತ್ರಸಂಸ್ಥಿತಮಿತ್ಯಾದಿ ಅಗ್ನಿಪ್ರತಿಷ್ಠಾಂತಂ ಕೃತ್ವಾ ಕಲಶತ್ರಯಂ ಮಹೀದ್ಯೌ ರಿತ್ಯಾದಿ ವಿಧಿನಾ ಸ್ಥಾಪ್ಯ ಅಬ್ಲಿಂಗದೈವತಮಂತ್ರೈಃ (ಆಪೋಹಿಷ್ಠಾ............೯ ಸಮುದ್ರಜ್ಯೇಷ್ಠಾ ೪ ತ್ರಾಯಂತಾಮಿಹ............೩ ಇತ್ಯೇತೈಃ) ಕಲಶಾನಭಿ-ಮಂತ್ರ್ಯ ತತ್ರ ದೇವತಾ ಆವಾಹಯೇತ್ ॥ ಕೃತ್ತಿಕಾಯಾಃ ಅಗ್ನಿರ್ದೇವತಾ ಅಗ್ನಿಂ ದೂತಮಿತಿ ಸಂಪೂಜ್ಯ ಭರಣ್ಯಾ ಯಮೋ ದೇವತಾ ಯಮಾಯ ಸೋಮಮಿತಿ ಅಧಿದೇವತಾಂ ಸಂಪೂಜ್ಯ ರೋಹಿಣ್ಯಾಃ ಪ್ರಜಾಪತಿರ್ದೇವತಾ ಪ್ರಜಾಪತೇ ನ ತ್ವದೇತಾ..............ಇತಿ ಪ್ರತ್ಯಧಿದೇವತಾಂ ಸಂಪೂಜ್ಯ ॥ ಪುನರ್ವಸೋಃ ಅದಿತಿರ್ದೇವತಾ ಅದಿತಿರ್ದ್ಯೌರಿತಿ ಸಂಪೂಜ್ಯ ಆರ್ದ್ರಾಯಾಃ ರುದ್ರೋ ದೇವತಾ ಕದ್ರುದ್ರಾಯೇತಿ ಅಧಿದೇವತಾಂ ಪುಷ್ಯದೇವತಾ ಬೃಹಸ್ಪತಿಃ ಬೃಹಸ್ಪತೇ ಅತಿಯದಿತಿ ಪ್ರತ್ಯಧಿದೇವತಾಂ ಚ ಸಂಪೂಜ್ಯ ॥ ಉತ್ತರಾಯಾಃ ಅರ್ಯಮಾ ದೇವತಾ ಅರ್ಯಮಾಣೋ ಅದಿತಿರ್ಯ............ಇತಿ ಸಂಪೂಜ್ಯ

---

**ತ್ರಿಪಾದಶಾಂತಿಃ-** ಆಚಮನ ಪ್ರಾಣಾಯಾಮ ದೇಶಕಾಲಕೀರ್ತನಾದಿಗಳನ್ನು ಮಾಡಿ **"ಅಮುಕಸ್ಯ... ತ್ರಿಪಾದಶಾಂತಿಮಹಂ ಕರಿಷ್ಯೇ"** ಎಂದು ಸಂಕಲ್ಪಿಸಿ ಆಚಾರ್ಯವರಣ ಮಾಡಿದ ಮೇಲೆ ಆಚಾರ್ಯನು **"ಯದತ್ರಸಂಸ್ಥಿತಂ"** ಮುಂತಾಗಿ ಅಗ್ನಿಪ್ರತಿಷ್ಠಾಪನೆಯ ವರೆಗಿನ ಕರ್ಮಗಳನ್ನು ಮಾಡಿಮುಗಿಸಿ **"ಮಹೀದ್ಯೌ...."** ಮುಂತಾದ ಮಂತ್ರಗಳಿಂದ ಮೂರು ಕಲಶಗಳನ್ನು ಸ್ಥಾಪಿಸಿ, **"ಆಪೋಹಿಷ್ಠಾ"** ಮುಂತಾದ ಮೂರು ಸೂಕ್ತಗಳಿಂದ ಆ ಕಲಶಗಳನ್ನು ಅಭಿಮಂತ್ರಿಸಿ ಅವುಗಳಲ್ಲಿ ಈ ಕೆಳಗಿನಂತೆ ನಕ್ಷತ್ರದೇವತೆಗಳನ್ನು ಆವಾಹಿಸಬೇಕು.

ಪೂರ್ವಾಯಾಃ ಭಗೋ ದೇವತಾ ಭಗ ಏವ ಭಗವಾನಿತಿ ಅಧಿದೇವತಾಂ ಹಸ್ತಸ್ಯ ಸೂರ್ಯೋ ದೇವತಾ ಉದುತ್ಯಮಿತಿ ಪ್ರತ್ಯಧಿದೇವತಾಂ ॥ ವಿಶಾಖಾಯಾಃ ಇಂದ್ರಾಗ್ನೀ ದೇವತೇ ತದಿಂದ್ರಾಗ್ನೀ ಇತಿ ಸ್ವಾತ್ಯೃಕ್ಷಸ್ಯ ವಾಯುರ್ದೇವತಾ ತವ ವಾಯ ಇತ್ಯಧಿದೇವತಾಂ ಅನುರಾಧಾಯಾಃ ಮಿತ್ರೋ ದೇವತಾ ಮಿತ್ರೋಜನಾನಿತಿ ಪ್ರತ್ಯಧಿದೇವತಾಂ ॥ ಉತ್ತರಾಷಾಢಾಯಾಃ ವಿಶ್ವೇದೇವಾ ದೇವತಾ ವಿಶ್ವೇದೇವಾಸ ಆಗತೇತಿ ಸಂಪೂಜ್ಯ ಪೂವಾಷಾಢಾಯಾ ವರುಣೋ ದೇವತಾ ಯತ್ಕಿಂಚೇದಂ ವರುಣೇತ್ಯಧಿದೇವತಾಂ ಶ್ರವಣಸ್ಯ ವಿಷ್ಣುರ್ದೇವತಾ ಇದಂ ವಿಷ್ಣುರಿತಿ ಪ್ರತ್ಯಧಿದೇವತಾಂ ॥ ಪೂರ್ವಾಭಾದ್ರಪದಾಯಾಃ ಅಜೈಕಪಾದೋ ದೇವತಾ ಸಮುದ್ರಃ ಸಿಂಧೂರಜೋ.........ಇತಿ ಸಂಪೂಜ್ಯ ಶತತಾರಕಾಯಾ ವರುಣೋ ದೇವತಾ ಇಮಂ ಮೇ ವರುಣೇತ್ಯಧಿದೇವಂ ಉತ್ತರಾಭಾದ್ರಪದಾಯಾಃ ಅಹಿರ್ಬುಧ್ನ್ಯೋ ದೇವತಾ ಅಭಿ ಯೇ ಮಿಥೋವನುಷಃ ಇತಿ ಪ್ರತ್ಯಧಿದೇವತಾಂ ಆವಾಹ್ಯ ತತ್ತನ್ಮಂತ್ರೈಃ ಸಂಪೂಜ್ಯ ಶಾಂತಿಸೂಕ್ತಾನಿ ಜಪೇತ್ ॥ ತದ್ಯಥಾ ॥ ಯತ್ತೇ ಯಮಂ........ ಪರೇಯಿವಾಂಸಂ .............ಇಮಾ ರುದ್ರಾಯ ಸ್ಥಿರ.............ಅಪನಃ ಶೋಶುಚದಘ............ ವಿಷ್ಣೋರ್ನುಕಂ..........ಆಶುಃ ಶಿಶಾನೋ ॥ ಶ್ರೀಸೂಕ್ತಂ ಜಪ್ತ್ವಾ ಯಮಾದೀನಾವಾಹಯೇತ್ ॥ ಯಮಂ ಧರ್ಮರಾಜಂ ಮೃತ್ಯುಂ ಅಂತಕಂ ವೈವಸ್ವತಂ ಕಾಲಂ ಸರ್ವಭೂತಕ್ಷಯಕರಂ ಔದುಂಬರಂ ದಧ್ನಂ ನೀಲಂ ಪರಮೇಷ್ಠಿನಂ ವೃಕೋದರಂ ಚಿತ್ರಂ ಚಿತ್ರಗುಪ್ತಂ ಆವಾಹ್ಯ ಸಂಪೂಜ್ಯ ತದುತ್ತರತೋ ಗ್ರಹಾನ್ ಸಂಪೂಜ್ಯ ಅನ್ವಾದಧ್ಯಾತ್ ॥ ಪ್ರಧಾನಂ ಪ್ರತಿದ್ರವ್ಯಂ ಅಷ್ಟೋತ್ತರಶತಸಂಖ್ಯಾಕಾಭಿಃ ಶೇಷೇಣ ಸ್ವಿಷ್ಟಕೃತಮಿತ್ಯಾದಿ ಹೋಮಶೇಷಂ ಸಮಾಪ್ಯ ಬಲಿದಾನಂ ಕೃತ್ವಾ ಪೂರ್ಣಾಹುತಿಂ ಜುಹುಯಾತ್ ॥ ಆಚಾರ್ಯಾಯ

**ಧೇನುಂ ಋತ್ವಿಗ್ಭ್ಯೋ ಯಥಾಶಕ್ತಿ ದಕ್ಷಿಣಾಂ ದತ್ವಾ ತಾನ್ ಸಂತೋಷ್ಯ ಅಂತೇ ಶಾಂತಿಪಾಠಃ ಕಾರ್ಯಃ ॥ ಬ್ರಾಹ್ಮಣಭೋಜನಸಂಕಲ್ಪಃ ॥ ತತೋ ಮಿತ್ರೈಃಸಹ ಭುಂಜೀತ ॥**

**॥ ಇತಿ ತ್ರಿಪಾದಶಾಂತಿಃ ॥**

---

| ತ್ರಿಪಾದನಕ್ಷತ್ರ | ಉಪನಕ್ಷತ್ರಗಳು | ದೇವತೆ | ಮಂತ್ರ |
|---|---|---|---|
| ೧. ಕೃತ್ತಿಕಾ | – | ಅಗ್ನಿ | ಅಗ್ನಿಂ ದೂತಂ |
| | ೧. ಭರಣಿ | ಯಮ (ಅಧಿ) | ಯಮಾಯ ಸೋಮಂ |
| | ೨. ರೋಹಿಣಿ | ಪ್ರಜಾಪತಿ (ಪ್ರತ್ಯಧಿ) | ಪ್ರಜಾಪತೇ ನತ್ವ |
| ೨. ಪುನರ್ವಸು | – | ಅದಿತಿ | ಅದಿತಿರ್ದ್ಯೌ |
| | ೧. ಆರ್ದ್ರಾ | ರುದ್ರ (ಅಧಿ) | ಕದ್ರುದ್ರಾಯ |
| | ೨. ಪುಷ್ಯ | ಬೃಹಸ್ಪತಿ (ಪ್ರತ್ಯಧಿ) | ಬೃಹಸ್ಪತೇ ಅತಿಯ |
| ೩. ಉತ್ತರಾ | – | ಅರ್ಯಮಾ | ಅರ್ಯಮಾಣೋ |
| | ೧. ಪೂರ್ವಾ | ಭಗ (ಅಧಿ) | ಭಗ ಏವ ಭಗವಾನ್ |
| | ೨. ಹಸ್ತಾ | ಸೂರ್ಯ (ಪ್ರತ್ಯಧಿ) | ಉದುತ್ಯಂ ಜಾತವೇದಸಂ |
| ೪. ವಿಶಾಖಾ | – | ಇಂದ್ರಾಗ್ನೀ | ಇಂದ್ರಾಗ್ನೀ |
| | ೧. ಸ್ವಾತಿ | ವಾಯು (ಅಧಿ) | ತವ ವಾಯ |
| | ೨. ಅನುರಾಧಾ | ಮಿತ್ರ (ಪ್ರತ್ಯಧಿ) | ಮಿತ್ರೋ ಜನಾನ್ಯಾ |
| ೫. ಉತ್ತರಾಷಾಢಾ | – | ವಿಶ್ವೇದೇವಾಃ | ವಿಶ್ವೇದೇವಾಸ ಆಗತ |
| | ೧. ಪೂರ್ವಾಷಾಢಾ | ವರುಣ (ಅಧಿ) | ಯತ್ಕಿಂಚೇದಂ |
| | ೨. ಶ್ರವಣಾ | ವಿಷ್ಣು (ಪ್ರತ್ಯಧಿ) | ಇದಂ ವಿಷ್ಣು |
| ೬. ಪೂರ್ವಾಭಾದ್ರಾ | – | ಅಜೈಕಪಾತ್ | ಸಮುದ್ರಃ ಸಿಂಧೂ ರಜೋ |
| | ೧. ಶತಭಿಷಾ | ವರುಣ (ಅಧಿ) | ಇಮಂ ಮೇ ವರುಣ |
| | ೨. ಉತ್ತರಾಭಾದ್ರಾ | ಅಹಿರ್ಬುಧ್ನ್ಯ (ಪ್ರತ್ಯಧಿ) | ಅಭಿಯೇಮಿಥೋ |

**"ಯತ್ತೇ ಯಮಂ...."** ಮುಂತಾಗಿ ಶಾಂತಿಸೂಕ್ತಗಳನ್ನು ಜಪಿಸಿ, **'ಯಮಂ'** ಎಂಬಲ್ಲಿಂದ ಮೊದಲ್ಗೊಂಡು **'ಚಿತ್ರಗುಪ್ತಂ'** ಎಂಬಲ್ಲಿ ವರೆಗೆ ೧೪ ದೇವತೆಗಳನ್ನು ಆವಾಹಿಸಿ ಪೂಜಿಸಬೇಕು. ಉತ್ತರದಿಕ್ಕಿನಲ್ಲಿ ನವಗ್ರಹಗಳನ್ನು ಆವಾಹಿಸಿ, ಪೂಜಿಸಿ, ಅನ್ವಾಧಾನಮಾಡಿ ಅಷ್ಟೋತ್ತರ ಸಂಖ್ಯೆಯಲ್ಲಿ ಪ್ರಧಾನ ಆಹುತಿಗಳನ್ನು ಪಲಾಶಸಮಿತ್ತು ತಿಲ ಮತ್ತು ಚರುಗಳಿಂದ ಕೊಟ್ಟು, ಅದರ ದಶಾಂಶದಷ್ಟು ಅಧಿದೇವತೆ ಪ್ರತ್ಯಧಿದೇವತೆಗಳಿಗೂ ಕೊಟ್ಟು ಯಮಾದಿಗಳಿಗೆ ಎಂಟೆಂಟು ಆಹುತಿಗಳನ್ನೂ ಕೊಟ್ಟು ಸ್ವಿಷ್ಟಕೃದಾದಿ ಹೋಮಶೇಷವನ್ನೂ ಬಲಿದಾನಾದಿಗಳನ್ನೂ ಪೂರಯಿಸಿ ಆಚಾರ್ಯನಿಗೆ ಗೋದಾನ, ಋತ್ವಿಜರಿಗೆ ದಕ್ಷಿಣಾದಿಗಳನ್ನು ಕೊಡಬೇಕು.

॥ ತ್ರಿಪಾದಶಾಂತಿಃ ಸಮಾಪ್ತ ॥

೨೧

# ॥ ವೃಷೋತ್ಸರ್ಗಃ ॥

ಶ್ರೀಃ ॥ ಅಯಂ ಗೃಹೇ ನ ಕಾರ್ಯಃ ॥ ಗೋಷ್ಠಾದಾವಿತರತ್ರ ಆಚಮ್ಯ ಪ್ರಾಣಾನಾಯಮ್ಯ ದೇಶಕಾಲೌ ಸ್ಮೃತ್ವಾ ಪ್ರಾಚೀನಾವೀತೀ ಅಮುಕ-ಗೋತ್ರಸ್ಯಾಮುಕಶರ್ಮಣಃ ಪ್ರೇತಸ್ಯ ಪ್ರೇತತ್ವನಿವೃತ್ತ್ಯೋತ್ತಮಲೋಕ-ಪ್ರಾಪ್ತ್ಯರ್ಥಂ ವೃಷೋತ್ಸರ್ಗಂ ಕರಿಷ್ಯೇ ಇತಿ ಸಂಕಲ್ಪ್ಯ ॥ ಸ್ಥಂಡಿಲಾದಿ ಕೃತ್ವಾ ॥ ಅಧ್ವರನಾಮಾನಮಗ್ನಿಂ ಪ್ರತಿಷ್ಠಾಪ್ಯ ಸಮಿದ್ದ್ವಯಮಾದಾಯ ಚಕ್ಷುಷ್ಯಂತೇ ರುದ್ರಂ ಚರುಣಾ ಸೋಮಂ ಪಾಯಸೇನ ಇಂದ್ರಂ ಯಾವಕೇನ ಯಕ್ಷ್ಯೇ ಶೇಷೇಣ ಸ್ವಿಷ್ಟಕೃತಮಿತ್ಯಾದಿ ಪರಿಸಮೂಹನಾದಿ ಪೂರ್ಣಪಾತ್ರನಿಧಾನಾಂತಂ ವಿಧಾಯ ತೂಷ್ಣೀಂ ನಿರ್ವಾಪಾದಿ ಕ್ರಮೇಣ ಹವಿಸ್ತ್ರಯಂ ಸಂಪಾದ್ಯ ಜುಹು-ಯಾತ್ ॥ ಕದ್ರುದ್ರಾಯೇತಿ ಘೌರಃ ಕಣ್ವೋ ರುದ್ರೋ ಗಾಯತ್ರೀ ॥ ರೌದ್ರ-ಚರುಹೋಮೇ ವಿನಿಯೋಗಃ ॥ ಓಂ ಕದ್ರುದ್ರಾಯ ಪ್ರಚೇತಸೇ ಮೀಢುಷ್ಟ-ಮಾಯತವ್ಯಸೇ ॥ ವೋಚೇಮಶಂತಮಂ ಹೃದೇ ಸ್ವಾಹಾ ॥ ರುದ್ರಾಯೇದಂ

---

**ವೃಷೋತ್ಸರ್ಗ:-** ಈ ಕರ್ಮಭಾಗವನ್ನು ಮನೆಯ ಒಳಗೆ ಮಾಡಬಾರದು. ಹಟ್ಟಿ ಅಥವಾ ಬೇರೆ ಸ್ಥಳದಲ್ಲಿ ಕುಳಿತು ಆಚಮನ ಪ್ರಾಣಾಯಾಮ ದೇಶಕಾಲ ಸ್ಮರಣಾದಿಗಳನ್ನು ಮಾಡಿ, **"ಅಮುಕಗೋತ್ರಸ್ಯಾಮುಕ.... ವೃಷೋತ್ಸರ್ಗಂ ಕರಿಷ್ಯೇ"** ಎಂದು ಸಂಕಲ್ಪ ಮಾಡಿ, ಸ್ಥಂಡಿಲವನ್ನು ನಿರ್ಮಿಸಿ, **"ಅಧ್ವರ"** ಎಂಬ ಅಗ್ನಿಯನ್ನು ಪ್ರತಿಷ್ಠಾಪಿಸಿ ಎರಡು ಸಮಿಧೆಗಳನ್ನು ಕೈಯಲ್ಲಿ ಹಿಡಿದು **'ಚಕ್ಷುಷೀ ಆಜ್ಯೇನ'** ಎಂಬಲ್ಲಿ ವರೆಗೆ ಹೇಳಿ **"ರುದ್ರಂ ಚರುಣಾ.... ಯಾವಕೇನ ಯಕ್ಷ್ಯೇ"** ಎಂದು ಅನ್ವಾಧಾನ ಮಾಡಬೇಕು. **"ಶೇಷೇಣ ಸ್ವಿಷ್ಟಕೃತ...."** ಇತ್ಯಾದಿ ಹೇಳಿ ಪರಿಸಮೂಹನ ಪರ್ಯುಕ್ಷಣಾದಿಗಳನ್ನು ಮಾಡಿ ಪೂರ್ಣಪಾತ್ರಾದಿಗಳನ್ನಿಟ್ಟು ನಿರ್ವಾಪ ಕ್ರಮದಿಂದ ಮೂರು ಭಾಗವಾಗಿ ಚರುದ್ರವ್ಯವನ್ನು ತಯಾರಿಸಬೇಕು. ಬಳಿಕ **(೧) ಕದ್ರುದ್ರಾಯ (೨) ಸೋಮೋ ಧೇನುಂ (೩) ಇಂದ್ರಂ ವೋ....** ಈ ಮೂರು ಮಂತ್ರಗಳಿಂದ ಆಹುತಿಗಳನ್ನು ಕೊಡಬೇಕು. ಕೇವಲ ನಾಮಮಂತ್ರಗಳಿಂದ ಆಹುತಿಗಳನ್ನು ಕೊಟ್ಟರೂ ಸಾಕೆಂದು ಕೆಲವರ ಅಭಿಪ್ರಾಯವಿದೆ. ಬಳಿಕ ಸ್ವಿಷ್ಟಕೃದಾದಿ ಹೋಮಶೇಷವನ್ನು ಪೂರಯಿಸಿ, ಬದುಕಿರುವ ಕರುವುಳ್ಳ

ನ ಮಮ ॥ ೧ ॥ ಸೋಮೋ ಧೇನುಂ ಗೋತಮಃ ಸೋಮಸ್ತ್ರಿಷ್ಟುಪ್ ॥ ಸೌಮ್ಯಪಾಯಸಹೋಮೇ ವಿನಿಯೋಗಃ ॥ ಓಂ ಸೋಮೋ ಧೇನುಂ ಸೋಮೋ ಅರ್ವಂತಮಾಶುಂ ಸೋಮೋ ವೀರಂ ಕರ್ಮಣ್ಯಂ ದದಾತಿ ॥ ಸಾದನ್ಯಂ ವಿದಥ್ಯಂ ಸಭೇಯಂ ಪಿತೃಶ್ರವಣಂ ಯೋ ದದಾಶದಸ್ಮೈ ಸ್ವಾಹಾ ॥ ಸೋಮಾಯೇದಂ ನ ಮಮ ॥ ೨ ॥ ಇಂದ್ರಂ ವೋ ಮಧುಚ್ಛಂದಾ ಇಂದ್ರೋ ಗಾಯತ್ರೀ ॥ ಐಂದ್ರ ಯಾವಕಹೋಮೇ ವಿನಿಯೋಗಃ ॥ ಓಂ ಇಂದ್ರಂ ವೋ ವಿಶ್ವತಸ್ಪರಿಹವಾಮಹೇ ಜನೇಭ್ಯಃ ॥ ಅಸ್ಮಾಕಮಸ್ತು ಕೇವಲಃ ಸ್ವಾಹಾ ॥ ಇಂದ್ರಾಯೇದಂ ನ ಮಮ ॥ ೩ ॥ ಏಭಿರ್ಮಂತ್ರೈಃ ಯಥಾ ಕ್ರಮಂ ಹುತ್ವಾ ಸ್ವಿಷ್ಟಕೃದಾದಿ ಮಾರ್ಜನಾಂತಂ ಕುರ್ಯಾತ್ ॥ (ಅತ್ರ ಕೇಚಿದ್ರುದ್ರಾಯ ಸ್ವಾಹೇತ್ಯಾದಿನಾ ನಾಮಮಂತ್ರೈರೇವ ಹೋಮಮಾಹುಃ ॥) ತತೋ ದ್ವಿಹಾಯನಮೇಕಹಾಯನಂ ವಾ ಜೀವವತ್ಸಾಯಾಃ ಪಯಸ್ವಿನ್ಯಾಃ ಪುತ್ರಂ ನೀಲಾದಿವರ್ಣಂ ಯಥಾಲಾಭಂ ವಾ ಆನೀಯ ತತಶ್ಚತಸ್ರೋ ದ್ವೇ ಏಕಾಂ ಏಕವರ್ಷಾಧಿಕಾಂ ವತ್ಸತರೀಮಾನೀಯ ಗೋಸಹಿತವೃಷಸ್ಯ ಮಂತ್ರೈ-ರಭಿಷೇಕಃ ಕಾರ್ಯಃ ॥

ಆಪೋಹಿಷ್ಠೇತಿ ತಿಸೃಣಾಂ ಸಿಂಧುದ್ವೀಪ ಆಪೋ ಗಾಯತ್ರೀ ॥ ವೃಷ-ವತ್ಸತರ್ಯಭಿಷೇಕೇ ವಿನಿಯೋಗಃ ॥ ಕಯಾನ ಇತಿ ತಿಸೃಣಾಂ ಗೌತಮೋ ವಾಮದೇವ ಇಂದ್ರೋ ಗಾಯತ್ರೀ ತೃತೀಯಾಪಾದನಿಚೃತ್ ॥ ವೃಷವತ್ಸ-ತರ್ಯ......... ॥ ಓಂ ಆಪೋಹಿಷ್ಠಾ...........॥ ೩ ॥ ಓಂ ಕಯಾನಶ್ಚಿತ್ರ ಆಭುವ ದೂತೀ ಸದಾವೃಧಃ ಸಖಾ ॥ ಕಯಾಶಚಿಷ್ಠಯಾ ವೃತಾ ॥ ಕಸ್ತ್ವಾ-

---

ಹಾಲು ಕರೆಯುತ್ತಿರುವ ದನದ ಒಂದು ಅಥವಾ ಎರಡು ವರ್ಷ ಪ್ರಾಯದ ಒಂದು ಗಂಡುಕರುವನ್ನೂ ಒಂದು ಹೆಣ್ಣು ಕರುವನ್ನೂ ತಂದು ನಿಲ್ಲಿಸಿ ಈ ಕೆಳಗಿನ ಮಂತ್ರಗಳಿಂದ ಅಭಿಷೇಕ ಮಾಡಬೇಕು. **"ಆಪೋಹಿಷ್ಠಾ...."** ಮತ್ತು **"ಕಯಾನಶ್ಚಿತ್ರ..."** ಎಂಬ ಮಂತ್ರಗಳಿಂದ ಅಭಿಷೇಕ ಮಾಡಿ **"ವೃಷವತ್ಸರೀಭ್ಯಾಂ ನಮಃ...."** ಎಂದು ಆವಾಹಿಸಿ ಆಸನ ವಸ್ತ್ರಗಂಧಾದಿಗಳಿಂದ ಅವುಗಳನ್ನು ಚೆನ್ನಾಗಿ ಅಲಂಕರಿಸಿ, **"ಋಷಭಂ ಮಾಸಮಾನಾನಾಂ...."**

ಸತ್ಯೋ ಮದಾನಾಂ ಮಂಹಿಷ್ಠೋ ಮತ್ಸದಂಧಸಃ ॥ ದೃಹ್ಯಾಚಿದಾರುಜೇ ವಸು ॥ ಅಭೀಷುಣಃ ಸಖೀ ನಾಮವಿತಾ ಜರಿತ್ಯಣಾಂ ॥ ಶತಂಭವಾಸ್ಯೂತಿಭಿಃ ॥ ವೃಷವತ್ಸತರೀಭ್ಯಾಂ ನಮಃ ವೃಷವತ್ಸರ್ಯಾವಾಹಯಾಮಿತ್ಯಾವಾಹ್ಯಾಸನಾದಿ-ವಸ್ತ್ರಗಂಧಾಕ್ಷತಮಾಲ್ಯಾದಿಭಿರ್ಯಥಾಶಕ್ತ್ಯಲಂಕೃತ್ಯ ॥ ಋಷಭಮಿತಿ ಪಂಚರ್ಚಸ್ಯ ಸೂಕ್ತಸ್ಯ ಋಷಭೋ ವಿರಾಡನುಷ್ಟುಪ್ ॥ ಅಂತ್ಯಾ ಮಹಾಪಂಕ್ತಿಃ ॥ ವೃಷಭೋಪಸ್ಥಾನೇ ವಿನಿಯೋಗಃ ॥ ಓಂ ಋಷಭಂ ಮಾಸಮಾನಾನಾಂ ಸಪತ್ನಾನಾಂ ವಿಷಾಸಹಿಂ ॥ ಹಂತಾರಂ ಶತ್ರೂಣಾಂ ಕೃಧಿ ವಿರಾಜಂ ಗೋಪತಿಂ ಗವಾಂ ॥ ಅಹಮಸ್ಮಿ ಸಪತ್ನಹೇಂದ್ರ ಇವಾರಿಷ್ಟೋ ಅಕ್ಷತಃ ॥ ಅಧಃ ಸಪತ್ನಾಮೇ ಪದೋರಿಮೇ ಸರ್ವೇ ಅಭಿಷ್ಠಿತಾಃ ॥ ಅತ್ರೈವ ವೋ ಪಿನಹ್ಯಾ-ಮ್ಯುಭೇ ಆರ್ತ್ನೀ ಇವಜ್ಯಯಾ ॥ ವಾಚಸ್ಪತೇ ನಿಷೇಧೇ ಮಾನ್ಯಥಾಮದಧರಂ ವದಾನ್ ॥ ಅಭಿಭೂರಹಮಾಗಮಂ ವಿಶ್ವಕರ್ಮೇಣ ಧಾಮ್ನಾ ॥ ಆವಶ್ಚಿತ್ತ-ಮಾವೋ ವ್ರತಮಾವೋ ಹಂಸಮಿತಿಂ ದದೇ ॥ ಯೋಗಕ್ಷೇಮಂ ವ ಆದಾ-ಯಾಹಂ ಭೂಯಾಸಮುತ್ತಮ॥ ಆವೋಮೂರ್ಧಾನಮಕ್ರಮಿಂ ॥ ಅಧಸ್ಪದಾನ್ಮ ಉದ್ವದತ ಮಂಡೂಕಾಃ ಇವೋದಕಾನ್ಮಂಡೂಕಾ ಉದಕಾದಿವ ॥ ಇತಿ ಪಂಚರ್ಚಂ ಸೂಕ್ತಂ ಕೃತಾಂಜಲಿಪುಟೋ ಜಪೇತ್ ॥ ತತೋ ವೃಷಂ ಪ್ರದಕ್ಷಿಣಂ ಅಗ್ನಿಪೂರ್ವತ ಆನೀಯ ತಸ್ಯ ದಕ್ಷಿಣಬಾಹು ಮೂಲೇ ಸ್ಫಿಚಿ ಭಸ್ಮನಾ ತ್ರಿಶೂಲಾಕಾರಂ ವಾಮೇ ಚಕ್ರಾಕಾರಮಂಕಯಿತ್ವಾ ತದುಪರಿ ತಪ್ತ-

---

ಎಂಬ ಮಂತ್ರವನ್ನು ಕೈಜೋಡಿಸಿ ನಿಂತು ಹೇಳುತ್ತ ಉಪಸ್ಥಾನ ಮಾಡಬೇಕು. ಆಮೇಲೆ ಕರುವನ್ನು ಪ್ರದಕ್ಷಿಣಾಕಾರವಾಗಿ ಅಗ್ನಿಯ ಮುಂಭಾಗಕ್ಕೆ ತಂದು ಅದರ ಬಲಗೈಯ ಬುಡವಲ್ಲಿ ಭಸ್ಮದಿಂದ ತ್ರಿಶೂಲಾಕಾರವನ್ನೂ, ಎಡಗೈಯ ಮೂಲದಲ್ಲಿ ಚಕ್ರಾಕಾರವನ್ನೂ ಬರೆಯಬೇಕು. ತ್ರಿಶೂಲಾಕಾರವನ್ನು ಮಾತ್ರ ಬರೆದರೆ ಸಾಕೆಂದು ಕೆಲವರ ಅಭಿಪ್ರಾಯವಿದೆ. ಬಳಿಕ ಪೂರ್ವಮುಖವಾಗಿ ಅದನ್ನು ಬಿಡಬೇಕು. ಹಾಗೆ ಬಿಡುವಾಗ ಪ್ರತಿಯೊಂದು ದಿಕ್ಕಿಗೆ ಅಭಿಮುಖವಾಗಿ ನಿಂತಾಗಲೂ ಈ ಕೆಳಗಿನ ಸೂಕ್ತಗಳನ್ನು ಕ್ರಮವಾಗಿ ಹೇಳಬೇಕು.

ಲೋಹೇನ ಚಿಹ್ನಂ ಕಾರಯೇತ್ ॥ ಪ್ರಾಂಚಃ ಕೇಚನ ತ್ರಿಶೂಲಾಂಕನಮಾತ್ರ-ಮಿಚ್ಛಂತಿ ॥ ತತಃ ಪ್ರಾಂಚಮುತ್ಸೃಜೇತ್ ॥ ವ್ರಜಂತಮನುಮಂತ್ರಯೀತ ॥

ಏತಂ ಯುವಾನಮಿತಿ ಮಂತ್ರಸ್ಯ ಯಾಜ್ಞವಲ್ಕ್ಯ ಋಷಭಸ್ತ್ರಿಷ್ಟುಪ್ ವೃಷೋತ್ಸರ್ಗೇ ವಿನಿಯೋಗಃ ॥ ಏತಂ ಯುವಾನಂ ಪರಿ ವೋ ದದಾಮಿ ತೇನ ಕ್ರೀಡಂತೀ ಶ್ಚರತಃ ಪ್ರಿಯೇಣ ॥ ಮಾನಃ ಶಾಪ್ತ ಜನುಷಾ ಸುಭಾಗಾ-ರಾಯಸ್ಪೋಷೇಣ ಸಮಿಷಾಮದೇಮ ॥ ಶಾಂತಾ ತೇ ಪೃಥಿವೀ ಶಿವಮಂತರಿಕ್ಷಂ ದ್ಯೌಸ್ತೇ ದೇವ್ಯಭಯಂ ಕೃಣೋತು ॥ ಶಿವಾ ದಿಶಃ ಪ್ರದಿಶ ಉದ್ದಿಶಸ್ತ ಆಪೋ ವಿದ್ಯುತಃ ಪರಿಪಾಂತು ಸರ್ವತಃ ಶಾಂತಿಃ ಶಾಂತಿಃ ಶಾಂತಿಃ ॥ ಸರ್ವತೋ ವ್ರಜ-ಸ್ವೇತಿ ಬ್ರೂಯಾತ್ ॥ ತತೋ ವೃಷಂ ಪೂರ್ವಾಭಿಮುಖಂ ಕೃತ್ವಾ ॥ ಕದ್ರು-ದ್ರಾಯೇತಿ ನವರ್ಚಸ್ಯ ಸೂಕ್ತಸ್ಯ ಘೌರಃ ಕಣ್ವೋ ರುದ್ರೋ ಗಾಯತ್ರೀ ತೃತೀಯಾ ಮೈತ್ರಾವರುಣೀ ಅಂತ್ಯಸ್ತ್ಯೃಚಃ ಸೌಮ್ಯೋಂತ್ಯಾನುಷ್ಟುಪ್ ಪೂರ್ವದಿಗುಪಸ್ಥಾನೇ ವಿನಿಯೋಗಃ ॥ ಕದ್ರುದ್ರಾಯ ಪ್ರಚೇತಸೇ ಮೀಢುಷ್ಟ-ಮಾಯತವ್ಯಸೇ ॥ ವೋಚೇಮಶಂತಮಂ ಹೃದೇ ॥ ಯಥಾ ನೋ ಅದಿತಿಃ ಕರತ್ಪಶ್ವೇನೃಭ್ಯೋ ಯಥಾಗವೇ ॥ ಯಥಾ ತೋ ಕಾಯರುದ್ರಿಯಂ ॥ ಯಥಾ ನೋ ಮಿತ್ರೋ ವರುಣೋ ಯಥಾ ರುದ್ರ ಶ್ಚಿಕೇತತಿ ॥ ಯಥಾ ವಿಶ್ವೇ ಸಜೋಷ ಸಃ ॥ ಗಾಥಪತಿಂ ಮೇಧಪತಿಂ ರುದ್ರಂ ಜಲಾಷ ಭೇಷಜಂ ॥ ತಚ್ಛಂಯೋಃ ಸುಮ್ನಮೀಮಹೇ ॥ ಯಃ ಶುಕ್ರ ಇವ ಸೂರ್ಯೋ ಹಿರಣ್ಯ-ಮಿವ ರೋಚತೇ ॥ ಶ್ರೇಷ್ಠೋ ದೇವಾನಾಂ ವಸುಃ ॥ ೧ ॥ ಶಂ ನಃ ಕರ ತ್ಯರ್ವತೇ ಸುಗಂ ಮೇಷಾಯಮೇಷ್ಯೇ ॥ ನೃಭ್ಯೋ ನಾರಿಭ್ಯೋ ಗವೇ ॥ ಅಸ್ಮೇ ಸೋಮಶ್ರಿಯ ಮಧಿ ನಿಧೇಹಿ ಶತಸ್ಯ ನೃಣಾಂ ॥ ಮಹಿಶ್ರವಸ್ತು ವಿನ್ನೃಮ್ಣಂ ॥ ಮಾನಃ ಸೋಮಪರಿಬಾಧೋ ಮಾರಾತಯೋ ಜುಹುರಂತ ॥ ಆನ ಇಂದೋ ವಾಜೇ ಭಜ ॥ ಯಾಸ್ತೇ ಪ್ರಜಾಽ ಅಮೃತಸ್ಯ ಪರಸ್ಮಿನ್ ಧಾಮನ್ನೃತಸ್ಯ ॥

ಮೂರ್ಧಾನಾಭಾಸೋಮವೇನಽ ಆಭೂಷಂತೀಃ ಸೋಮವೇದಃ ॥ ೨ ॥ ಏತತ್ಸೂಕ್ತಾಂತೇ ಭೋ ವೃಷ (ಗೋಭಿಃ ಸಹ) ಅನಯಾ ವತ್ಸತರ್ಯಾ ಸಹ ತೃಣಂ ಭಕ್ಷ ಜಲಂ ಪಿಬ ಯಥಾಸುಖಂ ಕ್ರೀಡಸ್ವೇತಿ ವದೇತ್ ॥ ತತೋ ದಕ್ಷಿಣಾಭಿಮುಖಂ ಕೃತ್ವಾ ॥ ಇಮಾರುದ್ರಾಯೇತ್ಯೇಕಾದಶರ್ಚಸ್ಯ ಸೂಕ್ತಸ್ಯ ಕುತ್ಸೋ ರುದ್ರೋ ಜಗತೀ ॥ ಅಂತ್ಯೇ ತ್ರಿಷ್ಟುಭೌ ॥ ದಕ್ಷಿಣದಿಗುಪಸ್ಥಾನೇ ವಿನಿಯೋಗಃ ॥ ಓಂ ಇಮಾ ರುದ್ರಾಯ ತವಸೇ ಕಪರ್ದಿನೇ ಕ್ಷಯದ್ವೀರಾಯಪ್ರಭರಾಮಹೇಮತೀಃ ॥ ಯಥಾಶಮಸದ್ದ್ವಿಪದೇ ಚತುಷ್ಪದೇ ವಿಶ್ವಂ ಪುಷ್ಟಂ ಗ್ರಾಮೇಽ ಅಸ್ಮಿನ್ನನಾತುರಂ ॥ ಮೃಳಾನೋ ರುದ್ರೋ ತನೋಮಯ-ಸ್ಕೃಧಿಕ್ಷಯದ್ವೀರಾಯ ನಮಸಾ ವಿಧೇಮತೇ ॥ ಯಚ್ಛಂ ಚ ಯೋಶ್ಚ ಮನುರಾಯೇ ಜೇ ಪಿತಾತದಶ್ಯಾಮ ತವ ರುದ್ರ ಪ್ರಣೀತಿಷು ॥ ಅಶ್ಯಾಮತೇ ಸುಮತಿಂ ದೇವಯಜ್ಯಯಾಕ್ಷಯದ್ವೀರಸ್ಯ ತವ ರುದ್ರಮೀಢ್ವಃ ॥ ಸುಮ್ನಾಯ-ನ್ನಿದ್ವಿಶೋ ಅಸ್ಮಾಕಮಾಚರಾರಿಷ್ಟ ವೀರಾಜುಹವಾಮತೇ ಹವಿಃ ॥ ತ್ವೇಷಂ ವಯಂ ರುದ್ರಂ ಯಜ್ಞಸಾಧಂ ವಂಕುಂಕವಿಮವಸೇನಿಹ್ವಯಾಮಹೇ ॥ ಆ ರೇ ಅಸ್ಮದ್ದೈವ್ಯಂ ಹೇಳೋ ಅಸ್ಯ ತು ಸುಮತಿಮಿದ್ವಯಮಸ್ಯಾವೃಣೀಮಹೇ ॥ ದಿವೋ ವರಾಹಮರುಷಂ ಕಪರ್ದಿನಂ ತ್ವೇಷಂ ರೂಪಂ ನಮಸಾ ನಿಹ್ವಯಾ-ಮಹೇ ॥ ಹಸ್ತೇ ಬಿಭ್ರದ್ಭೇಷಜಾ ವಾರ್ಯಾಣಿ ಶರ್ಮವರ್ಮಚ್ಛರ್ದಿರಸ್ಮಭ್ಯಂ ಯಂ ಸತ್ ॥ ೧ ॥ ಇದಂ ಪಿತ್ರೇ ಮರುತಾಮುಚ್ಯತೇ ವಚಃ ಸ್ವಾದೋಃ ಸ್ವಾದೀಯೋ ರುದ್ರಾಯ ವರ್ಧನಂ ॥ ರಾಸ್ವಾ ಚ ನೋಽ ಅಮೃತ ಮರ್ತ-ಭೋಜನಂ ತ್ಮನೇ ತೋಕಾಯ ತನಯಾಯ ಮೃಳ ॥ ಮಾನೋ ಮಹಾಂತ-ಮುತಮಾನೋ ಅರ್ಭಕಂ ಮಾನ ಉಕ್ಷಂತಮುತಮಾನ ಉಕ್ಷಿತಂ ॥ ಮಾನೋವಧೀಃ ಪಿತರಂ ಮೋತಮಾತರಂ ಮಾನಃ ಪ್ರಿಯಾಸ್ತನ್ವೋ ರುದ್ರ ರೀರಿಷಃ ॥ ಮಾನಃ ಸ್ತೋಕೇ ತನಯೇ ಮಾ ನ ಆಯೌ ಮಾನೋ ಗೋಷು

ಮಾ ನೋ ಅಶ್ವೇಷು ರೀರಿಷಃ ॥ ವೀರಾನ್ಮಾನೋ ರುದ್ರ ಭಾಮಿತೋ ವಧೀ-ರ್ಹವಿಷ್ಮಂತಃ ಸದಮಿತ್ವಾ ಹವಾಮಹೇ ॥ ಉಪ ತೇ ಸ್ತೋಮಾನ್ ಪಶುಪಾ ಇವಾಕರಂರಾಸ್ವಾಪಿತರ್ಮರುತಾಂ ಸುಮ್ನಮಸ್ಮೇ ॥ ಭದ್ರಾಹಿತೇ ಸುಮತಿಮೃಳ-ಯತ್ತಮಾಥಾ ವಯಮವ ಇತ್ತೇ ವೃಣೀಮಹೇ ॥ ಆರೇ ತೇ ಗೋಘ್ನ ಮುತ-ಪೂರಪಘ್ನಂ ಕ್ಷಯದ್ವೀರ ಸುಮ್ನಮಸ್ಮೇ ತೇ ಅಸ್ತು ॥ ಮೃಳಾ ಚ ನೋ ಅಧಿ ಚ ಬ್ರೂಹಿ ದೇವಾಧಾಚ ನಃ ಶರ್ಮ ಯಚ್ಛದ್ವಿಬರ್ಹಾಃ ॥ ಅವೋಚಾಮ ನಮೋ ಅಸ್ಮಾ ಅವಸ್ಯವಃ ಶೃಣೋತು ನೋ ಹವಂ ರುದ್ರೋ ಮರು-ತ್ವಾನ್ ॥ ತನ್ನೋ ಮಿತ್ರೋ ವರುಣೋ ಮಾಮಹಂತಾಮದಿತಿಃ ಸಿಂಧುಃ ಪೃಥಿವೀ ಉತ ದ್ಯೌಃ ॥ ೨ ॥ ಏತತ್ಸೂಕ್ತಾಂತೇ (ಗೋಭಿಃ ಸಹ) ಅನಯಾ ವತ್ಸತರ್ಯಾ ಸಹ ತೃಣಂ ಭಕ್ಷ ಜಲಂ ಪಿಬ ಯಥಾಸುಖಂ ಕ್ರೀಡಸ್ವ ॥ ತತಃ ಪಶ್ಚಿಮಾಭಿಮುಖಂ ಕೃತ್ವಾ ॥ ಆತೇ ಪಿತರಿತಿ ಪಂಚದಶರ್ಚಸ್ಯ ಸೂಕ್ತಸ್ಯ ಗೃತ್ಸಮದೋ ರುದ್ರಸ್ತ್ರಿಷ್ಟುಪ್ ॥ ಪಶ್ಚಿಮದಿಗುಪಸ್ಥಾನೇ ವಿನಿಯೋಗಃ ॥ ಓಂ ಆತೇ ಪಿತರ್ಮರುತಾಂ ಸುಮ್ನಮೇತು ಮಾನಃ ಸೂರ್ಯಸ್ಯ ಸಂದೃಶೋ ಯುಯೋಥಾಃ ॥ ಅಭಿನೋ ವೀರೋ ಅರ್ವತಿ ಕ್ಷಮೇತ ಪ್ರಜಾಯೇ ಮಹಿ ರುದ್ರ ಪ್ರಜಾಭಿಃ ॥ ತ್ವಾದತ್ತೇಭೀ ರುದ್ರ ಶಂತಮೇಭಿಃ ಶತಂ ಹಿಮಾ ಅಶೀಯ ಭೇಷಜೇಭಿಃ ॥ ವ್ಯ೧ಸ್ಮದ್ವೇಷೋ ವಿತರಂ ವ್ಯಂ ಹೋವ್ಯ ಮೀವಾಶ್ಚಾತಯ-ಸ್ವಾವಿಷೂಚೀಃ ॥ ಶ್ರೇಷ್ಠೋ ಜಾತಸ್ಯ ರುದ್ರ ಶ್ರಿಯಾ ಸಿತವಸ್ತಮಸ್ತವಸಾಂ ವಜ್ರಬಾಹೋ ॥ ಪರ್ಷಿಣಃ ಪಾರಮಂಹಸಃ ಸ್ವಸ್ತಿ ವಿಶ್ವಾ ಅಭೀತೀರಪಸೋ ಯುಯೋಧಿ ॥ ಮಾತ್ವಾ ರುದ್ರ ಚುಕ್ರುಧಾ ಮಾನಮೋಭಿರ್ಮಾ ದುಷ್ಟುತೀ ವೃಷಭಮಾಸ ಹೂತೀ ॥ ಉನ್ನೋ ವೀರಾ ಅರ್ಪಯ ಭೇಷಜೇಭಿರ್ಭಿಷಕ್ತಮಂ-ತ್ವಾಭಿಷಜಾಂ ಶೃಣೋಮಿ ॥ ಹವೀಮಭಿರ್ಹವತೇ ಯೋ ಹವಿರ್ಭಿರವಸ್ತೋ-ಮೇಭೀ ರುದ್ರಂ ದಿಷೀಯ ॥ ಋದೂದರಃ ಸುಹವೋ ಮಾನೋ ಅಸ್ಯೈ

ಬಭ್ರುಃ ಸುಶಿಪ್ರೋರೀರಧನ್ತ್ರಾಯೈ ॥ ೧ ॥ ಉನ್ಮಮಮಂದ ವೃಷಭೋ ಮರುತ್ವಾನ್ ತ್ವಕ್ಷೀಯಸಾ ವಯಸಾನಾಧಮಾನಂ ॥ ಘೃಣೀವಚ್ಛಾಯಾಮರಪಾ ಅಶೀಯಾವಿವಾಸೇಯಂ ರುದ್ರಸ್ಯಸುಮ್ನಂ ॥ ಕ್ವ ೧ ಸ್ಯತೇ ರುದ್ರಮೃಳಯಾ ಕುರ್ಹಸ್ತೋಯೋ ಅಸ್ತಿ ಭೇಷಜೋ ಜಲಾಷಃ ॥ ಅಪಭರ್ತಾರಪಸೋ ದೈವ್ಯ ಸ್ಯಾಭೀನು ಮಾ ವೃಷಭ ಚಕ್ಷಮೀಥಾಃ ॥ ಪ್ರಬಭ್ರವೇ ವೃಷಭಾಯಶ್ವಿತೀಚೇ ಮಹೋಮಹೀಂ ಸುಷ್ಟುತಿಮೀರಯಾಮಿ ॥ ನಮಸ್ಯಾಕಲ್ಮಲೀಕಿನಂ ನಮೋಭಿರ್ಗೃಣೀಮಸಿ ತ್ವೇಷಂ ರುದ್ರಸ್ಯ ನಾಮ ॥ ಸ್ಥಿರೇಭಿರಂಗೈಃ ಪುರುರೂಪ ಉಗ್ರೋ ಬಭ್ರುಃ ಶುಕ್ರೇಭಿಃ ಪಿಪಿಶೇ ಹಿರಣ್ಯೈಃ ॥ ಈಶಾನಾದಸ್ಯ ಭುವನಸ್ಯ ಭೂರೇರ್ನವಾ ಉ ಯೋಷದ್ರುದ್ರಾದಸುರ್ಯಂ ॥ ಅರ್ಹನ್ ಬಿಭರ್ಷಿ ಸಾಯಕಾನಿಧನ್ವಾರ್ಹನ್ನಿಷ್ಕಂ ಯಜಂ ತಂ ವಿಶ್ವರೂಪಂ ॥ ಅರ್ಹನ್ನಿದಂ ದಯಸೇ ವಿಶ್ವಮಬ್ವಂ ನ ವಾಽಓಜೀಯೋ ರುದ್ರ ತ್ವದಸ್ತಿ ॥ ೨ ॥ ಸ್ತುಹಿ-ಶ್ರುತಂ ಗರ್ತಸದಂ ಯುವಾನಂ ಮೃಗಂ ನಭೀಮಮುಪ ಹತ್ನುಮುಗ್ರಂ ॥ ಮೃಳಾಜರಿತ್ರೇ ರುದ್ರಸ್ತವಾನೋಽನ್ಯಂ ತೇ ಅಸ್ಮನ್ನಿವಪಂತು ಸೇನಾಃ ॥ ಕುಮಾರಶ್ಚಿತ್ಪಿತರಂ ವಂದಮಾನಂ ಪ್ರತಿನಾನಾಮ ರುದ್ರೋಪಯಂತಂ ॥ ಭೂರೇರ್ದಾತಾರಂ ಸತ್ಪತಿಂ ಗೃಣೀಷೇ ಸ್ತುತಸ್ತ್ವಂ ಭೇಷಜಾರಾಸ್ಯಸ್ಮೇ ॥ ಯಾವೋ ಭೇಷಜಾ ಮರುತಃ ಶುಚೀನಿಯಾಶಂತಮಾ ವೃಷಣೋ ಯಾಮಯೋಭು ॥ ಯಾನಿಮನುರವೃಣೀತಾ ಪಿತಾನಸ್ತಾ ಶಂಚಯೋಶ್ಚ ರುದ್ರಸ್ಯ-ವಶ್ಮಿ ॥ ಪರಿಣೋಹೇತೀ ರುದ್ರಸ್ಯವೃಜ್ಯಾಃ ಪರಿತ್ವೇಷಸ್ಯದುರ್ಮತಿರ್ಮಹೀ-ಗಾತ್ ॥ ಅವಸ್ಥಿರಾಮಘುವದ್ಭ್ಯಸ್ತನುಷ್ವಮೀಢ್ವಸ್ತೋಕಾಯ ತನಯಾಯ ಮೃಳ ॥ ಏವಾಬಭ್ರೋವೃಷಭಚೇಕಿತಾನಯಥಾದೇವನಹೃಣೀಷೇನಹಂಸಿ ॥ ಹವನಶ್ರುನ್ನೋರುದ್ರೇಹಭೋಧಿಬೃಹದ್ವದೇಮ ವಿದಥೇ ಸುವೀರಾಃ ॥ ೩ ॥

ಏತತ್ಪೂಕ್ತಾಂತೇ ಅನಯಾ ವತ್ಸತರ್ಯಾ ಸಹ ತೃಣಂ ಭಕ್ಷ ಜಲಂ ಪಿಬ ಯಥಾಸುಖಂ ಕ್ರೀಡಸ್ವ ॥ ಉದಙ್ಮುಖಂ ಕೃತ್ವಾ ॥ ಇಮಾ ರುದ್ರಾಯೇತಿ ಚತಸೃಣಾಂ ವಸಿಷ್ಠೋ ರುದ್ರೋ ಜಗತೀ ॥ ಅಂತ್ಯಾ ತ್ರಿಷ್ಟುಪ್ ॥ ಉತ್ತರ ದಿಗುಪಸ್ಥಾನೇ ವಿನಿಯೋಗಃ ॥ ಇಮಾ ರುದ್ರಾಯ ಸ್ಥಿರಧನ್ವನೇ ಗಿರಃ ಕ್ಷಿಪ್ರೇಷವೇದೇವಾಯಸ್ವಧಾವ್ನೇ ॥ ಅಷಾಳ್ಹಾಯ ಸಹಮಾನಾಯ ವೇಧಸೇ ತಿಗ್ಮಾಯುಧಾಯ ಭರತಾ ಶೃಣೋತು ನಃ ॥ ಸ ಹಿ ಕ್ಷಯೇಣ ಕ್ಷಮ್ಯಸ್ಯ ಜನ್ಮನಃ ಸಾಮ್ರಾಜ್ಯೇನ ದಿವ್ಯಸ್ಯ ಚೇತತಿ ॥ ಅವನ್ನವಂತೀರುಪನೋದುರಶ್ಚರಾನ-ಮೀವೋರುದ್ರ ಜಾಸುನೋ ಭವ ॥ ಯಾತೇದಿದ್ಯುದವಸೃಷ್ಟಾದಿವಸ್ಪರಿಕ್ಷ್ಮಯಾ ಚರತಿ ಪರಿಸಾ ವೃಣಕ್ತು ನಃ ॥ ಸಹಸ್ರಂ ತೇ ಸ್ವಪಿವಾತ ಭೇಷಜಾಮಾನಸ್ತೋ-ಕೇಷು ತನಯೇಷು ರೀರಿಷಃ ॥ ಮಾ ನೋ ವಧೀ ರುದ್ರ ಮಾಪರಾದಾಮಾತೇ ಭೂಮ ಪ್ರಸಿತೌ ಹೀಳಿತಸ್ಯ ॥ ಆ ನೋ ಭಜ ಬರ್ಹಿಷಿ ಜೀವಶಂಸೇ ಯೂಯಂ ಪಾತ ಸ್ವಸ್ತಿಭಿಃ ಸದಾನಃ ॥ ೧ ॥ ಏತತ್ಸೂಕ್ತಾಂತೇ ಅನಯಾ ವತ್ಸತರ್ಯಾ ಸಹ ತೃಣಂ ಭಕ್ಷ ಜಲಂ ಪಿಬ ಯಥಾಸುಖಂ ಕ್ರೀಡಸ್ವೇತಿ ಪೂರ್ವವತ್ ॥ ತತಃ ವೃಷಪುಚ್ಛೇ ಪ್ರೇತಸ್ಯ ನಾಮಗೋತ್ರಾದ್ಯುಚ್ಚಾರ್ಯ ತರ್ಪಣಂ ಕುರ್ಯಾದಿತಿ ಕೇಚಿತ್ ॥ ಏತಾವತ್ಕೃತ್ವಾ ಸ್ವಿಷ್ಟಕೃದಾದಿ ಕುರ್ಯಾ-ದಿತಿ ವಾ ॥ ತತಃ ಪರಿಸ್ತರಣವಿಸರ್ಜನಾದಿ ಕರ್ಮಶೇಷಂ ಸಮಾಪಯೇತ್ ॥ ತತೋ ರುದ್ರಸೋಮೇಂದ್ರೇಭ್ಯೋನುರೂಪಮಾಮಾನ್ನತ್ರಯಂ ಸದಕ್ಷಿಣಂ ದದ್ಯಾತ್ ॥ ತತೋ ವೃಷೋತ್ಸರ್ಗ ಪೂರ್ಣತಾಸಿದ್ಧ್ಯರ್ಥಂ ತಿಲಾನುದ

---

ಹೀಗೆ ಕರುವನ್ನು ನಾಲ್ಕು ದಿಕ್ಕುಗಳಿಗೂ ಮುಖಮಾಡಿ ನಿಲ್ಲಿಸಿ ಉಪಸ್ಥಾನಗಳನ್ನು ಹೇಳಬೇಕು. ಅದರ ಬಾಲದ ಮೇಲೆ ಪ್ರೇತದ ಹೆಸರು ಗೋತ್ರಗಳನ್ನು ಹೇಳಿ ತರ್ಪಣ ಬಿಡಬೇಕೆಂದು ಕೆಲವರ ಮತ. ಇಷ್ಟು ಮಾಡಿದ ಮೇಲೆ ಸ್ವಿಷ್ಟಕೃದಾದಿ ಹೋಮಶೇಷವನ್ನು ಮುಗಿಸಿ ಪರಿಸ್ತರಣವಿಸರ್ಜನಾದಿಗಳನ್ನೂ ಮಾಡಬೇಕು. ಬಳಿಕ ರುದ್ರ ಸೋಮ ಮತ್ತು ಇಂದ್ರರ ಪ್ರೀತ್ಯರ್ಥವಾಗಿ ದಕ್ಷಿಣೆಯೊಡನೆ ಮೂರು ಆಮಾನ್ನಗಳನ್ನು ಕೊಡಬೇಕು. ವೃಷೋತ್ಸರ್ಗ ಕಾರ್ಯವು ಪೂರ್ಣವಾಗಲು ಎಳ್ಳು, ಉದಕುಂಭ, ಹಸು, ಬಟ್ಟೆ, ಚಿನ್ನ ಮತ್ತು

**ಕುಂಭಂ ಗಾಂ ವಾಸೋಹಿರಣ್ಯಂ ಯಥಾಶಕ್ತಿ ದಕ್ಷಿಣಾಂ ಚ ದದ್ಯಾತ್ ॥ ಪತಿಪುತ್ರವತ್ಯಾಃ ಸುವಾಸಿನ್ಯಾ ನ ವೃಷೋತ್ಸರ್ಗಃ ॥ ತತ್ ಸ್ಥಾನೇ ಏಕಾ ಪಯಸ್ವಿನೀ ಗೌರ್ದೇಯಾ ॥**

**॥ ಇತಿ ವೃಷೋತ್ಸರ್ಗವಿಧಿಃ ॥**

---

ಯಥಾಶಕ್ತಿ ದಕ್ಷಿಣೆಯನ್ನೂ ಕೊಡಬೇಕು. ಗಂಡನೂ ಮಗನೂ ಬದುಕಿರುವ ಸುವಾಸಿನಿಯಾಗಿದ್ದರೆ ವೃಷೋತ್ಸರ್ಗದ ಆವಶ್ಯಕತೆ ಇಲ್ಲ. ಹಾಲುಕೊಡುವ ಒಂದು ದನವನ್ನು ದಾನಮಾಡಿದರೆ ಸಾಕು.

॥ ವೃಷೋತ್ಸರ್ಗಃ ಸಮಾಪ್ತ ॥

# ೨೨

# ॥ ಮಹೈಕೋದ್ದಿಷ್ಟಂ ॥

ಶ್ರೀಃ ॥ ತಸ್ಮಿನ್ನೇವಾಹನಿ ಏಕಂ ಬ್ರಾಹ್ಮಣಂ ನಿಮಂತ್ರ್ಯ ತಸ್ಯ ಶ್ಮಶ್ರುಕರ್ಮಾಭ್ಯಂಗಾದೀನಿ ಕಾರಯಿತ್ವಾ ॥ ಅದ್ಯೇತ್ಯಾದಿ ಅಮುಕಗೋತ್ರಸ್ಯಾ-ಮುಕಪ್ರೇತಸ್ಯ ಪ್ರೇತತ್ವನಿವೃತ್ತ್ಯೋತ್ತಮಲೋಕಪ್ರಾಪ್ತಯೇ ಏಕಾದಶಾಹೇ ಮಹೈಕೋದ್ದಿಷ್ಟಂ ಕರಿಷ್ಯೇ ಇತಿ ಸಂಕಲ್ಪ್ಯ ॥ ಕ್ಷಣಪಾದ್ಯಾಸನಾರ್ಘ್ಯಗಂಧ-ಪುಷ್ಪಾಚ್ಛಾದನಾನಿ ದದ್ಯಾತ್ ॥ ತತ್ರಾರ್ಘ್ಯೇ ದಕ್ಷಿಣಾಗ್ರಕುಶೋಪರಿ ಏಕ-ಮರ್ಘ್ಯ ಪಾತ್ರಮಾಸಾದ್ಯ ತತ್ರೈಕಂ ಪವಿತ್ರಂ ಜಲಂ ಚ ಕ್ಷಿಪ್ತ್ವಾ ॥ ತಿಲೋಽಸಿ ಸೋಮ ದೇವತ್ಯೋ ಗೋಸವೇ ದೇವನಿರ್ಮಿತಃ ॥ ಪ್ರತ್ನವದ್ಭಿಃ ಪ್ರತ್ತಃ ಪ್ರೇತೇಮಾಂ ಲ್ಲೋಕಾನ್ ಪ್ರೀಣಯಾಹಿ ನಃ ॥ ಇತಿ ಮಂತ್ರೇಣ ತೂಷ್ಣೀಂ ವಾ ತಿಲಾನ್ ಕ್ಷಿಪ್ತ್ವಾ ಅಮುಕಗೋತ್ರೇತ್ಯಾದಿ ಸಂಬುದ್ಧ್ಯಾ ಪ್ರೇತಾಂತ-ಮುಕ್ತ್ವಾ ಮಹೈಕೋದ್ದಿಷ್ಟೇ ಇದಮರ್ಘ್ಯಂ ತವೋಪತಿಷ್ಠತಾಮಿತ್ಯರ್ಘ್ಯಂ ದತ್ವಾ ॥ ಪಾತ್ರೇ ಘೃತಾಕ್ತಂ ಸಿದ್ಧಮನ್ನಮಾದಾಯ ವಿಪ್ರಪಾಣೌ ಪ್ರಕ್ಷಾ-ಲಿತೇ ದರ್ಭಾನಾಸ್ತೀರ್ಯಾಮುಕಗೋತ್ರಾಯಾಮುಕಶರ್ಮಣೇ ಪ್ರೇತಾಯ ಸ್ವಾಹೇತಿ ಹಸ್ತೇ ಏಕಾಮಾಹುತಿಂ ಹುತ್ವಾ ತದನ್ನಮಗ್ನೌ ಕ್ಷಿಪೇತ್ ॥ ನ ವಾ ಪಾಣಿಹೋಮಃ ॥ ತತಃ ಪರಿವೇಷಣಾದ್ಯಂಗುಷ್ಠ ನಿವೇಶನಾಂತಂ ಕೃತ್ವಾ ಅಮುಕಗೋತ್ರಾಯಾಮುಕಪ್ರೇತಾಯೇದಮನ್ನಂ ಯಥಾಶಕ್ತಿಸೋಪಸ್ಕರ ಮಮೃತ-ರೂಪಮುಪತಿಷ್ಠತಾಮಿತಿ ಸಂಕಲ್ಪ್ಯಾಪೋಶನಾದಿ ದದ್ಯಾತ್ ॥ ದರ್ಭ-ಶಿಖಾಯಾಮಮುಕ ಗೋತ್ರೇತ್ಯಾದಿ ಅಮುಕಪ್ರೇತಾಯಾಯಂ ತೇ ಪಿಂಡ ಉಪತಿಷ್ಠತಾಮಿತಿ ಪಿಂಡಂ ದದ್ಯಾತ್ ॥ ತಿಲೋದಕಂ ಭೃಂಗರಾಜಪತ್ರಂ

---

**ಮಹೈಕೋದ್ದಿಷ್ಟ:** ಅದೇ ದಿನ ಒಬ್ಬ ಬ್ರಾಹ್ಮಣನನ್ನು ನಿಮಂತ್ರಿಸಿ ಅವನಿಗೆ ಕ್ಷೌರ ಅಭ್ಯಂಗ ಸ್ನಾನಾದಿಗಳನ್ನು ಮಾಡಿಸಿ, ಆಚಮನ ಪ್ರಾಣಾಯಾಮ ದೇಶಕಾಲಕೀರ್ತನಗಳನ್ನು ಮಾಡಿ, **"ಅಮುಕಗೋತ್ರಸ್ಯ.... ಕರಿಷ್ಯೇ"** ಎಂದು ಸಂಕಲ್ಪ ಮಾಡಬೇಕು. ಬ್ರಾಹ್ಮಣನಿಗೆ ಕ್ಷಣ, ಪಾದ್ಯ, ಆಸನ, ಅರ್ಘ್ಯ, ಗಂಧ ಪುಷ್ಪಾದಿಗಳನ್ನು ಕೊಡಬೇಕು. ಈ ಕರ್ಮಗಳನ್ನೆಲ್ಲ ಶ್ರಾದ್ಧ ಸಂಕಲ್ಪದಲ್ಲಿ ಹೇಳಿದ ಕ್ರಮದಂತೆ ಮಾಡಬೇಕು. ಅರ್ಘ್ಯಪಾತ್ರೆಯಲ್ಲಿ ಅರ್ಘ್ಯವನ್ನು ತಯಾರಿಸಿ **"ಅಮುಕಗೋತ್ರಾಯ...."** ಎಂದು ಮೊದಲಾಗಿ **"ಅರ್ಘ್ಯಂ ತವೋಪತಿಷ್ಠತಾಂ"** ಎಂದು ಅದನ್ನು ಕೊಡಬೇಕು. ಬಳಿಕ ಪಾತ್ರೆಯಲ್ಲಿ ತುಪ್ಪ ಬೆರಸಿದ ಬೆಂದ ಅನ್ನವನ್ನು ತೆಗೆದುಕೊಂಡು ಬ್ರಾಹ್ಮಣನ ಕೈಯಲ್ಲಿ **"ಪ್ರೇತಾಯ ಸ್ವಾಹಾ"** ಎಂದು ಒಂದು ಆಹುತಿಯನ್ನು ಕೊಟ್ಟು

**ದಕ್ಷಿಣಾಂ ಚ ದದ್ಯಾತ್ ॥ ಪ್ರೇತಸ್ಯ ವಸ್ತ್ರಶಯನಾಭರಣಾನಿ ಪಾದುಕಾ-ಛತ್ರೋದಕಪಾತ್ರವಾಹನಾದೀನಿ ಯಥಾಶಕ್ತಿ ದದ್ಯಾತ್ ॥ ಭೂಯಸೀಂ ದಕ್ಷಿಣಾಂ ದತ್ವಾ ಸಂತೋಷಯೇತ್ ॥ ಅಭಿರಮ್ಯತಾಮಿತಿ ವಿಸರ್ಜನಂ ॥ ಅಭಿರತಾಸ್ಮೇತಿ ಪ್ರತಿವಚನಂ ॥ ಏಕೋದ್ದಿಷ್ಟೇ ಏಕೋ ವಿಪ್ರಃ ದಿವೈವ ನಿಮಂತ್ರಣಂ ಏಕಮರ್ಘ್ಯಪಾತ್ರಂ ಧೂಪದೀಪೌ ನ ಸ್ತಃ ॥ ಸ್ವಧಾಶಬ್ದ ಪಿತೃಶಬ್ದ ನಮಃಶಬ್ದಾ ನ ಸಂತಿ ॥ ನಾಭಿಶ್ರವಣಂ ॥ ಸರ್ವಂ ಪ್ರಾಚೀನಾವೀತಿನಾ ಕಾರ್ಯಂ ॥ ದೈವಂ ನಾಸ್ತಿ ನಾಗ್ನೌಕರಣಂ ಏಕ ಏವ ಪಿಂಡಃ ಅನುಮಂತ್ರಣಾದಿ ಸರ್ವಮಮಂತ್ರಕಂ ಅಕ್ಷಯ್ಯಸ್ಥಾನೇ ಉಪತಿಷ್ಠತಾಮಿತಿ ವದೇತ್ ॥ ಶ್ರಾದ್ಧಶೇಷಭೋಜನಂ ನ ಕಾರ್ಯಂ ॥ ಅಂತೇ ಸ್ನಾನಂ ॥ ನವಶ್ರಾದ್ಧೈಕೋದಿಷ್ಟೇ ತು ಸರ್ವಮ-ಮಂತ್ರಕಂ ॥ ಸ್ಮೃತ್ಯರ್ಥಸಾರೇ ಮಧ್ಯೈಕೋದಿಷ್ಟಾನಂತರಂ ನವಶ್ರಾದ್ಧಮಿತಿ ಕ್ರಮಃ ॥**

**॥ ಇತಿ ಮಧ್ಯೈಕೋದ್ದಿಷ್ಟಂ ॥**

---

ಪಾಣಿಹೋಮವನ್ನು ಮಾಡಬೇಕು. ಪಾಣಿಹೋಮವನ್ನು ಮಾಡದಿರುವುದೂ ಉಂಟು. ನಂತರ ಭೋಜನಪಾತ್ರವನ್ನಿಟ್ಟು ಸಾಂವತ್ಸರಿಕಶ್ರಾದ್ಧದಲ್ಲಿ ಹೇಳಿದ ಕ್ರಮದಂತೆ ಪರಿವೇಷಣದಿಂದ ತೊಡಗಿ ಅಂಗುಷ್ಠ-ನಿವೇಶನದ ವರೆಗೆ ಮಾಡಿ ಪ್ರೇತಕ್ಕೆ ಅನ್ನಸಮರ್ಪಣೆಯನ್ನು ಮಾಡಬೇಕು. ನಂತರ ದರ್ಭೆಯನ್ನು ಹಾಕಿ ಅದರ ಮೇಲೆ ಪಿಂಡದಾನ ಮಾಡಿ ತಿಲೋದಕ ಭೃಂಗರಾಜಪತ್ರ ದಕ್ಷಿಣೆ ಇತ್ಯಾದಿಗಳನ್ನು ಕೊಟ್ಟು ಪ್ರೇತೋಪಯೋಗಕ್ಕೆ ವಸ್ತ್ರ, ಹಾಸಿಗೆ, ಆಭರಣ, ಪಾದುಕೆ, ಛತ್ರ, ಉದಕಪಾತ್ರ, ವಾಹನ, ದಕ್ಷಿಣೆ ಮುಂತಾದವುಗಳನ್ನು ಕೊಡಬೇಕು. **"ಅಭಿರಮ್ಯತಾಂ" "ಅಭಿರತಾಃ ಸ್ಮ"** ಎಂದು ಕೊನೆಗೆ ವಿಸರ್ಜನೆ ಮಾಡಬೇಕು. ಏಕೋದ್ದಿಷ್ಟದಲ್ಲಿ ಒಬ್ಬನೇ ಬ್ರಾಹ್ಮಣ, ಹಗಲು ಆಮಂತ್ರಣ, ಒಂದು ಅರ್ಘ್ಯಪಾತ್ರ, ಧೂಪದೀಪಾದಿಗಳಿಲ್ಲ, **"ಸ್ವಧಾ, ಪಿತೃ, ನಮಃ"** ಮುಂತಾದ ಶಬ್ದಗಳ ಪ್ರಯೋಗವಿಲ್ಲ. ಅಪಸವ್ಯದಿಂದಲೇ ಎಲ್ಲ ಕರ್ಮಗಳನ್ನೂ ಮಾಡಬೇಕು. ದೈವಸಂಬಂಧೀ ಕರ್ಮಭಾಗಗಳು ಅಗ್ನೌಕರಣ ಮುಂತಾದವುಗಳೂ ಇಲ್ಲ. ಶ್ರಾದ್ಧ ಶೇಷಭೋಜನವೂ ಇಲ್ಲ. ಕೊನೆಗೆ ಸ್ನಾನವನ್ನು ಮಾಡಬೇಕು. ನವಶ್ರಾದ್ಧೈಕೋದ್ದಿಷ್ಟದಲ್ಲಿ ಎಲ್ಲವನ್ನೂ ಮಂತ್ರರಹಿತವಾಗಿಯೇ ಮಾಡಬೇಕು.

॥ ಮಧ್ಯೈಕೋದ್ದಿಷ್ಟ ಸಮಾಪ್ತ ॥

# ॥ ಅಗ್ನೌ ಮಹೈಕೋದ್ದಿಷ್ಟಂ ॥

ಶ್ರೀಃ ॥ ಅಥ ದ್ವಿಜಾಭಾವೇ ಅಗ್ನೌ ಆದ್ಯಮಾಸಿಕ ಮಹೈಕೋದ್ದಿಷ್ಟ-ವಿಧಿಃ ॥ ಗ್ರಾಮಾದ್ಬಹಿಃ ಶುಚೌ ದೇಶೇ ಗೋಮಯೇನೋಪಲಿಪ್ತೇ ಅದ್ಯೇ-ತ್ಯಾದಿ ಅಮುಕಗೋತ್ರಸ್ಯಾಮುಕಪ್ರೇತಸ್ಯ ಪ್ರೇತತ್ವನಿವೃತ್ತ್ಯೋತ್ತಮಲೋಕ-ಪ್ರಾಪ್ತಯೇ ಏಕಾದಶಾಹೇ ಅಗ್ನೌ ಮಹೈಕೋದ್ದಿಷ್ಟಂ ಕರಿಷ್ಯ ಇತಿ ಸಂಕಲ್ಪ್ಯ ॥ ಓಂ ಭೂರ್ಭುವಃ ಸ್ವಃ ಇತಿ ಲೌಕಿಕಾಗ್ನಿಂ ಪ್ರತಿಷ್ಠಾಪ್ಯ ಪರಿಸಮುಹ್ಯ ಪರಿಸ್ತೀರ್ಯ ಪರ್ಯುಕ್ಷ್ಯ ಗಂಧಾದಿಭಿರಭ್ಯರ್ಚ್ಯ ದ್ವಿಜವದಗ್ನಿಸಮೀಪೇ ದೇಶ-ಕಾಲೌ ಸ್ಮೃತ್ವಾ ಅಗ್ನೌ ಮಹೈಕೋದ್ದಿಷ್ಟಶ್ರಾದ್ಧಂ ಕರಿಷ್ಯೇ ॥ ಇತಿ ಸಂಕಲ್ಪ್ಯ ತಿಲೋದಕಂ........ ॥ ದರ್ಭಬಟೌ ಅಮುಕಗೋತ್ರಾಮುಕಪ್ರೇತ ಮಹೈ-ಕೋದ್ದಿಷ್ಟಶ್ರಾದ್ಧೇ ಕ್ಷಣ ಉಪತಿಷ್ಠತಾಮಿತ್ಯಾದಿ ಕ್ಷಣಾದಿ ಪೂರ್ವವದ್ದದ್ಯಾತ್ ॥ ಅಗ್ನಿಸಮೀಪೇ ಪೂರ್ವವದರ್ಘ್ಯಂ ॥ ಅಮುಕಗೋತ್ರೇತ್ಯಾದಿ ಪ್ರೇತಾಯ ಸ್ವಾಹೇತ್ಯಗ್ನಾವೇಕಾಹುತಿಹೋಮಃ ॥ ತತೋಗ್ನೇರಗ್ರತಃ ತ್ರಿಕೋಣಮಂಡಲೋ-ಪರಿ ಪಾತ್ರಂ ಸಂಸ್ಥಾಪ್ಯ ಪರಿವೇಷಣಾದಿ ಸಂಕಲ್ಪಾಂತಂ ಪೂರ್ವವತ್ ॥ ಉದೀರತಾಮಿತ್ಯಷ್ಟಭಿರ್ಮಂತ್ರೈಃ ಪ್ರಣವಾದ್ಯೈಃ ಸ್ವಾಹಾಕಾರಾಂತೈಶ್ಚತುರ್ವಾರಾ-ವೃತ್ತ್ಯಾದ್ವಾತ್ರಿಂಶದಾಹುತೀರ್ಗ್ರಾಸಮಿತಾಃ ಸೋಪಸ್ಕರಾನ್ನಸ್ಯ ಜುಹುಯಾನ್ನ ತ್ಯಾಗಃ ॥ ಉದೀರತಾಮಿತ್ಯಷ್ಟರ್ಚಸ್ಯ ಶಂಖಃ ಪಿತರಸ್ತ್ರಿಷ್ಟುಪ್ ॥

---

**ಅಗ್ನೌ ಮಹೈಕೋದ್ದಿಷ್ಟಂ:-** ಅಗ್ನಿಯನ್ನು ಪ್ರತಿಷ್ಠಾಪಿಸಿ ಏಕೋದ್ದಿಷ್ಟವನ್ನು ಮಾಡುವ ವಿಧಿ. ಬ್ರಾಹ್ಮಣನಿಗೆ ಕ್ಷಣಾದಿಗಳನ್ನು ಕೊಡದೆ ಮಾಡುವ ವಿಧಿ ಇದು. ಊರಿನ ಹೊರಗೆ ಶುದ್ಧವಾದ ಸ್ಥಳದಲ್ಲಿ ಗೋಮಯದಿಂದ ಶುದ್ಧಮಾಡಿ, ಆಚಮನ ಪ್ರಾಣಾಯಾಮ ದೇಶಕಾಲಸ್ಮರಣಾದಿಗಳನ್ನು ಪೂರಯಿಸಿ **"ಅದ್ಯ ಅಮುಕಗೋತ್ರಸ್ಯ.... ಕೋದ್ದಿಷ್ಟಂ ಕರಿಷ್ಯೇ"** ಎಂದು ಸಂಕಲ್ಪ ಮಾಡಬೇಕು. ಸ್ಥಂಡಿಲವನ್ನು ನಿರ್ಮಿಸಿ ಲೌಕಿಕಾಗ್ನಿಯನ್ನು ಪ್ರತಿಷ್ಠಾಪಿಸಿ, ಪರಿಸಮೂಹನ, ಪರಿಸ್ತರಣ, ಪರ್ಯುಕ್ಷಣದ ವರೆಗಿನ ಕರ್ಮಭಾಗಗಳನ್ನು ಸ್ಥಾಲೀಪಾಕದಲ್ಲಿ ಹೇಳಿದಂತೆ ಮಾಡಿ ಅಗ್ನಿಯ ಮುಂದೆ ದೇಶಕಾಲ ಸ್ಮರಣೆಯನ್ನು ಮತ್ತೊಮ್ಮೆ ಮಾಡಿ, **"ಅಗ್ನೌ ಮಹೈಕೋದ್ದಿಷ್ಟಂ......ಕರಿಷ್ಯೇ"** ಎಂದು ಸಂಕಲ್ಪ ಮಾಡಬೇಕು. ಬಳಿಕ ತಿಲೋದಕವನ್ನು ಕೊಡಬೇಕು. ಆಮೇಲೆ ದರ್ಭೆಯ ಕೂರ್ಚವನ್ನಿಟ್ಟು **"ಅಮುಕಗೋತ್ರಾಯ.... ಕ್ಷಣ ಉಪತಿಷ್ಠತಾಂ"**ಎಂದು ಮೊದಲಾಗಿ ಕ್ಷಣಾದಿಗಳನ್ನು ಕೊಟ್ಟು ಅಗ್ನಿಯ ಮುಂದೆ ಅರ್ಘ್ಯವನ್ನೂ ಕೊಡಬೇಕು. **"ಅಮುಕಗೋತ್ರಾಯ.... ಪ್ರೇತಾಯ ಸ್ವಾಹಾ"** ಎಂದು ಅಗ್ನಿಯಲ್ಲಿ ಒಂದು ಆಹುತಿಯನ್ನು ಕೊಟ್ಟು ಅಗ್ನಿಯ ಮುಂದೆ ತ್ರಿಕೋಣ ಮಂಡಲದ ಮೇಲೆ ಒಂದು

ಮಹೈಕೋದ್ದಿಷ್ಟಾನ್ನಹೋಮೇ ವಿನಿಯೋಗಃ ॥ ಓಂ ಉದೀರತಾಮವರ ಉತ್ಪರಾಸ ಉನ್ಮಧ್ಯಮಾಃ ಪಿತರಃ ಸೋಮ್ಯಾಸಃ ॥ ಅಸುಂಯ ಈಯುರ ವೃಕಾಋತಜ್ಞಾಸ್ತೇನೋವಂತು ಪಿತರೋ ಹವೇಷು ಸ್ವಾಹಾ ॥ ಇದಂ ಪಿತೃಭ್ಯೋ ನಮೋ ಅಸ್ತ್ವದ್ಯ ಯೇ ಪೂರ್ವಾಸೋಯ ಉಪರಾಸಈಯುಃ ॥ ಯೇ ಪಾರ್ಥಿವೇ ರಜಸ್ಯಾನಿಷತ್ತಾ ಯೇ ವಾ ನೂನಂ ಸು ವೃಜನಾ ಸುವಿಕ್ಷು ॥ ಆಹಂ ಪಿತೄನ್ ತ್ಸುವಿದತ್ರಾ ಅವಿತ್ಸಿನಪಾತಂ ಚ ವಿಕ್ರಮಣಂ ಚ ವಿಷ್ಣೋಃ ॥ ಬರ್ಹಿಷದೋಯೇ ಸ್ವಧಯಾ ಸುತಸ್ಯ ಭಜಂತಪಿತ್ವಸ್ತ ಇಹಾಗಮಿಷ್ಠಾಃ ॥ ಬರ್ಹಿಷದಃ ಪಿತರ ಊತ್ಯ ರ್ಗಿ ವಾರ್ಗಿಮಾ ವೋ ಹವ್ಯಾಚಕ್ಯಮಾ ಜುಷಧ್ವಂ ॥ ತ ಆಗತಾವಸಾ ಶಂತಮೇನಾಥಾನಃ ಶಂ ಯೋರರಪೋ ದಧಾತ ॥ ಉಪಹೂತಾಃ ಪಿತರಃ ಸೋಮ್ಯಾಸೋ ಬರ್ಹಿಷ್ಯೇಷು ನಿಧಿಷು ಪ್ರಿಯೇಷು ॥ ತ ಆಗಮಂತು ತ ಇಹ ಶ್ರುವಂತ್ವಧಿಬ್ರುವಂತು ತೇವಂತ್ವಸ್ಮಾನ್ ॥ ಆಚ್ಯಾಜಾನುದಕ್ಷಿಣತೋ ನಿಷದ್ಯೇಮಂ ಯಜ್ಞಮಭಿಗೃಣೀತ ವಿಶ್ವೇ ॥ ಮಾ ಹಿಂಸಿಷ್ಟ ಪಿತರಃ ಕೇನಚಿನ್ನೋಯದ್ವ ಆಗಃ ಪುರುಷ ತಾ ಕರಾಮ ॥ ಆಸೀನಾಸೋ ಅರುಣೀನಾಮುಪಸ್ಥೇ ರಯಿಂ ಧತ್ತ ದಾಶುಷೇ ಮರ್ತ್ಯಾಯ ॥ ಪುತ್ರೇಭ್ಯಃ ಪಿತರಸ್ತಸ್ಯವಸ್ವಃ ಪ್ರಯಚ್ಛತ ತ ಇಹೋರ್ಜಂ ದಧಾತ ॥ ಯೇ ನಃ ಪೂರ್ವೇ ಪಿತರಃ ಸೋಮ್ಯಾಸೋ ನೂಹಿರೆಸೋ ಮಪೀಥಂ ವಸಿಷ್ಠಾಃ ॥ ತೇಭಿರ್ಯಮಃ ಸಂ ರರಾಣೋ ಹವೀಂಷ್ಯುಶನ್ನುಶದ್ಭಿಃ ಪ್ರತಿಕಾಮಮತ್ತು ॥ ಏವಂ ಚತುರಾವೃತ್ತಸೂಕ್ತೇನ ದ್ವಾತ್ರಿಂಶದಾಹುತೀರ್ಹುತ್ವಾ ಉಚ್ಛಿಷ್ಟಪಿಂಡೋ ನ ದೇಯಃ ಅಗ್ನಿಸಮೀಪೇ ಏಕಃ ಪಿಂಡಃ ಪೂರ್ವವದ್ದೇಯಃ ॥ ಪಿಂಡಾರ್ಥಮೇಕಂ ಕುಶಂ ನಿಧಾಯ ಅಭ್ಯುಕ್ಷ್ಯ ಅಮುಕಗೋತ್ರ....ಪಿಂಡಾರ್ಥೇ ದರ್ಭಾಸನಂ ತಸ್ಯೋಪರಿ ತಿಲೋದಕಂ ಉಪತಿಷ್ಠತಾಂ ॥ ಅಮುಕ ಪ್ರೇತ ಕ್ಷುನ್ನಿವೃತ್ಯರ್ಥಂ ಚರುಪಿಂಡ ಉಪ...... ॥ ತಸ್ಯೋಪರಿ ತಿಲೋದಕಮುಪ...... ॥ ಅಂಜನಾಭ್ಯಂಜನಂ ಪಾದ್ಯಂ

**ಅರ್ಘ್ಯಂ ಆಚಮನೀಯಂ ಸ್ನಾನಂ ವಸ್ತ್ರಂ ಗಂಧಮಾಲ್ಯ ಭೃಂಗರಾಜತುಲಸೀ-ಪತ್ರಾಣಿ ಸರ್ವೋಪಚಾರಾರ್ಥೇ ತಿಲಾಃ ಧೂಪದೀಪೌ ಚರು ನೈವೇದ್ಯಃ ತಾಂಬೂಲಂ ದಕ್ಷಿಣಾ ಪ್ರೇತಸ್ಯ ವಸ್ತ್ರಶಯನಾಸನಾಭರಣಾನಿ ಪಾದುಕಾಛತ್ರೋದಕ ಪಾತ್ರವಾಹನಾದೀನಿ ಯಥಾಶಕ್ತಿ ದದ್ಯಾತ್ ॥ ಅತಸೀಪುಷ್ಪ..... ॥ ಅನಾದಿನಿಧನೋ ದೇವ ಇತಿ ಪಠಿತ್ವಾಪ್ಯಾಯನಂ ವಾಚಯಿತ್ವಾ ಪರಿಸ್ತರಣಾನಿ ವಿಸೃಜ್ಯ ಪರಿಸಮುಹ್ಯ ಪರ್ಯುಕ್ಷ್ಯಾಭ್ಯರ್ಚ್ಯ ಸಾಂಗತಾರ್ಥಂ ಬ್ರಾಹ್ಮಣೇಭ್ಯೋ ಭೂಯಸೀಂ ದತ್ವಾ ಅಭಿರಮ್ಯತಾಮಿತಿ ವಿಸರ್ಜಯೇತ್ ॥**

**॥ ಇತ್ಯಗ್ನೌ ಮಹೈಕೋದ್ದಿಷ್ಟವಿಧಿಃ ॥**

---

ಭೋಜನಪಾತ್ರವನ್ನಿಟ್ಟು ಶ್ರಾದ್ಧ ಸಂಕಲ್ಪದಲ್ಲಿ ಹೇಳಿದಂತೆ ಪರಿವೇಷಣದಿಂದ ಸಂಕಲ್ಪಾಂತದ ವರೇಗೆ ಕರ್ಮಗಳನ್ನು ಮಾಡಬೇಕು. ಬಳಿಕ **"ಉದೀರತಾ..."** ಮೊದಲಾದ ಎಂಟು ಮಂತ್ರಗಳನ್ನು ನಾಲ್ಕು ಸಲ ಆವರ್ತಿಸಿ ಒಟ್ಟು ಮೂವತ್ತೆರಡು ಅನ್ನದ ಆಹುತಿಗಳನ್ನು ಕೊಡಬೇಕು. **"ನ ಮಮ"** ಎಂದು ತ್ಯಾಗಮಂತ್ರವನ್ನು ಹೇಳಬಾರದು.

ಈ ಮಂತ್ರಗಳನ್ನು ನಾಲ್ಕು ಸಾರಿ ಆವರ್ತಿಸಿ ಒಟ್ಟು ಮೂವತ್ತೆರಡು ಆಹುತಿಗಳನ್ನು ಕೊಡಬೇಕು. ಉಚ್ಛಿಷ್ಟ ಪಿಂಡವನ್ನು ಕೊಡಬೇಕಾಗಿಲ್ಲ. ಅಗ್ನಿಯ ಬಳಿ ಮೊದಲಿನಂತೆ ಒಂದು ಪಿಂಡವನ್ನು ಕೊಡಬೇಕು. ಪಿಂಡದಾನಕ್ಕೆ ಒಂದು ದರ್ಭೆಯನ್ನು ಹಾಕಿ ಅದನ್ನು ಪ್ರೋಕ್ಷಿಸಿ, **"ಅಮುಕ ಗೋತ್ರ... ಪ್ರೇತ...."** ಎಂದು ಹೇಳುತ್ತ ದರ್ಭಾಸನ ತಿಲೋದಕಗಳನ್ನು ಕೊಟ್ಟು **"ಕ್ಷುನ್ನಿವೃತ್ಯರ್ಥಂ..."** ಎಂದು ಚರುವಿನ ಪಿಂಡವನ್ನು ಕೊಡಬೇಕು. ಪುನಃ ತಿಲೋದಕ ಬಳಿಕ ಅಂಜನದಿಂದ ಭೃಂಗರಾಜ ತುಲಸೀಪತ್ರದ ವರೆಗಿನ ಉಪಚಾರಗಳನ್ನು ಧೂಪದೀಪಾದಿಗಳನ್ನೂ ಕೊಡಬೇಕು. ವಸ್ತ್ರ, ಶಯನ, ಆಭರಣ, ಪಾದುಕೆ, ಛತ್ರ ಮುಂತಾದವುಗಳನ್ನೂ ಸಾಧ್ಯವಿದ್ದಂತೆ ಕೊಡಬೇಕು. **"ಅತಸೀ ಪುಷ್ಪಸಂಕಾಶಂ..."** **"ಅನಾದಿನಿಧನೋ ದೇವ..."** ಎಂಬ ಶ್ಲೋಕಗಳನ್ನು ಹೇಳಿ ಆಪ್ಯಾಯನವನ್ನೂ ಹೇಳಿ, ಪರಿಸ್ತರಣ ವಿಸರ್ಜನಾದಿ ಹೋಮಶೇಷ ಕಾರ್ಯವನ್ನು ಮುಗಿಸಿ ಬ್ರಾಹ್ಮಣರಿಗೆ ದಕ್ಷಿಣೆ ಕೊಟ್ಟು ಕರ್ಮಸಮಾಪನ ಮಾಡಬೇಕು.

॥ ಅಗ್ನಿಯಲ್ಲಿ ಮಹೈಕೋದ್ದಿಷ್ಟ ಸಮಾಪ್ತ ॥

# ॥ ರುದ್ರಗಣಶ್ರಾದ್ಧಂ ॥

ಶ್ರೀಃ ॥ ತಚ್ಚೈಕಾದಶರುದ್ರೋದ್ದೇಶೇನ ರುದ್ರರೂಪಪ್ರೇತೋದ್ದೇಶೇನ ವಾ ಕಾರ್ಯಂ ॥ ರುದ್ರೋದ್ದೇಶಪಕ್ಷೇ ಸವ್ಯೇನ ॥ ತದ್ರೂಪಪ್ರೇತೋದ್ದೇಶ-ಪಕ್ಷೇ ಅಪಸವ್ಯೇನ ॥ ತತ್ರೈಕಾದಶರುದ್ರನಾಮಾನಿ ॥ ೧. ಅಜೈಕಪಾತ್ ೨. ಅಹಿರ್ಬುದ್ನ್ಯಃ ೩. ಕಪಾಲೀ ೪. ರುದ್ರ ಏವಚ ॥ ೫. ವೃಷಾಕಪಿಶ್ಚ ೬. ಶಂಭುಶ್ಚ ೭. ಕಪರ್ದೀ ೮. ರೈವತಸ್ತಥಾ ॥ ೯. ಹರಶ್ಚ ೧೦. ಬಹುರೂಪಶ್ಚ ೧೧. ತ್ರ್ಯಂಬಕಶ್ಚಾಪರಾಜಿತಃ ॥ ಅಥ ಪ್ರಯೋಗಃ ॥ ದೇಶಕಾಲೌ ಸ್ಮೃತ್ವಾ ॥ ಅಮುಕಗೋತ್ರಸ್ಯೇತ್ಯಾದಿ ಪ್ರೇತತ್ವವಿಮುಕ್ತ್ಯೋತ್ತಮಲೋಕಪ್ರಾಪ್ತ್ಯರ್ಥಂ ರುದ್ರ ಗಣಶ್ರಾದ್ಧಂ ಕರಿಷ್ಯೇ ಇತಿ ಸಂಕಲ್ಪ್ಯ ॥ ಅಪಸವ್ಯಂ ॥ ತೂಷ್ಣೀಂ ತಿಲೋದಕಂ ॥ ಶಕ್ತೇನೈಕೈಕರುದ್ರನಾಮಗ್ರಹಣೇನ ಐಕೈಕಬ್ರಾಹ್ಮಣಭೋಜನಂ ಕಾರ್ಯಂ ॥ ಏಕೈಕರುದ್ರರೂಪ ಪ್ರೇತೋದ್ದೇಶಪಕ್ಷೇ ಅಜೈಕಪಾದ್ರೂಪಿನ್ ಅಮುಕಪ್ರೇತ ಇದಮಾಸನಮಿತ್ಯಾದಿ ಪ್ರತ್ಯೇಕಂ ಕ್ಷಣಾದ್ಯೇ ಸಂಬುದ್ಧ್ಯಾ ದತ್ವಾ ಆಸನಂ ಷಷ್ಠ್ಯಾನ್ನದಾನಂ ಚತುರ್ಥ್ಯಾ ಚಾರ್ಪಯೇತ್ ॥ ಅಶಕ್ತೇನ ಸರ್ವೋದ್ದೇಶೇನ ಏಕ ಏವ ಭೋಜನೀಯಃ ॥ ಭೋಜನಾಭಾವೇ ಏಕಾದಶ ಆಮಾನ್ನಾನಿ ॥ ಏಕಬ್ರಾಹ್ಮಣಪಕ್ಷೇತು ಏಕಾದಶ ನಾಮಾನ್ಯುಕ್ತ್ವಾ ಏತದ್ರೂಪಿಣೇ ಅಮುಕ-

---

**ರುದ್ರಗಣಶ್ರಾದ್ಧ:-** ಇದನ್ನು ಏಕಾದಶ ರುದ್ರರನ್ನು ಉದ್ದೇಶಿಸಿಯೂ, ಕೇವಲ ಪ್ರೇತಪುರುಷನನ್ನು ಮಾತ್ರ ಉದ್ದೇಶಿಸಿಯೂ ಮಾಡಬಹುದು. ರುದ್ರರನ್ನು ಉದ್ದೇಶಿಸಿ ಎಂದಾದರೆ ಸವ್ಯದಿಂದಲೂ, ಪ್ರೇತವನ್ನು ಉದ್ದೇಶಿಸಿಯಾದರೆ ಎಲ್ಲ ಕರ್ಮಗಳನ್ನು ಅಪಸವ್ಯದಿಂದಲೂ ಮಾಡಬೇಕು. **"ಅಜೈಕಪಾತ್"** ಎಂಬಲ್ಲಿಂದ **"ತ್ರ್ಯಂಬಕ"** ಎಂಬಲ್ಲಿ ವರೆಗೆ ಮೇಲೆ ಹೇಳಿದ ೧೧ ರುದ್ರರ ಹೆಸರುಗಳು. ಆಚಮನ ಪ್ರಾಣಾಯಾಮ ದೇಶಕಾಲ ಸ್ಮರಣಾದಿಗಳನ್ನು ಮಾಡಿ **"ಅಮುಕಗೋತ್ರಸ್ಯ.....ರುದ್ರಗಣಶ್ರಾದ್ಧಂ ಕರಿಷ್ಯೇ"** ಎಂದು ಸಂಕಲ್ಪ ಮಾಡಬೇಕು. ಅಪಸವ್ಯದಿಂದ ಮಂತ್ರವಿಲ್ಲದೆ ಒಂದು ತಿಲೋದಕವನ್ನು ಕೊಡಬೇಕು. ಸಾಧ್ಯವಿದ್ದವನು ಒಬ್ಬೊಬ್ಬ ರುದ್ರನ ಸ್ಥಾನಕ್ಕೆ ಒಬ್ಬೊಬ್ಬ ಬ್ರಾಹ್ಮಣನನ್ನು ನಿಮಂತ್ರಿಸಿ ಅವನಿಗೆ ಪ್ರತ್ಯೇಕ ಪ್ರತ್ಯೇಕವಾಗಿ ಭೋಜನಾದಿಗಳನ್ನು ಕೊಡಬೇಕು. ಹಾಗೆ ಮಾಡುವ ಸಾಮರ್ಥ್ಯವಿಲ್ಲದವನು ೧೧ ರುದ್ರರ ಸ್ಥಾನಕ್ಕೆ ಒಬ್ಬನನ್ನೇ ನಿಮಂತ್ರಿಸಿ ಶ್ರಾದ್ಧವನ್ನು ಮಾಡಬಹುದು. ರುದ್ರರೂಪಿಯಾದ ಪ್ರೇತಕ್ಕೆ ಶ್ರಾದ್ಧಮಾಡುವ ಪಕ್ಷದಲ್ಲಿ **"ಅಜೈಕಪಾದ್ರೂಪಿನ್ ಅಮುಕಪ್ರೇತ.... ಅಹಿರ್ಬುಧ್ನ್ಯರೂಪಿನ್**

**ಪ್ರೇತಾಯೇತ್ಯಾದ್ಯೂಹ್ಯಂ ॥ ಭೋಜನಾನಂತರಂ ದಕ್ಷಿಣಾ ವಿಸರ್ಜನಾದಿ-ಕಾರ್ಯಂ ॥ ಅತ್ರ ಪಿಂಡದಾನಾರ್ಘ್ಯಾಗ್ನೌಕರಣವಿಕಿರಾಣಾಮಭಾವಃ ॥**

**॥ ಇತಿ ರುದ್ರಗಣಶ್ರಾದ್ಧಂ ॥**

---

**ಅಮುಕ ಪ್ರೇತ...**" ಎಂದು ಮೊದಲಾಗಿ ಬೇರೆ ಬೇರೆಯಾಗಿ ಸಂಬೋಧಿಸಿ ಸಂಬೋಧನಾ ವಿಭಕ್ತಿಯಿಂದ ಕ್ಷಣ ಮತ್ತು ಪಾದ್ಯಗಳನ್ನೂ, ಷಷ್ಠೀ ವಿಭಕ್ತಿಯಿಂದ ಆಸನವನ್ನೂ, ಚತುರ್ಥೀವಿಭಕ್ತಿಯಿಂದ ಅನ್ನದಾನವನ್ನೂ ಸಮರ್ಪಿಸಬೇಕು. ಭೋಜನವನ್ನು ಕೊಡಲು ಸಾಧ್ಯವಾಗದಿದ್ದಲ್ಲಿ ೧೧ ಆಮಾನ್ನಗಳನ್ನಾದರೂ ಕೊಡಬೇಕು. ಭೋಜನಾನಂತರ ದಕ್ಷಿಣೆ ಕೊಟ್ಟು ಶ್ರಾದ್ಧವಿಸರ್ಜನೆ ಮಾಡಬೇಕು. ಈ ರುದ್ರಗಣಶ್ರಾದ್ಧದಲ್ಲಿ ಪಿಂಡದಾನ, ಅರ್ಘ್ಯ, ಅಗ್ನೌಕರಣ ಮುಂತಾದವುಗಳಿಲ್ಲ.

॥ ರುದ್ರಗಣಶ್ರಾದ್ಧ ಸಮಾಪ್ತ ॥

# ॥ ವಸುಗಣಶ್ರಾದ್ಧಂ ॥

ಶ್ರೀಃ ॥ ಇದಂ ಚ ಕೃತಾಕೃತಂ ॥ ಇದಮಪ್ಯಷ್ಟವಸೂದ್ದೇಶಪಕ್ಷೇ ಸವ್ಯೇನ ತದ್ರೂಪಪ್ರೇತೋದ್ದೇಶಪಕ್ಷೇತ್ವಪಸವ್ಯೇನ ಕಾರ್ಯಂ ॥ ಶಕ್ತೇನಾಷ್ಟೌ ಬ್ರಾಹ್ಮಣಾಃ ಭೋಜನೀಯಾಃ ॥ ಅಶಕ್ತೇನ ಏಕಃ ಸರ್ವೋದ್ದೇಶೇನ ॥ ಅನ್ನಾಭಾವೇ ಆಮಾನ್ನದಾನಂ ॥ ಅನ್ಯತ್ಸರ್ವಂ ಪೂರ್ವವತ್ ॥ ವಸುನಾಮಾನಿ ಚ ॥ ೧. ಧ್ರುವೋ ೨. ಽಧ್ವರಶ್ಚ ೩. ಸೋಮಶ್ಚ ೪. ಆಪಶ್ಚೈವಾ ೫. ನಿಲೋ ೬. ನಲಃ ॥ ೭. ಪ್ರತ್ಯೂಷಶ್ಚ ೮. ಪ್ರಭಾಸಶ್ಚ ವಸವೋಽಷ್ಟೌ ಪ್ರಕೀರ್ತಿತಾ ಇತಿ ॥ ಅಮುಕಗೋತ್ರೇತ್ಯಾದಿ ಸಂಕಲ್ಪಾಂತೇ ಧ್ರುವ ವಸುರೂಪಿನ್ ಅಮುಕಗೋತ್ರ ಅಮುಕಪ್ರೇತ ಅಯಂ ತೇ ಕ್ಷಣ ಉಪತಿಷ್ಠತಾಂ ಇತ್ಯಾದಿ ಸರ್ವಂ ಕುರ್ಯಾತ್ ॥ ಅತ್ರಾಪಿ ಪಿಂಡಾದ್ಯಭಾವಃ ॥

॥ ಇತಿ ವಸುಗಣಶ್ರಾದ್ಧಂ ॥

---

**ವಸುಗಣಶ್ರಾದ್ಧಂ:–** ಇದನ್ನು ಮಾಡಲೇಬೇಕೆಂಬ ನಿರ್ಬಂಧವಿಲ್ಲ. ಮಾಡದಿದ್ದರೂ ಆಗಬಹುದು. ಹನ್ನೊಂದು ರುದ್ರರನ್ನು ಉದ್ದೇಶಿಸಿ ಮಾಡುವ ರುದ್ರಗಣಶ್ರಾದ್ಧದಂತೆ ಎಲ್ಲ ಕ್ರಿಯಾಭಾಗಗಳನ್ನೂ ಎಂಟು ವಸುಗಳನ್ನು ಉದ್ದೇಶಿಸಿ ಮಾಡಿದರಾಯಿತು. ಧ್ರುವ ಇತ್ಯಾದಿ ಪ್ರಭಾಸ ಎಂಬಲ್ಲಿ ವರೆಗೆ ಎಂಟು ವಸುಗಳ ಹೆಸರುಗಳು. ವಸುಗಳನ್ನು ಉದ್ದೇಶಿಸಿ ಅಥವಾ ವಸುರೂಪೀ ಪ್ರೇತವನ್ನು ಉದ್ದೇಶಿಸಿ ಈ ಶ್ರಾದ್ಧವನ್ನು ಮಾಡಬಹುದು. ಉಳಿದ ಎಲ್ಲ ವಿಧಾನಗಳನ್ನೂ ಹನ್ನೊಂದಕ್ಕೆ ಬದಲಾಗಿ ಎಂಟರ ಸಂಖ್ಯೆಯಲ್ಲಿ ಮಾಡಿದರಾಯಿತು.

॥ ವಸುಗಣಶ್ರಾದ್ಧ ಸಮಾಪ್ತ ॥

೨೬

# ॥ ಷೋಡಶಮಾಸಿಕಶ್ರಾದ್ಧಾನಿ ॥

ಶ್ರೀಃ ॥ ತಾನಿ ಚ ॥ ೧. ಆದ್ಯಮಾಸಿಕ ೨. ಊನಮಾಸಿಕ ೩. ದ್ವಿತೀಯ ಮಾಸಿಕ ೪. ತ್ರೈಪಕ್ಷಿಕ ೫. ತೃತೀಯ ಮಾಸಿಕ ೬. ಚತುರ್ಥ ಮಾಸಿಕ ೭. ಪಂಚಮ ಮಾಸಿಕ ೮. ಷಷ್ಠ ಮಾಸಿಕ ೯. ಊನ ಷಾಣ್ಮಾಸಿಕ ೧೦. ಸಪ್ತಮ ಮಾಸಿಕ ೧೧. ಅಷ್ಟಮ ಮಾಸಿಕ ೧೨. ನವಮ ಮಾಸಿಕ ೧೩. ದಶಮ ಮಾಸಿಕ ೧೪. ಏಕಾದಶ ಮಾಸಿಕ ೧೫. ದ್ವಾದಶ ಮಾಸಿಕ ೧೬. ಊನಾಬ್ದಿಕಾನೀತಿ ತತ್ತತ್ಕಾಲೇ ಕರ್ತವ್ಯಾನಿ ದ್ವಾದಶೇಹ್ನಿ ಸಪಿಂಡೀಕರಣಾಧಿಕಾರ ಸಿದ್ಧ್ಯರ್ಥಂ ಅಪಕೃಷ್ಯ ಏಕಾದಶೇ ದ್ವಾದಶೇ ವಾಹ್ನಿ ಕಾರ್ಯಾಣ್ಯೇಕೋದ್ದಿಷ್ಟವಿಧಿನಾ ॥ ಯದಿ ಮರಣಾದಾರಭ್ಯ ದ್ವಾದಶಮಾಸಮಧ್ಯೇ ಕಶ್ಚಿದಧಿಕಸ್ತದಾ ತನ್ಮಾಸಿಕಂ ದ್ವಿವಾರಂ ಕಾರ್ಯಂ ॥ ಏವಂ ಸಪ್ತದಶಮಾಸಿಕಾನಿ ಭವಂತಿ ॥ ಅಥ ಪ್ರಯೋಗಃ ॥ ತಸ್ಮಿನ್ನೇವಾಹನಿ ಪ್ರಾತಃ ಷೋಡಶ ಬ್ರಾಹ್ಮಣಾನ್ನಿಮಂತ್ರ್ಯ ತೇಷಾಂ ಶ್ಮಶ್ರುಕರ್ಮಾಭ್ಯಂಗೌ ಕಾರಯಿತ್ವಾ ಕೃತ ಮಾಧ್ಯಾಹ್ನಿಕಃ ಷೋಡಶಪಾಕಾನ್ ನಿಷ್ಪಾದ್ಯ ಶಕ್ತೌ ಓದನಮಾತ್ರಭೇದಂ ಕೃತ್ವಾ ಶ್ರಾದ್ಧಮುಪಕ್ರಮೇತ್ ॥ ಅತ್ಯಶಕ್ತೌ ಆಮಾನ್ನೇನ ವಾ ಕುರ್ಯಾತ್ ॥ ದೇಶಕಾಲೌ ಸ್ಮೃತ್ವಾ ಅಮುಕಗೋತ್ರಸ್ಯ ಅಮುಕಪ್ರೇತಸ್ಯ ಪ್ರೇತತ್ವನಿವೃತ್ತ್ಯೋತ್ತಮಲೋಕ-ಪ್ರಾಪ್ತ್ಯರ್ಥಂ ಅತಿಕ್ರಾಂತಮಾದ್ಯಮಾಸಿಕಂ ಸಪಿಂಡ್ಯಾಧಿಕಾರಾರ್ಥಮಪಕೃಷ್ಯೋ-ನಮಾಸಿಕಾದೀನ್ಯೂನಾಬ್ದಿಕಾಂತಾನಿ ಪಂಚದಶಮಾಸಿಕಾನಿ ಚ ಅನ್ನೇನಾಮಾನ್ನೇನ ವಾ ಏಕೋದ್ದಿಷ್ಟವಿಧಿನಾ ತಂತ್ರೇಣ ಕರಿಷ್ಯೇ ಇತಿ ಸಂಕಲ್ಪ್ಯ ॥ ಅಮುಕ-ಗೋತ್ರಾಮುಕಪ್ರೇತ ಆದ್ಯಮಾಸಿಕೇ ಕ್ಷಣಃ ಕ್ರಿಯತಾಂ ॥ ಏವಂ ದ್ವಿತೀಯ-ಮಾಸಿಕೇತ್ಯಾದಿ ಷೋಡಶಸ್ಥಾನೇಷು ಕ್ಷಣಂ ದತ್ವಾ ಅಮುಕಗೋತ್ರಾಮುಕಪ್ರೇತ

---

**ಷೋಡಶಮಾಸಿಕ ಶ್ರಾದ್ಧಗಳು:-** ಆದ್ಯಮಾಸಿಕ ಎಂಬಲ್ಲಿಂದ ತೊಡಗಿ ಊನಾಬ್ದಿಕ ಎಂಬಲ್ಲಿ ವರೆಗೆ ಮೇಲೆ ಹೇಳಿದ ೧೬ ಮಾಸಿಕಗಳು. ಆಯಾ ತಿಂಗಳಲ್ಲಿ ಮಾಡ ಬೇಕಾದವುಗಳನ್ನು ಹನ್ನೊಂದನೆಯ ಅಥವಾ ಹನ್ನೆರಡನೆಯ ದಿನ ಏಕೋದ್ದಿಷ್ಟ ವಿಧಿಯಿಂದ ಮಾಡಬೇಕು. ಅಧಿಕಮಾಸ ಇರುವ ವರ್ಷವಾದರೆ ೧೭ ಮಾಸಿಕಗಳನ್ನು ಮಾಡಬೇಕು. ಈ ಮಾಸಿಕಗಳನ್ನು ಮಾಡುವ ದಿನ ಹದಿನಾರು ಬ್ರಾಹ್ಮಣರನ್ನು ನಿಮಂತ್ರಿಸಿ ಅವರಿಗೆ ಕ್ಷೌರ ಅಭ್ಯಂಗಾದಿಗಳನ್ನು ಮಾಡಿಸಿ, ಹದಿನಾರು ಜನರಿಗೆ ಪ್ರತ್ಯೇಕವಾಗಿ ಭೋಜನವನ್ನು ತಯಾರಿಸಬೇಕು. ಇದು ಅಸಾಧ್ಯವಾದರೆ ಅನ್ನವನ್ನಾದರೂ ಪ್ರತ್ಯೇಕವಾಗಿ ವಿಭಾಗಿಸಿ ಇಡಬೇಕು. ಭೋಜನವನ್ನು ತಯಾರಿಸಲು ಸರ್ವಥಾ ಅಸಾಧ್ಯವಾದರೆ ಆಮಾನ್ನಗಳನ್ನಿಟ್ಟು ಮಾಸಿಕಗಳನ್ನು ಮಾಡಬೇಕು.

**ಆದ್ಯಮಾಸಿಕೇ ದ್ವಿತೀಯಮಾಸಿಕೇತ್ಯಾದಿ ಇದಂ ತೇ ಪಾದ್ಯಮುಪತಿಷ್ಠತಾಮಿತ್ಯೇವಂ ಷೋಡಶ ಬ್ರಾಹ್ಮಣೇಷು ಪಾದ್ಯಂ ದದ್ಯಾತ್ ॥ ಏವಮಾಸನಾರ್ಘ್ಯಗಂಧ-ಪುಷ್ಪಾಚ್ಛಾದನಾನಿ ಪ್ರತ್ಯೇಕಂ ಷೋಡಶಭ್ಯೋ ದದ್ಯಾತ್ ॥ ಅರ್ಘ್ಯೇ ತಿಲಾವಾಪೇ ತಿಲೋಸೀತಿ ಮಂತ್ರೇ ಮಹೈಕೋದ್ದಿಷ್ಟವದೂಹಃ ॥ ಏಕೈಕಮರ್ಘ್ಯಂ ಪ್ರತ್ಯೇಕಂ ॥ ಷೋಡಶಪಾತ್ರೇಷು ಘೃತಾಕ್ತಮನ್ನಂ ಪ್ರತ್ಯೇಕಮಾದಾಯ ಮಹೈ-ಕೋದ್ದಿಷ್ಟವದಮುಕಶರ್ಮಣೇ ಪ್ರೇತಾಯ ಸ್ವಾಹೇತಿ ಏಕೈಕಾಮಾಹುತಿಂ ತತ್ತದನ್ನೇನ ಕರೇ ಹುತ್ವಾ ತದನ್ನಮಗ್ನೌ ಪ್ರಕ್ಷಿಪ್ಯ ತತ್ತದಾಹುತ್ಯರ್ಥಮನ್ನಂ ಯತೋ ಗೃಹೀತಂ ತತ್ತದನ್ನಂ ತತ್ರ ತತ್ರ ಪರಿವಿಷ್ಯ ಅಂಗುಷ್ಠನಿವೇಶನಾಂತಂ ಕೃತ್ವಾ ॥ ಅಮುಕ-ಪ್ರೇತಾಯಾದ್ಯಮಾಸಿಕಶ್ರಾದ್ಧೇ ಇದಮನ್ನಂ ಯಥಾಶಕ್ತಿ ಸೋಪಸ್ಕರಂ ಸೋದಕುಂಭ-ಮಮೃತರೂಪಮುಪತಿಷ್ಠತಾಮಿತಿ ಸಂಕಲ್ಪಯೇತ್ ॥ ಏವಂ ದ್ವಿತೀಯಮಾಸಿ-ಕಾದೌ ॥ ಭುಕ್ತವತ್ಸು ದ್ವಿಜೇಷು ತತ್ತದನ್ನಂ ಷೋಡಶಸು ಪಾತ್ರೇಷು ಗೃಹೀತ್ವಾ ತತ್ತತ್ಕರಾಹುತಿಶಿಷ್ಟಮನ್ನಂ ತತ್ರ ತತ್ರ ಪ್ರಕ್ಷಿಪ್ಯ ತತ್ತದ್ವಿಪ್ರಸಮೀಪೇ ದರ್ಭ-ಶಿಖಾಯಾಮಮುಕಗೋತ್ರಾಯ ಅಮುಕಪ್ರೇತಾಯಾದ್ಯಮಾಸಿಕಾದಾವಯಂ ತೇ ಪಿಂಡ ಉಪತಿಷ್ಠತಾಮಿತಿ ಷೋಡಶಪಿಂಡಾನ್ ದದ್ಯಾತ್ ॥ ಆಮಪಕ್ಷೇ ಆಮಾನ್ನಸ್ಯ ಸಂಕಲ್ಪಃ ಸಕ್ತುಪಿಷ್ಟೇನ ಚ ಪಿಂಡದಾನಂ ॥ ಪಿಂಡೋಪರಿ ತಿಲೋದಕಂ ಭೃಂಗರಾಜಪತ್ರಾದಿ ಮಹೈಕೋದ್ದಿಷ್ಟವತ್ ॥ ಅಂಜನಾದಿಕಂ ಸರ್ವಂ ಪ್ರಾಕೃತಂ ॥ ಅಕ್ಷಯ್ಯೇ ಉಪತಿಷ್ಠತಾಮಿತಿ ವದೇತ್ ॥ ಯಥಾಶಕ್ತಿ ದಕ್ಷಿಣಾಂ ದತ್ವಾ ಅಭಿರಮ್ಯತಾಮಿತಿ ವಿಸರ್ಜಯೇತ್ ॥ ಅನ್ಯತ್ಸರ್ವಂ ವಿಹಿತನಿಷಿದ್ಧಾದಿ ಮಹೈಕೋದ್ದಿಷ್ಟವತ್ ಏವಂ ಏಕದೇಶಕಾಲಕರ್ತೃಕತ್ವಾತ್ತಂತ್ರೇಣ ಷೋಡಶ ಶ್ರಾದ್ಧಾನಿ**

---

ಆಚಮನಾದಿಗಳನ್ನು ಮಾಡಿ **"ಅಮುಕಗೋತ್ರಸ್ಯ........ತಂತ್ರೇಣ ಕರಿಷ್ಯೇ"** ಎಂದು ಸಂಕಲ್ಪಮಾಡಬೇಕು. ಬಳಿಕ **"ಅಮುಕಗೋತ್ರ ಅಮುಕಪ್ರೇತ........ಆದ್ಯಮಾಸಿಕೇ... ದ್ವಿತೀಯಮಾಸಿಕೇ...."** ಎಂದು ಬೇರೆ ಬೇರೆಯಾಗಿ ಹೇಳುತ್ತ ಕ್ಷಣ ಪಾದ್ಯ ಆಸನ ಅರ್ಘ್ಯ ಗಂಧ ಪುಷ್ಪಾಚ್ಛಾದನಾದಿಗಳನ್ನು ಹದಿನಾರು ಬ್ರಾಹ್ಮಣರಿಗೆ ಕೊಡಬೇಕು. ನಂತರ ಹದಿನಾರು ಪಾತ್ರೆಗಳಲ್ಲಿ ತುಪ್ಪ ಬೆರಸಿದ ಅನ್ನವನ್ನು ಪ್ರತ್ಯೇಕವಾಗಿ ತೆಗೆದು ಪಾಣಿಹೋಮ ಮಾಡಬೇಕು.

ಪಾಣಿಹೋಮ ಮಾಡಿ ಉಳಿದ ಅನ್ನವನ್ನು ಅಲ್ಲಲ್ಲಿ ಬೇರೆ ಬೇರೆಯಾಗಿಟ್ಟು, ಪಾತ್ರಾಸಾದನ ಅಂಗುಷ್ಠ ಪರಿವೇಷಣದ ವರೆಗಿನ ಕ್ರಿಯಾಭಾಗಗಳನ್ನು ಮಾಡಿ **"ಆದ್ಯಮಾಸಿಕೇ...."** ಎಂದು ಮೊದಲಾಗಿ **"....... ಸೋದಕುಂಭಮಮೃತರೂಪಮುಪತಿಷ್ಠತಾಂ"** ಎಂದು ಸಂಕಲ್ಪ ಮಾಡಬೇಕು. ಬ್ರಾಹ್ಮಣರ ಊಟವಾದ ಮೇಲೆ ದರ್ಭೆಯ ಮೇಲೆ **"ಆದ್ಯಮಾಸಿಕೇ...**

**ಕುರ್ಯಾತ್ ॥ ಆದ್ಯಮಾಸಿಕಂ ಸರ್ವಂ ಸಮಾಪ್ಯ ದ್ವಿತೀಯಾದೀನಿ ಪ್ರತ್ಯೇಕಂ ಪೃಥಗೇವ ಸರ್ವಾಣಿ ನ ತು ತಂತ್ರೇಣೇತಿ ಕೇಚಿತ್ ॥ ಏತದನಂತರ ಮಾದ್ಯಾಬ್ದಿಕಮಪ್ಯೇಕೋದ್ದಿಷ್ಟವಿಧಿನಾ ಕಾರ್ಯಂ ॥ ಆದ್ಯಮಾಸಿಕೇನ ತಂತ್ರೇಣ ಸಿದ್ಧೇರ್ನ ಪೃಥಕ್ಕಾರ್ಯಂ ಕಿಂ ತು ಆದ್ಯಮಾಸಿಕಂ ಆದ್ಯಾಬ್ದಿಕಂ ಚ ತಂತ್ರೇಣ ಕರಿಷ್ಯೇ ಇತಿ ಸಂಕಲ್ಪಯೇದಿತಿ ಕೇಚಿತ್ ॥**

**॥ ಇತಿ ಷೋಡಶಶ್ರಾದ್ಧಾನಿ ॥**

---

**ದ್ವಿತೀಯಮಾಸಿಕೇ...**" ಎಂದು ಮುಂತಾಗಿ ಹೇಳಿ ಹದಿನಾರು ಪಿಂಡಗಳನ್ನು ಕೊಡಬೇಕು. ಆಮಾನ್ನವನ್ನಿಟ್ಟು ಮಾಡುವುದಾದರೆ, ಅಂತೆಯೇ ಸಂಕಲ್ಪ ಮಾಡಿ ಹಿಟ್ಟಿನ ಪಿಂಡಗಳನ್ನು ಕೊಡಬೇಕು. ಬಳಿಕ ಏಕೋದ್ದಿಷ್ಟದಲ್ಲಿ ಹೇಳಿದಂತೆ ಪಿಂಡಗಳ ಮೇಲೆ ತಿಲೋದಕಭೃಂಗರಾಜ ಪತ್ರಾದಿಗಳನ್ನು ಅರ್ಪಿಸಬೇಕು. ಅಂಜನಾಭ್ಯಂಜನಾದಿಗಳನ್ನೂ ಕೊಡಬಹುದು. ಕೊನೆಗೆ ಯಥಾಶಕ್ತಿ ದಕ್ಷಿಣಾದಿಗಳನ್ನು ಕೊಟ್ಟು "**ಅಭಿರಮ್ಯತಾಂ**" ಎಂದು ವಿಸರ್ಜಿಸಬೇಕು. ಉಳಿದ ಎಲ್ಲ ಕ್ರಿಯಾಭಾಗಗಳನ್ನು ಏಕೋದ್ದಿಷ್ಟದಂತೆ ಮಾಡಿ ಮುಗಿಸಬೇಕು.

ಮೊದಲು ಆದ್ಯಮಾಸಿಕವನ್ನು ಸರಿಯಾಗಿ ಮಾಡಿ ದ್ವಿತೀಯಾದಿ ಮಾಸಿಕಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಮಾಡಬೇಕೆಂದೂ ಕೇವಲ ತಂತ್ರದಿಂದ ಮಾಡಿದರೆ ಸಾಲದೆಂದೂ ಕೆಲವರ ಅಭಿಪ್ರಾಯವಿದೆ. ಅನಂತರ ಪ್ರಥಮಾಬ್ದಿಕಶ್ರಾದ್ಧವನ್ನೂ ಏಕೋದ್ದಿಷ್ಟ ವಿಧಿಯಿಂದ ಮಾಡಬೇಕು.

॥ ಷೋಡಶಮಾಸಿಕಶ್ರಾದ್ಧವಿಧಿ ಸಮಾಪ್ತ ॥

# ॥ ದಶದಾನಾನಿ ॥

ಶ್ರೀಃ ॥ ಆಚಮ್ಯ ಪ್ರಾಣಾನಾಯಮ್ಯ ದೇಶಕಾಲೌ ನಿರ್ದಿಶ್ಯ ಅಮುಕಗೋತ್ರಸ್ಯ ಪಿತ್ರಾದೇಃ ಪರಲೋಕೋಪಕಾರಕಾಣಿ ಪೂರ್ವಸಂಕಲ್ಪಿತಾನಿ ದಶದಾನಾನಿ ಕರಿಷ್ಯೇ ॥ ಗೋಭೂತಿಲಹಿರಣ್ಯಾಜ್ಯ ವಾಸೋಧಾನ್ಯಗುಡಾನಿ ಚ ॥ ರೌಪ್ಯಂ ಲವಣಮಿತ್ಯಾದಿ ದಶದಾನಾನ್ಯನುಕ್ರಮಾತ್ ॥ ವಿಪ್ರಂ ಸಂಪೂಜ್ಯ ॥ ಗೋಪ್ರದಾನಂ ॥ ಯಜ್ಞಸಾಧನಭೂತಾ ಯಾ ವಿಶ್ವಸ್ಯಾಘೌಘನಾಶಿನೀ ॥ ವಿಶ್ವರೂಪಧರೋ ದೇವಃ ಪ್ರೀಯತಾಮನಯಾ ಗವಾ ॥ ಭೂಮಿದಾನಂ ॥ ಸರ್ವೇಷಾಮಾಶ್ರಯಾ ಭೂಮಿರ್ವರಾಹೇಣ ಸಮುದ್ಧೃತಾ ॥ ಅನಂತಸಸ್ಯಫಲದಾ ಅತಃ ಶಾಂತಿಂ ಪ್ರಯಚ್ಛ ಮೇ ॥ ತಿಲದಾನಂ ॥ ಮಹರ್ಷೇರ್ಗೋತ್ರಸಂಭೂತಾಃ ಕಾಶ್ಯಪಸ್ಯ ತಿಲಾಃ ಸ್ಮೃತಾಃ ॥ ತಸ್ಮಾದೇಷಾಂ ಪ್ರದಾನೇನ ಪಿತ್ರ್ಯಪಾಪಂ ವ್ಯಪೋಹತು ॥ ಹಿರಣ್ಯದಾನಂ ॥ ಹಿರಣ್ಯಗರ್ಭಗರ್ಭಸ್ಥಂ ಹೇಮಬೀಜಂ ವಿಭಾವಸೋಃ ॥ ಅನಂತಪುಣ್ಯಫಲದಮತಃ ಶಾಂತಿಂ ಪ್ರಯಚ್ಛ ಮೇ ॥ ಆಜ್ಯದಾನಂ ॥ ಕಾಮಧೇನೋಃ ಸಮುದ್ಭೂತಂ ಸರ್ವಕ್ರತುಷು ಸಂಸ್ಥಿತಂ ॥ ದೇವಾನಾಮಾಜ್ಯಮಾಹಾರಸ್ತತಃ ಶಾಂತಿಂ ಪ್ರಯಚ್ಛ ಮೇ ॥ ವಸ್ತ್ರದಾನಂ ॥ ಶೀತವಾತೋಷ್ಣ ಸಂತ್ರಾಣಂ ಲಜ್ಜಾಯಾ ಲಕ್ಷಣಂ ಪರಂ ॥ ದೇಹಾಲಂಕರಣಂ ವಸ್ತ್ರಮತಃ ಶಾಂತಿಂ ಪ್ರಯಚ್ಛ ಮೇ ॥ ಧಾನ್ಯದಾನಂ ॥ ಸರ್ವದೇವಮಯಂ ಧಾನ್ಯಂ ಸರ್ವೋತ್ಪತ್ತಿಕರಂ ಮಹತ್ ॥ ಪ್ರಾಣಿನಾಂ ಜೀವನೋಪಾಯಃ ತತಃ ಶಾಂತಿಂ ಪ್ರಯಚ್ಛ ಮೇ ॥ ಗುಡದಾನಂ ॥ ಗುಡಮಿಕ್ಷುರಸೋದ್ಭೂತಂ ಮಂತ್ರಾಣಾಂ ಪ್ರಣವೋ ಯಥಾ ॥ ದಾನೇನಾನೇನ ಚೈತಸ್ಯ ಪರಾ ಲಕ್ಷ್ಮೀಃ ಸ್ಥಿರಾ ಗೃಹೇ ॥ ರೌಪ್ಯದಾನಂ ॥ ಪ್ರೀತಿರ್ಯತಃ ಪಿತೄಣಾಂ ಚ ವಿಷ್ಣುಶಂಕರಯೋಸ್ಸದಾ ॥ ಶಿವನೇತ್ರೋದ್ಭವಂ ರೂಪ್ಯಮತಃ ಶಾಂತಿಂ ಪ್ರಯಚ್ಛ ಮೇ ॥ ಲವಣದಾನಂ ॥ ಯಸ್ಮಾದನ್ನರಸಾಸ್ಸರ್ವೇ ನೋತ್ಕೃಷ್ಟಾ ಲವಣಂ ವಿನಾ ॥ ಶಂಭೋಃ

---

**ದಶದಾನಗಳು:–** ಆಚಮನ ಪ್ರಾಣಾಯಾಮ ದೇಶಕಾಲ ಸಂಕೀರ್ತನಾದಿಗಳನ್ನು ಮಾಡಿ **"ಅಮುಕಗೋತ್ರಸ್ಯ ಪಿತ್ರಾದೇಃ......... ದಶದಾನಾನಿ ಕರಿಷ್ಯೇ"** ಎಂದು ಸಂಕಲ್ಪ ಮಾಡಿ ಹತ್ತು ಮಂದಿ ಬ್ರಾಹ್ಮಣರನ್ನು ಆಮಂತ್ರಿಸಿ, ಅವರನ್ನು ಪೂಜಿಸಿ, ಕ್ರಮವಾಗಿ ಇಲ್ಲಿ ಹೇಳಿದ ಹತ್ತು ದಾನಗಳನ್ನು ಆಯಾ ದಾನಕ್ಕೆ ಸಂಬಂಧಪಟ್ಟ ಶ್ಲೋಕವನ್ನು ಹೇಳಿ ಕೊಡಬೇಕು.

**ಪ್ರೀತಿಕರಂ ಯಸ್ಮಾದತಃ ಶಾಂತಿಂ ಪ್ರಯಚ್ಛ ಮೇ ॥ ಅನೇನ ದಶದಾನಾಖ್ಯೇನ ಕರ್ಮಣಾ ಪ್ರೇತೋದ್ಧರ್ತಾ ಮಹಾವಿಷ್ಣುಃ ಪ್ರೀಯತಾಂ ॥ (ಸರ್ವತ್ರ ಪುತ್ರಕರ್ತೃಕೇ ಸಂಕಲ್ಪವಾಕ್ಯೇ ದಾನಮಂತ್ರೇ ಮೇ ಮಮ ಇತ್ಯಾದಿಸ್ಥಲೇ ಪಿತುಃ ತಸ್ಯ ಇತ್ಯಾದ್ಯೂಹಃ ಕಾರ್ಯಃ ॥)**

**॥ ಇತಿ ದಶದಾನಾನಿ ॥**

---

ಕೊನೆಗೆ "**ಅನೇನ ದಶದಾನಾಖ್ಯೇನ ಕರ್ಮಣಾ................ಪ್ರೀಯತಾಂ**" ಎಂದು ಸಮರ್ಪಣೆ ಮಾಡಬೇಕು.

**ದಶದಾನಗಳು**

೧. ಗೋದಾನ, ೨. ಭೂದಾನ, ೩. ತಿಲದಾನ, ೪. ಹಿರಣ್ಯದಾನ, ೫. ಆಜ್ಯದಾನ, ೬. ವಸ್ತ್ರದಾನ, ೭. ಧಾನ್ಯದಾನ, ೮. ಗುಡದಾನ, ೯. ರೌಪ್ಯದಾನ, ೧೦. ಲವಣದಾನ.

॥ ದಶದಾನವಿಧಾನ ಸಮಾಪ್ತ ॥

# ॥ ಅಷ್ಟದಾನಾನಿ ॥

ಶ್ರೀಃ ॥ ತಾನಿ ಚ ಆಮಾನ್ನೋದಕುಂಭಗೋವಸ್ತ್ರಭೂಮ್ಯಾಸ್ತರಣ-ಛತ್ರಾಸನಾನಿ ॥ ಅಮುಕಶರ್ಮಣಃ ಪಿತ್ರಾದೇಃ ಪರಲೋಕೇ ತತ್ತದ್ದಾನ-ಕಲ್ಪೋಕ್ತಫಲಾವಾಪ್ತಯೇಽಷ್ಟದಾನಾನಿ ಕರಿಷ್ಯೇ ॥ ವಿಪ್ರಂ ಸಂಪೂಜ್ಯ ॥ ಆಮಾನ್ನದಾನಂ ॥ ಅನ್ನಮೇವ ಯತೋ ಲಕ್ಷ್ಮೀಃ ಅನ್ನಮೇವ ಜನಾರ್ದನಃ ॥ ಅನ್ನಂ ಬ್ರಹ್ಮಾಖಿಲತ್ರಾಣಮಸ್ತು ಜನ್ಮನಿ ಜನ್ಮನಿ ॥ ಉದಕುಂಭದಾನಂ ॥ ವಾರಿಪೂರ್ಣೋ ಘಟಶ್ಚಾಯಂ ದೇವತ್ರಯಮಯೋ ಯತಃ ॥ ಪ್ರೀಯತಾಂ ಧರ್ಮರಾಜಸ್ತು ದಾನೇನಾನೇನ ಪುಣ್ಯದಃ ॥ ಗೋಪ್ರದಾನಂ ॥ ಯಜ್ಞಸಾಧನ-ಭೂತಾ ಯಾ..........॥ ವಸ್ತ್ರದಾನಂ ॥ ಶೀತವಾತೋಷ್ಣಸಂತ್ರಾಣಂ..........॥ ಭೂಮಿದಾನಂ ॥ ಸರ್ವೇಷಾಮಾಶ್ರಯಾ ಭೂಮಿಃ.........॥ ಶಯ್ಯಾದಾನಂ ॥ ಯಥಾ ನ ಕೃಷ್ಣ ಶಯನಂ ಶೂನ್ಯಂ ಸಾಗರಜಾತಯಾ ॥ ಶಯ್ಯೈತಸ್ಯಾಪ್ಯ-ಶೂನ್ಯಾಸ್ತು ತಥಾ ಜನ್ಮನಿ ಜನ್ಮನಿ ॥ ಛತ್ರದಾನಂ ॥ ಇಹಾಮುತ್ರಾತಪತ್ರಾಣಂ ಕುರು ಮೇ ಕೇಶವ ಪ್ರಭೋ ॥ ಛತ್ರಂ ತ್ವತ್ಪ್ರೀತಯೇ ದತ್ತಂ ತಸ್ಯಾಸ್ತು ಚ ಸದಾ ಶುಭಂ ॥ ಆಸನದಾನಂ ॥ ತ್ರಿಲೋಕೀನಾಥ ದೇವೇಶ ಸರ್ವಭೂತ-ಕೃಪಾನಿಧೇ ॥ ಆಸೇನನ ಚ ತುಷ್ಯಸ್ವ ಪ್ರಯಚ್ಛತಸ್ಯವಾಂಛಿತಂ ॥ ಇತ್ಯಷ್ಟ-ದಾನಾನಿ ॥ ವೃಷೋತ್ಸರ್ಗಾಂಗಾಷ್ಟದಾನಾನಿ ತು ಆಮಾನ್ನತ್ರಯಂ ತಿಲಾನುದಕುಂಭಂ ಗೋವಾಸೋ ಹಿರಣ್ಯಂ ಚೇತಿ ॥ ೮ ॥ ತತ್ರ ತಿಲದಾನಂ ॥ ಮಹರ್ಷೇರ್ಗೋತ್ರ-ಸಂಭೂತಾಃ....॥ ಹಿರಣ್ಯಗರ್ಭೇತಿ ಹಿರಣ್ಯ ದಾನಂ ॥ ಅನ್ಯೇ ಆಮಾನ್ನೋದಕುಂಭ-ಗೋವಸ್ತ್ರದಾನಾದಿಮಂತ್ರಾಃ ದಶಾಷ್ಟದಾನಾಂತರ್ಗತಾಸ್ತದುಕ್ತಾ ಜ್ಞೇಯಾಃ ವಿಸ್ತರಭಿಯಾ ನ ಪುನಃ ಸಂಗೃಹೀತಾಃ ॥ ಏವಮಗ್ರೇಪಿ ಉಪದಾನಾದೌ ಜ್ಞೇಯಂ ॥

॥ ಇತಿ ಅಷ್ಟದಾನಾನಿ ॥

---

**ಅಷ್ಟದಾನಗಳು:-** ಈ ಮೊದಲು ಹತ್ತು ದಾನಗಳನ್ನು ಕೊಟ್ಟಂತೆ ಆಚಮನಾದಿಗಳನ್ನು ಮಾಡಿ **"ಅಮುಕಶರ್ಮಣಃ........ ಕರಿಷ್ಯೇ"** ಎಂದು ಸಂಕಲ್ಪ ಮಾಡಿ ಆಯಾ ದಾನಕ್ಕೆ ಸಂಬಂಧಿಸಿದ ಶ್ಲೋಕವನ್ನು ಹೇಳಿ ಬ್ರಾಹ್ಮಣರಿಗೆ ಆಯಾ ದಾನವನ್ನು ಕೊಡಬೇಕು. ೧. ಆಮಾನ್ನ, ೨. ಉದಕುಂಭ, ೩. ಗೋವು, ೪. ವಸ್ತ್ರ ೫. ಭೂಮಿ, ೬. ಶಯ್ಯಾ, ೭. ಛತ್ರ, ೮. ಆಸನ-ಇವು ಎಂಟು ದಾನಗಳು. ವೃಷೋತ್ಸರ್ಗದ ಅಂಗವಾಗಿ ಕೊಡಬೇಕಾದ ಎಂಟು ದಾನಗಳು. ೩. ಆಮಾನ್ನಗಳು, ೪. ತಿಲ, ೫. ಉದಕುಂಭ, ೬. ಗೋವು, ೭. ವಸ್ತ್ರ ೮. ಹಿರಣ್ಯ ಎಂದಾಗಿವೆ.

# ॥ ಉಪದಾನಾನಿ ॥

ಶ್ರೀಃ ॥ ಅನ್ನಂ ಚೈವೋದಕುಂಭಂ ಚೋಪಾನಹೌ ಚ ಕಮಂಡಲುಃ ॥ ಛತ್ರಂ ವಸ್ತ್ರಂ ತಥಾ ಯಷ್ಟಿಂ ಲೋಹದಂಡಂ ಚ ದಾಪಯೇತ್ ॥ ಅಗ್ನಿಷ್ಟಿಕಾಪ್ರದೀಪಂ ಚ ತಿಲಾಂಸ್ತಾಂಬೂಲಮೇವ ಚ ॥ ಚಂದನಂ ಪುಷ್ಪಮಾಲಾಂ ಚೋಪದಾನಾನಿ ಚತುರ್ದಶ ॥ ಪಿತ್ರಾದೇಃ ಪ್ರೇತಸ್ಯೋತ್ತಮಲೋಕಪ್ರಾಪ್ತ್ಯರ್ಥಂ ಪರಲೋಕೇ ತತ್ತದ್ದಾನಕಲ್ಪೋಕ್ತಫಲಾವಾಪ್ತಯೇ ಚತುರ್ದಶೋಪದಾನಾನಿ ಕರಿಷ್ಯೇ ॥ ಆಮಾನ್ನಂ ॥ ಅನ್ನಮೇವ ಯತೋ.........॥ ಉದಕುಂಭಃ ॥ ವಾರಿಪೂರ್ಣೋ ಘಟಃ ॥ ಉಪಾನಹದಾನಂ ॥ ಉಪಾನಹೌ ಪ್ರದಾಸ್ಯಾಮಿ ಕಂಟಕಾದಿನಿವಾರಣೇ ॥ ಸರ್ವಮಾರ್ಗೇಷು ಸುಖದೇ ಅತಃ ಶಾಂತಿಂ ಪ್ರಯಚ್ಛ ಮೇ ॥ ಕಮಂಡಲುಃ ॥ ತ್ರಿಲೋಕೀನಾಥ.........ಉದಪಾತ್ರೇಣ ಸಂತುಷ್ಟಃ ಪ್ರಯಚ್ಛ..........॥ ಛತ್ರಂ ॥ ಇಹಾಮುತ್ರಾತಪ...........॥ ವಸ್ತ್ರಂ ॥ ಶೀತ-ವಾತೋಷ್ಣ............॥ ಯಷ್ಟಿದಾನಂ ॥ ತ್ರಿಲೋಕೀನಾಥ..........॥ ಅನೇನ ಯಷ್ಟಿದಾನೇನ ಪ್ರ..........॥ ಲೋಹದಂಡಃ ॥ ಜ್ಞಾನಾಜ್ಞಾನಕೃತಂ ಪಾಪಂ ತಥಾ ಲೋಭಾತ್ ಕೃತಂ ಚಿರಾತ್ ॥ ಲೋಹದಂಡಪ್ರದಾನೇನ ಸರ್ವಂ ಪಾಪಂ ವ್ಯಪೋಹತು ॥ ಅಗ್ನಿಷ್ಟಿಕಾ ॥ ತ್ರಿಲೋಕೀನಾಥ.........॥ ಅಗ್ನಿಷ್ಟಿಕಾಪ್ರದಾನೇನ ಪ್ರ..........॥ ದೀಪದಾನಂ ॥ ದೀಪೋ ಜ್ಞಾನಪ್ರದೋ ನಿತ್ಯಂ ದೇವತಾನಾಂ ಪ್ರಿಯಃ ಸದಾ ॥ ದಾನೇನಾಸ್ಯ ಭವೇತ್ಸೌಖ್ಯಂ ಶಾಂತಿಸ್ತದ್ವಾಂಛಿತಂ ಫಲಂ ॥ ತಿಲದಾನಂ ॥ ಮಹರ್ಷೇರ್ಗೋತ್ರ.........॥ ತಾಂಬೂಲದಾನಂ ॥ ಸೋಪಸ್ಕರಂ ಚ ತಾಂಬೂಲಂ ಸರ್ವದಾ ಮಂಗಲಪ್ರಿಯಂ ॥ ಪ್ರಿಯಂ ಚೈವ ತು ದೇವಾನಾಂ ಸೌಗಂಧ್ಯಂ ವದನೇಸ್ತು ವೈ ॥ ಚಂದನಂ ॥ ತ್ರಿಲೋಕೀನಾಥ ..........॥ ಚಂದನಸ್ಯ ಪ್ರದಾನೇನ ಪ್ರಯಚ್ಛ.........॥ ಪುಷ್ಪಮಾಲಾ ॥ ತ್ರಿಲೋಕೀನಾಥ.......॥ ಪುಷ್ಪಮಾಲಾ

---

**ಹದಿನಾಲ್ಕು ಉಪದಾನಗಳು:-** ೧. ಅನ್ನ, ೨. ಉದಕುಂಭ, ೩. ಪಾದುಕೆ, ೪. ಕಮಂಡಲು, ೫. ಛತ್ರ, ೬. ವಸ್ತ್ರ, ೭. ಯಷ್ಟಿ (ಊರುಗೋಲು), ೮. ಲೋಹದಂಡ, ೯. ಅಗ್ನಿಷ್ಟಿಕೆ, ೧೦. ದೀಪ, ೧೧. ತಿಲ, ೧೨. ತಾಂಬೂಲ, ೧೩. ಚಂದನ, ೧೪. ಪುಷ್ಪಮಾಲೆ. ಈ ಹದಿನಾಲ್ಕು ಉಪದಾನಗಳನ್ನೂ ದಶದಾನ ಅಷ್ಟದಾನಗಳನ್ನು ಕೊಟ್ಟಂತೆ ಸಂಕಲ್ಪ ಮಾಡಿ ಕೊಡಬೇಕು. ಆಯಾದಾನಕ್ಕೆ ಸಂಬಂಧಿಸಿದ ಶ್ಲೋಕಮಂತ್ರವನ್ನು ಹೇಳಿ ಪ್ರತಿಯೊಂದು ದಾನವನ್ನೂ ಕೊಡಬೇಕು. ಈ ಹದಿನಾಲ್ಕು ದಾನಗಳಿಗೆ ಬದಲಾಗಿ ಕೆಲವರು ೧. ತಿಲ, ೨. ಲೋಹ, ೩. ಸುವರ್ಣ, ೪. ಹತ್ತಿ, ೫. ಲವಣ, ೬. ಭೂಮಿ, ೭. ಧೇನು, ೮. ಸಪ್ತಧಾನ್ಯ ಎಂಬ ಎಂಟು

**ಪ್ರದಾನೇನ.........|| ಇತಿ ಚತುರ್ದಶೋಪದಾನಾನಿ || ಕೇಚಿತ್ತಿಲಲೋಹ ಹೇಮ ಕಾರ್ಪಾಸ ಲವಣಭೂಮಿಧೇನುಸಪ್ತಧಾನ್ಯೇತ್ಯಷ್ಟ ದಾನಾನ್ಯಾಹುಃ || ತ್ರಿಲೋಕೀ-ನಾಥ........|| ಕಾರ್ಪಾಸೇನ ಚ ಸಂತುಷ್ಟಃ ಇತ್ಯಾದ್ಯೂಹಃ || ಸಪ್ತ ಧಾನ್ಯಾನಿ ತು ಯವವ್ರೀಹಿಗೋಧೂಮ ತಿಲಮಾಷಮುದ್ಗ ಪ್ರಿಯಂಗುಸಂಜ್ಞಾನಿ || ಅನ್ಯೇ ಮಂತ್ರಾ ಉಪರಿವಜ್ಞ್ಞೇಯಾಃ || ಸಿದ್ಧಸ್ಥಾಲೀದಾನಂ || ಇಮಾಂ ಪಾಯಸ-ಪೂರ್ಣಾಂ ಯಃ ಸ್ಥಾಲೀಂ ಘೃತಜಲಾದಿಭಿಃ || ದದ್ಯಾತ್ಸಂಪತ್ತಿ ಪಾತ್ರಂ ಸ್ಯಾದತಃ ಪಾಹಿ ಮಹೇಶ್ವರ || ಊರ್ಣಾದಾನಂ || ಊರ್ಣಾವಸ್ತ್ರಂ ಚಾರುಚಿತ್ರಂ ದೇವಾನಾಂ ಪ್ರೀತಿವರ್ಧನಂ || ಸುಖಸ್ಪರ್ಶಕರಂ ಯಸ್ಮಾದತಃ ಶಾಂತಿಂ.........|| ವ್ಯಜನದಾನಂ || ವ್ಯಜನಂ ವಾಯು ದೇವತ್ಯಂ ಗ್ರೀಷ್ಮಕಾಲೇ ಸುಖಪ್ರದಂ || ಅಸ್ಯಪ್ರದಾನಾತ್ಸಕಲಾಃ ಸಂತು ತಸ್ಯ ಮನೋರಥಾಃ || ಇತಿ || ತಿಲಪಾತ್ರ-ದಾನಂ || ಪಿತ್ರಾದೇಃ ಜನ್ಮಪ್ರಭೃತಿ ಮರಣಾಂತಂ ಕೃತ ನಾನಾವಿಧ ಪಾಪ-ಪ್ರಣಾಶಾರ್ಥಂ...........|| ತಿಲಾಃ ಪುಣ್ಯಾಃ ಪವಿತ್ರಾಶ್ಚ ತಿಲಾಃ ಸರ್ವಕರಾಃ ಸ್ಮೃತಾಃ || ಶುಕ್ಲಾ ವಾ ಯದಿ ವಾ ಕೃಷ್ಣಾ ಋಷಿಗೋತ್ರಸಮುದ್ಭವಾಃ || ಯಾನಿ ಕಾನಿ ಚ ಪಾಪಾನಿ ಬ್ರಹ್ಮಹತ್ಯಾಸಮಾನಿ ಚ || ತಿಲಪಾತ್ರಪ್ರದಾನೇನ ತಸ್ಯ ವಿಷ್ಣುರ್ವ್ಯಪೋಹತು || ನಗ್ನಪ್ರಚ್ಛಾದನೀಯ ವಸ್ತ್ರದಾನಂ || ಶೀತೋಷ್ಣ-ವಾತೇತ್ಯಾದಿ ಮಂತ್ರ ಉಪರಿವತ್ ||**

**|| ಇತಿ ಉಪದಾನಾನಿ ||**

---

ದಾನಗಳನ್ನು ಹೇಳುತ್ತಾರೆ. ಸಿದ್ಧಸ್ಥಾಲೀ, ಉಣ್ಣೆಬಟ್ಟೆ, ಬೀಸಣಿಗೆ, ತಿಲಪಾತ್ರ, ನಗ್ನಪ್ರಚ್ಛಾದನೀಯ ವಸ್ತ್ರ ಮುಂತಾದ ಇತರ ವಿಶೇಷ ದಾನಗಳನ್ನೂ ಕೊಡಬಹುದು.

|| ಉಪದಾನಾನಿ ಸಮಾಪ್ತ ||

# ॥ ಪ್ರಾಯಶ್ಚಿತ್ತಗೋದಾನ ಪ್ರಯೋಗಃ ॥

**ಶ್ರೀಃ ॥ ಆಚಮ್ಯ ಪ್ರಾಣಾನಾಯಮ್ಯ ದೇಶಕಾಲೌ ಸ್ಮೃತ್ವಾ ಅಮುಕ-ಗೋತ್ರಸ್ಯಾಮುಕಪ್ರೇತಸ್ಯ ಜನ್ಮಪ್ರಭೃತ್ಯದ್ಯ ಯಾವದಾಚರಿತ ಸಮಸ್ತಪಾತಕ-ಸ್ಯಾಕೃತಪ್ರಾಯಶ್ಚಿತ್ತಸ್ಯಾಮರಣಾಂತಂ ಪಾಪಾಪನೋದನಾರ್ಥಂ ಪ್ರಾಯಶ್ಚಿತ್ತ-ಧೇನುದಾನಂ ಕರಿಷ್ಯೇ ॥ ಗೋಪೂಜನಂ ಕರಿಷ್ಯೇ ॥ ಪಂಚಗಾವಃ ಸಮುತ್ಪನ್ನಾ ಮಥ್ಯಮಾನೇ ಮಹೋದಧೌ ॥ ತಾಸಾಂ ಮಧ್ಯೇ ತು ಯಾ ನಂದಾ ತಸ್ಯೈ ದೇವ್ಯೈ ನಮೋ ನಮಃ ॥ ಇತಿ ಮಂತ್ರೇಣ ಪೂಜಯೇತ್ ॥ ಶಕ್ತೌ ಸ್ವರ್ಣಶೃಂಗೀಮಿತ್ಯಾದಿ ದಾನವಾಕ್ಯೇ ವಕ್ಷ್ಯಮಾಣಾನಲಂಕಾರಾಂಸ್ತತ್ರ ತತ್ರ ಸಂಯೋಜ್ಯಾನ್ಯಾಸರ್ಪಯೇತ್ ॥ ತತ ಆ ಗಾವೋ ಅಗ್ಮನ್ನಿತಿಸೂಕ್ತೇನ ಗಾಂ ತ್ರಿಃ ಪ್ರದಕ್ಷಿಣೀಕೃತ್ಯ ಪ್ರಾರ್ಥಯೇತ್ ॥ ಯಾ ಲಕ್ಷ್ಮೀಃ ಸರ್ವಭೂತಾನಾಂ ಯಾ ಚ ದೇವೇಷ್ವವಸ್ಥಿತಾ ॥ ಧೇನುರೂಪೇಣ ಸಾ ದೇವೀ ತಸ್ಯ ಪಾಪಂ ವ್ಯಪೋಹತು ॥ ದೇಹಸ್ಥಾ ಯಾ ಚ ರುದ್ರಾಣೀ ಶಂಕರಸ್ಯ ಪ್ರಿಯಾ ಸದಾ ॥ ಧೇನುರೂಪೇಣ ಸಾ ದೇವೀ ತಸ್ಯ ಪಾಪಂ ವ್ಯಪೋಹತು ॥ ವಿಷ್ಣೋ-ರ್ವಕ್ಷಸಿ ಯಾ ಲಕ್ಷ್ಮೀಃ ಸ್ವಾಹಾ ಯಾ ಚ ವಿಭಾವಸೋಃ ಚಂದ್ರಾರ್ಕಶ-ಕ್ರಶಕ್ತಿರ್ಯಾ ಧೇನುರೂಪಾಸ್ತು ಸಾ ಪ್ರಿಯೇ ॥ ಚತುರ್ಮುಖಸ್ಯ ಯಾ ಲಕ್ಷ್ಮೀ ರ್ಯಾ ಲಕ್ಷ್ಮೀರ್ಧನದಸ್ಯ ಚ ॥ ಲಕ್ಷ್ಮೀರ್ಯಾ ಲೋಕಪಾಲಾನಾಂ ಸಾ ಧೇನುರ್ವರದಾಸ್ತು ಮೇ ॥ ಸ್ವಧಾ ತ್ವಂ ಪಿತೃಮುಖ್ಯಾನಾಂ ಸ್ವಾಹಾ ಯಜ್ಞಭುಜಾಂ ತಥಾ ॥ ಸರ್ವಪಾಪಹರಾ ಧೇನುಸ್ತಸ್ಮಾಚ್ಛಾಂತಿಂ ಪ್ರಯಚ್ಛ ಮೇ ॥ ಇತಿ ಗಾಂ**

---

**ಪ್ರಾಯಶ್ಚಿತ್ತಗೋದಾನ ಪ್ರಯೋಗಃ-** ಆಚಮನ ಪ್ರಾಣಾಯಾಮಾದಿಗಳನ್ನು ಮಾಡಿ "**ಅಮುಕಗೋತ್ರಸ್ಯ.... ಧೇನುದಾನಂ ಕರಿಷ್ಯೇ**" "**ಗೋಪೂಜನಂ ಕರಿಷ್ಯೇ**" ಎಂದು ಸಂಕಲ್ಪಿಸಿ "**ಪಂಚಗಾವಃ...**" ಎಂಬ ಮಂತ್ರವನ್ನು ಹೇಳಿ ಗೋಪೂಜೆಯನ್ನು ಮಾಡಬೇಕು. ಸಾಧ್ಯವಿದ್ದರೆ ಮುಂದೆ ಹೇಳಿದ "**ಸ್ವರ್ಣಶೃಂಗೀಂ....**" ಮುಂತಾದ ವಾಕ್ಯಗಳಿಗೆ ಅನುಸಾರವಾಗಿ ಚಿನ್ನ, ಬೆಳ್ಳಿ, ತಾಮ್ರ ಇತ್ಯಾದಿಗಳಿಂದ ಧೇನುವನ್ನು ಶೃಂಗರಿಸಬೇಕು. ಬಳಿಕ "**ಆ ಗಾವೋ....**" ಎಂಬ ಸೂಕ್ತವನ್ನು ಹೇಳುತ್ತ ಗೋವಿಗೆ ಮೂರು ಪ್ರದಕ್ಷಿಣೆ ಬರಬೇಕು. "**ಯಾ ಲಕ್ಷ್ಮೀಃ ಸರ್ವ ಭೂತಾನಾಂ....ಪ್ರಯಚ್ಛ ಮೇ**" ಎಂಬಲ್ಲಿ ವರೆಗಿನ ಶ್ಲೋಕಗಳಿಂದ ಗೋ ಪ್ರಾರ್ಥನೆಯನ್ನು ಮಾಡಬೇಕು. ಬಳಿಕ ಗೋದಾನಕ್ಕೆ ಆಮಂತ್ರಿಸಿದ ಬ್ರಾಹ್ಮಣನನ್ನು ಪೂಜಿಸಿ, ದನದ ಬಾಲದ ಕಡೆಯಲ್ಲಿ ಉತ್ತರದಿಕ್ಕಿಗೆ ಮುಖವಿರುವಂತೆ ಅವನನ್ನು ನಿಲ್ಲಿಸಿ ತಾನು ಪೂರ್ವಮುಖವಾಗಿ

**ಪ್ರಾರ್ಥ್ಯ ಪ್ರತಿಗ್ರಹೀತಾರಂ ಬ್ರಾಹ್ಮಣಂ ಯಥಾವಿಭವಂ ಸಂಪೂಜ್ಯ ಗೋಪುಚ್ಛದೇಶೇ ತಮುದಙ್ಮುಖಂ ಅವಸ್ಥಾಪ್ಯ ಸ್ವಯಂ ಪ್ರಾಙ್ಮುಖಃ ಸ್ವರ್ಣಯುತಾಜ್ಯಪೂರಿತಕಾಂಸ್ಯಪಾತ್ರೇ ಗೋಪುಚ್ಛಂ ನಿಕ್ಷಿಪ್ಯ ॥ ಪ್ರಾಯಶ್ಚಿತ್ತೇ ಸಮುತ್ಪನ್ನೇ ನಿಷ್ಕೃತಿರ್ನ ಕೃತಾ ಕ್ವಚಿತ್ ॥ ತಸ್ಯ ಪಾಪಸ್ಯ ಶುದ್ಧ್ಯರ್ಥಂ ಧೇನುಮೇತಾಂ ದದಾಮಿ ತೇ ॥ ಮಯಾ ಮತಿಪೂರ್ವಾ ವಾ ಜನ್ಮಪ್ರಭೃತಿ ಅದ್ಯ ಯಾವದಾಚರಿತಸಮಸ್ತಪಾತಕಸ್ಯಾಕೃತಪ್ರಾಯಶ್ಚಿತ್ತಸ್ಯಾಮರಣಾಂತಂ ಪಾತಕಾಪನೋದನಕಾಮಃ ಪ್ರಾಯಶ್ಚಿತ್ತತ್ವೇನ ಕಲ್ಪಿತಾಮಿಮಾಂ ಕಪಿಲಾಂ ಧೇನುಂ ರುದ್ರದೈವತ್ಯಾಂ ಸುವರ್ಣಶೃಂಗೀಂ ರೌಪ್ಯಖುರಾಂ ತಾಮ್ರಪೃಷ್ಠಾಂ ಘಂಟಾಗ್ರೈವೇಯಕಾಂ ಮುಕ್ತಾಲಾಂಗೂಲಾಂ ಕಾಂಸ್ಯದೋಹನಿಕಾಂ ವಸ್ತ್ರದ್ವಯಾಭರಣಾದ್ಯುಪಸ್ಕರಯುತಾಂ ಅಮುಕಗೋತ್ರಸ್ಯಾಮುಕಪ್ರೇತಸ್ಯ ಪರಲೋಕೇ ಸುಖಸಿದ್ಧ್ಯೇ ಅಮುಕಗೋತ್ರಾಯಾಮುಕಶರ್ಮಣೇ ತುಭ್ಯಮಹಂ ಸಂಪ್ರದದೇ ನ ಮಮೇತ್ಯುಕ್ತ್ವಾ ವಿಪ್ರಕರೇ ಸಕುಶತಿಲೋದಕಂ ಗೋಪುಚ್ಛಂ ದತ್ವಾ ॥ ಯಜ್ಞಸಾಧನಭೂತಾ ಯಾ ವಿಶ್ವಸ್ಯಾಘೌಘನಾಶಿನೀ ॥ ವಿಶ್ವರೂಪಧರೋ ದೇವಃ ಪ್ರೀಯತಾಮನಯಾ ಗವಾ ॥ ಇತಿ ಪಠೇತ್ ॥ ಪ್ರತಿಗ್ರಹೀತಾ ತು ದೇವಸ್ಯತ್ವೇತಿ ಮಂತ್ರೇಣ ಪ್ರತಿಗೃಹ್ಯ ಓಂ ಸ್ವಸ್ತೀತ್ಯುಕ್ತ್ವಾ ಕ ಇದಂ ಕಸ್ಮಾ ಅದಾದಿತಿ ಕಾಮಸ್ತುತಿಂ ಯಥಾಶಾಖಂ ಪಠೇತ್ ॥ ಕರ್ತಾ ದಾನಸ್ಯ ಪ್ರತಿಷ್ಠಾಸಿದ್ಧ್ಯರ್ಥಂ ದಕ್ಷಿಣಾಂ ದತ್ವಾ ಯಮೋಕ್ತಾಂ ಗೋಮತೀಂ ವಿದ್ಯಾಂ ಪಠೇತ್ ॥ ಗಾವಃ ಸುರಭಯೋ ನಿತ್ಯಂ ಗಾವೋ ಗುಗ್ಗುಲುಗಂಧಿಕಾಃ ॥ ಗಾವಃ ಪ್ರತಿಷ್ಠಾ ಭೂತಾನಾಂ ಗಾವಃ ಸ್ವಸ್ತ್ಯಯನಂ ಮಹತ್ ॥ ಅನ್ನಮೇವ ಪರಂ ಗಾವೋ ದೇವಾನಾಂ ಹವಿರುತ್ತಮಂ ॥ ಪಾವನಂ ಸರ್ವಭೂತಾನಾಂ ರಕ್ಷಂತಿ ಚ ವಹಂತಿ ಚ ॥ ಹವಿಷಾ ಮಂತ್ರಪೂತೇನ ತರ್ಪಯಂತ್ಯಮರಾನ್ ದಿವಿ ॥ ಋಷೀಣಾಮಪಿ ಹೋತ್ರ್ಯಾಣಾಂ ಗಾವೋ ಹೋಮೇ ಪ್ರತಿಷ್ಠಿತಾಃ ॥ ಸರ್ವೇಷಾಮೇವ ಭೂತಾನಾಂ ಗಾವಃ ಶರಣಮುತ್ತಮಂ ॥ ಗಾವಃ**

---

ನಿಂತು, ಚಿನ್ನ ಮತ್ತು ತುಪ್ಪವಿರುವ ಕಂಚಿನ ಪಾತ್ರೆಯಲ್ಲಿ ದನದ ಬಾಲವನ್ನಿಟ್ಟು "**ಪ್ರಾಯಶ್ಚಿತ್ತೇ ಸಮುತ್ಪನ್ನೇ...**" ಎಂಬಲ್ಲಿಂದ "**.....ನ ಮಮ**" ಎಂಬಲ್ಲಿ ವರೆಗೆ ಹೇಳಿ ದರ್ಭೆ ಎಳ್ಳು ಮತ್ತು ನೀರುಗಳಿಂದ ಕೂಡಿದ ದನದ ಬಾಲವನ್ನು ಬ್ರಾಹ್ಮಣನ ಕೈಯಲ್ಲಿಟ್ಟು "**ಯಜ್ಞಸಾಧನಭೂತಾ ಯಾ....**" ಎಂದು ಪಠಿಸಬೇಕು. ಗೋದಾನವನ್ನು ಸ್ವೀಕರಿಸುವ ಬ್ರಾಹ್ಮಣನು "**ದೇವಸ್ಯತ್ವಾ ಸವಿತುಃ...**" ಎಂಬ ಮಂತ್ರವನ್ನು ಹೇಳಿ "**ಓಂ ಸ್ವಸ್ತಿ**" ಎನ್ನುತ್ತ "**ಕ ಇದಂ ಕಸ್ಮಾ...**" ಎಂಬ ಕಾಮಸ್ತುತಿಯನ್ನು ಹೇಳಬೇಕು. ಬಳಿಕ ದಾನಮಾಡಿದ ಕರ್ತೃವು ದಕ್ಷಿಣೆಯನ್ನು ಕೊಟ್ಟು "**ಗಾವಃ ಸುರಭಯೋ ನಿತ್ಯಂ....ಹವಿರೇಕತ್ರ ತಿಷ್ಠತಿ**" ಎಂಬಲ್ಲಿ ವರೆಗಿನ ಶ್ಲೋಕಗಳನ್ನು ಹೇಳಿ ಪ್ರಾರ್ಥನೆ

ಪವಿತ್ರಂ ಪರಮಂ ಗಾವೋ ಮಂಗಲಮುತ್ತಮಂ ॥ ಗಾವಃ ಸರ್ವಸ್ಯ ಭೂತಸ್ಯ ಗಾವೋ ಧನ್ಯಾಃ ಸನಾತನಾಃ ॥ ನಮೋ ಗೋಭ್ಯಃ ಶ್ರೀಮತೀಭ್ಯಃ ಸೌರಭೇಯಿಭ್ಯ ಏವ ಚ ॥ ನಮೋ ಬ್ರಹ್ಮಸುತಾಭ್ಯಶ್ಚ ಪವಿತ್ರಾಭ್ಯೋ ನಮೋ ನಮಃ ॥ ಬ್ರಾಹ್ಮಣಾ-ಶ್ಚೈವ ಗಾವಶ್ಚ ಕುಲಮೇಕಂ ದ್ವಿಧಾಕೃತಂ ॥ ಏಕತ್ರ ಮಂತ್ರಾಸ್ತಿಷ್ಠಂತಿ ಹವಿರೇಕ-ತ್ರತಿಷ್ಠತಿ ॥ ಇತಿ ॥ ತತೋ ಬ್ರಾಹ್ಮಣೇನ ಸಹ ಗಾಂ ಪ್ರದಕ್ಷಿಣೀಕೃತ್ಯ ವಿಷ್ಣುಂ ಸ್ಮೃತ್ವಾ ಕರ್ಮೇಶ್ವರಾರ್ಪಣಂ ಕೃತ್ವಾಚಾಮೇತ್ ॥ ಇತಿ ಗೋದಾನವಿಧಿಃ ॥ ಅಯಮೇವ ವಿಧಿರಗ್ರೇ ಪ್ರತ್ಯಕ್ಷಧೇನುದಾನೇ ತತ್ತದೂಹೇನ ಸರ್ವತ್ರೋಹ್ಯಃ ಅತ್ರಾಂಗನ್ಯಾಸಾದಿವಿಶೇಷಃ ಪೂರ್ವೋಕ್ತಗೋದಾನಪ್ರಯೋಗೇ ಆಲೋಚನೀಯಃ ॥

॥ ಇತಿ ಪ್ರಾಯಶ್ಚಿತ್ತಗೋದಾನ ಪ್ರಯೋಗಃ ॥

---

ಮಾಡಬೇಕು. ನಂತರ ಬ್ರಾಹ್ಮಣನೂ ಸೇರಿದಂತೆ ಗೋವಿಗೆ ಪ್ರದಕ್ಷಿಣೆ ಬಂದು ವಿಷ್ಣುಸ್ಮರಣೆ ಮಾಡಿ ಕರ್ಮೇಶ್ವರಾರ್ಪಣೆ ಮಾಡಬೇಕು. ಮುಂದೆ ಹೇಳಿದ ಇತರ ಗೋದಾನಗಳನ್ನು ಮಾಡುವ ಸಂದರ್ಭದಲ್ಲೂ ಇದೇ ಕ್ರಮವನ್ನು ಅನುಸರಿಸಬೇಕು.

॥ ಗೋದಾನವಿಧಿ ಸಮಾಪ್ತ ॥

# ॥ ಪಂಚ ಗೋದಾನಾನಿ ॥

## ೧. ಪಾಪಧೇನುದಾನಂ

**ಆಜನ್ಮೋಪಾರ್ಜಿತಂ ಪಾಪಂ ಮನೋವಾಕ್ಕಾಯಕರ್ಮಭಿಃ ।**
**ತತ್ಸರ್ವಂ ನಾಶಮಾಯಾತು ಪಾಪಧೇನುಪ್ರದಾನತಃ ॥**

**ಮಮ ಪಿತುಃ ಮನೋವಾಕ್ಕಾಯಕರ್ಮಭಿಃ ಆಜನ್ಮೋಪಾರ್ಜಿತ ಪಾಪಾಪನೋದನಕಾಮೋಽಹಂ ಇಮಾಂ ಕೃಷ್ಣಾಂ ಪಾಪಾಪನೋದಧೇನುಂ ಯಥಾಶಕ್ತಿ ಸೋಪಸ್ಕರಾಂ ರುದ್ರದೈವತ್ಯಾಂ ಗೋತ್ರಾಯ ಶರ್ಮಣೇ ತುಭ್ಯಂ ಸಂಪ್ರದದೇ ॥**

## ೨. ಉತ್ಕ್ರಾಂತಿಧೇನುದಾನಂ

**ಅಸೂತ್ಕ್ರಾಂತೌ ಪ್ರವೃತ್ತಸ್ಯ ಸುಖೋತ್ಕ್ರಮಣಸಿದ್ಧಯೇ ।**
**ತುಭ್ಯಮೇನಾಂ ಸಂಪ್ರದದೇ ಧೇನುಮುತ್ಕ್ರಾಂತಿಸಂಜ್ಞಿತಾಮ್ ॥**

**ಮಮ ಪಿತುಃ ಸುಖೇನ ಪ್ರಾಣೋತ್ಕ್ರಮಣಪ್ರತಿಬಂಧಕೋಕ್ತನಿಷ್ಕೃತ್ಯನುಕ್ತನಿಷ್ಕೃತಿಜನಿತಸಕಲಪಾಪಕ್ಷಯದ್ವಾರಾ ಸುಖೇನ ಪ್ರಾಣೋತ್ಕ್ರಮಣಸಿದ್ಧ್ಯರ್ಥಂ ಇಮಾಂ ಉತ್ಕ್ರಾಂತಿಸಂಜ್ಞಿತಾಂ ಧೇನುಂ ಯಥಾಶಕ್ತಿಸೋಪಸ್ಕರಾಂ ರುದ್ರ ದೈವತ್ಯಾಂ... ಗೋತ್ರಾಯ...ಶರ್ಮಣೇ ತುಂಭ್ಯಮಹಂ ಸಂಪ್ರದದೇ ನ ಮಮ ॥**

---

ಪಂಚಗೋದಾನಗಳು:

## ೧. ಪಾಪಧೇನುದಾನ

**ಆಜನ್ಮೋಪಾರ್ಜಿತಂ........ ಪ್ರದಾನತಃ ॥** ಈ ಶ್ಲೋಕವನ್ನು ಹೇಳಿ **ಮಮ ಪಿತುಃ..... ಸಂಪ್ರದದೇ** ಎಂದು ಉಚ್ಚರಿಸಿ ಕಪ್ಪು ಬಣ್ಣದ ದನವನ್ನು ಬ್ರಾಹ್ಮಣನಿಗೆ ಕೈನೀರು ಕೊಟ್ಟು ಅರ್ಚಿಸಿ ದಾನ ಮಾಡುವುದು.

## ೨. ಉತ್ಕ್ರಾಂತಿಧೇನುದಾನಂ

ಪ್ರಾಣೋತ್ಕ್ರಮಣಕಾಲದಲ್ಲಿ **ಅಸೂತ್ಕ್ರಾಂತೌ............. ಸಂಜ್ಞಿತಾಮ್ ॥** ಈ ಶ್ಲೋಕವನ್ನು ಹೇಳಿ ಮೊದಲಿನಂತೆ **ಮಮ ಪಿತುಃ...ನ ಮಮ** ಎಂದು ಗೋದಾನ ಮಾಡುವುದು.

## ೩. ವೈತರಣೀಧೇನುದಾನಂ

ತತ್ರೋಪಕಲ್ಪನಂ । ಪಾಟಲಾಂ ಕೃಷ್ಣಾಂ ವಾ ಹೇಮಶೃಂಗಾದ್ಯುಪೇತಾಂ ಕೃಷ್ಣವಸ್ತ್ರಯುಗಚ್ಛನ್ನಾಂ ಸಪ್ತಧಾನ್ಯಸಂಯುಕ್ತಾಂ ಛತ್ರೋಪಾನದ್ಯುಗಲಸಂಯುಕ್ತಾಂ ಗಾಂ ಸನ್ನಿಧಾಪ್ಯ ದ್ರೋಣಮಿತಕಾರ್ಪಾಸಶಿಖರೇ ತಾಮ್ರ ಪಾತ್ರಂ ತತ್ರ ಮಹಿಷಾರೂಢಂ ದಕ್ಷಿಣವಾಮಕರಧೃತ ಲೋಹದಂಡಪಾಶಂ ಹೈಮಂ ಯಮಂ ಸ್ಥಾಪಯಿತ್ವಾ ತದಗ್ರೇ ರಕ್ತಪಟ್ಟಬಂಧೇಕ್ಷುದಂಡನಿರ್ಮಿತನೌಕೋಪರಿ ತಾಂ ಧೇನುಂ ಸ್ಥಾಪಯಿತ್ವಾ ತಿಥ್ಯಾದಿ ಸಂಕೀರ್ತ್ಯ ಅಮುಕಗೋತ್ರಸ್ಯ ಅಮುಕಪ್ರೇತಸ್ಯ ಯಮದ್ವಾರಸ್ಥಿತ ವೈತರಣೀಂ ತರ್ತುಂ ಗೋದಾನಂ ಕರಿಷ್ಯೇ ಇತಿ ಸಂಕಲ್ಪ್ಯ ದ್ವಿಜಂ ವೃತ್ವಾ ಹೈಮಪ್ರತಿಮಾಯಾಂ ಅಕ್ಷತಪುಂಜೇ ವಾ ವಿಷ್ಣುಂ ವಿಪ್ರಂ ಗಾಂ ಚ ಸಂಪೂಜ್ಯ ಪ್ರಾರ್ಥಯೇತ್ ॥

ವಿಷ್ಣುರೂಪ ದ್ವಿಜಶ್ರೇಷ್ಠ ಭೂದೇವ ಗತಿಪಾವನ ।
ತರ್ತುಂ ವೈತರಣೀಮಸ್ಯ ಕೃಷ್ಣಾಂ ಗಾಂ ಪ್ರದದಾಮ್ಯಹಮ್ ॥
ಧೇನುಕೇ ತ್ವಂ ಪ್ರತೀಕ್ಷಸ್ವ ಯಮದ್ವಾರೇ ಮಹಾಪಥೇ ॥
ಉತ್ತಿತೀರ್ಷುರಯಂ ದೇವಿ ವೈತರಣ್ಯೈ ನಮೋಸ್ತು ತೇ ॥
ಯಮದ್ವಾರಪಥೇ ಘೋರೇ ಘೋರಾ ವೈತರಣೀ ನದೀ ।
ತಾಂ ತರ್ತುಮಸ್ಯ ಯಚ್ಛಾಮಿ ಕೃಷ್ಣಾಂ ವೈತರಣೀಂ ತು ಗಾಮ್ ॥

ಮಮ ಪಿತುಃ ಯಮದ್ವಾರಸ್ಥಿತ ವೈತರಣ್ಯಾಖ್ಯ ನದ್ಯುತ್ತರಣಾರ್ಥಂ ಇಮಾಂ ಕೃಷ್ಣಾಂ ಗಾಂ ಸವತ್ಸಾಂ ಯಮಪ್ರತಿಮಾಯುಕ್ತಾಂ ಕೃಷ್ಣವಸ್ತ್ರ ಯುಗಚ್ಛನ್ನಾಂ ಸಪ್ತಧಾನ್ಯಯುತಾಂ ರಕ್ತಮಾಲ್ಯಾದ್ಯಲಂಕೃತಾಂ ಯಥಾಶಕ್ತಿ ಸ್ವರ್ಣ ಶೃಂಗಾದ್ಯುಪಸ್ಕರೋಪೇತಾಂ ಕಾರ್ಪಾಸದ್ರೋಣಶಿಖರಾಂ ರುದ್ರದೈವತ್ಯಾಂ....ಗೋತ್ರಾಯ..... ಶರ್ಮಣೇ ತುಭ್ಯಮಹಂ ಸಂಪ್ರದದೇ ಇತಿ ತಿಲಜಲಕುಶಯುತಂ ಗೋಪುಚ್ಛಂ ವಿಪ್ರಹಸ್ತೇ ದದ್ಯಾತ್ ॥

---

## ೩. ವೈತರಣೀಧೇನುದಾನ

ಆಚಮನ ಪ್ರಾಣಾಯಾಮ ದೇಶಕಾಲಾದಿಗಳನ್ನು ಹೇಳಿ, ಹತ್ತಿಯ ರಾಶಿಯ ಮೇಲೆ ಇರಿಸಿದ ತಾಮ್ರಪಾತ್ರೆಯಲ್ಲಿ ಯಮನ ಪ್ರತಿಮೆಯನ್ನು ಪೂಜಿಸಿ, ಬ್ರಾಹ್ಮಣವರಣ ಮಾಡಿ ಅರ್ಚಿಸಿ, ಕಪಿಲಾ ಅಥವಾ ಕಪ್ಪು ಬಣ್ಣದ ಧೇನುವನ್ನು ಎರಡು ಕಪ್ಪು ಬಟ್ಟೆಗಳನ್ನು ಹೊದಿಸಿ ಸಪ್ತಧಾನ್ಯ ಮತ್ತು ಪಾದುಕೆಗಳೊಂದಿಗೆ, ಕೆಂಪು ಪಟ್ಟೆಯ ಮೇಲೆ ಕಬ್ಬಿನಿಂದ ಮಾಡಿದ ದೋಣಿಯ ಮೇಲೆ ನಿಲ್ಲಿಸಿ, ವಿಷ್ಣುವಿನ ಚಿನ್ನದ ಪ್ರತಿಮೆಯನ್ನು ಅಕ್ಕಿಯ ರಾಶಿಯ ಮೇಲೆ ಇಟ್ಟು ಯಮ ವಿಷ್ಣು

